ಎಸ್. ನಿಜಲಿಂಗಪ್ಪ ಜನ್ಮಶತಮಾನೋತ್ಸವ ಸಂಸ್ಮರಣೆ

# ಎಸ್.ಎನ್. ದಿನಚರಿ

(ಆಯ್ದ ಭಾಗಗಳು)

ಪ್ರಧಾನ ಸಂಪಾದಕರು

**ಡಾ।। ದೇಜಗೌ**

ಸಂಪಾದಕರು

**ಕೆ.ಆರ್. ಕಮಲೇಶ್**

## ಎಸ್. ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನ

ಚಿನ್ನಸ್ವಾಮಿ ಕ್ರಿಕೆಟ್ ಕ್ರೀಡಾಂಗಣ, ಎಂ.ಜಿ. ರಸ್ತೆ, ಬೆಂಗಳೂರು

**S.N. DINACHARI** - Kannada Version of S.N. Diary,
Edited by : *Chief Editor*: Dr. D. Jaware Gowda and *Editor* : K.R. Kamalesh
and Published by S. Nijalingappa National Foundation
Karnataka State Cricket Association, M.G. Road, Bangalore-1, Karnataka.

First Impression : 2003



Pages : xii + 244

Price : Rs. 150/-

Cover Design : Sri Sripad



ಮುದ್ರಣ

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ಚಾಮರಾಜಪೇಟೆ
ಬೆಂಗಳೂರು - ೫೬೦ ೦೧೮
✆ ೬೬೧೩೧೨೩, ೬೬೧೮೭೫೨

# ಮುನ್ನುಡಿ

ನಿಜಲಿಂಗಪ್ಪನವರ ಜೊತೆಯಲ್ಲಿ ನನ್ನ ಸಂಬಂಧವು ಐವತ್ತರ ದಶಕದಷ್ಟು ಹಿಂದಿನದಾಗಿದ್ದು, ಆಗ ಅವರು ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದರು. ಆಗ ನಾನು ಗೃಹಮಂತ್ರಿ ಗೋವಿಂದ ವಲ್ಲಭ ಪಂತರ ವಾರ್ತಾ ಕಾರ್ಯದರ್ಶಿಯಾಗಿದ್ದೆ. ಈ ಎರಡೂ ಕಚೇರಿಗಳ ಅಂತರವು ಸ್ಪಷ್ಟವಾಗಿಯೇ ಇದೆ. ಆದರೆ ಎಲ್ಲರನ್ನೂ ಸಮಾನವಾಗಿ ಕಾಣುವ ಅವರ ಕುಶಲತೆಯೇ ಅವರ ಬಲವಾದ ಅಂಶವಾಗಿದ್ದಿತು. ಅತಿ ಚಿಕ್ಕವರನ್ನೂ ಕೂಡ ತಮ್ಮ ಜೊತೆಯಲ್ಲಿ ಊಟಕ್ಕೆ ಆಹ್ವಾನಿಸುತ್ತಿದ್ದರು. ಯಾವಾಗ ಬೆಂಗಳೂರಿಗೆ ಭೇಟಿ ಕೊಟ್ಟರೂ ನಾನು ಅಲ್ಲಿರುತ್ತಿದ್ದೆ. ಅವರು ದೆಹಲಿಗೆ ಬಂದಾಗ ಮತ್ತು ಕಾಂಗ್ರೆಸ್ ಅಧ್ಯಕ್ಷರ ಸ್ಥಾನವನ್ನು ಪಡೆದಾಗ ಇದು ಒಂದು ಕ್ರಮವಾದ ಅಭ್ಯಾಸವಾಗಿತ್ತು. ನಾನು ಅನೇಕ ಸಲ ಅವರ ಮನೆಯಲ್ಲಿ ಬೆಳಗಿನ ಉಪಾಹಾರವನ್ನು ಮಾಡುತ್ತಿದ್ದೆ.

ಅರವತ್ತರ ದಶಕದ ಕೊನೆಯಲ್ಲಿ ನಾನು Inidia-The Critical Years ಎಂಬ ಪುಸ್ತಕವನ್ನು ಬರೆಯುತ್ತಿದ್ದೆ. ಆಗ ಪ್ರಧಾನಿಯಾಗಿದ್ದ ಶ್ರೀಮತಿ ಇಂದಿರಾ ಗಾಂಧಿ ಮತ್ತು ಉಚ್ಛಸ್ಥಾನದಲ್ಲಿದ್ದ ಕಾಂಗ್ರೆಸ್ ನಾಯಕರ ನಡುವೆ ಬಿರುಕು ಬೆಳೆಯುತ್ತಾ ಹೋಗಿ ಅವರು ಪಕ್ಷದ ಮೇಲೆ ಒತ್ತಡವನ್ನು ಹಾಕುತ್ತಿದ್ದರು. ಕೆಲವು ಹಳೆಯ ಕಾಂಗ್ರೆಸ್ ನಾಯಕರು ತಮಗೆ ಆಜ್ಞಾಪಿಸಲು ಪ್ರಯತ್ನಿಸುತ್ತಿದ್ದಾರೆಂಬುದು ಆಕೆಯ ಅಭಿಪ್ರಾಯವಾಗಿತ್ತು. ತನ್ನನ್ನು ತೆಗೆಯಬೇಕೆಂದಿದ್ದಾರೆ ಎಂಬ ಚಿಂತೆ ಆಕೆಯ ಮನಸ್ಸಿನಲ್ಲಿ ತಳವೂರಿತ್ತು. ಎಸ್.ಎನ್. ಕಾಂಗ್ರೆಸ್ ಅಧ್ಯಕ್ಷರಾಗಿದ್ದುದರಿಂದ ಆಕೆ ಅವರಿಗೆ ದೂರು ಹೇಳುತ್ತಿದ್ದಾಗ ಬಳಸುತ್ತಿದ್ದ ಪದ 'ಒಳಸಂಚು'. ಇದು ಯಾವುದೂ ಇಲ್ಲವೆಂದು ನಿಜಲಿಂಗಪ್ಪ ಅವರು ಆಕೆಗೆ ಭರವಸೆ ನೀಡುತ್ತಿದ್ದರು. ಅಂತಿಮವಾಗಿ ನಂಬಿಕೆಯ ಕೊರತೆಯಿಂದಾಗಿ ೧೯೬೯ರಲ್ಲಿ ಪಕ್ಷವು ಒಡೆಯುವುದಕ್ಕೆ ದಾರಿಯಾಯಿತು.

ನನ್ನ ಪುಸ್ತಕಕ್ಕೆ ಈ ಎಲ್ಲಾ ವಿವರಗಳು ಬೇಕಾಗಿದ್ದವು. ಬೆಳಗಿನ ಉಪಾಹಾರದ ಒಂದು ಕೂಟದಲ್ಲಿ ನಿಜಲಿಂಗಪ್ಪಜೀಯವರು ತಮ್ಮ ಡೈರಿಯಲ್ಲಿ ಕಾಂಗ್ರೆಸ್ಸಿನೊಳಗೆ ನಡೆದುದೆಲ್ಲವನ್ನೂ ದಾಖಲು ಮಾಡಿದ್ದೇನೆಂದು ಹೇಳಿದರು. ನಾನು ಆಶ್ಚರ್ಯಚಕಿತನಾದೆ. ಏಕೆಂದರೆ ಎಲ್ಲಾ ಸೆಳೆತ ಮತ್ತು ಒತ್ತಡಗಳ ನಡುವೆಯೂ ಏನು ನಡೆಯಿತು ಎಂಬುದನ್ನು ಬರೆಯಲು ಅವರಿಗೆ ಸಮಯ ಸಿಕ್ಕಿತಲ್ಲಾ ಎಂಬುದು ನನಗೆ ಊಹಿಸಲೂ ಆಗಲಿಲ್ಲ. ಆದರೆ ಅವರು ಸತ್ಯಾಂಶಗಳಿಗೆ ಎಷ್ಟು ನಿಷ್ಠರು ! ಉದಾಹರಣೆಗೆ, ೧೯೬೯ರ ಜುಲೈ ೧೫ರಂದು ಹೀಗೆ ಬರೆದರು : "ಪ್ರಧಾನಿಯ ಮನೋಭಾವದಿಂದಾಗಿ ಆಕೆ ಏನೇ ವಿರೋಧ ಕೆಲಸವನ್ನು ಮಾಡಬಹುದು. ಆಕೆ ತಾನು

ಭಾರತದ ಪ್ರಧಾನಿಯಾಗಿರುವುದರಿಂದ ರಾಷ್ಟ್ರಪತಿಯ ಆಯ್ಕೆಯಲ್ಲಿ ತನ್ನ ಅಭಿಪ್ರಾಯವನ್ನು ಒಪ್ಪಿಕೊಳ್ಳಬೇಕಾಗಿತ್ತು ಎಂದು ಆಕೆ ಬಹಳ ತೀವ್ರವಾಗಿ ಭಾವಿಸುತ್ತಿದ್ದಾರೆ. ಆಕೆ ಎಲ್ಲವನ್ನೂ ತಾನು ಹೇಳಿದಂತೆ ನಡೆಯಬೇಕೆಂದು ಭಾವಿಸಿದಂತಿದೆ. ಆಕೆ ಹಟಮಾರಿ ಮತ್ತು ಅಹಂಕಾರಿ. ಈಗ ಆಕೆಗೆ ಒಂದು ಪಾಠ ಕಲಿಸಲಾಗಿದೆ. ಹಟಮಾರಿ ಸ್ವಭಾವದವಳಾಗಿದ್ದ ಆಕೆಯನ್ನು ಪ್ರಧಾನಿ ಪಟ್ಟಕ್ಕೆ ಸಿದ್ಧಪಡಿಸುತ್ತಿದ್ದು ಆಕೆಯ ತಂದೆಯೇ. ಯಾವಾಗಲೂ ಆಕೆ ಆತುರದಲ್ಲಿ ಏನಾದರೂ ಕೆಟ್ಟುದನ್ನು ಮಾಡುತ್ತಾರೆ. ಆಕೆಗೆ ಚವಾಣ್ ಮತ್ತು ಮೊರಾರ್ಜಿಯವರ ಮೇಲೆ ತುಂಬಾ ಕೋಪ ಮತ್ತು ಮನಃಕ್ಲೇಶವಿದ್ದಿತು, ಏಕೆಂದರೆ ಅವರು ಸಂಪುಟದ ಸಹೋದ್ಯೋಗಿಗಳಾಗಿದ್ದದು ಇಷ್ಟಬಂದಂತೆ ಇವರು ಆಡಬೇಕೆಂಬುದು ಆಕೆಯ ನಿರೀಕ್ಷೆಯಾಗಿತ್ತು. ಆಕೆ ಏನು ಮಾಡಬಹುದೆಂದು ನೋಡೋಣ. ಕಾಮರಾಜ ನಾಡಾರರ ಬಲವಾದ ಆಶಯವನ್ನು ಒಪ್ಪಿಕೊಂಡು ನಾವು ಆಕೆಯನ್ನು ಪ್ರಧಾನಿಯಾಗಲು ಒಪ್ಪಿಕೊಂಡುದು ವ್ಯಸನಕರ." ಆಕೆಯ ನಡತೆಯ ಬಗ್ಗೆ ಅವರಿಗೆ ಅಸಂತೋಷವಾಗಿದ್ದರೂ ಘಟನೆಗಳನ್ನು ದಾಖಲು ಮಾಡುವಲ್ಲಿ ಅವರು ನಿಸ್ಪೃಹರು ಮತ್ತು ವಾಸ್ತವವಾದಿ.

ನನ್ನಲ್ಲಿದ್ದ ನಂಬುಗೆಯಿಂದ ಅಥವಾ ಸತ್ಯವು ಎಲ್ಲರಿಗೂ ತಿಳಿಯಲಿ ಎಂಬ ಆಶಯದಿಂದ ಅವರನ್ನು ನಾನು ಡೈರಿಯನ್ನು ಪಡೆಯಬಹುದೇ ಎಂದು ಕೇಳಿದಾಗ ಅದನ್ನು ನನಗೆ ಕೊಟ್ಟರು. ಅವರು ಕೇಳಿದ ಒಂದೇ ಒಂದು ಪ್ರಶ್ನೆಯೆಂದರೆ : ಅದರಿಂದ ಏನು ಮಾಡುತ್ತೀರಿ ? ಎಂದು. ನಾನು ಕೊಟ್ಟ ಉತ್ತರವೆಂದರೆ ಅದರ ಪೂರ್ಣ ಉಪಯೋಗವನ್ನು ಮಾಡುತ್ತೇನೆ ಎಂದು. ಅಲ್ಲಿಗೆ ವಿಷಯ ನಿಂತಿತು. ನಾವು ಭೇಟಿ ಮಾಡಿದಾಗಲೂ ಅವರು ಡೈರಿಯ ಬಗ್ಗೆ ಕೇಳಲಿಲ್ಲ.

ಆಗ ನಾನು 'ಸ್ಟೇಟ್ಸ್‌ಮನ್'ನ ರೆಸಿಡೆಂಟ್ ಸಂಪಾದಕನಾಗಿದ್ದೆ. ಒಂದು ದಿನ ಬೆಳಗಿನ ಉಪಾಹಾರಕ್ಕೆ ಅವರಿಂದ ಕರೆಬಂತು. ನಾನು ಮಾರನೆ ಬೆಳಿಗ್ಗೆ ಅವರನ್ನು ಭೇಟಿ ಮಾಡಿದೆ. ಅಷ್ಟು ಹೊತ್ತಿಗಾಗಲೆ ಕಾಂಗ್ರೆಸ್ ಒಡೆದಿದ್ದು ಶ್ರೀಮತಿ ಇಂದಿರಾ ಗಾಂಧಿಯು ಒಂದು ಹೊಸ ಕಾಂಗ್ರೆಸ್ ಪಕ್ಷವನ್ನು ರಚಿಸಿದ್ದರು. ಅವರು ಬ್ಯಾಂಕುಗಳನ್ನು ರಾಷ್ಟ್ರೀಕರಣಗೊಳಿಸಿದ್ದರು ; ಪ್ರಗತಿಯ ಹಾದಿಯಲ್ಲಿ ಮೂಲ ಕಾಂಗ್ರೆಸಿನ ನಾಯಕರನ್ನು 'ಸಂಪ್ರದಾಯಬದ್ಧರು' ಎಂಬ ಬಣ್ಣ ಬಳಿದು ಮೊರಾರ್ಜಿ ದೇಸಾಯಿಯವರನ್ನು ತಮ್ಮ ಮಂತ್ರಿಮಂಡಲದಿಂದ ಹೊರಹಾಕಿದರು.

ಹಣವು ದೊರೆಯುವುದು ಕಷ್ಟವಾಗಿರುವ ದೇಶದಲ್ಲಿ ಬ್ಯಾಂಕುಗಳ ರಾಷ್ಟ್ರೀಕರಣವನ್ನು ಹಣ ಪಡೆಯಲು ನಿರ್ಬಂಧಗಳನ್ನು ಸಡಿಲಗೊಳಿಸಿದಂತೆ ಎಂದು ಸಾಮಾನ್ಯ ಮನುಷ್ಯ ಪರಿಗಣಿಸಿದನು. ವಾಣಿಜ್ಯೋಪತಿಯಿಂದ ಹಿಡಿದು ಗಾಡಿ ಹೊಡೆಯುವವನವರೆಗೆ ಪ್ರತಿಯೊಬ್ಬನೂ ತನ್ನ ಅವಶ್ಯಕತೆಗಳಿಗಾಗಿ ಬ್ಯಾಂಕುಗಳಿಂದ ಹಣವನ್ನು ಪಡೆದುಕೊಳ್ಳುವ ಅವಕಾಶವಿದೆಯೆಂದು ಭಾವಿಸಿದನು. ಈ ಅವಕಾಶಕ್ಕಾಗಿಯೇ ಅವರು ಕಾಯುತ್ತಿದ್ದರು. ಕೈಸ್ಸಾಂಡ್ರರ ಬಗ್ಗೆ Cassandra (ವಿಪತ್ತಿನ ಭವಿಷ್ಯ ನುಡಿಯುವವನು) ಏನು ಹೇಳಿದರೆಂಬುದು ಲೆಕ್ಕಕ್ಕಿಲ್ಲ.

ಡೈರಿಯನ್ನು ಹಿಂತಿರುಗಿಸಲು ನಾನು ಅವರನ್ನು ಭೇಟಿಯಾದಾಗ ನಿಜಲಿಂಗಪ್ಪ ಅವರು ದುಃಖಿತ ಮನುಷ್ಯರಾಗಿದ್ದರು. ತಮಗೆ ಮತ್ತು ಕಾಂಗ್ರೆಸ್ ಪಕ್ಷಕ್ಕೆ ಕಳಂಕ ತರಲು ಉಪಯೋಗಿಸುತ್ತಿರುವ ವಿಧಾನಗಳನ್ನು ಅವರಿಗೆ ಒಪ್ಪಿಕೊಳ್ಳಲಾಗುತ್ತಿರಲಿಲ್ಲ. ಅವರು ಏನು ಮಾಡುವುದಕ್ಕಾಗುತ್ತದೆ ? ಕಮ್ಯೂನಿಸ್ಟ್ ಎಂಪಿಗಳ ಬೆಂಬಲದಿಂದ ಆಕೆ ಸರಕಾರ ಇನ್ನೂ ಅಧಿಕಾರದಲ್ಲಿತ್ತು.

ಅವರ ಡೈರಿಯನ್ನು ಉಲ್ಲೇಖಿಸಿ ನಾನು ಬರೆದಿರುವ ಪುಸ್ತಕವನ್ನು ಅವರು ಓದಿರಬಹುದು. ಅವರು ಕೇಳಿದುದಿಷ್ಟೆ : ಡೈರಿಯಿಂದ ಏನು ಮಾಡಿದ್ದೀರಿ ? ಅದರ ಒಳ್ಳೆಯ ಉಪಯೋಗ ಮಾಡಿದ್ದೇನೆಂದು ಹೇಳಿದೆ. ನಂತರ ಆ ವಿಷಯವನ್ನು ನಾವು ಯಾವಾಗಲೂ ಚರ್ಚಿಸಲಿಲ್ಲ.

ಅವರ ಕೊನೆಯ ವರ್ಷಗಳಲ್ಲಿ ಹಳೆಯ ಮೌಲ್ಯಗಳನ್ನು ಪುನಶ್ಚೇತನಗೊಳಿಸಲು ತಮ್ಮ ಕೈಲಾದಷ್ಟು ಪ್ರಯತ್ನಿಸಿದರು. ಅದಕ್ಕಾಗಿ ಕೆಲಸ ಮಾಡುವುದಕ್ಕೆ ಒಂದು ತಂಡವನ್ನು ರಚಿಸಿದ್ದು ಅದರಲ್ಲಿ ನನ್ನನ್ನೂ ಸೇರಿಸಿದ್ದರು. ದೇಶದಲ್ಲಿ ನೈತಿಕ ಮೌಲ್ಯಗಳ ಕುಸಿತದ ಬಗ್ಗೆ ಅವರು ಅನುಭವಿಸುತ್ತಿರುವ ನೋವು ಅವರ ಮುಖದ ಮೇಲೆ ಅಚ್ಚೊತ್ತಿದ್ದಿತು. ಒಂದು ದಿವಸ ಜಾತೀಯವಾದವು ತುಂಬಾ ಬಲವಾದ ಶಕ್ತಿಯಾಗಿ ಬೆಳೆಯುತ್ತದೆ ಎಂದು ಅವರು ಅನೇಕ ಸಲ ಎಚ್ಚರಿಸುತ್ತಿದ್ದರು; ಅದನ್ನು ಎದುರಿಸಲು ನಾವೆಲ್ಲ ಒಟ್ಟಾಗಿ ಹೋರಾಡಬೇಕು ಎಂದಿದ್ದರು. ಅವರು ಹಾಗೆ ಹೇಳಿದುದರಲ್ಲಿ ಎಷ್ಟು ಸತ್ಯವಿದೆ ಎಂದು ಈಗ ನಾನು ಮನನ ಮಾಡಿಕೊಳ್ಳುತ್ತಿದ್ದೇನೆ.

೧೯೬೯ರ ಆಗಸ್ಟ್ ೧೦ರಂದು ಅವರು ಬರೆದ ಪದಗಳು ತುಂಬಾ ಪರಿಣಾಮಕಾರಿಯಾಗಿದ್ದವು. "ಬೀಳುವ ಮುನ್ನ ಅಹಂಕಾರವು ಹೆಚ್ಚಾಗುತ್ತದೆ. ಕಳೆದ ಒಂದು ವಾರದಲ್ಲಿ ಟ್ಯಾಕ್ಸಿ ಡ್ರೈವರು, ರಿಕ್ಷಾವಾಲ, ವಿದ್ಯಾರ್ಥಿ ಮುಂತಾದವರ ಪ್ರದರ್ಶನಗಳು ಆಕೆಯ ಮನೆಯ ಮುಂದೆ ಹೋಗುತ್ತಿದ್ದವು ; ಆಕೆ ತಾವೊಬ್ಬರೆ ಬಡವರಿಗಾಗಿ ದುಡಿಯುತ್ತಿರುವವರು; ಎಂದ್ಹೇಳಿ ಕೆಲವು ವ್ಯಕ್ತಿಗಳ ವಿರುದ್ಧ ದೂರುತ್ತಾ ಭಾಷಣ ಮಾಡುತ್ತಿದ್ದರು. ಕಾಂಗ್ರೆಸ್‌ನ ಹೆಸರನ್ನು ಕೂಡ ಒಮ್ಮೊಮ್ಮೆ ಹೇಳಲಾಗುತ್ತಿತ್ತು."

ಕಾಂಗ್ರೆಸ್‌ನ ಒಡೆಯುವಿಕೆಯಿಂದ ಅತ್ಯಂತ ಬಲಪಕ್ಷದವರಿಗೆ ಅಂದರೆ ಆಗಿನ ಜನಸಂಘಕ್ಕೆ ಕ್ಷೇತ್ರವು ತೆರೆದಿಟ್ಟಂತಾಯಿತು. ನಂತರದ ಘಟನೆಗಳು ಇದನ್ನು ರುಜುವಾತುಪಡಿಸಿದೆ. ಕಾಂಗ್ರೆಸ್ ಒಡೆಯದೇ ಹೋಗಿದ್ದರೆ, ನಿಜಲಿಂಗಪ್ಪ ಅವರ ಎಚ್ಚರಿಕೆಯನ್ನು ಕೇಳಿದ್ದರೆ ದೇಶವು ಬೇರೆಯೇ ಒಂದು ಹಾದಿಯಲ್ಲಿ ಚಲಿಸುತ್ತಿತ್ತು.

ಡೈರಿಯು ಎಷ್ಟು ಸರಳವಾಗಿದೆಯೆಂದರೆ ಒಂದು ಸಲ ಕೂತರೆ ಅದನ್ನು ಓದಿ ಮುಗಿಸಿ ಬಿಡಬಹುದು. ಪಕ್ಷ ರಾಜಕೀಯದ ಕಹಿ ಇದ್ದರೂ ಆ ಒಳ್ಳೆಯ ಹಳೆಯ ದಿನಗಳನ್ನು ನೆನಪಿಸುತ್ತದೆ.

**–ಕುಲದೀಪ್ ನಯ್ಯರ್**

**ಆರ್.ವಿ. ದೇಶಪಾಂಡೆ**
ಬೃಹತ್ ಮತ್ತು ಮಧ್ಯಮ
ಕೈಗಾರಿಕೆ ಸಚಿವರು
ವಿಧಾನಸೌಧ
ಬೆಂಗಳೂರು-೫೬೦ ೦೦೧



ದಿನಾಂಕ : ೧೩ನೇ ಜನವರಿ, ೨೦೦೩

# ಹಾರೈಕೆ

ರಾಷ್ಟ್ರನಾಯಕರಾದ ಎಸ್. ನಿಜಲಿಂಗಪ್ಪ ಅವರ ಜನ್ಮ ಶತಮಾನೋತ್ಸವವನ್ನು ನಾಡು ಶ್ರದ್ಧಾ ಭಕ್ತಿಗಳಿಂದ ಆಚರಿಸುತ್ತಿದೆ. ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ನಿಜಲಿಂಗಪ್ಪ ಅವರು ಹರಿದು ಹಂಚಿಹೋಗಿದ್ದ ಕನ್ನಡ ನಾಡನ್ನು ಒಂದುಗೂಡಿಸಿದ ಶಿಲ್ಪಿ. ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದ ಅವರು ತಮ್ಮ ಅಧಿಕಾರಾವಧಿಯಲ್ಲಿ ಕರ್ನಾಟಕ ರಾಜ್ಯದಲ್ಲಿ ಅನೇಕ ನೀರಾವರಿ, ಕೈಗಾರಿಕೆ ಹಾಗೂ ವಿದ್ಯುತ್ ಯೋಜನೆಗಳ ಸ್ಥಾಪನೆಗೆ ಕಾರಣಕರ್ತರಾಗಿದ್ದಾರೆ. ಇವುಗಳ ಜೊತೆ ವೈಯಕ್ತಿಕ ಹಾಗೂ ಸಾರ್ವಜನಿಕ ಬದುಕಿನಲ್ಲಿ ಶ್ರದ್ಧೆ ಹಾಗೂ ಪ್ರಾಮಾಣಿಕತೆಯನ್ನ ಕಾಪಾಡಿಕೊಂಡು ಬಂದಿದ್ದಾರೆ. ೧೯೫೩ ಜನವರಿ ೧೬ ರಿಂದ ೨೦೦೨ರ ಜನವರಿ ೨೮ರವರೆಗೆ ದಿನಚರಿಯನ್ನು ಬರೆದ ಕೀರ್ತಿ ಅವರದು. ಆಧುನಿಕ ಭಾರತದ ಮಹತ್ವದ ಐತಿಹಾಸಿಕ ಸಂಗತಿಗಳನ್ನು ತಿಳಿಯಲು ಅವರ ದಿನಚರಿಗಳು ತುಂಬಾ ಸಹಾಯಕವಾಗಿವೆ. ಅವರ ಸಂಪರ್ಕಕ್ಕೆ ಬಂದ ಎಲ್ಲಾ ವ್ಯಕ್ತಿಗಳ ಜೀವನ ಚಿತ್ರಣ ಈ ದಿನಚರಿಯಲ್ಲಿ ದೊರೆಯುತ್ತದೆ. ಸರ್ದಾರ್ ವಲ್ಲಭ ಭಾಯಿ ಪಟೇಲ್, ಡಾ. ಬಾಬು ರಾಜೇಂದ್ರ ಪ್ರಸಾದ್, ಜವಹರಲಾಲ್ ನೆಹರೂ, ರಾಜಾಜಿ, ಕಾಮರಾಜ್, ಗೋವಿಂದ ವಲ್ಲಭ ಪಂತ್ ಮೊದಲಾದ ರಾಷ್ಟ್ರ ನಾಯಕರನ್ನು ಕುರಿತು ನಿಜಲಿಂಗಪ್ಪ ಅವರು ಮಹತ್ವದ ವಿಚಾರಗಳನ್ನು ದಾಖಲಿಸಿದ್ದಾರೆ. ಕಳೆದ ಐವತ್ತು ವರ್ಷಗಳಲ್ಲಿ ಆಧುನಿಕ ಭಾರತದಲ್ಲಿ ಜರುಗಿದ ಯಾವುದೇ ಮಹತ್ವದ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಘಟನೆಯನ್ನು ಅವರು ದಾಖಲಿಸದೆ ಬಿಟ್ಟಿಲ್ಲ. ಶ್ರೀ ಕುಲದೀಪ್ ನಯ್ಯರ್‌ರಂತಹ ಖ್ಯಾತ ಪತ್ರಕರ್ತರು ಎಸ್.ಎನ್. ದಿನಚರಿ ಕುರಿತು ಮಹತ್ವದ ಮಾತುಗಳನ್ನ ಬರೆದಿರುವುದು ಅದರ ಶ್ರೇಷ್ಠತೆಯನ್ನು ತೋರಿಸುತ್ತದೆ. ಸಂಶೋಧಕರಿಗೆ, ರಾಜಕೀಯ ವಿಶ್ಲೇಷಕರಿಗೆ, ಸಮಾಜ ವಿಜ್ಞಾನಿಗಳಿಗೆ, ಅರ್ಥಶಾಸ್ತ್ರಜ್ಞ ಹಾಗೂ ಸಮಾಜ ಸುಧಾರಕರಿಗೆ ಈ ದಿನಚರಿ ಉಪಯುಕ್ತ ಮಾರ್ಗದರ್ಶನ ನೀಡುವುದರಲ್ಲಿ ಯಾವ ಸಂಶಯವೂ ಇಲ್ಲ. ಅವರ ಜನ್ಮ ಶತಮಾನೋತ್ಸವ ಸಂದರ್ಭದಲ್ಲಿ ಎಸ್. ನಿಜಲಿಂಗಪ್ಪ ಫೌಂಡೇಷನ್, ಬೆಂಗಳೂರು, ಇವರು ಈ ದಿನಚರಿಗಳನ್ನು ಅರ್ಥಪೂರ್ಣವಾಗಿ ಸಂಪಾದಿಸಿ ಪ್ರಕಟಿಸುವುದರ ಮೂಲಕ ಉನ್ನತ ಕೆಲಸ ಮಾಡಿದ್ದಾರೆ. ಅದಕ್ಕಾಗಿ ಫೌಂಡೇಶನ್‌ನ ಎಲ್ಲಾ ಧರ್ಮದರ್ಶಿಗಳನ್ನು ಅಭಿನಂದಿಸುತ್ತೇನೆ. ಯುವಜನತೆಗೆ ಎಸ್. ನಿಜಲಿಂಗಪ್ಪ ಅವರ ಬದುಕು ಸ್ಫೂರ್ತಿ ನೀಡಲಿ.

(ಆರ್.ವಿ. ದೇಶಪಾಂಡೆ)

# ಪ್ರಕಾಶಕರ ಮಾತು

ಎಸ್. ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನ ೧೭-೧-೧೯೯೪ರಲ್ಲಿ ಅಸ್ತಿತ್ವಕ್ಕೆ ಬಂದಿತು. ಬೆಂಗಳೂರಿನ ಚಿನ್ನಸ್ವಾಮಿ ಕ್ರಿಕೆಟ್ ಕ್ರೀಡಾಂಗಣದಲ್ಲಿ ಅದರ ಕೇಂದ್ರ ಕಚೇರಿ ಪ್ರಾರಂಭವಾಯಿತು. ಮಾಜಿ ಶಿಕ್ಷಣ ಸಚಿವರೂ, ಮಾಜಿ ಲೋಕಸಭಾ ಸದಸ್ಯರೂ ಮತ್ತು ನಿಜಲಿಂಗಪ್ಪನವರ ಆಪ್ತರಾದ ಎ.ಆರ್. ಬದರಿನಾರಾಯಣ ಅವರು ಅಧ್ಯಕ್ಷರಾದರು. ಮಾಜಿ ಲೋಕಸಭಾ ಸದಸ್ಯರೂ, ದಾವಣಗೆರೆ ಬಾಪೂಜಿ ವಿದ್ಯಾಸಂಸ್ಥೆಯ ಕಾರ್ಯದರ್ಶಿಗಳಾದ ಶ್ಯಾಮನೂರು ಶಿವಶಂಕರಪ್ಪ ಹಾಗೂ ಬೆಂಗಳೂರಿನ ಮಾಜಿ ಮೇಯರ್, ಮಾಜಿ ಸಚಿವರೂ, ಸಾಯಿ ಕಾಲೇಜಿನ ಅಧ್ಯಕ್ಷರಾದ ವೈ. ರಾಮಚಂದ್ರ ಅವರು ಇದರ ಉಪಾಧ್ಯಕ್ಷರಾದರು. ಎಲ್.ಎಸ್. ಚಂದ್ರಶೇಖರ್ ಅವರು ಕಾರ್ಯದರ್ಶಿಯಾದರೆ, ನಿವೃತ್ತ ಮುಖ್ಯ ಕಾರ್ಯದರ್ಶಿ ಬಿ.ಎಸ್. ಮುದ್ದಪ್ಪ ಅವರು ಖಜಾಂಚಿಗಳಾದರು. ಉದ್ಯಮಿಗಳಾದ ಆರ್.ಎನ್. ಶೆಟ್ಟಿ, ವೈ.ಎನ್. ಗಂಗಾಧರಶೆಟ್ಟಿ, ಲೋಕಸಭಾ ಸದಸ್ಯರಾದ ಉದ್ಯಮಿ ವಿಜಯ ಸಂಕೇಶ್ವರ ಹಾಗೂ ಶಾಸಕರಾದ ಚಂದ್ರಕಾಂತ ಬೆಲ್ಲದ ಅವರು ಪ್ರತಿಷ್ಠಾನದ ಧರ್ಮದರ್ಶಿಗಳಾದರು. ಪ್ರದೇಶ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾದ ಅಲ್ಲಂ ವೀರಭದ್ರಪ್ಪ, ರಾಜ್ಯಸಭಾ ಸದಸ್ಯರಾದ ಎಂ.ವಿ. ರಾಜಶೇಖರನ್, ಕೇರಳದ ರಾಜ್ಯಪಾಲರಾದ ಸಿಕಂದರ್‌ಭಕ್ತ್, ಮಹಾರಾಷ್ಟ್ರದ ಮಾಜಿ ಮುಖ್ಯಮಂತ್ರಿ ಎ.ಆರ್. ಅಂತುಳೆ, ಹರಿಯಾಣದ ಮಾಜಿ ಮುಖ್ಯಮಂತ್ರಿ ಬನ್ಸಿಲಾಲ್, ಮಾಜಿ ಸಚಿವರೂ ಹಾಗೂ ಶಾಸಕರಾದ ಎ.ಬಿ. ಪಾಟೀಲ್, ಮಾಜಿ ಶಿಕ್ಷಣ ಸಚಿವರಾದ ಹೆಚ್.ಜಿ. ಗೋವಿಂದಗೌಡ, ನಿಜಲಿಂಗಪ್ಪನವರ ಮಗ ಎಸ್.ಎನ್. ಕಿರಣ್‌ಶಂಕರ್, ಎಫ್.ಸಿ.ಎ.ನ ಹೆಚ್. ಶಿವಲಿಂಗಯ್ಯ, ಬಸವರಾಜ್ ಎಸ್.ಬಿ. ಮಳ್ಳಿ, ಶ್ರೀಮತಿ ಪ್ರತಿಭಾದೇವಿ ಮುದ್ದಪ್ಪ, ಡಾ. ಮಂಗಳ ವಿ. ಬೆಟಕೆರೂರ್ ಹಾಗೂ ಸತೀಶ ಚಂದ್ರ ಹೆಗಡೆ ಇವರುಗಳನ್ನು ಪ್ರತಿಷ್ಠಾನದ ಸಹಧರ್ಮದರ್ಶಿಗಳಾಗಿ ಸೇರ್ಪಡೆ ಮಾಡಿಕೊಳ್ಳಲಾಯಿತು. ಶ್ರೀ ಎಲ್.ಎಸ್. ಚಂದ್ರಶೇಖರ್‌ರವರ ನಿಧನಾನಂತರ ಶ್ರೀ ಎಸ್.ಜಿ. ಮಂಜುನಾಥ್ ಕಾರ್ಯದರ್ಶಿಗಳಾಗಿದ್ದಾರೆ.

ರಾಷ್ಟ್ರೀಯ ನಾಯಕರಾದ ಎಸ್. ನಿಜಲಿಂಗಪ್ಪನವರ ಬದುಕು ಹಾಗೂ ಸಾಧನೆಯನ್ನು ದೇಶದ ಜನತೆಗೆ ಪರಿಚಯ ಮಾಡಿಕೊಡುವುದು, ಅವರ ಆಶಯಗಳನ್ನು ಜನತೆಗೆ ತಿಳಿಸುವುದು, ಜೊತೆಗೆ ಜನಜಾಗೃತಿಯುಂಟು ಮಾಡುವುದು ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನದ ಮುಖ್ಯಗುರಿಯಾಗಿದೆ. ಹಿರಿಯ ಉಪಾಧ್ಯಕ್ಷರಾದ ವೈ. ರಾಮಚಂದ್ರ ಅವರು ಪ್ರಾರಂಭದಲ್ಲಿ ಪ್ರತಿಷ್ಠಾನಕ್ಕೆ ಐವತ್ತು ಸಾವಿರ ರೂಪಾಯಿಗಳ ಠೇವಣಿ ನೀಡಿದರು. ಅದರ ಮೂಲಕ

ಪದವಿಪೂರ್ವ ಹಾಗೂ ಪದವಿ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಕಳೆದ ಮೂರು ವರ್ಷಗಳಿಂದ ವಿದ್ಯಾರ್ಥಿವೇತನವನ್ನು ಕೊಡಲಾಗುತ್ತಿದೆ. ಹಾಗೆಯೇ ನಿಜಲಿಂಗಪ್ಪ ದತ್ತಿ ಉಪನ್ಯಾಸ ಮಾಲಿಕೆಯಲ್ಲಿ ಈತನಕ ಮೂರು ಉಪನ್ಯಾಸಗಳು ಜರುಗಿವೆ. ಅವುಗಳೆಂದರೆ ನಿವೃತ್ತ ಮುಖ್ಯ ನ್ಯಾಯಾಧೀಶರಾದ ಡಿ.ಎಂ. ಚಂದ್ರಶೇಖರ್ ಅವರು 'ಮಹಾತ್ಮಾ ಗಾಂಧೀಜಿ', ನಿಟ್ಟೂರು ಶ್ರೀನಿವಾಸರಾವ್ ಅವರು 'ಸರ್ದಾರ್ ವಲ್ಲಭಬಾಯ್ ಪಟೇಲ್' ಹಾಗೂ ಎಂ. ರಾಮಾಜೋಯಿಸ್ ಅವರು 'ಭಾರತೀಯ ಜೀವನ ಮೌಲ್ಯಗಳು' ಎಂಬ ವಿಷಯಗಳ ಬಗ್ಗೆ ಉಪನ್ಯಾಸಗಳನ್ನು ನೀಡಿದ್ದಾರೆ. ಕರ್ನಾಟಕ ವಿಶ್ವವಿದ್ಯಾನಿಲಯದ ನಿವೃತ್ತ ಪ್ರಾಧ್ಯಾಪಕ ಡಾ. ಕೆ. ರಾಘವೇಂದ್ರರಾವ್ ಅವರು ರಚಿಸಿದ 'ರಾಷ್ಟ್ರಬಂಧು ಎಸ್. ನಿಜಲಿಂಗಪ್ಪ-ಮ್ಯಾನ್ ಅಂಡ್ ಸ್ಟೇಟ್ಸ್‌ಮನ್' ಎಂಬ ಉದ್ಗ್ರಂಥವನ್ನು ಪ್ರತಿಷ್ಠಾನ ಬಿಡುಗಡೆ ಮಾಡಿದೆ. ಇದರ ಸುಲಭ ಕನ್ನಡ ಆವೃತ್ತಿಯ ಬಿಡುಗಡೆಗೆ ಸಿದ್ಧತೆ ನಡೆದಿದೆ. ಪ್ರತಿಷ್ಠಾನ ಗ್ರಾಮಾಂತರ ಪ್ರದೇಶದಲ್ಲಿ ಉಚಿತ ವೈದ್ಯಕೀಯ ಶಿಬಿರಗಳನ್ನು ಏರ್ಪಡಿಸುತ್ತಿದೆ. ಎಸ್. ನಿಜಲಿಂಗಪ್ಪನವರ ಮೂಲ ಆಶಯವಾದ ಜನಸ್ಪಂದನೆಗೆ ಪ್ರತಿಷ್ಠಾನ ಮುಂದಾಗಿದೆ. ರಾಜಾಜಿನಗರದಲ್ಲಿ ಸಾರ್ವಜನಿಕರ ಕುಂದುಕೊರತೆಗಳ ಸಮಿತಿಯನ್ನು ರಚಿಸಿ ಆ ಮೂಲಕ ಅರ್ಹರಿಗೆ ಸರ್ಕಾರ ಹಾಗೂ ಇತರ ಕಡೆಯಿಂದ ಸಹಾಯ ದೊರೆಯುವಂತೆ ಮಾಡಿದೆ. ಆರ್.ವಿ. ಇಂಜಿನಿಯರಿಂಗ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿರುವ ಡಾ. ಶರ್ಮಾರವರು ಗ್ರಾಮೀಣ ಯುವಜನತೆ ಸ್ವಾವಲಂಬಿತ ಉದ್ಯೋಗ ಪಡೆಯಲು ಅನುಕೂಲವಾಗುವಂತೆ ವಿಶೇಷ ಯೋಜನೆಯೊಂದನ್ನು ಪ್ರತಿಷ್ಠಾನಕ್ಕೆ ಮಾಡಿಕೊಟ್ಟಿದ್ದಾರೆ. ಇದರ ಅನುಷ್ಠಾನಕ್ಕೆ ಬೇಕಾದ ಆರ್ಥಿಕ ಸಹಾಯಕ್ಕಾಗಿ ಜಿಂದಾಲ್ ಸಂಸ್ಥೆಯ ನೆರವನ್ನು ಕೋರಲಾಗಿದೆ. ನಿಜಲಿಂಗಪ್ಪನವರಿಗೆ ಪ್ರಿಯವಾದ ಕೃಷಿ ಕ್ಷೇತ್ರದಲ್ಲಿ ಒಂದಿಷ್ಟು ಕೆಲಸ ಮಾಡುವ ಉದ್ದೇಶದಿಂದ ಕೃಷಿ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದ ಡಾ. ಮಹದೇವಪ್ಪ ಅವರ ನೇತೃತ್ವದಲ್ಲಿ 'ಭತ್ತ ಸಂಶೋಧನಾ ಕೇಂದ್ರ' ವನ್ನು ಪ್ರಾರಂಭಿಸಲಾಗಿದೆ. ರೈತರ ಬದುಕಿಗೆ ಅನುಕೂಲಕರವಾದ ಈ ಯೋಜನೆಯ ಅನುಷ್ಠಾನಕ್ಕೆ ರಾಜ್ಯ ಸರ್ಕಾರದ ನೆರವನ್ನು ಪ್ರಾರ್ಥಿಸಲಾಗಿದೆ.

ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ನಿಜಲಿಂಗಪ್ಪನವರ ದಿನಚರಿಗಳನ್ನು ಸಂರಕ್ಷಿಸಿ ಇಡಲಾಗಿದೆ. ನಿಜಲಿಂಗಪ್ಪ ಮತ್ತು ಡಾ. ದೇಜಗೌ ನಡುವಣ ಸಂದರ್ಶನ ಒಂದು ಅಮೂಲ್ಯ ದಾಖಲೆಯಾಗಿದ್ದು ಅದು ರಾಜ್ಯದ ಪತ್ರಾಗಾರ ಇಲಾಖೆಯಲ್ಲಿದೆ. ೧೯೯೮ರ ನವೆಂಬರ್ ೧೪ ಹಾಗೂ ೧೭ರಂದು ಬೆಂಗಳೂರು ದೂರದರ್ಶನ ಕೇಂದ್ರ ನಿಜಲಿಂಗಪ್ಪನವರ ಬದುಕು ಹಾಗೂ ಸಾಧನೆಯನ್ನು ಪ್ರತಿಬಿಂಬಿಸುವ 'ಪುರುಷ-ಯುಗಪುರುಷ' ಎಂಬ ವಿಶೇಷ ಮಾಲಿಕೆಯನ್ನು ಪ್ರಸಾರ ಮಾಡಿದೆ. ಅದು ಈಗಾಗಲೇ ಬಹುಜನರ ಮೆಚ್ಚುಗೆ ಗಳಿಸಿದೆ. ತಾಲ್ಲೂಕು, ಹೋಬಳಿ ಹಾಗೂ ಗ್ರಾಮಗಳಲ್ಲಿ ಅದನ್ನು ಪ್ರಸಾರ ಮಾಡಬೇಕೆಂಬ ಧ್ಯೇಯ ಪ್ರತಿಷ್ಠಾನದ್ದು. ತಮಿಳುನಾಡಿನ 'ಗಾಂಧಿಗ್ರಾಮ' ದಲ್ಲಿ ಗ್ರಾಮೀಣ ಯುವಜನತೆಗೆ ತರಬೇತಿ ಕೊಡುವ ವಿಶೇಷ ಕಾರ್ಯಕ್ರಮವನ್ನು

ಹಮ್ಮಿಕೊಳ್ಳಲಾಗಿದೆ. ಇದೇ ಮಾದರಿಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಬನವಾಸಿಯಲ್ಲಿ ಇಂತಹ ತರಬೇತಿ ಕೇಂದ್ರವನ್ನು ಪ್ರಾರಂಭಿಸುವ ಆಶಯ ಪ್ರತಿಷ್ಠಾನದ್ದು.

ರಾಜ್ಯದ ಅಭಿವೃದ್ಧಿಗೆ ನಿಜಲಿಂಗಪ್ಪನವರ ಕೊಡುಗೆ ಅನನ್ಯವಾದದ್ದು. ಎಲ್ಲ ನೀರಾವರಿ ಯೋಜನೆಗಳ ಜತೆಗೆ ಕಾರವಾರ ಹಾಗೂ ಮಂಗಳೂರು ಬಂದರು, ಕಾರವಾರ-ಹುಬ್ಬಳ್ಳಿ ರೈಲ್ವೆ ಯೋಜನೆಗಳ ಹಿಂದೆ ನಿಜಲಿಂಗಪ್ಪನವರ ಗಣನೀಯ ಪ್ರಯತ್ನ ಇದೆ. ಇಂತಹ ಅಮೂಲ್ಯ ದಾಖಲೆಗಳು ದೆಹಲಿಯ ರಾಷ್ಟ್ರೀಯ ವಸ್ತುಸಂಗ್ರಹಾಲಯದಲ್ಲಿದೆ. ಇವುಗಳನ್ನು ಪ್ರತಿಷ್ಠಾನಕ್ಕೆ ಪಡೆಯಲಾಗುವುದು.

ಕರ್ನಾಟಕ ಸರ್ಕಾರ ಎಸ್. ನಿಜಲಿಂಗಪ್ಪನವರ ಜನ್ಮಶತಮಾನೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸಿದೆ. ವಿಧಾನಸೌಧದ ಪಶ್ಚಿಮದ್ವಾರದಲ್ಲಿ ನಿಜಲಿಂಗಪ್ಪನವರ ಪ್ರತಿಮೆ ಅನಾವರಣ ಮಾಡಲಾಗಿದೆ. ಈ ಸಂಬಂಧ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು 'ರಾಷ್ಟ್ರಭೂಷಣ', 'ಎಸ್.ಎನ್. ಚಿತ್ರಸಂಪುಟ', 'ಎಸ್.ಎನ್. ಫೋಟೋ ಆಲ್ಬಮ್' ಹಾಗೂ 'ಎಸ್. ನಿಜಲಿಂಗಪ್ಪ ಎ ವಿಶನರಿ ವಿತ್ ಎ ಮಿಶನ್' ಎಂಬ ಮೂರು ಸಂಸ್ಮರಣ ಗ್ರಂಥಗಳನ್ನು ಡಾ. ದೇಜಗೌ ಅವರ ಪ್ರಧಾನ ಸಂಪಾದಕತ್ವದಲ್ಲಿ ಪ್ರಕಟಿಸಿದೆ. ಎಸ್. ನಿಜಲಿಂಗಪ್ಪನವರ ಜನ್ಮಶತಮಾನೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸಿದ ಕರ್ನಾಟಕ ಸರ್ಕಾರಕ್ಕೆ ನಮ್ಮ ಧನ್ಯವಾದಗಳು. ವಿಶೇಷವಾಗಿ ಮಾನ್ಯ ಮುಖ್ಯಮಂತ್ರಿಗಳಾದ ಎಸ್.ಎಂ. ಕೃಷ್ಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರಾದ ಶ್ರೀಮತಿ ರಾಣಿ ಸತೀಶ್ ಅವರಿಗೆ ಅಭಿನಂದನೆಗಳನ್ನು ಈ ಸಂದರ್ಭದಲ್ಲಿ ಹೇಳಬಯಸುತ್ತೇವೆ.

ಸುಮಾರು ಐವತ್ತು ವರ್ಷಗಳ ಕಾಲ ತಪ್ಪದೆ ದಿನಚರಿಯನ್ನು ಬರೆದ ಹಿರಿಮೆ ಎಸ್. ನಿಜಲಿಂಗಪ್ಪನವರದ್ದು. ಎಸ್. ನಿಜಲಿಂಗಪ್ಪನವರ ದಿನಚರಿ ಒಂದು ರಾಷ್ಟ್ರೀಯ ದಾಖಲೆಯಾಗಿದೆ. ಸ್ವಾತ್ರಂತ್ರ್ಯೋತ್ತರ ಭಾರತದ ಇತಿಹಾಸದ ಅಧ್ಯಯನಕ್ಕೆ ಇದನ್ನು ಒಂದು ಮೂಲ ಆಕರವೆಂದೇ ಪರಿಗಣಿಸಬಹುದು. ಇಂತಹ ಅಮೂಲ್ಯ ಗ್ರಂಥದ ಪ್ರಕಟಣೆ ಅವಶ್ಯಕವೆಂದು ಮನಗಂಡು ಇದಕ್ಕೆ ಸಹಾಯ ಮಾಡಿದವರು ಕರ್ನಾಟಕ ಸರ್ಕಾರದ ಬೃಹತ್ ಹಾಗೂ ಮಧ್ಯಮ ಕೈಗಾರಿಕೆಗಳ ಸಚಿವರಾದ ಶ್ರೀ ಆರ್.ವಿ. ದೇಶಪಾಂಡೆಯವರು. ರಾಜ್ಯಸಭಾ ಸದಸ್ಯರಾದ ಎಂ.ವಿ. ರಾಜಶೇಖರನ್ ಅವರು ಪ್ರತಿಯೊಂದು ಹಂತದಲ್ಲೂ ನಮಗೆ ಸಹಾಯ ಮಾಡಿದ್ದಾರೆ. ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಸದಸ್ಯರಾದ ಎ.ಎಸ್. ಜಯಸಿಂಹ ಅವರು ಅಗತ್ಯ ನೆರವನ್ನು ನೀಡಿದ್ದಾರೆ.

ಎಸ್. ನಿಜಲಿಂಗಪ್ಪನವರ ದಿನಚರಿ ಬಗ್ಗೆ ಮೊದಲಿನಿಂದಲೂ ಆಸಕ್ತರಾಗಿದ್ದ ರಾಷ್ಟ್ರದ ಖ್ಯಾತ ಪತ್ರಕರ್ತರೂ, ರಾಜ್ಯಸಭಾ ಸದಸ್ಯರಾದ ಶ್ರೀ ಕುಲದೀಪ್ ನಯ್ಯರ್ ಅವರು ಇದಕ್ಕೆ ಮುನ್ನುಡಿ ಬರೆದಿರುವುದು ನಮ್ಮಗಳ ಭಾಗ್ಯ. ಮೈಸೂರು ವಿಶ್ವವಿದ್ಯಾನಿಲಯದ ಮಾಜಿ

ಉಪಕುಲಪತಿಗಳೂ, ಖ್ಯಾತ ಬರಹಗಾರರೂ ಆದ ಡಾ. ದೇಜಗೌ ಅವರು ಇದಕ್ಕೆ ಬೆನ್ನುಡಿ ಬರೆದುಕೊಟ್ಟಿದ್ದಾರೆ. ಕೆ.ಆರ್. ಕಮಲೇಶ್ ಈ ಗ್ರಂಥದ ಪ್ರಕಟಣೆಯ ಪ್ರತಿಯೊಂದು ಹಂತದಲ್ಲೂ ನೆರವು ನೀಡಿ ಸಂಪಾದನೆ ಮಾಡಿದ್ದಾರೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರ ಆಪ್ತ ಕಾರ್ಯದರ್ಶಿ ಡಾ. ಎ.ಆರ್. ಮಂಜುನಾಥ್ ಅಗತ್ಯ ನೆರವು ನೀಡಿದ್ದಾರೆ. ಕರ್ನಾಟಕ ಗೆಜೆಟಿಯರ್ ಇಲಾಖೆಯ ಹಿರಿಯ ಸಂಪಾದಕರಾಗಿದ್ದ ಬಿ.ಎಸ್. ಸತ್ಯನಾರಾಯಣ ಅವರು ಈ ಗ್ರಂಥವನ್ನು ಇಂಗ್ಲಿಷ್‌ನಿಂದ ಕನ್ನಡಕ್ಕೆ ಅನುವಾದ ಮಾಡಿಕೊಟ್ಟಿರುವುದೇ ಅಲ್ಲದೆ ಕರಡನ್ನು ತಿದ್ದಿಕೊಟ್ಟಿದ್ದಾರೆ. ಲಕ್ಷ್ಮಿ ಮುದ್ರಣಾಲಯದ ಮಾಲೀಕರಾದ ಅಶೋಕ್‌ಕುಮಾರ್ ಹಾಗೂ ಅವರ ಸಿಬ್ಬಂದಿಯವರು ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿಕೊಟ್ಟಿದ್ದಾರೆ. ರಕ್ಷಾಪುಟದ ಕಲಾವಿದರು ಶ್ರೀಪಾದ್ ಅವರು. ಇವರೆಲ್ಲರಿಗೂ ಪ್ರತಿಷ್ಠಾನ ಅನಂತಾನಂತ ಧನ್ಯವಾದಗಳನ್ನು ಅರ್ಪಿಸುತ್ತದೆ.

ಎಸ್. ನಿಜಲಿಂಗಪ್ಪನವರ ವಿಚಾರಧಾರೆ ಪ್ರಸಾರವಾಗಲು ಕಾರಣಕರ್ತರಾದ ಎಲ್ಲ ಮಹನೀಯರನ್ನು ಎಸ್. ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನ ಮತ್ತೊಮ್ಮೆ ಕೃತಜ್ಞತೆಯಿಂದ ನೆನೆಯುತ್ತದೆ.

ಬೆಂಗಳೂರು
ದಿನಾಂಕ : ೩೦-೧-೦೩

ವೈ. ರಾಮಚಂದ್ರ
ಕಾರ್ಯಾಧ್ಯಕ್ಷರು

# ಎಸ್.ಎನ್. ದಿನಚರಿ

**ಜನವರಿ ೧೬, ೧೯೫೩**

ಭಾಷಾವಾರು ಪ್ರಾಂತ್ಯಗಳ ಪ್ರಶ್ನೆಯನ್ನು ಸುದೀರ್ಘವಾಗಿ ಚರ್ಚಿಸಲಾಯಿತು. ನೇತಾರರು ಪರಿಸ್ಥಿತಿಯನ್ನು ತೀರ್ಮಾನಿಸಲು ಅಸಮರ್ಥರು ಎಂಬುದು ನನ್ನ ಭಾವನೆ. ಗಣನೀಯವಾದ ದಾಸ್ಯತ್ವ ತಮ್ಮಲ್ಲಿ ತುಂಬಿಕೊಂಡಿದೆ. ಹೈದರಾಬಾದು ನಶಿಸಿ ಹೋಗಬಾರದೆಂದು ಹೇಳಿದಾಗ ಪಂಡಿತ್ ನೆಹರೂರವರು ಒಪ್ಪಿಕೊಳ್ಳುತ್ತಲೇ ಇರಲಿಲ್ಲ. ಮೌಲಾನಾರನ್ನು ಬಿಟ್ಟು ಯಾರೂ ಅವರೊಂದಿಗೆ ಒಪ್ಪಿಕೊಳ್ಳಲಿಲ್ಲವೆಂದು ಕಾಣುತ್ತದೆ. ಅವರು ಪ್ರಧಾನಮಂತ್ರಿ ಹುದ್ದೆಯನ್ನು ಅಲಂಕರಿಸಿದ ಮೇಲೆ ಮನಸ್ಸು ಮತ್ತು ಕೆಲಸದ ಪುನಶ್ಚೇತನವನ್ನು ಕಳೆದುಕೊಳ್ಳುತ್ತಿರುವುದು ದುರದೃಷ್ಟಕರ. ಸಾಹಸದ ಮತ್ತು ಮುನ್ನುಗ್ಗುವ ಚೈತನ್ಯವು ಅವರಲ್ಲಿಲ್ಲ. ತಮ್ಮ ತಮ್ಮ ಮನಸ್ಸಿನಲ್ಲಿರುವುದನ್ನು ಹೇಳುವ ಪ್ರಾಮಾಣಿಕ ಜನರು ಅವರ ಸುತ್ತ ಇಲ್ಲವೆಂದು ನಾನು ನಂಬುತ್ತೇನೆ. ಅವರ ಸುತ್ತ ಭಟ್ಟಂಗಿಗಳು ಬಲವಾಗಿದ್ದಾರೆ. ಅವರು ತುಂಬಾ ಹೊಗಳಿಕೆ ಅಪೇಕ್ಷಿಸುವವರಾಗಿದ್ದಾರೆ. ವ್ಯಕ್ತಿಗಳ ವ್ಯಕ್ತಿತ್ವ ನಿರ್ಣಯಿಸುವುದರಲ್ಲಿ ಅವರು ದೋಷಯುಕ್ತರಾಗುತ್ತಿರುವುದು ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತಿದೆ.

ಕಳೆದ ರಾತ್ರಿಯ ಚಾಲನ ಸಮಿತಿಯ (Steering Committee) ಸಭೆಗಳಲ್ಲಿ ನೆಹ್ರೂರವರ ಕರಡು ಬಹಳ ಪ್ರತಿಗಾಮಿಯಾಗಿದ್ದಿತ್ತು. ನನ್ನ ಮತ್ತು ಶಂಕರರಾವ್ ದೇವ್‌ರವರ ಒತ್ತಾಯದಿಂದ ಅದರ ತೀವ್ರತೆಯನ್ನು ಕಡಿಮೆಗೊಳಿಸಲಾಯಿತು. ಆ ಠರಾವನ್ನು ಮಂಡಿಸಲು ಅಥವಾ ಬೆಂಬಲಿಸಲು ನಾನು ನಿರಾಕರಿಸಿದೆ. ಆಶ್ಚರ್ಯಕರವಾಗಿ ಗಾಡ್ಗಿಲ್‌ರು ಅದನ್ನು ಒಪ್ಪಿಕೊಂಡರು.

**ಜನವರಿ ೧೭, ೧೯೫೩**

ನೆನ್ನೆಯ ಚಾಲನ ಸಮಿತಿಯಲ್ಲಿ ಭಾಷಾವಾರು ಪ್ರಾಂತ್ಯಗಳ ಪ್ರಶ್ನೆಯ ಮೇಲೆ ಎಚ್.ಸಿ. ದಾಸಪ್ಪನವರು ನೆಹ್ರೂರವರಿಗೆ ಒಪ್ಪಿಗೆಯಾಗುವಂತಹ ಪಾತ್ರವನ್ನು ನಿರ್ವಹಿಸಿದರು. ಶ್ರೀ ಮಲ್ಯರವರು ಆತುರದ ಪಾತ್ರವಾಡಿದರು. ಮಂಗಳೂರು ಜಿಲ್ಲೆಯು ಕರ್ನಾಟಕ ಏಕೀಕರಣಕ್ಕೆ ವಿರೋಧವಾಗಿದೆಯೆಂದೂ, ಕೊಡಗು, ಮೈಸೂರು ಮತ್ತು ಮುಂಬೈನ ಎರಡು ಜಿಲ್ಲೆಗಳಿಗೆ ಮಾತ್ರ ಅದು ಬೇಕಾಗಿದೆಯೆಂದು ಹೇಳುವ ಉದ್ಧಟತನ ತೋರಿದರು.

ಈತ ಮಾನವತ್ವದ ಅತಿಕೀಳು ಮಾದರಿಯಾಗಿದ್ದರು. ಪಂಡಿತ ನೆಹ್ರೂರವರು ಈತನನ್ನು ಕಾಂಗ್ರೆಸ್ಸಿನ ಪ್ರಧಾನ ಕಾರ್ಯದರ್ಶಿಯಾಗಿ ಆಯ್ಕೆ ಮಾಡಿದುದು ಆಶ್ಚರ್ಯ. ತತ್ವಗಳೇ ಇಲ್ಲದ ಯಾವುದೇ ವಿಧವಾದ ನೀತಿಗಳನ್ನು ಹೊಂದಿರದ ಮತ್ತು ಗೌರವಿಸದ ಈ ಮನುಷ್ಯನನ್ನು ದೇಶದ ವಿಷಯಗಳಲ್ಲಿ ಪಾತ್ರನಿರ್ವಹಿಸಲು ಅವಕಾಶ ಕೊಡಲಾಯಿತು, ಇದು ದುರದೃಷ್ಟಕರ.

ಜೂನ್ ೧೧, ೧೯೫೩

ಬೆಳಿಗ್ಗೆ ಮೈಸೂರನ್ನು ತಲುಪಿದೆ. ಸ್ನಾನ ಮತ್ತು ವಿಶ್ರಾಂತಿಯಾದ ಮೇಲೆ ಮಧ್ಯಾಹ್ನ ಶ್ರೀ ಸಾಹುಕಾರ ಚನ್ನಯ್ಯನವರ ಮನೆಯಲ್ಲಿ ಊಟ ಮಾಡಿದ ಮೇಲೆ, ಮಧ್ಯಾಹ್ನ ೨-೩೦ ಗಂಟೆಗೆ ಶ್ರೀ ಹೆಚ್.ಕೆ. ವೀರಣ್ಣಗೌಡ ಮತ್ತು ಶ್ರೀ ಟಿ. ಮರಿಯಪ್ಪನವರ ಜೊತೆಯಲ್ಲಿ ಶ್ರೀ ಹೆಚ್.ಕೆ.ಯವರ ಕಾರಿನಲ್ಲಿ ಬಂಡೀಪುರಕ್ಕೆ ಹೊರಟೆವು. ಬಂಡೀಪುರವನ್ನು ಸಾಯಂಕಾಲ ೪ ಗಂಟೆಗೆ ತಲುಪಿದೆವು. ಅಲ್ಲಿ ಶ್ರೀ ಮೇದಪ್ಪ, ಸಿದ್ದಯ್ಯ ಮತ್ತು ಚನ್ನಯ್ಯ ಅಲ್ಲಿದ್ದರು.

ಮೈಸೂರು ಮಹಾರಾಜರ ಜೊತೆಯಲ್ಲಿ ಟೀ ಸೇವನೆಯಾಯಿತು. ಅರಣ್ಯದಲ್ಲೆಲ್ಲಾ ಕಾರಿನಲ್ಲಿ ಸುತ್ತಾಡಿ ಸಾಂಬಾರಗಳ ದೊಡ್ಡಗುಂಪು ನೋಡಿದೆವು. ದೊಡ್ಡ ಕೊಂಬುಳ್ಳ ಎರಡು ಗಂಡು ಆನೆಗಳ ನಡುವಿನ ಕಾದಾಟ ಸುಂದರವಾದ ದೃಶ್ಯವಾಗಿತ್ತು. ಕೆಲವು ಕಾಡೆಮ್ಮೆ ಮತ್ತು ಒಂದು ಆನೆಯನ್ನು ನೋಡಿದೆವು. ಆ ಸುತ್ತಾಟವನ್ನು ತುಂಬಾ ಆನಂದಿಸಿದೆವು. ಸಮೀಪದ ಬೆಟ್ಟಗಳಲ್ಲಿನ ಸುಂದರವಾದ ದಟ್ಟ ಕಾಡಿನ ದೃಶ್ಯ ಮತ್ತು ದೂರದಲ್ಲಿರುವ ಸೂರ್ಯರಶ್ಮಿಯಿಂದ ಆಚ್ಛಾದಿತವಾಗಿದ್ದ ನೀಲಗಿರಿಬೆಟ್ಟದ ದೃಶ್ಯ ಮನಮೋಹಕವಾಗಿದ್ದಿತು. ನನಗೆ ಕಂಡಂತೆ ಮಹಾರಾಜರು ತುಂಬಾ ತಿಳಿದವರಾಗಿದ್ದು ಅನೇಕ ವಿಷಯಗಳ ಮೇಲೆ ಉಪಯುಕ್ತ ಮಾಹಿತಿಯನ್ನು ಕೊಡಬಲ್ಲವರಾಗಿದ್ದರು. ಉತ್ತಮ ಮನುಷ್ಯ ಮತ್ತು ಸಂಭಾವಿತರಾದ ರಾಜಪ್ರಮುಖರ ಜೊತೆಯಲ್ಲಿ ಮುಖ್ಯಮಂತ್ರಿ ಶ್ರೀ ಹನುಮಂತಯ್ಯನವರು ತುಂಬಾ ಅನಾಗರಿಕವಾಗಿ ವರ್ತಿಸಿದರೆಂದು ಕಾಣುತ್ತದೆ.

**ಟಿಪ್ಪಣಿ :** ನನ್ನ ಕೋರಿಕೆಯ ಮೇರೆಗೆ ಮಹಾರಾಜರನ್ನು ರಾಜಪ್ರಮುಖರಾಗಿ ನೇಮಕ ಮಾಡಲಾಯಿತು.

ರಾತ್ರಿ ೮-೩೦ಕ್ಕೆ ನಮ್ಮ ಕ್ಯಾಂಪಿಗೆ ಹಿಂದಿರುಗಿದೆವು. ಪುಷ್ಕಳವಾದ ಊಟಮಾಡಿ ಅತಿ ಒಳ್ಳೆಯ ವಿಶ್ರಾಂತಿ ಪಡೆದೆವು. ಶ್ರೀ ಮೇದಪ್ಪ ಮತ್ತು ನಾನು ಅರಣ್ಯದ ಬಂಗಲೆಯಲ್ಲಿ ಒಂದು ರೂಮನ್ನು ಹಂಚಿಕೊಂಡಿದ್ದೆವು.

**ಆಗಸ್ಟ್ ೧೫, ೧೯೫೩**

ಪಂಡಿತ್ ನೆಹ್ರೂರವರನ್ನು ಕಂಡು ಕರ್ನಾಟಕ ಮತ್ತು ಮೈಸೂರು ಮತ್ತು ಕೊಡಗು ಮತ್ತು ಚಿತ್ರದುರ್ಗ ಜಿಲ್ಲೆಯ ಕ್ಷಾಮ ಮುಂತಾದ ಅನೇಕ ವಿಷಯಗಳನ್ನು ವಿವರಿಸಿದೆನು.

**ಆಗಸ್ಟ್ ೯, ೧೯೫೩**

ಕಾಶ್ಮೀರದ ಪ್ರಧಾನಮಂತ್ರಿ ಷೇಕ್ ಅಬ್ದುಲ್ಲಾರವರನ್ನು ವಜಾ ಮಾಡಿ ಬಕ್ಷಿ ಗುಲಾಂ ಮಹಮ್ಮದರನ್ನು ಕಾಶ್ಮೀರದ ಪ್ರಧಾನಮಂತ್ರಿಯಾಗಿರಲು ಕೇಳಿದುದು ಒಳ್ಳೆಯ ಸಮಾಚಾರ. ನಂತರ ಶ್ರೀ ಅಬ್ದುಲ್ಲಾ ಮತ್ತು ಅವರ ಮಂತ್ರಿಮಂಡಲದ ಸಹೋದ್ಯೋಗಿಯೊಬ್ಬರ ಬಂಧನ ತಿಳಿಯಿತು. ಕಾಶ್ಮೀರ ರಾಜ್ಯದ ಮುಖ್ಯಸ್ಥರಿಂದ ಇದು ಸರಿಯಾದ ಹೆಜ್ಜೆ. ಶ್ರೀ ಅಬ್ದುಲ್ಲಾ ತಾವು ತಿನ್ನಬಹುದಾದುದಕ್ಕಿಂತ ಜಾಸ್ತಿ ತಿನ್ನುತ್ತಿದ್ದರು. ಇತ್ತೀಚೆಗೆ ಅವರ ಹೇಳಿಕೆಗಳು ಭಾರತ-ವಿರೋಧಿಯಾಗುತ್ತಿದ್ದಿತು. ಕಾಶ್ಮೀರಕ್ಕೆ ಸ್ವಾತಂತ್ರ ಎಂಬುದೇ ಅವರ ಕೂಗಾಗಿದ್ದಿತು. ಏಕೆಂದರೆ ಅವರು ಅಮೆರಿಕಾದ ಪ್ರಭಾವದಲ್ಲಿದ್ದರು.

**ಆಗಸ್ಟ್ ೨೯, ೧೯೫೩ ಕೆ.ಪಿ.ಸಿ.ಸಿ. ಸಮಿತಿಯ ಸಭೆ-ಹುಬ್ಬಳ್ಳಿಯಲ್ಲಿ ಸಾಯಂಕಾಲ ೪ ಗಂಟೆಗೆ**

ಸಭೆ ಸೇರಿ ಏಪ್ರಿಲ್ ಠರಾವಿನ ಪರಾಮರ್ಶೆಯ ಮುಖ್ಯ ಸಮಸ್ಯೆಯನ್ನು ಚರ್ಚಿಸಲಾಯಿತು. ಸಮಿತಿಯಲ್ಲಿನ ಒಟ್ಟಾರೆ ಅಭಿಪ್ರಾಯವೇನಾಗಿತ್ತೆಂದರೆ ನೆಹ್ರೂರವರ ಭರವಸೆಗಳ ಪ್ರಕಾರ ಪರಿಷ್ಕರಿಸುವುದಾಗಿತ್ತು.

ನನ್ನ ೧೭ನೇ ತಾರೀಕಿನ ಪತ್ರದ ಉತ್ತರದಲ್ಲಿ ಇನ್ನೂ ಹೆಚ್ಚಿನ ಸ್ಪಷ್ಟನೆಯನ್ನು ನಿರೀಕ್ಷಿಸಲಾಗಿತ್ತು. ತಮ್ಮ ಜವಾಬನ್ನು ಕಳುಹಿಸುವುದಾಗಿ ತಂತಿ ಸಮಾಚಾರವನ್ನು ಕಳುಹಿಸಿದ್ದರು. ಕೆಲವು ಸದಸ್ಯರು ಅದರಲ್ಲಿಯೂ ಪ್ರಮುಖವಾಗಿ ವಿ.ವಿ. ಪಾಟೀಲ್ ಮತ್ತು ಅವರ ಅಳಿಯ ಮಾಗಡಿಯವರು ನನ್ನ ವಿರುದ್ಧ ಅವಿಶ್ವಾಸ ನಿರ್ಣಯ ತರಲು ಯೋಚಿಸಿದ್ದಾರೆಂದು ನನಗೆ ಯಾರೋ ಹೇಳಿದರು. ಅವರಿಗೆ ಹಾಗೆ ಹೇಳಲೂ ಧೈರ್ಯವಿದೆ ಎಂದು ನಾನು ನಂಬುವುದಿಲ್ಲ.

**ಅಕ್ಟೋಬರ್ ೩೦, ೧೯೫೩ ಹುಬ್ಬಳ್ಳಿಯಲ್ಲಿ ಮಧ್ಯಾಹ್ನ ೩ ಗಂಟೆಗೆ ಕೆ.ಪಿ.ಸಿ.ಸಿ. ಸಭೆ**

ಕೆ.ಪಿ.ಸಿ.ಸಿ. ಸಮಿತಿಯು ಬೆಳಿಗ್ಗೆ ಸಭೆ ಸೇರಿತು. ಈ ಬೆಳಿಗ್ಗೆ ತಾನೇ ಬಂದ ನೆಹ್ರೂರವರ ಕಾಗದಲ್ಲಿನ ಇನ್ನೂ ಹೆಚ್ಚಿನ ಸ್ಪಷ್ಟನೆಯ ದೃಷ್ಟಿಯಿಂದ ಏಪ್ರಿಲ್ ಠರಾವಿನಲ್ಲಿ ಉದ್ದೇಶಿಸಲಾಗಿದ್ದ ಯಾವುದೇ ಕ್ರಮ ಅಗತ್ಯವಿಲ್ಲವೆಂದು ಒಂದು ಠರಾವನ್ನು ಮಂಡಿಸಲು ಒಮ್ಮತದಿಂದ ನಿರ್ಣಯಿಸಲಾಯಿತು.

**ಡಿಸೆಂಬರ್ ೨೪, ೧೯೫೩**

ಚಿತ್ರದುರ್ಗ ತಲುಪಿದೆ. ತಾಯಿಯ ಚಿಂತಾಜನಕ ಸ್ಥಿತಿಯನ್ನು ಕಂಡೆ. ಅವರಿಗೆ ಎದ್ದು ಓಡಾಡಲು ಆಗುತ್ತಿರಲಿಲ್ಲ. ಆದರೂ ಅವರ ಜೀವಕ್ಕೆ ಅಪಾಯವಿದೆಯೆಂದು ನನಗನಿಸಲಿಲ್ಲ.

**ಡಿಸೆಂಬರ್ ೨೭, ೧೯೫೩**

ಪಾರ್ಲಿಮೆಂಟಿನ ಕೊನೆಯ ದಿನ. ತಾಯಿಯ ಸ್ಥಿತಿ ಗಂಭೀರವಾಗಿದೆಯೆಂಬ ರಾಜನ ಪತ್ರವನ್ನು ಸಾಯಂಕಾಲ ಓದಿದೆನು. ಬಹಳ ಚಿಂತಾಕ್ರಾಂತನಾದೆ. ನಿದ್ದೆ ಬರಲಿಲ್ಲ. ನನ್ನ ಮನಸ್ಸಿನಲ್ಲಿ ಅವರ ಮತ್ತು ನನ್ನ ಇಡೀ ಹಳೆಯ ಕಾಲವು ನೆನಪಿಗೆ ಬಂದಿತು. ಎಂತಹ ಜೀವನವನ್ನು ಅವರು ನಡೆಸಿದ್ದರು. ವಿಮಾನ ನಿಲ್ದಾಣದ ಕಚೇರಿಗೆ ಹೋದೆನು. ನಾಳೆ ಬೆಳಿಗ್ಗೆ ಬೆಂಗಳೂರಿಗಾಗಲಿ ಅಥವಾ ಈ ರಾತ್ರಿ ಮದರಾಸಿಗಾಗಲೀ ಒಂದು ಸೀಟೂ ದೊರೆಯಲಿಲ್ಲ.

೨೪ನೇ ಬೆಳಿಗ್ಗೆ ಪ್ರಯಾಣವನ್ನು ಕಾಯ್ದಿರಿಸಿದೆ.

**ಫೆಬ್ರವರಿ ೪, ೧೯೫೪** **ಹುಬ್ಬಳ್ಳಿ**

ಸಾಯಂಕಾಲ ೪ ಗಂಟೆಗೆ ಕರ್ನಾಟಕದ ಕಾಂಗ್ರೆಸ್ ಕಾರ್ಯಕರ್ತರ ಸಮ್ಮೇಳನ, ಮೈಸೂರಿನ ಮುಖ್ಯಮಂತ್ರಿ ಕೆ. ಹನುಮಂತಯ್ಯನವರು ಉದ್ಘಾಟಿಸುತ್ತಾರೆ. ಶ್ರೀ ಕೆ.ಹೆಚ್.ರವರಿಗೆ ಅನೇಕ ಕಾರ್ಯಕ್ರಮಗಳು. ರಾತ್ರಿ ೯ ಗಂಟೆಗೆ ಸಮ್ಮೇಳನದ ಎರಡನೇ ಅಧಿವೇಶನ. ಕಳೆದ ೫-೬ ದಿನಗಳಿಂದ ಇಲ್ಲಿದ್ದ ರಾಜನಿಗೆ ಹಣ ಕೊಟ್ಟೆನು. ಶ್ರೀ ಕೆ. ಹನುಮಂತಯ್ಯನವರಿಗೆ ಅನೇಕ ಕಾರ್ಯಕ್ರಮಗಳಿದ್ದವು. ಅವರು ಅನೇಕ ಭಾಷಣಗಳನ್ನು ಮಾಡಿದರು. ಕರ್ನಾಟಕದ ಆಸೆಗಾಗಿ ಜನರು ಅವರಿಗೆ ಉತ್ಸಾಹಕರವಾದ ಸ್ವಾಗತ ನೀಡಿದರು. ಸಮ್ಮೇಳನವು ಮುಂಜಾನೆ ೨ ಗಂಟೆಗೆ ಮುಕ್ತಾಯಗೊಂಡಿತು.

**ಮಾರ್ಚ ೩, ೧೯೫೪** **ದೆಹಲಿ**

ಅಧ್ಯಕ್ಷರನ್ನು ಸಾಯಂಕಾಲ ೬-೪೫ ಗಂಟೆಗೆ ನೋಡಿದೆನು. ಅವರಿಗೆ ಮೈಸೂರಿನ ಮತ್ತು ಕರ್ನಾಟಕದ ಪರಿಸ್ಥಿತಿಯನ್ನು ವಿವರಿಸಿದೆ. ಸಮುದಾಯ ಯೋಜನೆಗಳು ಮುಂತಾದವುಗಳನ್ನು ಕುರಿತು ಚರ್ಚಿಸಿದೆನು.

**ಮಾರ್ಚ ೪, ೧೯೫೪** **ದೆಹಲಿ**

ರಾಷ್ಟ್ರಪತಿಭವನದಲ್ಲಿ ಡಾ. ಪಟ್ಟಾಭಿಯವರನ್ನು ಕಂಡು ಮೈಸೂರು ಕರ್ನಾಟಕ ಮುಂತಾದ ವಿಷಯಗಳನ್ನು ಚರ್ಚಿಸಿದೆ.

**ಮಾರ್ಚ್ ೧೭, ೧೯೫೪**

ಮುಖ್ಯಮಂತ್ರಿ ಶ್ರೀ ಕೆ. ಹನುಮಂತಯ್ಯನವರು ನನ್ನನ್ನು ಕಂಡು ಸುದೀರ್ಘವಾದ ಮಾತುಕತೆ ನಡೆಸಿದರು. ನನ್ನ ಮತ್ತು ಶ್ರೀ ಕೆ.ಸಿ. ರೆಡ್ಡಿಯವರ ಅಥವಾ ನನ್ನೊಬ್ಬನ ತೀರ್ಮಾನಕ್ಕೆ ತಾವು ಬದ್ಧವಾಗಿರುತ್ತೇನೆಂದು ಅವರು ಹೇಳಿದರು.

**ಏಪ್ರಿಲ್ ೨೦, ೧೯೫೪**

ನಾನು ಸಂಪೂರ್ಣವಾಗಿ ತಪಾಸಣೆ ಮಾಡಿಸಿಕೊಂಡೆ. ರೇಡಿಯೋ ಗ್ರಾಂ ಮಾಡಿಸಿಕೊಂಡೆ. ಹೃದಯವು ಸರಿಯಾಗಿರುವಂತೆ ಕಾಣುತ್ತದೆ. ರಕ್ತದೊತ್ತಡವು ಬಹಳ ಕಡಿಮೆಯಿದೆ. ಕಾಲುಗಳಲ್ಲಿ ಊತವಿದೆ.

ಮಧ್ಯಾಹ್ನ ತುಂಬಾ ಕಾಯಿಲೆಯಾಯಿತು. ಹೊಟ್ಟೆ ತೊಂದರೆ ಮುಂತಾದವುಗಳಿಂದ ಅಸ್ಥಿಮಿತವಾಗಿದ್ದೆನು. ಈ ಅಸ್ಥಿಮಿತತೆಯು ಮಧ್ಯರಾತ್ರಿಯವರೆಗೆ ಮುಂದುವರಿಯಿತು. ಡಾ. ಜಯರಾಂರವರು ಬಂದು ನನ್ನನ್ನು ಪರೀಕ್ಷಿಸಿದರು. ಶ್ರೀ ಹನುಮಂತಯ್ಯನವರನ್ನು ಉಚ್ಚಾಟಿಸಲು ತುಂಬಾ ಪ್ರಯತ್ನಗಳಾಗುತ್ತಿವೆ. ಅವರು ಮುಂದುವರಿಯಲು ಅರ್ಹರಲ್ಲವೆಂಬುದು ನನ್ನ ಭಾವನೆ. ಹಾಗೆಯೇ ಹಳೆಯ ಗುಂಪು ಬರಬಾರದು. ಸತ್ಯಸಂಧ ವ್ಯಕ್ತಿಗಳು ಅಧಿಕಾರಕ್ಕೆ ಬರಬೇಕು.

**ಜೂನ್ ೨, ೧೯೫೪** **ಬೆಂಗಳೂರು**

ಶ್ರೀ ವಿ.ವಿ. ಪಾಟೀಲ್, ಮಾಗಡಿ ಮತ್ತು ನೆಸ್ವಿಯವರು ನನ್ನ ವಿರುದ್ಧ ಮತ್ಸರಯುಕ್ತ ಮತ್ತು ದುರುದ್ದೇಶಯುಕ್ತ ಪ್ರಚಾರವನ್ನು ಮಾಡುತ್ತಾ ಬೆಂಗಳೂರಿನಲ್ಲಿದ್ದಾರೆ. ತೋರಿಕೆಗೆ ಕರ್ನಾಟಕದ ಏಕೀಕರಣಕ್ಕೆ ತಾವಲ್ಲಿದ್ದೇವೆ ಎಂದು ಹೇಳಿದರೂ, ಅವರು ಬೇರೆ ಉದ್ದೇಶಕ್ಕೇ ಬಂದಿದ್ದಾರೆಂದು ಕಾಣುತ್ತದೆ. ಇದರಲ್ಲಿರುವ ಸಮಸ್ಯೆ ಅವರಿಗೆ ಗೊತ್ತಿಲ್ಲ. ಆದರೆ ಅವರುಗಳು ಶ್ರೀ ಕೆ. ಹನುಮಂತಯ್ಯನವರ ಇಷ್ಟಪಟ್ಟ ಸಾಧನಗಳಾಗಿದ್ದಾರೆಂದು ಕಾಣುತ್ತದೆ.

**ಜೂನ್ ೩, ೧೯೫೪** **ಬೆಂಗಳೂರು**

ಹನುಮಂತಯ್ಯನವರು, ಕನಿಷ್ಠ ಮೊದಲಿಬ್ಬರು ನನ್ನ ಬಗ್ಗೆ ಅಹಿತ ಭಾವನೆ ಹೊಂದಿದ್ದು ನನ್ನ ವಿರುದ್ಧ ಅವರ ಕೈಲಾದುದನ್ನು ಎಲ್ಲವನ್ನು ಮಾಡುತ್ತಿದ್ದಾರೆ ಎಂಬ ತೀರ್ಮಾನಕ್ಕೆ ಬಂದಿದ್ದೇನೆ. ಅವರು ಏನು ಮಾಡಬಲ್ಲರು ಅಥವಾ ಏನು ಮಾಡಬೇಕೆಂದಿದ್ದಾರೆಂಬುದು ನನಗೆ ತಿಳಿಯದು. ಅವರನ್ನು ನಾನು ಗಮನಿಸುತ್ತಿದ್ದೇನೆ.

**ಆಗಸ್ಟ್ ೩೦, ೧೯೫೪** **ಚಿತ್ರದುರ್ಗ**

ಹುಬ್ಬಳ್ಳಿಯ ಕನ್ನಡ ವಾರಪತ್ರಿಕೆ 'ಪ್ರಪಂಚ'ದಲ್ಲಿ ಶ್ರೀ ಕೆ. ಹನುಮಂತಯ್ಯನವರ ಜೊತೆಯಲ್ಲಿನ ಒಂದು ಸಂದರ್ಶನವನ್ನು ಪ್ರಕಟಿಸಿದ್ದು, ಅದರಲ್ಲಿ ಕರ್ನಾಟಕದ ರಚನೆಯ

ಬಗ್ಗೆ ಈ ನಿಷ್ಕ್ರಿಯತೆಗೆ ನನ್ನ ವರ್ತನೆಯೇ ಕಾರಣವೆಂದು ಸುಳ್ಳು ಅಪಾದನೆಗಳನ್ನು ಮಾಡಲಾಗಿತ್ತು. ಇದೊಂದು ದುರುದ್ದೇಶದ ಹೇಳಿಕೆ. ನಿಜಾಂಶದ ಬಗ್ಗೆ ನಾನು ಅವರಿಗೆ ಮತ್ತು ಸಂಪಾದಕರಿಗೆ ಬರೆದೆ. ಅಂತಹ ಒಂದು ಹೇಳಿಕೆಯನ್ನು ಅವರು ಮಾಡಿರುವುದರ ಬಗ್ಗೆ ನನಗೆ ವ್ಯಾಕುಲವಾಗಿದೆ.

**ಸೆಪ್ಟೆಂಬರ್ ೯, ೧೯೫೪** **ಬಳ್ಳಾರಿ**

ಆಂಧ್ರರು ಬಳ್ಳಾರಿ ನಗರ ಮತ್ತು ಮೂರು ಫಿರ್ಕಾಗಳನ್ನು (ಒಂದು ತಾಲ್ಲೂಕಿನ ಉಪ-ವಿಭಾಗಗಳು) ಪಡೆಯಲು ಇನ್ನೂ ಚಳವಳಿ ಹೂಡುತ್ತಿದ್ದಾರೆ. ತುಂಬಾ ದುರಾಸೆಯ ಜನರವರು. ಸುಮ್ಮನೆ ಆಯೋಗದ ಸದಸ್ಯರುಗಳಾದ ಡಾ. ಕುಂಜ್ರು ಮತ್ತು ಪಣಿಕ್ಕರರನ್ನು ನೋಡಿದೆ. ಡಾ. ಪಣಿಕ್ಕರ್‌ರವರು ಶ್ರೀ ಹನುಮಂತಯ್ಯನವರ ಬಗ್ಗೆ ತುಂಬಾ ವ್ಯಾಕುಲರಾಗಿದ್ದು, ಅವರು ತಲೆಹರಟೆಯವರೆಂದು ಭಾವಿಸಿದ್ದಾರೆ. ಕಳೆದ ಸಲ ಬೆಂಗಳೂರಿನಲ್ಲಿ ಅಧ್ಯಕ್ಷ ಶ್ರೀ ಫಜಲ್ ಆಲಿಯಂತಹ ಸಭ್ಯರ ಜೊತೆಯಲ್ಲಿ ಅವರು ಅನುಚಿತವಾಗಿ ವರ್ತಿಸಿದರೆಂದು ಹೇಳಲಾಗಿದೆ. ಅವರು ಬಳ್ಳಾರಿಯನ್ನು ಬದಲಾಯಿಸುತ್ತಾರೆಂಬುದನ್ನು ನಾನು ನಂಬುವುದಿಲ್ಲ. ತ್ಯಾಬಾಂಚಾಗೆ ಒಂದು ಬದುವನ್ನು ಹಾಕಬೇಕೆಂಬುದರ ಬಗ್ಗೆ ಅವರು ಕಾತುರರಾಗಿದ್ದಾರೆ. ಇದು ಒಪ್ಪಿಕೊಳ್ಳಬಹುದಾದುದು. ಅಂದಾಕ್ಷಣ ಆಂಧ್ರಕ್ಕೆ ಯಾವುದೇ ಪ್ರದೇಶವನ್ನು ಕೊಟ್ಟುಬಿಡುವುದಲ್ಲ.

**ಡಿಸೆಂಬರ್ ೧, ೧೯೫೪** **ಬೆಂಗಳೂರು**

ನಾನು ಅನೇಕ ಸ್ನೇಹಿತರನ್ನು ಭೇಟಿ ಮಾಡಿದೆ. ಅನೇಕರು ನನ್ನನ್ನು ಭೇಟಿ ಮಾಡಿದರು. ವಿಶ್ವಾಸಮತವನ್ನು ಪಡೆಯುವಂತೆ ಎ.ಐ.ಸಿ.ಸಿ.ಯು ಶ್ರೀ ಹನುಮಂತಯ್ಯನವರಿಗೆ ಸೂಚಿಸಿದ್ದಾರೆಂದು ಕಾಣುತ್ತದೆ. ಈಗ ರಾಜಕೀಯ ವಿಷಯಗಳು ಚುರುಕುಗೊಳ್ಳುತ್ತಿವೆ. ಶ್ರೀ ಕೆ.ಹೆಚ್.ರವರು ತಮ್ಮ ಸ್ಥಾನವನ್ನು ಉಳಿಸಿಕೊಳ್ಳಲು ಎಲ್ಲ ಸಾಧ್ಯವಾದ ವಿಧಾನಗಳನ್ನು ಉಪಯೋಗಿಸುತ್ತಾರೆಂದು ನನಗೆ ಗೊತ್ತು. ಆದರೆ ಈ ಮನುಷ್ಯ ಎಂತಹವರು ಎಂಬುದು ನನಗೆ ಮನದಟ್ಟಾಗಿದೆ. ಕೊನೆಗೆ ಅವರನ್ನು ತೆಗೆದುಹಾಕಲೇಬೇಕು. ವಿಧಾನಸಭೆಯು ಅತ್ಯುತ್ತಮ ಮಟ್ಟದ್ದಾಗಿಲ್ಲ.

**ಡಿಸೆಂಬರ್ ೧೦, ೧೯೫೪** **ಬೆಂಗಳೂರು**

ಪುನಃ ನಾನು ತುಂಬ ಚಟುವಟಿಕೆಯವನಾಗಿದ್ದೇನೆ. ಶ್ರೀ ಹನುಮಂತಯ್ಯನವರ ದುರಾಡಳಿತದ ದೃಷ್ಟಿಯಿಂದ ಅವರು ಹೋಗಬೇಕು ಎಂದು ಅನೇಕರು ಭಾವಿಸಿದ್ದಾರೆ. ಅವರನ್ನು ಹೊರಕ್ಕೆ ಕಳುಹಿಸಲು ಬಹಳ ಉತ್ತಮ ಅವಕಾಶಗಳಿವೆಯೆಂದು ಕಾಣುತ್ತದೆ. ನಾಳೆಯ ವಿಶ್ವಾಸಮತದ ಬಗ್ಗೆ ಮೇಲ್ವಿಚಾರಣೆ ನಡೆಸಿ ವರದಿ ಮಾಡಲು ಐ.ಸಿ.ಎಫ್.ಸಿ.ಸಿ. ಅಧ್ಯಕ್ಷ ಶ್ರೀ ಕೆ.ಪಿ.ಮಾಧವನ್ ನಾಯರ್ ಅವರನ್ನು ಪ್ರತಿನಿಧಿಯಾಗಿ ನಿಯೋಜಿಸಲಾಗಿದೆ.

**ಡಿಸೆಂಬರ್ ೧೧, ೧೯೫೪** **ಬೆಂಗಳೂರು**

ಶ್ರೀ ಕೆ.ಹೆಚ್.ರವರು ವಿಶ್ವಾಸಮತವನ್ನು ಯಾಚಿಸಬೇಕು. ಸಭೆಯನ್ನು ಮಧ್ಯಾಹ್ನ ೧ ಗಂಟೆಗೆ ನಿಗದಿಪಡಿಸಲಾಗಿ ಶ್ರೀ ಹನುಮಂತಯ್ಯನವರು ವಿಶ್ವಾಸಮತವನ್ನು ಪಡೆದರು. ಹೆಚ್ಚಿನ ಸಂಖ್ಯೆಯ ಎಂ.ಎಲ್.ಎ.ಗಳು ಹೊಂದಿದ್ದ ಆಶಾಭಾವನೆಯಂತೆ ಇದು ಅನಿರೀಕ್ಷಿತ. ಪಡೆದ ಮತಗಳ ಸಂಖ್ಯೆಯನ್ನು ಬಹಿರಂಗಪಡಿಸಲಿಲ್ಲ.

**ಜನವರಿ ೨೩, ೧೯೫೬** **ಬೆಂಗಳೂರು**

ಬೆಂಗಳೂರು ತಲುಪಿದೆ. ರೈಲು ಮಾಮೂಲಿನಂತೆ ಹುಬ್ಬಳ್ಳಿಯನ್ನು ೧೫ ನಿಮಿಷಗಳು ತಡವಾಗಿ ಬಿಟ್ಟರೂ ಪುನಃ ಒಂದು ಗಂಟೆಗಿಂತ ಹೆಚ್ಚಾಗಿ ತಡವಾಯಿತು. ಶ್ರೀ ವೆಂಕೋಜಿರಾಯರು ನನ್ನನ್ನು ಭೇಟಿಮಾಡಿದರು. ಇಲ್ಲಿ ಒಬ್ಬರು ಸ್ವಾಮಿ ಎಂಬುವರಿದ್ದು ಅವರು ತಮ್ಮ ಚಿತ್ರ ಕೆಲಸದಲ್ಲಿ ತುಂಬಾ ಕಾರ್ಯತತ್ಪರರಾಗಿದ್ದಾರೆ. ಉಮ್ಮಣ್ಣ ಹೆಚ್ಚು ಸಂತೋಷದಾಯಕವಾಗಿ ಕಾಣುತ್ತಾರೆ. ಬಿಹಾರ ಮತ್ತು ಬಂಗಾಳ ಪ್ರಾಂತ್ಯಗಳೆರಡೂ ಒಂದೇ ರಾಜ್ಯವನ್ನು ಹೊಂದಲು ಒಪ್ಪಿಕೊಂಡಿರುವರೆಂಬ ಸಮಾಚಾರ ಬಂದಿದೆ. ಮದರಾಸು, ಕರ್ನಾಟಕ, ತಿರುವಾಂಕೂರು-ಕೊಚ್ಚಿನ್‌ಗಳು ಸೇರಿ ದಕ್ಷಿಣ ಪ್ರದೇಶವಾಗುತ್ತವೆ. ಇದು ಆಶ್ಚರ್ಯಕರವಾದುದು. ಬಂಗಾಳ ಮತ್ತು ಬಿಹಾರದ ಜನ ಸುಲಭವಾಗಿ ಒಪ್ಪಿಕೊಳ್ಳುತ್ತಾರೆಂದು ನಾನು ನಂಬುವುದಿಲ್ಲ. ಹೇಗಾದರೂ ಇರಲಿ, ಈ ದಕ್ಷಿಣ ಪ್ರದೇಶವು ಅಷ್ಟು ಸುಲಭವಲ್ಲ ಎಂದು ನನಗೆ ಖಂಡಿತವಾಗಿ ಗೊತ್ತಿದೆ.

**ಜನವರಿ ೨೪, ೧೯೫೬**

ಇಡೀ ದಿವಸ ಬಹಳಷ್ಟು ಜನರು ನನ್ನನ್ನು ಕಾಣುತ್ತಲೇ ಇರುವವರು ಯಾರೆಂದರೆ ಅನ್ಯಾಯವಾದ ವ್ಯವಹಾರ ಹೊಂದಿರುವ ಅಧಿಕಾರಿಗಳಾಗಿದ್ದು ಅವರಲ್ಲಿ ವಿಶೇಷವಾಗಿ ಕೇಂದ್ರ ಸರಕಾರದ ರೈಲ್ವೆ ಹಣಕಾಸು ಮತ್ತು ಸಂಪರ್ಕ ಸಚಿವಾಲಯದವರಾಗಿದ್ದರು. ಶ್ರೀ ಕಾಮರಾಜ್ ನಾಡಾರ್ ಜೊತೆಯಲ್ಲಿ ದೂರವಾಣಿಯಲ್ಲಿ ಮಾತನಾಡಿದೆನು. ದಕ್ಷಿಣ ಪ್ರದೇಶದ ಸಲಹೆಯ ಬಗ್ಗೆ ಪರಿಶೀಲಿಸಲು ತಮಗೆ ಸಮಯಬೇಕೆಂದು ದೆಹಲಿ ಕಾರ್ಯಕಾರಿ ಸಮಿತಿಗೆ ತಿಳಿಸಿದ್ದೇನೆಂದು ಅವರು ನನಗೆ ತಿಳಿಸಿದರು. ಅವರು ಮದರಾಸಿನಿಂದ ಮಾತನಾಡಿದರು. ನಾಲ್ಕು ಅಥವಾ ಐದು ಜನ ಅಂತಹ ತೀರ್ಮಾನವನ್ನು ತೆಗೆದುಕೊಳ್ಳಲಾಗುವುದಿಲ್ಲ ಎಂದು ಕೂಡ ಅವರು ನನಗೆ ತಿಳಿಸಿದರು. ಸುಳ್ಳು ಸುದ್ದಿಯು ಮತ್ತು ದಕ್ಷಿಣ ಪ್ರದೇಶದ ಈ ವಿಷಯವನ್ನು ಯಾರೊಬ್ಬರೂ ಗಂಭೀರವಾಗಿ ಪರಿಗಣಿಸಿಯೂ ಇಲ್ಲ ಮತ್ತು ಅದಕ್ಕೆ ಬದ್ಧವಾಗಿಲ್ಲ ಎಂದು ಶ್ರೀ ಕೆ.ಪಿ. ಮಾಧವನ್ ನಾಯರ್ ಬೆಂಗಳೂರು ವಿಮಾನನಿಲ್ದಾಣದಿಂದ ಮಾತನಾಡಿದರು. ನಾನು ಇದ್ದಕ್ಕಿದ್ದಂತೆ ಏನೂ ಹೇಳಲಾಗುವುದಿಲ್ಲ ಮತ್ತು ನಮ್ಮ ಜನರ ಜೊತೆಯಲ್ಲಿ ಸಮಾಲೋಚಿಸಬೇಕು.

ಶ್ರೀ ಕೆ.ಹೆಚ್. ಕೂಡ ಸಮಯ ತೆಗೆದುಕೊಂಡಿದ್ದಾರೆಂದು ಕಾಣುತ್ತದೆ. ಪೂರ್ಣವಾದ ತೊಡಕುಗಳನ್ನು ತಿಳಿದುಕೊಳ್ಳದೆ ಶ್ರೀ ಚನ್ನಯ್ಯನವರು ಇದನ್ನು ಸ್ವಾಗತಿಸಿದ್ದಾರೆಂದು ಕಾಣುತ್ತದೆ. ಈ ವ್ಯವಹಾರವು ಸರಿ ಎಂಬುದೆಂದು ನನಗೆನಿಸುವುದಿಲ್ಲ.

**ಏಪ್ರಿಲ್ ೨೪, ೧೯೫೬**

ಎಸ್.ಆರ್.ಸಿ.ಯ ಮೇಲೆ ಚರ್ಚೆಯು ಇವತ್ತೂ ಮುಂದುವರಿಯಿತು. ಶ್ರೀ ಗಾಡ್ಗೀಲ್, ಶ್ರೀ ಎಸ್.ಕೆ. ಪಾಟೀಲ್ ಮತ್ತು ಶ್ರೀ ಫಿರೋಜ್‌ಗಾಂಧಿಯವರ ಭಾಷಣಗಳು ಕುತೂಹಲಕಾರಿಯಾಗಿದ್ದವು. ಗಾಡ್ಗೀಲ್‌ರು ಬಹಳ ರಾಜಿಯ ಮತ್ತು ಶರಣಾಗತಿಯ ಭಾಷಣವನ್ನು ಮಾಡಿದರು. ಪಾಟೀಲರು ಉಗ್ರವಾದ ಭಾವನಾತ್ಮಕ ಮನವಿಯನ್ನು ಮಾಡಿದರೂ ಅದಷ್ಟೇನೂ ನಂಬಿಕೆಯನ್ನುಂಟು ಮಾಡುವುದಾಗಿರಲಿಲ್ಲ. ಫಿರೋಜ್ ಗಾಂಧಿಯು ಮಹಾರಾಷ್ಟ್ರದಲ್ಲಿ ಬೊಂಬಾಯಿ ಇರಬೇಕೆಂದು ವಾದ ಮಾಡಿದರು. ಸಾಮಾನ್ಯವಾದ ಭಾವನೆಯೇನಿತ್ತೆಂದರೆ ಈ ನಗರವು ಮಹಾರಾಷ್ಟ್ರಕ್ಕೆ ಹೋಗುವುದು ಒಳ್ಳೆಯದು ಎಂದು. ಅದರಿಂದ ಹೆಚ್ಚಿನ ವಿವಾದವುಂಟಾಗುತ್ತದೆ. ನನಗೂ ಹಾಗೇ ಅನಿಸುತ್ತದೆ. ಮಹಾರಾಷ್ಟ್ರೀಯರು ಅನುಚಿತವಾಗಿ ಬಹಳ ಕೆಟ್ಟದಾಗಿ ನಡೆದುಕೊಂಡಿದ್ದಾರೆ, ಆದರೆ ಅವರಿಗೆ ನ್ಯಾಯ ನೀಡಬಾರದೆನ್ನುವುದಕ್ಕೆ ಏನೂ ಕಾರಣವಿಲ್ಲ.

**ಮೇ ೧೦, ೧೯೫೬**

ನಾನು ಒಬ್ಬ ಭವಿಷ್ಯದ ಮೈಸೂರಿನ ಮುಖ್ಯಮಂತ್ರಿಯೆಂದು ಹೇಳಿ ಈ ದಿನದ 'ಟೈಮ್ಸ್ ಆಫ್ ಇಂಡಿಯಾ'ವು ನನ್ನ ಬಗ್ಗೆ ಒಂದು ಚಿತ್ರಣವನ್ನು ಪ್ರಕಟಪಡಿಸಿತ್ತು. ಕೆಲವು ಸ್ನೇಹಿತರು ಇದನ್ನು ನನ್ನ ಗಮನಕ್ಕೆ ತಂದರು. ನಾನು ಅದಕ್ಕೆ ವಿರೋಧವಲ್ಲದಿದ್ದರೂ ನಾನು ಅಷ್ಟೇನೂ ನಿರ್ದಿಷ್ಟವಾಗಿರಲಿಲ್ಲ. ಇದು ಕೆಲವರಿಗೆ ಅದರಲ್ಲಿಯೂ ಮೈಸೂರಿನ ಒಕ್ಕಲಿಗರಿಗೆ ಮತ್ತು ಉತ್ತರ ಕರ್ನಾಟಕದ ಬ್ರಾಹ್ಮಣರಿಗೆ ಅಸಂತೋಷ ತಂದಿದ್ದಿತು. ಈ ಚಿತ್ರಣವು ಕೂಡ ನನಗೆ ಪೂರಕವಾಗಿದ್ದಿತು. ನಾವು ಅಂದರೆ ನಾನು, ಶ್ರೀ ಶಿವಮೂರ್ತಿಸ್ವಾಮಿ ಮತ್ತು ಗಾಡಿಪುರದ ಗೌಡರು ಡಾ.ರಾಧಾಕೃಷ್ಣನ್‌ರವರನ್ನು ಭೇಟಿ ಮಾಡಿದೆವು. ೧೩ನೇ ತಾರೀಕು ಬಸವಜಯಂತಿಯನ್ನು ಉದ್ಘಾಟಿಸಬೇಕೆಂದು ಅಥವಾ ಅಧ್ಯಕ್ಷಸ್ಥಾನ ವಹಿಸಬೇಕೆಂದು ಕೇಳಿಕೊಂಡೆವು. ಅವರು ತಮಗೆ ತುಂಬಾ ಕೆಲಸವಿದೆಯೆಂದು ಹೇಳಿದರು.

**ಮೇ ೨೬, ೧೯೫೬**

ಶ್ರೀ ಗುರುಪಾದಸ್ವಾಮಿಯವರು ಕೇಂದ್ರ ಸಭಾಂಗಣದಲ್ಲಿ ನನ್ನನ್ನು ಭೇಟಿ ಮಾಡಿದರು. ಹೈದರಾಬಾದ್ ಮತ್ತು ಇತರ ಸ್ಥಳಗಳಲ್ಲಿ ಅನೇಕ ಸ್ನೇಹಿತರನ್ನು ತಾವು ಭೇಟಿ ಮಾಡಿರುವುದಾಗಿ ಹೇಳಿದರು. ಹೆಚ್ಚಿನ ಎಂ.ಎಲ್.ಎ.ಗಳು ಮತ್ತು ಎಂ.ಎಲ್.ಸಿ.ಗಳು ನನ್ನನ್ನು ಮುಂದಿನ ನಾಯಕನಾಗಬೇಕೆಂದು ಇಷ್ಟಪಟ್ಟಿರುವರೆಂದು ಹೇಳಿದರು. ಆದರೆ

ನಾನು ನಾಯಕನಾಗಲು ಧೈರ್ಯವಾಗಿ ಪಟ್ಟುಹಿಡಿಯದೆ, ಕೊನೆಯ ಗಳಿಗೆಯಲ್ಲಿ ಒತ್ತಾಯಕ್ಕೆ ಮಣಿಯಬಹುದು ಎಂದು ಭಾವಿಸಿದ್ದರು ಅವರು. ಪ್ರಾಯಶಃ ನಾನು ಇಲ್ಲಿಯವರೆಗೆ ಮೈಸೂರು ಸರ್ಕಾರದಲ್ಲಿ ಮಂತ್ರಿಯಾಗಲು ಇಷ್ಟಪಡದಿರುವುದು ಮತ್ತು ತೀರ ಏಕಾಂಗಿಯಾಗಿರಲು ಬಯಸುತ್ತಿರುವುದರಿಂದ ನನ್ನ ಬಗ್ಗೆ ಈ ತರಹದ ಅಭಿಪ್ರಾಯಕ್ಕೆ ಎಡೆಮಾಡಿಕೊಟ್ಟಿರ ಬಹುದು. ಎಲ್ಲಾ ಕನ್ನಡ ಪ್ರದೇಶಗಳ ಸಮಸ್ಯೆಗಳ ಪರಿಚಯ ನನಗಿರುವುದರಿಂದ ನಾನು ಅನೇಕರಿಗಿಂತ ಚೆನ್ನಾಗಿ ಹೊಸರಾಜ್ಯಕ್ಕೆ ಸೇವೆ ಮಾಡಬಹುದು ಎಂದು ಕೆಲವು ನಾಯಕರು ಭಾವಿಸಿದುದರಿಂದ, ಕಳೆದ ಕೆಲವು ತಿಂಗಳುಗಳಿಂದ ನಾನು ಮೊದಲನೆಯ ಮುಖ್ಯಮಂತ್ರಿಯಾಗುವ ಆಸೆಯನ್ನು ಬೆಳೆಸಿಕೊಳ್ಳಲು ಪ್ರಾರಂಭಿಸಿದ್ದೇನೆ.

**ಜುಲೈ ೨೫, ೧೯೫೬ ದೆಹಲಿ**

ನಿನ್ನೆ ದಿನ ಹಣಕಾಸು ಮಂತ್ರಿ ಶ್ರೀ ಸಿ.ಡಿ. ದೇಶಮುಖರ ರಾಜೀನಾಮೆಯು ಅಂಗೀಕಾರವಾಯಿತು. ಪ್ರಧಾನಮಂತ್ರಿಯು ಆ ಖಾತೆಯ ಪ್ರಭಾರ ಜವಾಬ್ದಾರಿ ಹೊಂದಿದ್ದಾರೆ. ಇಂದು ಶ್ರೀ ದೇಶಮುಖರು ತಮಗೆ ದೊರೆತ ಅವಕಾಶವನ್ನು ಉಪಯೋಗಿಸಿಕೊಂಡು ಸದನದಲ್ಲಿ ಒಂದು ಹೇಳಿಕೆಯನ್ನು ನೀಡಿದರು. ಅವರು ಹೇಳಿದ ಹೆಚ್ಚಿನ ವಿಷಯಗಳು ನಿಜವಾಗಿದ್ದರೂ, ಅವರು ಅದನ್ನು ಮಂಡಿಸಿದ ರೀತಿ, ಉಪಯೋಗಿಸಿದ ಭಾಷೆ ಮತ್ತು ಅನುಸರಿಸಿದ ಇಡೀ ಮಾರ್ಗ ಸರಿಯಾದುದಾಗಿರಲಿಲ್ಲ. ಅವರು ಬಹಳ ಕಹಿಯಾಗಿ, ಖಾರವಾಗಿ, ಅಸಭ್ಯವಾಗಿ ಮಾತನಾಡಿದರು. ಗೌರವಯುತವಾಗಿದ್ದರೂ ಪ್ರಧಾನಿಗಳ ಹೇಳಿಕೆಯು ನೀರಸವಾಗಿದ್ದಿತು. ಪ್ರಧಾನಿಗಳು ತಮ್ಮ ಗೂಡಿನಿಂದ ಹೊರಬಂದು ತಮ್ಮ ಸುತ್ತ ಇರುವ ಆಕ್ಷೇಪಣೀಯ ಆಪಾದನೆಗಳಿಂದ ಮುಕ್ತಿಗೊಂಡು, ಇತರರ ಪೂರ್ವಕಲ್ಪನೆ ಮತ್ತು ತಪ್ಪಾದ ಪೂರ್ವಾಗ್ರಹಗಳನ್ನು ತೊಡೆದು ಹಾಕುವುದಕ್ಕೆ ಇದು ಸಕಾಲ. ಈ ಹೇಳಿಕೆಯು ಮಹಾರಾಷ್ಟ್ರದಲ್ಲಿ ಸ್ವಲ್ಪ ತೊಂದರೆಯನ್ನುಂಟುಮಾಡುವುದು ಖಂಡಿತ. ಕಾರ್ಯಕಾರಿ ಸಮಿತಿಯು ಬೆಳಿಗ್ಗೆ ಸೇರಿತು. ಪಕ್ಷ ಶ್ರೀ ದೇಶಮುಖರ ರಾಜೀನಾಮೆಯನ್ನು ಅಂಗೀಕರಿಸಿತು.

**ಆಗಸ್ಟ್ ೬, ೧೯೫೬ ದೆಹಲಿ**

ಬೊಂಬಾಯಿ ನಗರವೂ ಸೇರಿದಂತೆ ಮಹಾರಾಷ್ಟ್ರ ಮತ್ತು ಗುಜರಾತ್ ರಾಜ್ಯಗಳ ಮೇಲೆ ಬಹಳಮಟ್ಟಿನ ಪ್ರಭಾವ ಬೀರಿದೆ. ಅದು ನಿಶ್ಚಿತವೆಂದು ಕಾಣುತ್ತದೆ. ಹೊಸ ರಾಜ್ಯಗಳ ಪುನರ್ವಿಂಗಡಣೆ, ಸಂಮಿಶ್ರ ಬೊಂಬಾಯಿಗೆ ಅಲ್ಲಿ ಒಲವು ಇದೆ. ಉಪಬಂಧದ ಮೇಲಿನ ಚರ್ಚೆಗೆ ಉತ್ತರ ನೀಡಲು ಪಂತರು ಪುನಃ ನಾಳೆವರೆಗೆ ಸಮಯ ತೆಗೆದುಕೊಂಡರು. ನಿನ್ನೆ ದಿನದಿಂದ ಸಭೆ ಸೇರಿರುವ ಕಾರ್ಯಕಾರಿ ಸಮಿತಿಯು ಅದರ ಪರವಾಗಿರಲು ನಿರ್ಧರಿಸಿದೆ. ನೆಹ್ರೂರವರು ಗುಜರಾತ್ ಮತ್ತು ಮಹಾರಾಷ್ಟ್ರದ

ಸದಸ್ಯರನ್ನು ಭೇಟಿ ಮಾಡಿದರು. ಒಂದೆರಡು ವಿಚಾರಗಳ ವಿನಾ ಅವರು ಎಲ್ಲವನ್ನು ಒಪ್ಪಿಕೊಂಡಿದ್ದಾರೆ. ಕೇಂದ್ರ ಸಭಾಂಗಣದಲ್ಲಿನ ಪಕ್ಷದ ಸಭೆಯಲ್ಲಿ ಸಮ್ಮಿಶ್ರ ರಾಜ್ಯವನ್ನು ರಚಿಸಬೇಕೆಂದು ತೀರ್ಮಾನಿಸಲಾಯಿತು. ಅದರ ವಿರುದ್ಧ ಮತ ಹಾಕಿದ ಗಾಡ್ಗೀಲರನ್ನು ಬಿಟ್ಟು ಎಲ್ಲರೂ ಬೆಂಬಲಿಸಿದರು. ನಂತರ ಡ್ಯಾಂಗೆ ಜೈಸೂರ್ಯ ಮತ್ತು ಇತರರ ಜೊತೆಯಲ್ಲಿ ಪಂತರನ್ನು ಭೇಟಿ ಮಾಡಿ ಮಹಾರಾಷ್ಟ್ರದ ಜೊತೆಯಲ್ಲಿ ಯಾವುದೇ ಪ್ರದೇಶವನ್ನು ಒಪ್ಪಿಕೊಳ್ಳಲು ಸಾಧ್ಯವಾಗಲಿಲ್ಲವೆಂದು ಅವರು ಹೇಳಿದರು. ಸರಕಾರದ ನೇತೃತ್ವವನ್ನು ತೆಗೆದುಕೊಳ್ಳುವು ದಿಲ್ಲವೆಂದು ಅವರು ಮತ್ತೆ ಹೇಳಿದರು. ಅಂದರೆ ಆ ವಿಷಯವು ಅಲ್ಲೇ ನಿಂತಿದೆ. ಒಳ್ಳೆಯದು.

**ಆಗಸ್ಟ್ ೬, ೧೯೫೬ — ದೆಹಲಿ**

ಎರಡನೆಯ ಪಠನವು ಮುಕ್ತಾಯಗೊಂಡುದರಿಂದ ರಾಜ್ಯಗಳ ಪುನರ್‌ವಿಂಗಡಣಾ ಮಸೂದೆಯನ್ನು ಈ ದಿನ ಕಾರ್ಯತಃ ಅನುಮೋದಿಸಲಾಯಿತು. ಅಂತೂ ಕರ್ಣಾಟಕ ರಾಜ್ಯವು ಅಸ್ತಿತ್ವಕ್ಕೆ ಬರುತ್ತಿದೆಯೆಂದು ನನಗೆ ಸಂತೋಷವೂ ಆಯಿತು, ಹೆಮ್ಮೆಯೂ ಆಯಿತು. ಅನೇಕ ಕಷ್ಟಗಳಿದ್ದಾಗ್ಯೂ ಇದನ್ನು ಸಾಧಿಸಲಾಯಿತು ಮತ್ತು ಅದರಲ್ಲಿ ನನ್ನ ಪಾತ್ರವೂ ಇದೆ ಎಂಬ ತೃಪ್ತಿ ನನಗಿದೆ. ನನ್ನ ಕೆಲಸ ಮತ್ತು ಸೇವೆಯನ್ನು ನಮ್ಮ ಜನರೇ ಹೊಗಳಿದರೆಂಬುದು ನನಗೆ ಸಂತಸದ ವಿಷಯ. ಅವರಲ್ಲಿ ಕೆಲವರಿಗೆ ನನ್ನ ಬಗ್ಗೆ ತುಂಬಾ ತೃಪ್ತಿಯೇನಿಲ್ಲ. ಇದು ಅನೇಕ ಸಲ ಜಾತಿಯ ಪರಿಗಣನೆ ಮತ್ತು ಅಷ್ಟೇ ಸಮನಾಗಿ ವೈಯಕ್ತಿಕ ಪರಿಗಣನೆಗಳಿಂದಾಗಿದೆ. ನಾನು ಯಾರಿಗೂ ತೊಂದರೆ ಮಾಡದಿದ್ದರೂ ವಿಶೇಷವಾಗಿ ಮೈಸೂರಿನ ಹೊರಗಿರುವ ಬ್ರಾಹ್ಮಣರು ನನ್ನ ಬಗ್ಗೆ ತುಂಬಾ ಸಂಕುಚಿತ ಮನೋಭಾವದವರಾಗಿದ್ದಾರೆ.

**ಆಗಸ್ಟ್ ೨೩, ೧೯೫೬ — ದೆಹಲಿ**

ಇಂದು ಸಾಯಂಕಾಲ ರಾಷ್ಟ್ರಾಧ್ಯಕ್ಷ ಡಾ. ಪ್ರಸಾದರನ್ನು ಸಂದರ್ಶಿಸಿದೆ. ಮಾಮೂಲಿನಂತೆ ನನ್ನ ಬಗ್ಗೆ ದಯಾಳುವಾಗಿದ್ದರು. ತಮ್ಮ ಭವಿಷ್ಯವೂ ಸೇರಿದಂತೆ ಅನೇಕ ವಿಷಯಗಳ ಬಗ್ಗೆ ಮುಕ್ತವಾಗಿ ಮಾತನಾಡಿದರು. ಅವರು ರಾಷ್ಟ್ರಾಧ್ಯಕ್ಷರಾಗಿ ಮುಂದುವರಿಯ ಬೇಕೆಂಬುದು ನಮ್ಮ ಅಪೇಕ್ಷೆ ಎಂದು ಅವರಿಗೆ ಹೇಳಿದೆ. ಅವರು ಅದರ ಬಗ್ಗೆ ತಾವು ವ್ಯಾಕುಲವಾಗಿಲ್ಲ, ಅದು ಜನರಿಗೆ ಸೇರಿದ್ದು ಎಂದು ಹೇಳಿದರು.

**ಸೆಪ್ಟೆಂಬರ್ ೧೫, ೧೯೬೦ — ವಿಶ್ವೇಶ್ವರಯ್ಯನವರ ಶತಮಾನೋತ್ಸವ ಸಮಾರಂಭಗಳು**

ಬೆಳಿಗ್ಗೆ ಬೇಗನೆ ಎದ್ದು ಡಾ. ವಿಶ್ವೇಶ್ವರಯ್ಯನವರ ಮನೆಗೆ ಹೋಗಿ ಅವರಿಗೆ ಹುಟ್ಟುಹಬ್ಬದ ಶುಭಾಶಯಗಳನ್ನು ಹೇಳಿದೆ. ಅವರು ಬಹಳ ಪ್ರೀತಿಪೂರ್ವಕವಾಗಿದ್ದರು. ಅವರಿಗೆ ಹುಟ್ಟುಹಬ್ಬದ ಶುಭಾಶಯಗಳನ್ನು ಹೇಳುವುದಕ್ಕೆ ನೂರಾರು ಜನರು ಅಲ್ಲಿದ್ದರು. ಅದರಿಂದ

ಆವರಿಗೆ ದಣಿವಾಗಬಹುದೆಂದು ನಾನು ಯೋಚಿಸಿದೆ. ಮಾಮೂಲಿನಂತೆ ಅವರು ಬಹಳ ಜಾಗರೂಕವಾಗಿ ಬಟ್ಟೆ ಧರಿಸಿದ್ದರು. ಜತ್ತಿಯವರು ಆರಂಭಗೊಳಿಸಿದ ಅಂಚೆ ಮತ್ತು ತಂತಿ ಇಲಾಖೆಯ ಸ್ಟಾಂಪುಗಳ ಮಾರಾಟ ಸಮಾರಂಭದಲ್ಲಿ ಹಾಜರಿದ್ದೆ. ೯-೩೦ಕ್ಕೆ ಲಾಲ್‌ಬಾಗಿನಲ್ಲಿನ ಗಾಜಿನಮನೆಗೆ ಹೋದೆ. ಅಲ್ಲಿ ಆಗಲೇ ಜನರು ಸೇರಿದ್ದರು. ಬೆಳಿಗ್ಗೆ ೧೦ ಗಂಟೆಗೆ ಇಡೀ ಗಾಜಿನ ಮನೆಯು ತುಂಬಿತ್ತು. ಜನರ ಗುಂಪನ್ನು ಸರಿಯಾಗಿ ನಿಯಂತ್ರಿಸಲಾಗಲಿಲ್ಲ, ಅನೇಕ ಆಹ್ವಾನಿತರು ಒಳಗೆ ಬರಲಾಗಲಿಲ್ಲ ಮತ್ತು ಇನ್ನು ಕೆಲವರು ತಮ್ಮೆಲ್ಲ ಕುಟುಂಬದವರನ್ನು ಕರೆತಂದಿದ್ದರು. ಪ್ರಧಾನಮಂತ್ರಿ ಮತ್ತು ಮಹಾರಾಜರು ಸಕಾಲಕ್ಕೆ ಬಂದರು. ಆದರೆ ಡಾ. ವಿಶ್ವೇಶ್ವರಯ್ಯನವರು ತಮ್ಮ ಸಾಮಾನ್ಯ ನಿಯಮಕ್ಕೆ ವಿರುದ್ಧವಾಗಿ ಅರ್ಧಗಂಟೆ ತಡವಾಗಿ ಬಂದರು. ಅರ್ಧ ದೂರವನ್ನು ಕಷ್ಟದಿಂದ ನಡೆದರು ಮತ್ತು ಉಳಿದರ್ಧ ದೂರವನ್ನು ಕುರ್ಚಿಯಲ್ಲಿ ಅವರನ್ನು ಒಯ್ದೆವು. ಇಡೀ ಸಮಾರಂಭವು ವೈಭವಯುತವಾಗಿ ಜಯಗಳಿಸಿತ್ತು. ಸ್ವಾಗತಸಮಿತಿಯ ಅಧ್ಯಕ್ಷನಾಗಿ ಸಮಯವನ್ನು ಉಳಿಸುವುದಕ್ಕಾಗಿ ನನ್ನ ಭಾಷಣವನ್ನು ವೇಗವಾಗಿ ಓದಿದೆನು. ಆ ವೃದ್ಧರು ಇಡೀ ಸಮಾರಂಭವನ್ನು ಬಹಳ ಚೆನ್ನಾಗಿ ಮೆಚ್ಚಿಕೊಂಡರು. ಅವರ ಭಾಷಣವನ್ನು ವಿದ್ಯಾ ಓದಿದರು. ಮೂರು ಬಿನ್ನವತ್ತಳೆಗಳನ್ನು ಸಮರ್ಪಿಸಲಾಯಿತು. ಪ್ರಧಾನಮಂತ್ರಿಯವರು ಚೆನ್ನಾಗಿ ಭಾಷಣ ಮಾಡಿದರು. ಡಾ. ವಿಶ್ವೇಶ್ವರಯ್ಯನವರು ವಿಧಾನಸೌಧದ ಭೋಜನಕೂಟದಲ್ಲಿ ಭಾಗವಹಿಸಲಿಲ್ಲ. ಪ್ರಧಾನಮಂತ್ರಿ ಮತ್ತು ಶ್ರೀಮನ್ಮಹಾರಾಜರು ಸಕಾಲಕ್ಕೆ ಬಂದರು. ೫೦೦ ಜನರಿಗೆ ಭೋಜನ ವ್ಯವಸ್ಥೆ ಮಾಡಲಾಗಿತ್ತು. ಇದು ಮತ್ತು ಬೆಳಿಗ್ಗೆಯ ಮುಖ್ಯ ಸಮಾರಂಭವನ್ನು ಸಮಾರಂಭ ಸಮಿತಿಯು ವ್ಯವಸ್ಥೆಗೊಳಿಸಿತ್ತು. ೫ ಗಂಟೆಗೆ ಸಾರ್ವಜನಿಕ ಸಭೆಯಲ್ಲಿ ಭಾಗವಹಿಸಿದೆನು. ಇದನ್ನು ಸಂಪೂರ್ಣವಾಗಿ ಸರಕಾರವೇ ವ್ಯವಸ್ಥೆಗೊಳಿಸಿತ್ತು. ಖಾದಿಬಟ್ಟೆ ಧರಿಸಿದ್ದ ಸ್ವಯಂಸೇವಕರು ಕಾನ್‌ಸ್ಟೇಬಲ್ಲುಗಳಾಗಿದ್ದರು. ಎಂ.ಪಿ.ಸಿ.ಸಿ. ಅಧ್ಯಕ್ಷನಾಗಿದ್ದರೂ ಎರಡು ಗಂಟೆಗಳಿಗೆ ಮುಂಚೆ ಅದು ನನಗೆ ಗೊತ್ತಿರಲಿಲ್ಲ. ನಾವು ವ್ಯವಸ್ಥೆಗೊಳಿಸಿದ ಸಾಂಸ್ಕೃತಿಕ ಕಾರ್ಯಕ್ರಮವು ಚೆನ್ನಾಗಿತ್ತು. ವೈಜಯಂತಿಮಾಲಾ ನರ್ತಿಸಿದರು. ೮-೩೦ಕ್ಕೆ ಮುಕ್ತಾಯವಾಯಿತು. ಇಂದು ತುಂಬಾ ದಣಿವಾಗಿದ್ದಿತು.

**ಸೆಪ್ಟೆಂಬರ್ ೧೬, ೧೯೬೦**

ಮುಂಚೆಯೇ ಭೇಟಿ ವ್ಯವಸ್ಥೆ ಮಾಡಿದ್ದಂತೆ ಬೆಳಿಗ್ಗೆ ೮ ಗಂಟೆಗೆ ಅರಮನೆಯ ಆವರಣದಲ್ಲಿರುವ 'ರಾಯಲ್ ಕಾಟೇಜ್' ನಲ್ಲಿ ನೆಹ್ರೂರವರನ್ನು ಭೇಟಿಮಾಡಿದೆ. ಈಗಿನ ಮೈಸೂರು ಮಂತ್ರಿಮಂಡಲದ ಬಗ್ಗೆ ನನ್ನ ಭಾವನೆಗಳನ್ನು ಅವರಿಗೆ ಹೇಳಿದೆ. ನನ್ನ ಸಲಹೆಯೇನೆಂದರೆ ನಾಯಕತ್ವ ಬದಲಾವಣೆಯಾಗಬೇಕು, ಅದಕ್ಕಾಗಿ ಲಾಲ್‌ಬಹದ್ದೂರ್‌ಶಾಸ್ತ್ರಿಯಂತಹ ವ್ಯಕ್ತಿಯನ್ನು ಇಲ್ಲಿಗೆ ಕಳುಹಿಸಿ, ಸರಿಯಾದ ನಾಯಕನನ್ನು

ಆರಿಸಿ ಎರಡೂ ಗುಂಪುಗಳ ನಡುವೆ ಒಪ್ಪಂದದಿಂದ ಮಂತ್ರಿಮಂಡಲವನ್ನು ರಚಿಸಬೇಕೆಂದು ಹೇಳಿದೆ. ಹೀಗೆ ದಾರಿತಪ್ಪಲು ಅವಕಾಶ ಕೊಟ್ಟರೆ ಕಹಿ ವಾತಾವರಣ ಹೆಚ್ಚಾಗುತ್ತದೆ, ಮುಂದಿನ ಚುನಾವಣೆಗಳಲ್ಲಿ ಕಾಂಗ್ರೆಸ್ ಜಯ ಗಳಿಸುವುದಿಲ್ಲ. ಬದಲಾವಣೆಗೆ ಅವರ ಒಪ್ಪಿಗೆಯಿಲ್ಲವೆಂದು ನಾನು ಭಾವಿಸಿದೆ. ಈ ಒಡಕನ್ನು ಗಮನಿಸದಿರುವುದು ತಪ್ಪಾಗುತ್ತದೆ ಎಂದು ಅವರಿಗೆ ಮತ್ತೆ ಹೇಳಿದೆ. ಅವರು ಬಹಳ ಸೌಮ್ಯವಾಗಿದ್ದರು ಮತ್ತು ರೇಗಾಟವಿರಲಿಲ್ಲ. ಕೆಲವು ಮಂತ್ರಿಗಳು ಭ್ರಷ್ಟರು ಎಂದು ಕೂಡ ಹೇಳಿದೆನು.

**ಜನವರಿ ೨೩ ೧೯೬೧** **ಎ. ಹೆಚ್. ಬೆಂಗಳೂರು**

ಅವಘಡವಾಗಿ ಒಂದು ತಿಂಗಳು ಕಳೆಯಿತು. ಬಹಳ ಬೇಗನೆ ಎಲ್ಲವೂ ಸುಗಮವಾಯಿತು ಎಂಬುದು ನನ್ನ ಭಾವನೆ. ಮೊದಲಿನ ೧೨-೧೩ ದಿನಗಳು ತುಂಬಾ ನೋವು ಮತ್ತು ಜ್ವರದಿಂದ ಕಳೆಯಿತು. ಇತರ ದಿನಗಳು ವಿರಾಮವಾಗಿ ಚಿಂತಿಸುವುದರಲ್ಲಿ ಕಳೆಯಿತು. ಕೆಲವು ಸಲ ಮೈಸೂರಿನ ರಾಜಕೀಯ ಸಮಸ್ಯೆ ಮತ್ತು ಭಾರತದ ರಾಜಕೀಯ ಸಮಸ್ಯೆಗಳು, ಅವುಗಳೊಟ್ಟಿಗೆ ಕಾಂಗ್ರೆಸ್ ಸಂಸ್ಥೆಯ ಸಮಸ್ಯೆಗಳು ನನ್ನ ಚಿಂತನೆಯ ವಿಷಯಗಳಾಗಿದ್ದವು. ನನಗೆ ಈ ಭಾವನೆ ಬೆಳೆಯುತ್ತಿದೆ. ಕಾಂಗ್ರೆಸ್ ತನ್ನ ಮೊದಲಿನ ನಿಲುವಿನಿಂದ ದೂರ ಸರಿದು, ಒಡೆದುಹೋಗಿ ಒಂದು ಬಲಪಕ್ಷ ಮತ್ತು ಇನ್ನೊಂದು ಎಡ ಗುಂಪುಗಳಾಗುತ್ತವೆ. ಆಗ ಶುದ್ಧ ಪ್ರಜಾಪ್ರಭುತ್ವ ಹೇಗೆ ಸಾಧ್ಯ? ಈಗಲೇ ಪಕ್ಷದಲ್ಲಿ ಬೇಕಾದಷ್ಟು ಲಂಚಗುಳಿತನ, ಸ್ವಜನ ಪಕ್ಷಪಾತ, ಜಾತೀಯತೆಯಿದೆ. ಅತಿಹೆಚ್ಚಾಗಿ ಮತ್ತು ಗಟ್ಟಿಯಾಗಿ ಅವುಗಳ ವಿರುದ್ಧ ಮಾತನಾಡುವವರೇ ಈ ರೋಗಗಳಿಗೆ ತುತ್ತಾಗಿದ್ದಾರೆ ಎಂದು ನನಗೆ ಗೊತ್ತು. ಅತ್ಯಂತ ಶ್ರೇಷ್ಠ ವ್ಯಕ್ತಿಗಳಿಂದ ನಾನು ಇಂತಹ ವಿಷಯಗಳನ್ನು ನಿರೀಕ್ಷಿಸಿರಲಿಲ್ಲ. ಅಧಿಕಾರದಲ್ಲಿರುವವರು ಏನೇ ಆಗಲಿ ಅಧಿಕಾರದಲ್ಲಿ ಮುಂದುವರಿಯಲು ಇಚ್ಛಿಸುತ್ತಾರೆ. ತಮ್ಮ ಸಂಸ್ಥೆಗೆ ಏನಾಗುತ್ತದೆಂಬುದನ್ನು ಅವರು ಲಕ್ಷಿಸುವುದಿಲ್ಲ. ಅವರು ಮತ್ತು ಅವರ ಜನರು ಮಾತ್ರ ಚುನಾಯಿಸಿ ಬರಬೇಕೆಂಬುದು ಅವರ ಇಚ್ಛೆ. ಈ ಅಸಹ್ಯವಾದ ಮತ್ತು ಖಂಡನಾರ್ಹವಾದ ಮನೋವ್ಯವಸ್ಥೆಯೇ ಅನೇಕ ರಾಜ್ಯಗಳಲ್ಲಿ ಪಕ್ಷದ ಎರಡೂ ಬಣಗಳ ನಡುವೆ ಕಂಡುಬರುವ ಬಿರುಕಿಗೆ ಕಾರಣವಾಗಿದೆ. ಇದು ಸದಾಕಾಲ ಮುಂದುವರಿಯ ಲಾಗುವುದಿಲ್ಲ.

**ಫೆಬ್ರವರಿ ೧, ೧೯೬೧** **ಎ.ಹೆಚ್. ಬೆಂಗಳೂರು**

ಜನರ ನೂಕುನುಗ್ಗಲು ಇವತ್ತೂ ಹೆಚ್ಚಾಗಿದೆ. ಈ ದಿನ ಮಧ್ಯಾಹ್ನ ರಾಜಶೇಖರ ಮೂರ್ತಿಯವರು ಬಂದು ರಾಜ್ಯಪಾಲರು ಜತ್ತಿಯವರ ಜೊತೆಯಲ್ಲಿ ಮಾತನಾಡಿ ಅವರು ಅನುಸರಿಸಿದ ನೀತಿ ಮತ್ತು ಅವರ ಅಸಹಾಯಕ ವರ್ತನೆಗೆ ಅವರನ್ನು ತರಾಟೆಗೆ ತೆಗೆದುಕೊಂಡರು. ಜತ್ತಿಯವರು ನನ್ನನ್ನು ಕಾಣಬೇಕು ಮತ್ತು ಒಂದು ಒಪ್ಪಂದಕ್ಕೆ

ಬರಬೇಕೆಂದು ಹೇಳಿದರು. ರಾಜ್ಯಪಾಲರು ಚನ್ನಯ್ಯ ಮತ್ತು ಅವರ ನಡತೆಯ ಬಗ್ಗೆ ಜಿಗುಪ್ಸೆ ಪಟ್ಟುಕೊಂಡರು. ಅರಮನೆಯಲ್ಲಿ ಎ.ಡಿ.ಸಿಯಾಗಿ ಕೆಲಸ ಮಾಡುತ್ತಿದ್ದ ಚನ್ನಯ್ಯನವರ ಅಳಿಯ ಕೃಷ್ಣರನ್ನು ಅಲ್ಲಿಂದ ವರ್ಗಾಯಿಸಬೇಕೆಂದು ಇಷ್ಟವಿಲ್ಲದ ಜತ್ತಿಯವರನ್ನು ಒತ್ತಾಯಿಸಿದರು. ಏಕೆಂದರೆ ಅವರು ರಾಜಭವನದಿಂದ ಮಾವನಿಗೆ ಪ್ರತಿಯೊಂದು ಮಾಹಿತಿಯನ್ನೂ ಒಯ್ಯುತ್ತಿದ್ದರು. ಈಗ ಅವರನ್ನು ವರ್ಗ ಮಾಡಲಾಗಿದೆ ಎಂದು ಅನಂತರ ನನಗೆ ತಿಳಿಸಲಾಯಿತು.

ರಾತ್ರಿ ೯ ಗಂಟೆಗೆ ಬರಬೇಕಿದ್ದ ಜತ್ತಿಯವರು ೧೦ ಗಂಟೆ ಸುಮಾರಿಗೆ ಬಂದು ನನ್ನ ಜೊತೆಯಲ್ಲಿ ಅರ್ಧಗಂಟೆ ಕಳೆದರು. ನಾನು ಅವರನ್ನು ಒಪ್ಪಿಕೊಳ್ಳಬೇಕಾದರೆ ಅವರು ಚನ್ನಯ್ಯನವರ ಹಿಡಿತದಿಂದ ಹೊರಬರಬೇಕು ಎಂದು ಅವರಿಗೆ ಹೇಳಿದೆ. ಸಾಹುಕಾರ ಚನ್ನಯ್ಯ ಅವರ ಸಹವಾಸ ಅವರಿಗೂ ಮತ್ತು ರಾಜ್ಯಪಾಲರಿಗೂ ಸಾಕಾಗಿದೆ ಎಂದು ಅವರು ಹೇಳಿ ಕೃಷ್ಣರನ್ನು ಅರಮನೆಯಿಂದ ವರ್ಗಮಾಡಿದ್ದೇನೆಂದು ಹೇಳಿದರು. ರಾಜಕೀಯ ಹೋರಾಟದ ಬಗ್ಗೆ ಕಾಂಗ್ರೆಸ್ ಅಧ್ಯಕ್ಷ ಸಂಜೀವರೆಡ್ಡಿ ತಮ್ಮನ್ನು ಸಂಪರ್ಕಿಸಲು ನಿರೀಕ್ಷಿಸುತ್ತಾರೆ. ಅವರು (ಜತ್ತಿ) ತಮ್ಮ ಸಚಿವ ಸಂಪುಟ ವಿಸ್ತರಣೆ ಮಾಡುವುದಕ್ಕೆ ಇಚ್ಛಿಸಿರುವುದಾಗಿ ಹೇಳಿದರು. ಇತರರ ಬಗ್ಗೆ ನಾನು ವಾಗ್ದಾನ ಮಾಡಲಾಗುವುದಿಲ್ಲ. ಸ್ನೇಹಿತರ ಜೊತೆಯಲ್ಲಿ ನಾನು ಮಾತನಾಡಿ ಅವರ ಅಭಿಪ್ರಾಯಗಳನ್ನು ಪಡೆದು ನಂತರವೇ ನಾವು ಭೇಟಿ ಮಾಡಬೇಕು ಎಂದು ಅವರಿಗೆ ನಾನು ಹೇಳಿದೆನು. ಹಾಗೆ ಮಾಡಲು ಒಪ್ಪಿಕೊಂಡರು. ನಾನು ಕರೆ ಕಳುಹಿಸಿದಾಗ ಬರುತ್ತೇನೆಂದು ವಾಗ್ದಾನ ಮಾಡಿದರು. ಹೋರಾಟವನ್ನು ಮುಂದುವರಿಸಲು ಅವರಿಗೆ ಹೆದರಿಕೆ ಎಂದು ಕಾಣುತ್ತದೆ. ನನ್ನ ಇಷ್ಟದ ಪ್ರಕಾರ ಚುನಾವಣಾ ಸಮಿತಿಗೆ ಚುನಾವಣೆಯನ್ನು ನಡೆಸಬಹುದೆಂದು ಕೂಡ ಹೇಳಿದರು.

ಆದರೆ ಅವರು ಎಂತಹ ಜಾರುವ ಮನುಷ್ಯ ಎಂದರೆ ಸಂಪೂರ್ಣವಾಗಿ ಅವರ ಮೇಲೆ ಅವಲಂಬಿಸಲು ನನಗೆ ಹೆದರಿಕೆ. ರಾಜ್ಯಪಾಲರ ಒತ್ತಾಯವು ಅವರನ್ನು ನನ್ನಲ್ಲಿಗೆ ಎಳೆದು ತಂದಿರಬೇಕೆನಿಸುತ್ತದೆ.

**ಏಪ್ರಿಲ್ ೫, ೧೯೬೧ ಕೆ.ಕೆ. ಬೆಂಗಳೂರು**

ಮಾಮೂಲಿನಂತೆ ಬೆಳಿಗ್ಗೆ ಕೆಲಸ ಮಾಡಿದೆನು. ಈಜು ಕೊಳಕ್ಕೆ ಹೋಗಿ ಬಹಳ ಕಾಲ ಕಾಲುಗಳನ್ನು ಅದರಲ್ಲಿ ಆಡಿಸುತ್ತಿದ್ದೆ. ನೋವಾದರೂ ಕೆಲವು ಮೆಟ್ಟಲುಗಳನ್ನು ಹತ್ತಲು ಅದು ನನಗೆ ಸಹಾಯ ಮಾಡಿದೆ. ಸಾಯಂಕಾಲ ಡಾ. ಮೂರ್ತಿಯವರು ಬಂದು ನನ್ನ ಕಾಲನ್ನು ಪರೀಕ್ಷಿಸುತ್ತಾ ಅರ್ಧಗಂಟೆ ಕಳೆದರು. ನನಗೆ ಸಹಿಸಲಾಗುವಷ್ಟು ಮೆಟ್ಟಲುಗಳನ್ನು ಹತ್ತಲು ಮತ್ತು ಇಳಿಯಲು ಕಲಿಯಬೇಕೆಂದು ಸಲಹೆ ಮಾಡಿದರು. ನೋವು ತುಂಬಾ ಇದೆ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಅದನ್ನು ಅನುಭವಿಸಲೇಬೇಕು.

ಶ್ರೀ ರಾಮನಾಥ ಗೊಯೆಂಕಾರವರು ಒಬ್ಬ ಸ್ನೇಹಿತರ ಜೊತೆಯಲ್ಲಿ ಮದರಾಸಿನಿಂದ ನನ್ನನ್ನು ನೋಡಲು ಬಂದರು. ಒಂದೂವರೆ ಗಂಟೆಗಳಷ್ಟು ದೀರ್ಘಕಾಲ ಕಳೆದರು. ಆಗ ತಮ್ಮ, ನನ್ನ ರಾಜಕೀಯ ಮುಂತಾದವುಗಳೂ ಸೇರಿದಂತೆ ಎಲ್ಲಾ ಬಗೆಯ ವಿಷಯಗಳ ಬಗ್ಗೆ ಚರ್ಚಿಸುತ್ತಾ ಮತ್ತು ಉಲ್ಲೇಖಿಸುತ್ತಾ ಮಾಮೂಲಿನಂತೆ ಮಾತನಾಡುತ್ತಿದ್ದರು. ಅರಮನೆಯಿಂದ ಕೆಲವು ಜಮೀನುಗಳನ್ನು ಕೊಂಡುಕೊಂಡ ಜನರ ಜೊತೆಯಲ್ಲಿ ಮೈಸೂರು ಸರಕಾರವು ವ್ಯವಹರಿಸಿದ ರೀತಿ ಮತ್ತು ಇದರ ಬಗ್ಗೆ ಸರಕಾರದ ವಿರುದ್ಧ ಉಚ್ಚನ್ಯಾಯಾಲಯವು ತೀರ್ಪು ನೀಡಿರುವುದರ ಬಗ್ಗೆ ಅವರು ತುಂಬಾ ವಿಷಾದಿಸಿದರು. ಆದರೆ ಅದರ ಬಗ್ಗೆ ಚಿಂತೆಯಿಲ್ಲ ಅಥವಾ ಅದರ ಬಗ್ಗೆ ವಾದ ಮಾಡಲೂ ಹೋಗುವುದಿಲ್ಲ. ಅವರು ನನ್ನ ಅಮೂಲ್ಯ ಸ್ನೇಹಿತರಾಗಿದ್ದು ವ್ಯಾಪಾರದಲ್ಲಿ ಸಫಲರಾಗಿದ್ದಾರೆ.

**ಜುಲೈ ೨೮, ೧೯೬೧**

ಪ್ರಧಾನಮಂತ್ರಿಗಳ ಭೇಟಿಯ ದೃಷ್ಟಿಯಿಂದ ವಿಧಾನಸಭೆ ಈ ಬೆಳಿಗ್ಗೆ ಸೇರಿತು. ಬೆಳಿಗ್ಗೆ ೧೦-೩೦ ಗಂಟೆಗೆ ವಿಮಾನನಿಲ್ದಾಣಕ್ಕೆ ಹೋದೆನು. ಪ್ರಧಾನಿಗಳ ವಿಮಾನವು ೧೧ ಗಂಟೆಗೆ ಬಂದಿತು. ನಾವು ಅವರನ್ನು ಸ್ವಾಗತಿಸಿದೆವು. ರಾಜ್ಯಪಾಲರು, ಮುಖ್ಯಮಂತ್ರಿ, ನಾನು ಮತ್ತು ಮೇಯರ್ ಅವರು ಪ್ರಧಾನಮಂತ್ರಿ ಅವರಿಗೆ ಹಾರಹಾಕಿದೆವು. ಮಾಮೂಲು ಕವಾಯಿತು ಪರೀಕ್ಷೆ ಮತ್ತು ಪರಿಚಯವಿದ್ದಿತು. ಹೆಚ್.ಎ.ಎಲ್. ಕಾರ್ಖಾನೆಯಲ್ಲೇ ಸಂಪೂರ್ಣವಾಗಿ ನಿರ್ಮಿಸಲಾದ ಸೂಪರ್ ಸಾನಿಕ್ ಯುದ್ಧ ವಿಮಾನದ ಪ್ರದರ್ಶನ ಹಾರಾಟವಿದ್ದಿತು. ಅದು ಬಹಳ ಆಸಕ್ತಿಯುಳ್ಳದ್ದಾಗಿದ್ದಿತು. ಅದರ ವೇಗವು ಪ್ರಭಾವ ಬೀರುವಂತಾಗಿದ್ದಿತು. ಸಂಜೆ ೪-೩೦ ಗಂಟೆಗೆ ಹೆಚ್.ಎಂ.ಟಿ. ಕಾರ್ಖಾನೆಗೆ ಹೋದೆನು. ಅಲ್ಲಿ ಹೆಚ್.ಎಂ.ಟಿ.ಯ ಸಂಪಾದನೆಯಿಂದಲೇ ನಿರ್ಮಿಸಿ ಸಜ್ಜುಗೊಳಿಸಲಾದ ಹೆಚ್.ಎಂ.ಟಿ.ಕಾರ್ಖಾನೆಯ ೨ನೇ ಬ್ಲಾಕ್ ಅನ್ನು ಪ್ರಧಾನಿಗಳು ಉದ್ಘಾಟಿಸಿದರು. ಇದು ಒಂದು ಸಾಧನೆ ಎಂಬುದರಲ್ಲಿ ಸಂದೇಹವಿಲ್ಲ. ಕೆ.ಸಿ.ರೆಡ್ಡಿ ಅಧ್ಯಕ್ಷತೆ ವಹಿಸಿದ್ದರು. ಅಧ್ಯಕ್ಷರಾದ ನಸ್ರುಲ್ಲಾ ಸ್ವಾಗತಿಸಿದರು ಮತ್ತು ಪಾಟೀಲರು ವಂದಿಸಿದರು. ಪ್ರಧಾನಿಗಳು ಬಹಳ ಸಂಕ್ಷಿಪ್ತವಾಗಿ ಮಾತನಾಡಿದರು. ಅವರು ಆರೋಗ್ಯದಿಂದಿರಲಿಲ್ಲವೆಂದು ಕಾಣುತ್ತದೆ. ಏಕೆಂದರೆ ಅವರಲ್ಲಿ ಯಾವಾಗಿನ ಶಾರೀರಿಕ ಉತ್ಸಾಹವಿರಲಿಲ್ಲ. ಸಭೆಗೆ ಬಹಳ ಜನ ಸೇರಿದ್ದರು. ಬೃಹತ್ತಾದ ದೊಡ್ಡ ಕಾರ್ಯಾಗಾರವು ತುಂಬಿಹೋಗಿದ್ದಿತು.

ಸಂಜೆ ೭ಗಂಟೆಗೆ ಪ್ರಧಾನಿಗಳು ರೆಸಿಡೆನ್ಸಿ ಸಭಾಂಗಣದಲ್ಲಿ ಕಾಂಗ್ರೆಸ್ ಪಕ್ಷದ ಸದಸ್ಯರನ್ನು ಉದ್ದೇಶಿಸಿ ಮಾತನಾಡಿದರು. ಅವರು ತಡವಾಗಿ ಬಂದರು. ಇಲ್ಲಿಯೂ ಕೂಡ ಅವರು ಹೆಚ್ಚು ಹೊತ್ತು ಮಾತನಾಡಲಿಲ್ಲ. ಅವರು ತಾವು ತಮ್ಮ ಶಕ್ತಿಯುನ್ನು ಸಂಗ್ರಹಿಸಿಕೊಳ್ಳಬೇಕೆಂದಿರುವನೆಂದು ಅವರೇ ಹೇಳಿದರು. ಅವರಿಗೆ ನೆಗಡಿಯಾಗಿತ್ತೆಂದು

ಕಾಣುತ್ತದೆ. ಅವರು ಶಿಸ್ತಿನ ಅಗತ್ಯತೆಯ ಬಗ್ಗೆ, ಮುಂದಿನ ಚುನಾವಣೆಗೆ ನಿಲ್ಲಿಸಬೇಕಾದ ಅಭ್ಯರ್ಥಿಗಳು ಮುಂತಾದವುಗಳ ಬಗ್ಗೆ ಮಾತನಾಡಿದರು. ಮೈಸೂರಿನಲ್ಲಿ ಬಲವಾದ ಪ್ರತಿಪಕ್ಷವಿಲ್ಲದಿರುವ ಬಗ್ಗೆ ಅವರು ಮಾತನಾಡಿದರು.

ರಾತ್ರಿ ಊಟವಾದ ಮೇಲೆ ಅವರಲ್ಲಿಗೆ ೯-೧೫ಕ್ಕೆ ಹೋಗಿ ಅವರೊಡನೆ ರಾಯಲ್ ಕಾಟೇಜಿನಲ್ಲಿ ಅರ್ಧಗಂಟೆಕಾಲ ಇದ್ದೆನು. ಉಚ್ಚ ನ್ಯಾಯಾಲಯಕ್ಕೆ ಹೊರಗಿನವರೊಬ್ಬರು ಮುಖ್ಯನ್ಯಾಯಾಧೀಶರಿರುವ ಅಗತ್ಯತೆಯನ್ನು ಅವರಿಗೆ ಮನವರಿಕೆ ಮಾಡಿಕೊಟ್ಟು ಅದನ್ನು ಮಾಡಬೇಕೆಂದು ಒತ್ತಾಯಿಸಿದೆನು. ತಾಲ್ಲೂಕು ಬೋರ್ಡುಗಳಿಗೆ ಹೆಚ್ಚಿನ ಹಣವನ್ನು ಒದಗಿಸಬೇಕೆಂದೂ ಮತ್ತು ತಾಲ್ಲೂಕು ಬೋರ್ಡು ಅಧ್ಯಕ್ಷರುಗಳಿಗೆ ಸ್ವಲ್ಪ ಸಂಬಳವನ್ನೂ ಕೊಡಬೇಕೆಂದು ಹೇಳಿದೆ. ಸರಪಂಚರಿಗೆ ಸಂಬಳ ಕೊಡುವುದರ ವಿರುದ್ಧವಿದ್ದೇನೆಯೇ ಹೊರತು ತಾಲ್ಲೂಕು ಬೋರ್ಡು ಅಧ್ಯಕ್ಷರುಗಳ ವಿರುದ್ಧವಲ್ಲ ಎಂದು ಅವರು ಹೇಳಿದರು. ಮಹಾರಾಜರ ಬಗ್ಗೆ ಹೇಳುತ್ತಾ ಅವರು ದೊಡ್ಡ ದೇಶಗಳ ರಾಯಭಾರಿಯಾಗಿರಲು ಸೂಕ್ತವಲ್ಲ ಮತ್ತು ಸಣ್ಣವುಗಳ ಬಗ್ಗೆ ಅವರಿಗೆ ಆಸಕ್ತಿಯಿಲ್ಲವೆಂದು ಹೇಳಿದರು. ರಾಜೀನಾಮೆ ಕೊಡುವುದಕ್ಕೆ ಅವರೇ ಆಸಕ್ತಿಯುಳ್ಳವರಾದ್ದರಿಂದ ಅವರನ್ನು ಮೈಸೂರಿನ ರಾಜ್ಯಪಾಲರಾಗಿ ಮುಂದುವರಿಯುವುದನ್ನು ಪರಿಗಣಿಸುತ್ತೇನೆಂದು ಹೇಳಿದರು. ಅವರ ವಿಷಯದಲ್ಲಿ ನನಗೆ ಆಸಕ್ತಿಯಿಲ್ಲವೆಂದು ನಾನು ಹೇಳಿದೆನು, ಆದರೆ ಅವರು ಮೈಸೂರಿನ ರಾಜ್ಯಪಾಲರಾಗಿರುವುದಕ್ಕೆ ಉತ್ಸುಕರಾಗಿರುವುದರಿಂದ ಮಾತ್ರ ನಾನು ಹೇಳುತ್ತೇನೆ. ಇನ್ನೊಂದು ರಾಜ್ಯದಲ್ಲಿ ಅವರು ರಾಜ್ಯಪಾಲರಾದರೆ ಅವರಿಗೆ ಒಳ್ಳೆಯ ಅವಕಾಶವಿದೆಯೆಂದು ನಾನು ಭಾವಿಸಿದ್ದೇನೆ.

**ನವೆಂಬರ್ ೨೪, ೧೯೬೧**

ಇಡೀ ಬೆಳಿಗ್ಗೆಯನ್ನು ಅಂದರೆ ಬೆಳಿಗ್ಗೆ ೯ ಗಂಟೆಯಿಂದ ಮಧ್ಯಾಹ್ನ ೨ ಗಂಟೆಯವರೆಗೆ ಗುಜರಾತಿನ ಪಟ್ಟಿಯನ್ನು ಅಧ್ಯಯನ ಮಾಡುವುದರಲ್ಲಿ ಕಳೆದೆನು. ಈ ರಾಜ್ಯವು ಐಕಮತ್ಯ ಮತ್ತು ಏಕೀಭಾವಕ್ಕೆ ಹೆಸರಾಗಿದ್ದಿತು. ಆದರೆ ಮೊರಾರ್ಜಿಯವರ ಹಠಮಾರಿತನದ ವರ್ತನೆಯಿಂದಾಗಿ ಇಡೀ ಕಾಂಗ್ರೆಸಿನ ಕಟ್ಟಡವು ಬಿರುಕು ಬಿಡುತ್ತಿದೆ. ಇದು ದುರಾದೃಷ್ಟ. ಅನೇಕ ರಾಜ್ಯಗಳಿಂದ ವಿಶೇಷವಾಗಿ ಟಿಕೇಟುಗಳನ್ನು ಅಪೇಕ್ಷಿಸುವ ಸಂದರ್ಶನಕಾರರಿಗೆ ಏನೂ ಕೊರತೆಯಿರಲಿಲ್ಲ.

ಮಧ್ಯಾಹ್ನದ ಊಟವು ೨ ಗಂಟೆವರೆಗೆ ತಡವಾಯಿತು. ನನಗೆ ಹಸಿವಾಗಿ ಕೋಪವೂ ಬರುತ್ತಿತ್ತು. ಸಭೆಯು ಸ್ವಲ್ಪ ತಡವಾಗಿ ಪ್ರಾರಂಭವಾಯಿತು.

ಗುಜರಾತಿನ ಬಗ್ಗೆ ಪೂರ್ವಭಾವಿ ಚರ್ಚೆಯ ಸಮಯದಲ್ಲಿ ಗುಜರಾತಿನಲ್ಲಿ ಮುಂದಾಳುಗಳಲ್ಲಿ ನಿರೀಕ್ಷಿಸಿದುದಕ್ಕಿಂತ ಹೆಚ್ಚಾಗಿ ಒಡಕುಗಳು ಹೆಚ್ಚು ಪ್ರಮುಖವಾಗಿದ್ದವು.

ನನ್ನ ಭಾವನೆಯೆಂದರೆ ಪಿಸಿಸಿ ಅಧ್ಯಕ್ಷ ಮೊರಾರ್ಜಿಯವರು ಒಂದು ಕಡೆ. ಡಾ. ಜೀವರಾಜ್ ಮೆಹತಾರವರು ತಮ್ಮದೇ ಆದ ರೀತಿಯಲ್ಲಿ ಸತ್ಯಸಂಧತೆ ಮತ್ತು ಮುಗ್ಧತೆಯನ್ನು ಹೊಂದಿರುವರೆಂದು ತಿಳಿದಿದ್ದ ಮತ್ತೊಂದು ಗುಂಪಿನ ಜೊತೆಯಲ್ಲಿ ಸಂಪೂರ್ಣವಾಗಿ ಸೇರಿದ್ದರು. ಮೊರಾರ್ಜಿಯವರ ನಡತೆಯು ಒರಟು, ಅಹಂಕಾರ, ಅನ್ಯಾಯವಾದ ಮತ್ತು ತೀರ ಪಕ್ಷಪಾತವುಳ್ಳದ್ದಾಗಿದ್ದಿತು. ಠಾಕೂರರು ಕೂಡ ಹಾಗೆಯೇ. ಈ ಮನುಷ್ಯ ಸ್ವಭಾವವು ಅದರ ಅನಾಗರಿಕ ಸ್ಥಿತಿಯಲ್ಲಿದೆಯೆಂದು ಎರಡೂ ಗುಂಪುಗಳ ನಡುವಿನ ಜಗಳದಿಂದ ಪ್ರಕಟವಾಯಿತು. ಮೊರಾರ್ಜಿಯವರು ಹೆಚ್ಚು ಹಠಮಾರಿಯಾಗಿದ್ದರು. ಅವರನ್ನು ಕೆಳಕ್ಕಿಳಿಸಬೇಕೆಂಬುದು ಹೆಚ್ಚಿನವರ ಭಾವನೆಯಾಗಿದ್ದರೂ ಅದು ನಡೆಯಲಿಲ್ಲ. ಪ್ರಧಾನಿಗಳೂ ಕೂಡ ಈ ವಿಚಾರದಲ್ಲಿ ಅಸಹಾಯಕರೆಂದು ಕಾಣುತ್ತಿತ್ತು. ಉನ್ನತ ಸ್ಥಳಗಳಲ್ಲಿ ಕೂಡ ಬಾಯಿ ಬಡಿಯುವುದು, ತಮ್ಮದೇ ಆದ ರೀತಿಯಲ್ಲಿ ಮಾತನಾಡುವುದು ವ್ಯಸನಕರ. ಬಡಪಾಯಿ ಡಾ. ಮೆಹ್ತಾರವರು ತಮ್ಮದೇ ಆದ ಮಾರ್ಗ ಹೊಂದಿದ್ದರೂ ಕಾರ್ಯತಃ ಅವರು ಅಸಹಾಯಕರಾಗಿದ್ದರು. ಅಂತಿಮವಾಗಿ ೨೬ ಹೆಸರುಗಳನ್ನು ರೆಡ್ಡಿ, ಇಂದಿರಾ ಮತ್ತು ಮೊರಾರ್ಜಿಯೊಳಗೊಂಡ ಒಂದು ಉಪಸಮಿತಿಗೆ ಒಪ್ಪಿಸಲು ಒಪ್ಪಿಕೊಳ್ಳಲಾಯಿತು. ಇದನ್ನು ಶಾಸ್ತ್ರಿಯವರು ಸಲಹೆ ಮಾಡಿದರು. ಡಾ. ಮೆಹ್ತಾರವರು ಅದರಲ್ಲಿಲ್ಲದುದು ಆಶ್ಚರ್ಯ. ನಾಳೆ ಏನಾಗುತ್ತದೆಂದು ನೋಡಬೇಕು.

**ಆಗಸ್ಟ್ ೨೩, ೧೯೬೮** **ದೆಹಲಿ**

ಅನೇಕ ವರ್ಷಗಳ ನಂತರ ನಾನು ಈ ಡೈರಿಯನ್ನು ಬರೆಯಲು ಪ್ರಾರಂಭಿಸಿದ್ದೇನೆ. ಅದನ್ನು ಕ್ರಮವಾಗಿ ಮಾಡುತ್ತೇನೆಂದು ನನ್ನ ನಂಬಿಕೆ. ಈ ಬೆಳಿಗ್ಗೆ ಅತುಲ್ಯಘೋಷ್ ಮತ್ತು ಸಿ.ಬಿ.ಗುಪ್ತ ಬೆಳಗಿನ ಉಪಾಹಾರಕ್ಕೆ ಬಂದರು. ಜೆಕೊಸ್ಲೊವೇಕಿಯಾವನ್ನು ರಷ್ಯಾ ಆಕ್ರಮಿಸಿದುದರ ಬಗ್ಗೆ ಪ್ರಧಾನಿಗಳ ವರ್ತನೆಯ ಬಗ್ಗೆ ನಾವು ಚರ್ಚಿಸಿದೆವು. ಸರಕಾರದ ಹೇಳಿಕೆಗೆ ವಿರುದ್ಧವಾಗಿದ್ದ ನೆನ್ನೆ ದಿನದ ಸುಚೇತಾ ಕೃಪಲಾನಿಯವರ ತಿದ್ದುಪಡಿಯ ಪರವಾಗಿ ಮತಹಾಕಿದ ತೋರಿಕೆಯ ಕಾರಣಕ್ಕಾಗಿ ಶ್ರೀ ಅಶೋಕ ಮೆಹ್ತಾರವರು ತಮ್ಮ ಮಂತ್ರಿ ಪದವಿಗೆ ರಾಜೀನಾಮೆ ನೀಡಿದರು. ಗುರುಪಾದಸ್ವಾಮಿಯವರ ಮನೆಯಲ್ಲಿ ಮಧ್ಯಾಹ್ನದ ಊಟದ ಸಮಯದಲ್ಲಿ ಅವರು ನನ್ನನ್ನು ಮತ್ತು ಸಿ.ಬಿ.ಗುಪ್ತಾರವರನ್ನು ಭೇಟಿ ಮಾಡಿದರು. ಜೆಕೊಸ್ಲೊವೇಕಿಯಾ ವಿಷಯದ ಬಗ್ಗೆ ಅವರು ತುಂಬಾ ವ್ಯಾಕುಲರಾಗಿದ್ದರು. ಆಗತಾನೆ ಭಾರತವು ವಿಶ್ವಸಂಸ್ಥೆಯ ಭದ್ರತಾ ಸಮಿತಿಯಲ್ಲಿ ಮತದಾನದಿಂದ ಹೊರಗುಳಿಯಿತು ಎಂಬ ಸಮಾಚಾರ ಬಂದಿತು. ಇದು ನಮಗೆಲ್ಲಾ ಆಶ್ಚರ್ಯವುಂಟುಮಾಡಿತು. ಇದು ರಾಷ್ಟ್ರವನ್ನು ಎದುರಿಸುವ ಹೆದರಿಕೆಯಿಂದಾಗಿರ ಬಹುದು. ಅಲ್ಲದೆ ಈಚಿನ ದಿನಗಳಲ್ಲಿ ಪ್ರಧಾನಿಯವರು ರಷ್ಯಾದ ಕಡೆಗೆ ನಿರ್ದಿಷ್ಟ

ಒಲುವು ತೋರಿಸುತ್ತಿರುವುದೂ ಇದಕ್ಕೆ ಕಾರಣ ಇರಬಹುದು. ನನ್ನ ಪ್ರಕಾರ ಇವೆರಡೂ ಸರಿಯಲ್ಲ.

ನಾನು, ಅತುಲ್ಯ, ಗುಪ್ತ ಮತ್ತು ನನ್ನ ಇಬ್ಬರು ಕಾರ್ಯದರ್ಶಿಗಳು ಡಾ. ಶರ್ಮ ಮತ್ತು ಸಾದಿಕ್ ಆಲಿ ಸಭೆ ಸೇರಿ ಸುದೀರ್ಘ ಚರ್ಚೆಯ ನಂತರ ಜೆಕ್ ಆಕ್ರಮಣದ ಬಗ್ಗೆ ನಾನು ಒಂದು ಹೇಳಿಕೆಯನ್ನು ನೀಡಬೇಕೆಂದು ನಿರ್ಧರಿಸಲಾಯಿತು. ರಷ್ಯಾವನ್ನು ನಿಂದಿಸಿದರೂ ಅಂತಹ ಕದನಗಳನ್ನು ಉಪಯೋಗಿಸದ ಮತ್ತು ಸದನವನ್ನು ಅವಹೇಳನ ಮಾಡುವ ಕ್ರಿಯೆಯೆಂದು ವಿವರಿಸುವ ಹೇಳಿಕೆಯಾಗಿತ್ತು. ಸ್ವಲ್ಪಮಟ್ಟಿಗೆ ನನ್ನ ಹೇಳಿಕೆ ಸರಕಾರದ ವಿರುದ್ಧವಾಗಿದ್ದಿತು. ಆದರೆ ಇದು ಅಗತ್ಯವೆಂದು ನನ್ನ ಭಾವನೆ. ಇಂತಹ ಪರಿಸ್ಥಿತಿಯಲ್ಲಿ ಈ ಚಿಕ್ಕ ದೇಶದ ಅನಗತ್ಯವಾದ ಮಾನಭಂಗಕ್ಕೆ ಕಾರಣವಾದ ರಷ್ಯಾವನ್ನು ನಿರ್ದಿಷ್ಟವಾದ ಪದಗಳಲ್ಲಿ ನಾವು ಖಂಡಿಸಲೇಬೇಕು. ಪ್ರಧಾನಿಗಳ ಪ್ರತಿಕ್ರಿಯೆಯನ್ನು ನಾವು ಕಾಯ್ದು ನೋಡೋಣ.

**ಸೆಪ್ಟೆಂಬರ್ ೪, ೧೯೬೮ ದೆಹಲಿ**

ಬೆಳಿಗ್ಗೆ ಮತ್ತು ಸಾಯಂಕಾಲ ನಾವು ಕಾರ್ಯಕಾರಿ ಸಮಿತಿಯಲ್ಲಿ ಸೇರಿದೆವು. ಸಾಯಂಕಾಲ, ಮದರಾಸಿನ ಕಾಂಗ್ರೆಸಿನ ವಿಷಯಗಳ ಬಗ್ಗೆ ಸದಸ್ಯ ಮತ್ತು ಪಿಸಿಸಿ ಅಧ್ಯಕ್ಷ ಸಿ. ಸುಬ್ರಹ್ಮಣ್ಯಂ ಮತ್ತು ಇಥಿಯೋಪಿಯಾಕ್ಕೆ ರಾಯಭಾರಿಯಾಗಿ ನಾಮಕರಣಗೊಂಡಿರುವ ಶ್ರೀ ಅಳಗೇಶನ್ ಪ್ರತ್ಯೇಕವಾಗಿ ಭೇಟಿಮಾಡಿದರು. ಅವರ ಜೊತೆಯಲ್ಲಿ ಮಾತನಾಡಿದ ಮೇಲೆ ನನ್ನ ಭಾವನೆಯೇನೆಂದರೆ ಕಾಮರಾಜರು ಬದಲಾವಣೆಗಳಿಗೆ ಹೊಂದಿಕೊಳ್ಳಬೇಕು. ಎನ್.ಡಬ್ಲ್ಯು.ಎಫ್.ಪಿ. ನಿರಾಶ್ರಿತರ ಸಂಘವು ನನ್ನ ಗೌರವಾರ್ಥ ಏರ್ಪಡಿಸಿದ್ದ ಔತಣಕೂಟದಲ್ಲಿ ಭಾಗವಹಿಸಿ ಸೂಕ್ತವಾಗಿ ಮಾತನಾಡಿದೆನು. ಬಹಳ ಜನ ಸೇರಿದ್ದರು.

ಕಾರ್ಯಕಾರಿ ಸಮಿತಿಯು ಬೆಳಿಗ್ಗೆ ಸಭೆ ಸೇರಿತು. ಯಾವಾಗಲೂ ಕ್ರಮವಾದ ಕಾರ್ಯಸೂಚಿ ಕೈಗೆತ್ತಿಕೊಳ್ಳುವುದಕ್ಕೆ ಮುಂಚೆ ಯಾವಾಗಲೂ ಸ್ವಲ್ಪ ಹೊತ್ತು ಪೂರ್ವಭಾವಿ ಮಾತುಕತೆ ನಡೆಯುತ್ತದೆ. ನಾವು ಕೇಂದ್ರ-ರಾಜ್ಯಗಳ ಸಂಬಂಧಗಳ ವಿಷಯವನ್ನು ತೆಗೆದುಕೊಂಡೆವು. ಎಲ್ಲ ವಿಷಯಗಳೂ ಚರ್ಚೆಗೆ ಬಂದವು. ಕೇಂದ್ರದ ನಿಧಾನ ಮತ್ತು ಅಸಮರ್ಥತೆಯ ಬಗ್ಗೆ ಸದಸ್ಯರು ಅದರಲ್ಲಿಯೂ ವಿಶೇಷವಾಗಿ ಮುಖ್ಯಮಂತ್ರಿಗಳು ತುಂಬಾ ಕಹಿಯಾಗಿ ಮಾತನಾಡಿದರು. ಯೋಜನಾ ಆಯೋಗದ ಅವ್ಯವಹಾರ, ಸರ್ಕಾರಿ ನೌಕರರ ನಿರಾಸಕ್ತಿ, ಅಪ್ರಾಮಾಣಿಕತೆ ಮತ್ತು ಅಸಂಗತೆ ಮುಂತಾದವುಗಳ ಬಗ್ಗೆ ಅವರು ಕಟುವಾಗಿ ಮಾತನಾಡಿದರು. ಸರ್ಕಾರಿ ನೌಕರರು ಸಂಪೂರ್ಣವಾಗಿ ಅಸಮರ್ಥರು ಮತ್ತು ಅವರೇ ಆಳುವವರು, ಮಂತ್ರಿಗಳಲ್ಲ ಎಂದು ಕೂಡ ನಾನು ಹೇಳಿದೆನು. ಚರ್ಚೆಯ ನಂತರ ಆದ್ಯತೆಯನ್ನು ನಿಗದಿಪಡಿಸಬೇಕು ಎಂದು ಒಪ್ಪಿಕೊಳ್ಳಲಾಯಿತು. ಕೃಷಿ ಮತ್ತು ಸಂಬಂಧಿತ

ವಿಷಯಗಳಾದ-ನೀರಾವರಿ, ವಿದ್ಯುಚ್ಛಕ್ತಿ, ಬೆಲೆ ನಿಗದಿಪಡಿಸುವುದು, ಸಾಲ ಮುಂತಾದವುಗಳನ್ನು ಎತ್ತಿಕೊಳ್ಳಬೇಕು ಮತ್ತು ಮುಖ್ಯಮಂತ್ರಿಗಳಿಂದ, ಯೋಜನಾ ಆಯೋಗದಿಂದ ಯೋಜನೆಗಳು ಮತ್ತು ಅಭಿಪ್ರಾಯಗಳನ್ನು ಪಡೆದಮೇಲೆ ಕಾರ್ಯಕಾರಿ ಸಮಿತಿಯ ಮುಂದೆ ಅದರ ಪರಿಗಣನೆಗೆ ಮೇಲಿನ ವಿಷಯಗಳ ಮೇಲೆ ಒಂದು ಟಿಪ್ಪಣಿಯನ್ನು ಮಂಡಿಸಬೇಕು. ಪಾಲುಮಾಡುವುದು ಅಥವಾ ವಸ್ತುವಿನಿಮಯವನ್ನು ಕೈಗಾರಿಕೆಗಳಲ್ಲಿ ತರುವುದರ ಬಗ್ಗೆ ನಾನು ಬಹಳ ನಿರ್ದಿಷ್ಟವಾಗಿದ್ದು ಕೆಲವು ವಿಚಾರಗಳನ್ನು ಹೇಳಿದೆ. ಅದರಲ್ಲಿ ಸ್ವಲ್ಪ ನಿರ್ದಿಷ್ಟವಾದುದನ್ನು ಪರಿಗಣನೆಗೆ ತೆಗೆದುಕೊಳ್ಳಲಾಯಿತು.

**ಅಕ್ಟೋಬರ್ ೩೧, ೧೯೬೮ ದೆಹಲಿ**

ಅನೇಕ ರಾಜ್ಯಗಳಲ್ಲಿ ಚುನಾವಣೆ ಮತ್ತು ಹಣಕಾಸಿನ ಬಗ್ಗೆ ಪ್ರಧಾನಮಂತ್ರಿಗಳ ಜೊತೆಯಲ್ಲಿ ದೀರ್ಘವಾಗಿ ಮಾತನಾಡಿದೆನು. ಕೆಲವು ಕೈಗಾರಿಕೋದ್ಯಮಿಗಳು ತಮ್ಮನ್ನು ಸಂಪರ್ಕಿಸಿದ್ದರು ಎಂದು ಆಕೆ ಹೇಳಿದರು. ಹಣವನ್ನು ಎಐಸಿಸಿ ಅಧ್ಯಕ್ಷರಾದ ತಮಗೆ ಅಥವಾ ಪಿಸಿಸಿಗೆ ಕೊಡಬೇಕೆಂದು ತಾನು ಹೇಳಿದೆನೆಂದು ಆಕೆ ತಿಳಿಸಿದರು. ತುಂಬಾ ಅಪನಂಬಿಕೆ ತಮಗಿದೆ ಎಂದು ನನ್ನಲ್ಲಿ ವಿಶ್ವಾಸವಿರಿಸಿ ಎಂದು ಆಕೆ ಹೇಳಿದಳು. ನಾನು ತುಸು ಒಪ್ಪಿಕೊಂಡು ಅವರ ಸಹೋದ್ಯೋಗಿಗಳ ಬಗ್ಗೆ ಅಪನಂಬಿಕೆ ಬೆಳೆಸಿಕೊಳ್ಳುವ ಬದಲು ವಾಸ್ತವವಾದಿಯಾಗಿರಬೇಕು ಎಂದು ಸಲಹೆ ಮಾಡಿದೆ. ಅವರು ಕೆಲವು ವರ್ಷಗಳವರೆಗೆ ಪ್ರಧಾನಿಯಾಗಿ ಸುರಕ್ಷಿತವಾಗಿರುತ್ತಾರೆ; ಈ ರೀತಿಯಾದರೆ ಅವರಿಗೆ ಸಹಾಯ ಮಾಡಲು ನನಗೆ ಸಂತೋಷವಾಗುತ್ತದೆ. ಅವರು ಸಹೋದ್ಯೋಗಿಗಳಿಗೆ ಹೆದರುತ್ತಿದ್ದಾರೆಂದು ನನಗನಿಸುತ್ತಿದೆ. ತಮ್ಮ ಸಹೋದ್ಯೋಗಿಗಳ ನಿಷ್ಠೆಯ ಬಗ್ಗೆ ಪೂರ್ಣವಾದ ಭರವಸೆಯುಳ್ಳವರಾಗಿಲ್ಲ ಎಂಬ ಅಂಶವು ಇದರಿಂದ ಕಾಣುತ್ತದೆ. ಅವರು ತುಂಬಾ ಹೆಚ್ಚಾಗಿ ದಿನೇಶ್‌ಸಿಂಗ್ ಮೇಲೆ ಅವಲಂಬಿಸಿದ್ದಾರೆ. ಆತ ಆಕೆಯ ಪ್ರಚಾರಕ ಎಂದು ನನಗೆ ಕಾಣುತ್ತದೆ. ಅವರಷ್ಟರಮಟ್ಟಿಗೆ ಆಕೆಯಿದ್ದರೆ ಒಳ್ಳೆಯದು. ಹಾಗೆಂದು ಆಕೆಗೆ ನಾನು ಹೇಳಿದ್ದೇನೆ.

**ಡಿಸೆಂಬರ್ ೨೪, ೧೯೬೮ ಮುಂಬಯಿ**

ಬಿರ್ಲಾರವರ ಮನೆಗೆ ಬೆಳಗಿನ ಉಪಾಹಾರಕ್ಕೆ ಹೋದೆ. ಜಿ.ಡಿ. ಬಿರ್ಲಾರವರು ಅಲ್ಲಿದ್ದು ನನ್ನನ್ನು ಹಾರ್ದಿಕವಾಗಿ ಸ್ವಾಗತಿಸಿದರು. ದೇಶದಲ್ಲಿ ಹೆಚ್ಚಿನ ಕೈಗಾರಿಕೆಗಳು ಇರಬೇಕು, ಉತ್ಪಾದನೆಯು ಹೆಚ್ಚಬೇಕು; ನಾವು ಹೆಚ್ಚು ಸಂಖ್ಯೆಯಲ್ಲಿ ಯುವಕರನ್ನು ನೇಮಿಸಿಕೊಳ್ಳಬೇಕು ಎಂಬುದರ ಬಗ್ಗೆ ಅವರು ಬಹಳ ಆಸಕ್ತಿಯುಳ್ಳವರಾಗಿದ್ದಾರೆ. ಅವರ ಪ್ರಕಾರ ಕಚ್ಚಾವಸ್ತುಗಳಲ್ಲಿ ಸಂಪನ್ಮೂಲವಿದೆ. ನಮ್ಮ ದೇಶದ ಬ್ಯಾಂಕುಗಳಲ್ಲಿ ಹಣವಿದೆ ಮತ್ತು ಕೌಶಲ್ಯವಿದೆ. ಆದರೆ ಕರ್ತೃತ್ವಶಕ್ತಿ ಇಲ್ಲ. ವಾಸ್ತವವಾಗಿ ಅವರಿಗೆ ಖಾಸಗಿ ಕ್ಷೇತ್ರಗಳ ಬಗ್ಗೆ ಆಸಕ್ತಿಯಿದೆ. ಸಾರ್ವಜನಿಕ ಮತ್ತು ಖಾಸಗಿ ಕ್ಷೇತ್ರಗಳೆರಡನ್ನೂ

ಪ್ರೋತ್ಸಾಹಿಸಬೇಕು ಎಂಬುದು ನನ್ನ ಅಭಿಪ್ರಾಯ. ಅದನ್ನು ಬಹಿರಂಗವಾಗಿ ಅವರಿಗೆ ಹೇಳಿದೆ. ಇದು ಅವರ ಮೇಲೆ ಪ್ರಭಾವ ಬೀರಿತೆಂದು ಕಾಣುತ್ತದೆ. ಅವರು ಇದರ ಬಗ್ಗೆ ಎಲ್ಲಾ ರೀತಿಯಲ್ಲೂ ಸಹಾಯ ಮಾಡುವುದಾಗಿ ಹೇಳಿದರು. ಎಸ್.ಕೆ. ಪಾಟೀಲರು ಉಪಾಹಾರದ ಅಂತ್ಯದಲ್ಲಿ ನಮ್ಮನ್ನು ಸೇರಿಕೊಂಡರು. ಬಿರ್ಲಾರವರು ಎಐಸಿಸಿಗೆ ಚೆಕ್ಕುಗಳನ್ನು ಕಳುಹಿಸಿದ್ದರು. ಅದೂ ಪ್ರಧಾನಮಂತ್ರಿಗಳ ಮೂಲಕ ಎಂಬುದರಲ್ಲಿ ಸಂದೇಹವಿರಲಿಲ್ಲ. ಇದು ಎಸ್.ಕೆ. ಪಾಟೀಲ್ ಮತ್ತು ಸಿ.ಬಿ. ಗುಪ್ತರನ್ನು ಕ್ಷೋಭೆಗೊಳಗಾಗಿಸಿದೆ. ಇದು ರಾಜಕೀಯ. ಮೊರಾರ್ಕ, ಕಾಮನಿ ಮತ್ತು ಖತ್ರೆ ಮತ್ತು ಸುಮತಿಯವರಲ್ಲಿಗೆ ಹೋದೆವು. ನಮ್ಮನ್ನು ಭೇಟಿಮಾಡಲು ಅವರಿಗೆಲ್ಲಾ ಸಂತೋಷವಾಯಿತು. ಅಲ್ಲಿನ ಬಹಳ ಜನರಲ್ಲಿ ಪಾಟೀಲರು ತುಂಬಾ ಪ್ರಸಿದ್ಧರಾಗಿದ್ದಾರೆ. ಎಲ್ಲರಿಗೂ ಅವರ ಬಗ್ಗೆ ಗೌರವ ಮತ್ತು ಪ್ರೀತಿಯೆಂಬುದು ಸ್ಪಷ್ಟವಾಗಿತ್ತು. ಪಾಟೀಲರು ಅವರಿಗೆ ತುಂಬಾ ಸಹಾಯಕರಾಗಿದ್ದರು. ಆದರೆ ಕಳೆದ ಚುನಾವಣೆಯಲ್ಲಿ ಅವರ ಸೋಲು ಎಲ್ಲರಿಗೂ ಅಸಂತುಷ್ಟಿಯನ್ನುಂಟುಮಾಡಿದೆ. ಈ ಸ್ನೇಹಿತರು ಮತ್ತು ಬೊಂಬಾಯಿನ ಅನೇಕ ಪ್ರಮುಖ ವ್ಯಕ್ತಿಗಳಿಗೆ ಇವರನ್ನು ಪಾರ್ಲಿಮೆಂಟಿಗೆ ಚುನಾಯಿಸಬೇಕೆಂಬ ಆಸೆಯಿದೆ. ಅವರು ಚುನಾವಣಾ ತಕರಾರು ಸಂಬಂಧ ಉಚ್ಚತಮ ನ್ಯಾಯಾಲಯದಲ್ಲಿ ಜಯಗಳಿಸುತ್ತಾರೆಂಬುದು ನನ್ನ ಆಶಯ.

**ಜನವರಿ ೧೨, ೧೯೬೮ ಪಾಟ್ನಾ**

ಅರ್ರಹ್‌ನಿಂದ ಪಾಟ್ನಾಗೆ ಹಿಂದಿರುಗಿದ ಮೇಲೆ ಈ ದಿನದ ಪಾಟ್ನಾ ಕಾರ್ಯಕ್ರಮವನ್ನು ನಾವು ಮುಂದೂಡಬಹುದೆಂದು ಪಿಸಿಸಿ ಅಧ್ಯಕ್ಷರು ನನಗೆ ತುಂಬಾ ಒತ್ತಾಯಿಸಿದರು. ಅವರಿಗೆ ತುಂಬಾ ಭಯವಿತ್ತು. ಆದ್ದರಿಂದ ಅವರ ಕೇಳಿಕೆಗೆ ನಾನು ಒಪ್ಪಬೇಕಾಯಿತು. ಇಡೀ ದಿವಸ ವಿಶ್ರಾಂತಿ ತೆಗೆದುಕೊಳ್ಳುತ್ತ ಕಳೆದೆನು. ನಾನು ಪ್ರಧಾನಮಂತ್ರಿಗೆ ಹಣಕ್ಕಾಗಿ ದೂರವಾಣಿ ಮಾಡಿದೆ. ಬೊಂಬಾಯಿನಿಂದ ಜಿ.ಆರ್.ಡಿ,ಫ. ಫಡ್ನಾಲ್ ಮತ್ತು ಇತರರು ಎಸ್.ಕೆ. ಪಾಟೀಲರ ಪ್ರಕಾರ, ಹಣವನ್ನು ಕಳುಹಿಸಿರಬೇಕು. ಅವರಿಂದ ಯಾವುದೇ ಹಣವನ್ನು ಪಡೆದಿರುವುದನ್ನು ಆಕೆ ನಿರಾಕರಿಸಿದರು. ಆಕೆಯನ್ನು ನಂಬಬೇಕೆಂದು ನನಗನಿಸಲಿಲ್ಲ. ನನಗೆ ಈ ಹೆಂಗಸನ್ನು ಅರ್ಥ ಮಾಡಿಕೊಳ್ಳಲಾಗುತ್ತಿಲ್ಲ. ಆಕೆಯ ಆಟ ಏನೂ ಎಂದು ನನಗೆ ಅರ್ಥವಾಗುವುದಿಲ್ಲ ಅಥವಾ ನಾನೇ ಆಕೆಯನ್ನು ಅರ್ಥಮಾಡಿಕೊಳ್ಳದೆ ಅನ್ಯಾಯ ಮಾಡುತ್ತಿದ್ದೇನೆಯೇ ಎಂಬುದು ತಿಳಿಯದು. ಆಕೆಯ ಸ್ನೇಹಿತ-ದಿನೇಶ್‌ಸಿಂಗ್ ಮತ್ತು ದೀಕ್ಷಿತರು ಬಹಳ ಹಣವನ್ನು ಸಂಗ್ರಹಿಸುತ್ತಿದ್ದಾರೆ. ಎಐಸಿಸಿಯ ಖಜಾಂಚಿ ಶ್ರೀ ಪಾಟೀಲರಿಗಲ್ಲದೆ ಹಣವನ್ನು ನೇರವಾಗಿ ಆಕೆಗೆ ಕಳುಹಿಸಬೇಕೆಂದು ಜನರಿಗೆ ಹೇಳುತ್ತಿದ್ದಾರೆ. ಮುಂದಿನ ಸಲ ನಾನು ಈ ವಿಷಯ ಮಾತನಾಡಬೇಕು. ನಾನು ಪಿ.ಸಿ.ಸಿ. ಅಥವಾ ಡಬ್ಲ್ಯು.ಸಿ.ಯ ಸದಸ್ಯರನ್ನು ಭೇಟಿ

ಮಾಡುತ್ತೇನೆ. ಇದು ಕಳಂಕ ತರುವಂತಹುದು. ಕಾಂಗ್ರೆಸ್ಸು ಉದ್ದೇಶವನ್ನು ಹಾಳುಮಾಡುತ್ತದೆ.

**ಜನವರಿ ೧೭, ೧೯೬೯ ಯು.ಪಿ. ದೆಹಲಿ**

ಸಾದಿಕ್‌ಭಾಯಿ, ಗುಪ್ತ ಮತ್ತು ಪಾಟೀಲ್ ಇಲ್ಲಿದ್ದಾರೆ. ಮಂತ್ರಿ ಭಗತ್ ಕೂಡ ಅಲ್ಲಿ ಮನೆಯಲ್ಲಿದ್ದರು. ಸಾದಿಕ್‌ಭಾಯಿ ಮತ್ತು ಭಗತ್ ಪ್ರಕಾರ, ಬಿಹಾರಿಗೆ ಹಣ ಬೇಕಾಗಿತ್ತು. ಸರಾನ್‌ಪನ್‌ನಲ್ಲಿದ್ದ ಪ್ರಧಾನಿಗೆ ದೂರವಾಣಿ ಮಾಡಿದೆ. ಜಿಆರ್‌ಡಿ ಕಳುಹಿಸಿದ ಕೇವಲ ೪ ಲಕ್ಷ ರೂ.ಗಳನ್ನು ಮಾತ್ರ ಪಡೆದಿದ್ದೇನೆ. ಬೊಂಬಾಯಿಲ್ಲಿನ ಅವರಿಗೆಲ್ಲ ಬೆಳಿಗ್ಗೆ ಫೋನ್ ಮಾಡುತ್ತೇನೆಂದು ಆಕೆಗೆ ಹೇಳಿದೆ. ಆದರೆ ೨ ನಿಮಿಷಗಳ ನಂತರ ಆಕೆಯೇ ನನಗೆ ಫೋನ್ ಮಾಡಿ ೫ ಲಕ್ಷ ರೂ.ಗಳ ಚೆಕ್‌ಅನ್ನು ಆಕೆ ಕಳುಹಿಸಿದುದನ್ನು ಕಂಡುಹಿಡಿದಿರುವುದಾಗಿ ನನಗೆ ಹೇಳಿದರು. ತಕ್ಷಣ ಬಿಹಾರಿಗೆ ಹಣ ಕಳುಹಿಸಬೇಕೆಂದು ಆಕೆಗೆ ಹೇಳಿದೆ.

**ಜನವರಿ ೨೯, ೧೯೬೯ ದೆಹಲಿ**

ಪುನಃ ಇಡೀ ದಿನ ವಿಶ್ರಾಂತಿ ತೆಗೆದುಕೊಂಡೆ. ಪತ್ರವ್ಯವಹಾರಗಳನ್ನು ಮಾತ್ರ ಮಾಡಿದೆ. ಕೇಂದ್ರ ಮಂತ್ರಿಗಳ ಸಲಹೆ ಕೇಳಬೇಕಾಗಿದ್ದ ಕೆಲವು ದೀರ್ಘಕಾಲದ ವಿಷಯಗಳನ್ನು ನೋಡಿಕೊಂಡೆ. ವಾಣಿಜ್ಯ ಮತ್ತು ಕೈಗಾರಿಕೆಯ ಇಬ್ಬರು ಮಂತ್ರಿಗಳು ಅಂದರೆ ದಿನೇಶ್‌ಸಿಂಗ್ ಮತ್ತು ಫಕ್ರುದ್ದೀನ್ ಆಲಿ ಇಬ್ಬರೂ ವಿಷಯಗಳನ್ನು ನಿಧಾನ ಮಾಡುತ್ತಾ ಆಟವಾಡುತ್ತಿದ್ದಾರೆಂದು ನನಗನಿಸುತ್ತದೆ.

ಮೊದಲನೆಯದು ಶುದ್ಧವಾಗಿ ಅಸಾಮರ್ಥ್ಯದಿಂದ ಮತ್ತು ಕೆಲವು ದುರುದ್ದೇಶಗಳಿಗಾಗಿ ಕೈಗಾರಿಕಾ ಅಭಿವೃದ್ಧಿಯನ್ನು ತಡೆಯುವ ಪ್ರಯತ್ನದಲ್ಲಿದ್ದಾರೆ. ಆದರೆ ಇದರ ಬಗ್ಗೆ ನನಗೆ ಖಚಿತವಿಲ್ಲ. ಆದರೆ ಹೀಗೆ ತಡೆಹಿಡಿಯುವುದರಿಂದ ಜನರು ಹೆಚ್ಚಿಗೆ ಹಣಕೊಡುವಂತೆ ಮಾಡುವುದು ಹಾಗೂ ಪ್ರತಿಯೊಂದರ ಮೇಲೂ ಹಿಡಿತ ಹೊಂದಿರುವುದಾಗಿರಬಹುದು. ಇವರಿಬ್ಬರೂ ಅದರಲ್ಲಿಯೂ ವಿಶೇಷವಾಗಿ ದಿನೇಶ್‌ಸಿಂಗ್ ಪ್ರಧಾನಿಯ ಜೊತೆಯಲ್ಲಿ ಶಾಮೀಲಾಗಿದ್ದಾರೆಂದು ಕಾಣುತ್ತದೆ. ಆಕೆಗೆ ತಾನು ಒಳ್ಳೆಯವರು ಎಂದು ತೋರಿಸಿಕೊಳ್ಳುತ್ತಾರೆ. ಅವರ ಪಾಡಿಗೆ ಅವರನ್ನು ಬಿಟ್ಟರೆ ಅವರು ಚೆನ್ನಾಗಿ ಕೆಲಸ ಮಾಡುತ್ತಾರೆ. ಈ ಸಣ್ಣಮನುಷ್ಯರು ಮತ್ತು ಅವರ ಸುತ್ತ ಇರುವ ಹೊಗಳುಭಟರು ಆಕೆಯನ್ನು ಹಾಳು ಮಾಡುತ್ತಾರೆಂದು ಕಾಣುತ್ತದೆ. ಆಕೆಯು ಈ ನೀಚ ಮಟ್ಟದಿಂದ ಮೇಲೇರಲಾಗುವುದಿಲ್ಲ. ಹೆಚ್ಚು ಸ್ನೇಹಯುತವಾಗಿರುವುದಕ್ಕೆ ಸಿದ್ಧವಾಗಿರುವುದಿಲ್ಲ. ಆಕೆ ದೇಶದ ಹಿತಾಸಕ್ತಿಯ ಬಗ್ಗೆ ಹೆಚ್ಚು ಆಸಕ್ತಿಯಿರುವ ಮೇಲ್ದರ್ಜೆಯ ಜನರನ್ನು ಅರ್ಥಮಾಡಿ ಕೊಳ್ಳುವುದಿಲ್ಲ. ಇದರ ಪರಿಣಾಮ ಭ್ರಷ್ಟಾಚಾರವು ಹೇರಳವಾಗಿದೆ. ಇಂತಹ ವಾತಾವರಣದಲ್ಲಿ ಮುಂದುವರಿಯುವುದು ನನಗೆ ಕಷ್ಟವಾಗುತ್ತದೆ.

**ಫೆಬ್ರವರಿ ೧೨, ೧೯೬೯ ದೆಹಲಿ**

ತುಂಬಾ ನಿರಾಶದಾಯಕ ದಿನ. ನಿನ್ನೆಯಿಂದ ಉತ್ತರ ಪ್ರದೇಶದ ವಿನಾ ಮಧ್ಯಂತರ ಚುನಾವಣೆಗಳ ಫಲಿತಾಶ ಬರುತ್ತಿರುವಂತೆ ನಾನು ಜಾರಿಕೊಳ್ಳಬಹುದೆಂದು ಕಾಣುತ್ತದೆ. ನಾವು ಮತ್ತು ಬಂಗಾಳ ಮತ್ತು ಪಂಜಾಬಿನಲ್ಲಿ ಹೀನಾಯವಾಗಿ ಸೋತಿದ್ದೇವೆ. ನಾವು ಒಂದೇ ದೊಡ್ಡ ಪಕ್ಷವಾಗಿದ್ದರೂ ಸರಕಾರವನ್ನು ರಚಿಸಲಾಗುವುದಿಲ್ಲವೆಂಬುದು ಖಂಡಿತ. ಇದನ್ನು ನಾಳೆ ಕಾರ್ಯಕಾರಿ ಸಮಿತಿಯು ನಿರ್ಧರಿಸಬೇಕು. ಪಂಜಾಬಿನಲ್ಲಿ ಸೋಲಬಹುದೆಂದು ನಾನು ನಿರೀಕ್ಷಿಸಿದ್ದೆ. ಆದರೆ ಆಶ್ಚರ್ಯವೆಂದರೆ ವಾಸ್ತವವಾಗಿ ಆಯಾಯ ರಾಜ್ಯಗಳಲ್ಲಿ ಪಕ್ಷಗಳ ಎಲ್ಲ ಮೇಲ್ಮಟ್ಟದ ನಾಯಕರು ಸೋಲಿಸಲ್ಪಟ್ಟಿದ್ದಾರೆ. ಹಾಗಾದರೆ ನಾಯಕರು ಕೆಳಮಟ್ಟಕ್ಕೆ ಬರುತ್ತಿದ್ದಾರೆಂದು ಅರ್ಥವೇ? ಹೊಸ ನಾಯಕತ್ವವು ಬೆಳೆಯಬೇಕೆಂದು ಕಾಣುತ್ತದೆ. ಅತ್ಯಂತ ಅಪಾಯಕಾರಿ ಫಲಿತಾಂಶವೆಂದರೆ ಬಂಗಾಳದ್ದು. ಸಂಯುಕ್ತ ರಂಗವು ಹೇಗೆ ನಡೆದುಕೊಳ್ಳುತ್ತದೆ ಎಂದು ಜಾಗರೂಕವಾಗಿ ನೋಡಬೇಕು. ಅವುಗಳನ್ನು ಹತ್ತಿಕ್ಕಲು ಕ್ರಮ ತೆಗೆದುಕೊಳ್ಳಬೇಕು, ಅಗತ್ಯವಿದ್ದರೆ ರಾಷ್ಟ್ರಾಧ್ಯಕ್ಷರ ಆಳ್ವಿಕೆ ತರಬೇಕು. ಅವರು ಸ್ವದೇಶಾಭಿಮಾನವುಳ್ಳವರಲ್ಲ. ಅವರ ಮಾರ್ಗವು ಹೆಚ್ಚು ಕಡಿಮೆ ಮಾರ್ಕ್ಸ್‌ವಾದ ಮತ್ತು ಪ್ರಜಾಪ್ರಭುತ್ವ ವಿರೋಧಿ. ಸಂಯುಕ್ತ ರಂಗದಂತೆ ಕಲ್ಕತ್ತಾವೂ ಕೂಡ ಗಾಬರಿ ಸ್ಥಿತಿಯಲ್ಲಿದೆಯೆಂದು ಈ ಬೆಳಿಗ್ಗೆ ಬಿರ್ಲಾರವರಿಂದ ದೂರವಾಣಿ ಕರೆ ಬಂದಿತು. ಕಾಂಗ್ರೆಸಿಗೆ ಸಹಾಯ ಮಾಡಿದ ಜನರನ್ನು ಕಮ್ಯುನಿಸ್ಟರು ಆಗಲೇ ಹೆದರಿಸುತ್ತಿದ್ದಾರೆ. ನಾವು ಜಾಗರೂಕವಾಗಿ ಕಾಯ್ದು ನೋಡಬೇಕು.

**ಮಾರ್ಚ ೧೦, ೧೯೬೯**

ಬಿಹಾರ ಮತ್ತು ಇತರ ರಾಜ್ಯಗಳು ಸಮಸ್ಯೆಗಳನ್ನು ಸೃಷ್ಟಿಸುತ್ತಿರುವುದರಿಂದ ಆಸ್ಟ್ರೇಲಿಯಾ ಮತ್ತು ನ್ಯೂಜಿಲೆಂಡಿಗೆ ಹೋಗಲಾಗುತ್ತಿಲ್ಲ. ಸ್ಪೀಕರ್‌ರವರ ಚುನಾವಣೆಯ ಬಗ್ಗೆ ಬಿಹಾರದಲ್ಲಿ ಏನಾಗುತ್ತದೆ ಎಂಬುದನ್ನು ನಾವು ನೋಡಬೇಕು. ಅಲ್ಲಿಯ ಮುಖ್ಯಮಂತ್ರಿಯು ಅದೇ ಕಾರಣಕ್ಕಾಗಿ ನಾವು ಬರಲಾಗುವುದಿಲ್ಲವೆಂದು ವಾದಿಸುತ್ತಿದ್ದಾರೆ. ಶ್ರೀ ದರೋಗಾರಾಯ್ ನೇತೃತ್ವದ ಭಿನ್ನಮತೀಯರೆನ್ನಿಸಿಕೊಳ್ಳುವವರಿಗೆ ಯಾವುದೇ ಕಾರಣಕ್ಕೆ ಮತದಾನದಿಂದ ವಿಮುಖವಾಗಬಾರದೆಂದು ನಾನು ಹಿತವಚನ ನುಡಿದಿದ್ದೇನೆ. ನಾನು ಹೇಳಿದಂತೆ ಮಾಡುವವೆಂದು ಅವರು ಒಪ್ಪಿಕೊಂಡಿದ್ದಾರೆ. ವಿಷಯಗಳು ಸರಿಹೋಗುತ್ತವೆಂದು ಕಾಣುತ್ತದೆ.

ಈ ದಿನ ರಾಜ್ಯಸಭೆಯಲ್ಲಿ ಕಾಂಗ್ರೆಸ್ಸಿನ ಒಬ್ಬ ಸದಸ್ಯ ಚಂದ್ರಶೇಖರ್ ಮೊರಾರ್ಜಿಭಾಯಿ ವಿರುದ್ಧ ಕಳಂಕ ಬರುವ ರೀತಿಯಲ್ಲಿ ಅಪ್ರಾಮಾಣಿಕ ಅರ್ಥಗಳುಂಟಾಗುವಂತೆ ಮಾತನಾಡಿದರು. ಪಕ್ಷದ ಕಾರ್ಯಾಂಗವು ಈ ದಿನ ಮತ್ತು ನಾಳೆ ಸಭೆ ಸೇರುವುದೆಂದು ನಾನು ತಿಳಿದಿದ್ದೇನೆ. ಈ ದಿನದ ಸಭೆಯಲ್ಲಿ ಪ್ರಧಾನಿಯವರೇ ಗೈರು ಹಾಜರಾದರು.

ಪ್ರಧಾನಿಯ ಗೈರುಹಾಜರಿಯಲ್ಲಿ ಅಧ್ಯಕ್ಷರಾಗುವುದರಿಂದ ಮೊರಾರ್ಜಿ ಭಾಯಿಯವರು ಮಾತನಾಡಲಾಗುವುದಿಲ್ಲವಾದ್ದರಿಂದ ಅವರಿಗೆ ಆಕೆಯು ಹಾಜರಿರಬೇಕೆಂದು ಅದರಿಂದಾಗಿ ಅವರು ತಮ್ಮ ವಿಷಯವನ್ನು ಮಂಡಿಸಬಹುದೆಂದಿದ್ದರು. ಮಾಮೂಲಿನಂತೆ ಪ್ರಧಾನಿಯು ಆಟವಾಡುತ್ತಿದ್ದಾರೆಂದು ಕಾಣಿಸುತ್ತದೆ. ಹೆಚ್ಚಾಗಿ ಕಾಮರಾಜರಿಂದಾಗಿ ಆಕೆಯನ್ನು ನಾವುಗಳು ಪ್ರಧಾನಿಯನ್ನಾಗಿ ಮಾಡಿದುದು ಎಲ್ಲಾ ರೀತಿಯಲ್ಲೂ ತಪ್ಪಾಯಿತು. ಈಗ ನಾವು ನಿಸ್ಸಹಾಯಕರಾಗಿದ್ದೇವೆ. ಈ ಚಂದ್ರಶೇಖರರಿಗೆ ಎಲ್ಲೂ ಬೇರಿಲ್ಲ. ಸಾಹಸಿ 'ಯಂಗ್ ಟರ್ಕ್ಸ್' ಎಂದು ಕರೆಸಿಕೊಳ್ಳುವವರನ್ನು ನಾನು ಕಾಗದದ ಹುಲಿಗಳೆಂದು ಕರೆಯಲು ಇಚ್ಛಿಸುತ್ತೇನೆ.

**ಏಪ್ರಿಲ್ ೧೩, ೧೯೬೯**

ಕೆಲವು ಸಲ ಕಲ್ಕತ್ತದಲ್ಲಿ ನನ್ನ ಅಭ್ಯಾಗತರಾದ ಅತುಲ್ಯ ಮತ್ತು ಅಶೋಕ್ ಬೆಳಗಿನ ಉಪಾಹಾರಕ್ಕೆ ಬಂದರು. ನನ್ನ ಅಧ್ಯಕ್ಷ ಭಾಷಣಕ್ಕೆ ಅಂತಿಮ ರೂಪ ಕೊಡುವುದಕ್ಕೆ ನಾನು ಇಡೀ ಸಾಯಂಕಾಲವನ್ನು ವಿನಿಯೋಗಿಸಿದೆನು. ಗುಪ್ತಾ ಮತ್ತು ಸಾದಿಕ್‌ಭಾಯಿ ಇದಕ್ಕೆ ಸಹಾಯಕರಾಗಿದ್ದಾರೆ. ಸಾದಿಕ್‌ಭಾಯಿಯವರು ಅದರಲ್ಲಿ ಕೆಲವು ಕಡೆ ಇರುವ ತೀಕ್ಷ್ಣವಾದ ಪದಗಳನ್ನು ತೆಗೆದು ಹಾಕಿ ಅದನ್ನು ಮೃದು ಮಾಡಿದರು.

ಪ್ರಧಾನಿಯವರು ಈ ಸಾಯಂಕಾಲ ೪ ಗಂಟೆಗೆ ನನ್ನನ್ನು ನೋಡಬೇಕೆಂದರು. ನಾನು ಅಲ್ಲಿಗೆ ಹೋದಾಗ ಆಕೆ ಕಾರ್ಯಸೂಚಿಯನ್ನು ಚರ್ಚಿಸಿ ಕೆಲವು ಸಲಹೆಗಳನ್ನು ನೀಡಿದರು. ಅವರು ಒಂದು ಮಾತು ಹೇಳಿದರು. ಅದು ಶುದ್ಧಾಂಗ ಸುಳ್ಳು, 'ಆದು ಯಾವುದೆಂದರೆ ಆಕೆ ಹೆಚ್ಚು ಕಾಲ ಪ್ರಧಾನಿಯಾಗಿರುವುದಿಲ್ಲ, ಆದ್ದರಿಂದ ಅವರ ಪತ್ರಿಕೆಯ ಕಷ್ಟಗಳ ಬಗ್ಗೆ ಯೋಚಿಸಬೇಕಾಗಿಲ್ಲ' ಎಂದು ನಾನು ಗೊಯೆಂಕಾರಿಗೆ ಹೇಳಿದೆನೆಂದು ಆಕೆ ಹೇಳಿದರು. ಕೆಲವು ಕಿಡಿಗೇಡಿ ಜನರು ಈ ಕತೆಯನ್ನು ಸೃಷ್ಟಿಸಿದ್ದಾರೆ. 'ಆಕೆಯನ್ನು ಹೊಂದಿರುವುದು ದೇಶಕ್ಕೆ ಒಳ್ಳೆಯದಲ್ಲ ಎಂದು ನನಗೆ ಕಂಡು ಬಂದರೆ ಆಕೆಗೇ ನೇರವಾಗಿ ಹೇಳುತ್ತೇನೆ' ಎಂದು ಆಕೆಗೆ ಹೇಳಿದೆ. ಆಕೆ ಈ ಕತೆಯನ್ನು ಕಟ್ಟಿದ್ದಾರೆಂಬುದು ನನಗೆ ಖಚಿತ, ಆಕೆಯು ಸತ್ಯವಂತಳಲ್ಲದ ವ್ಯಕ್ತಿಯಾದ್ದರಿಂದ ಮತ್ತು ತನ್ನ ಉದ್ದೇಶ ಸಾಧಿಸಲು ಅಂದರೆ, ಹೇಗಾದರೂ ಪ್ರಧಾನಿಯಾಗಿರಬೇಕು ಎಂಬುದಕ್ಕೆ ಏನನ್ನೂ ಮಾಡುತ್ತಾರೆಯಾದ್ದರಿಂದ ಆಕೆ ಹೋದರೆ ನನಗೇನೂ ಅಸಂತೋಷವಿಲ್ಲ.

**ಮೇ ೩, ೧೯೬೯** **ಜಾಕಿರ್ ಹುಸೇನ್‌ರವರು ನಿಧನ ಹೊಂದಿದರು**

ಎಂದಿನಂತೆ ಬೆಳಗಿನ ಉಪಾಹಾರವಾದ ನಂತರ, ಕಚೇರಿಗೆ ತುಂಬಾ ಸ್ನೇಹಿತರ ಜೊತೆಯಲ್ಲಿ ಹೋದೆ. ಸುಮಾರು ೧೧-೩೦ ಗಂಟೆಗೆ ಕಚೇರಿಯಲ್ಲಿ ಡಾ. ಜಾಕಿರ್ ಹುಸೇನರು ತೀವ್ರವಾಗಿ ಅಸ್ವಸ್ಥರಾಗಿದ್ದಾರೆ ಎಂಬ ದೂರವಾಣಿ ಸಮಾಚಾರವು ಬಂದಿತು.

ಕೆಲವೇ ನಿಮಿಷಗಳಲ್ಲಿ ನಾವು ಹೊರಡುವುದಕ್ಕೆ ಸಿದ್ಧರಾಗುತ್ತಿದ್ದಾಗ ಅವರು ನಿಧನ ಹೊಂದಿದರು ಎಂಬ ಸಮಾಚಾರ ಪ್ರಧಾನಿಗಳ ಕಚೇರಿಯಿಂದ ಬಂದಿತು. ಇದು ದಿಗ್ಭ್ರಮೆಯ ವಿಚಾರ. ಕೆಲವು ಕಾಲದಿಂದ ಅಸ್ವಸ್ಥರಾಗಿದ್ದರೂ ಇಷ್ಟು ಬೇಗನೆ ನಿಧನರಾಗುತ್ತಾರೆಂದು ನಿರೀಕ್ಷಿಸಿರಲಿಲ್ಲ. ನಾವು ರಾಷ್ಟ್ರಪತಿ ಭವನಕ್ಕೆ ಧಾವಿಸಿದೆವು. ಅಲ್ಲಿ ಮೊರಾರ್ಜಿಭಾಯಿ ಮತ್ತು ಇತರ ಮಂತ್ರಿಗಳನ್ನು ಕಂಡೆವು. ನಮಗೆ ಒಂದು ರೀತಿಯ ದಿಗ್ಭ್ರಮೆಯಾಗಿದ್ದಿತು, ಭಾವಪರವಶರಾದೆವು. ಪ್ರತಿಯೊಬ್ಬರ ಮುಖದಲ್ಲಿಯೂ ದುಃಖ ತುಂಬಿಕೊಂಡಿತ್ತು. ಸುಮಾರು ಒಂದು ಗಂಟೆಯ ನಂತರ ನೆಲಮಹಡಿಯಲ್ಲಿ ಕೆಲವು ಕೊಠಡಿಗಳಿಗೆ ನಾವು ಹೋದೆವು. ದರ್ಬಾರ್ ಸಭಾಂಗಣ ಅತ್ಯಂತ ಸೂಕ್ತ ಸ್ಥಳವಾದುದರಿಂದ ಅಲ್ಲಿ ಶವವನ್ನು ಸರಕಾರಿ ಮರ್ಯಾದೆಯೊಂದಿಗೆ ಇಡುವಂತೆ ಅಂತಿಮವಾಗಿ ತೀರ್ಮಾನಿಸಲಾಯಿತು. ಸೋಮವಾರ ಸಾಯಂಕಾಲ ಅಂತ್ಯಸಂಸ್ಕಾರ ಮಾಡಲು ವಿವರಗಳು ನಿರ್ಧಾರವಾದವು. ನಾನು ನಮ್ಮ ಕಚೇರಿಯನ್ನು ಮುಚ್ಚಿ ಪತ್ರಿಕೆಗೆ ಬಂದು ಹೇಳಿಕೆಯನ್ನು ನೀಡಿದೆ. ಸಾಯಂಕಾಲ ಡಾ. ಶರ್ಮರವರು ಬಂದು ರಾಷ್ಟ್ರಾಧ್ಯಕ್ಷರ ಚುನಾವಣೆಗಳಿಗೆ ಸಂವಿಧಾನ ವಿಧಿಗಳು ಮತ್ತು ಸಂಬಂಧಿತ ಕಾಯ್ದೆಯನ್ನು ವಿವರಿಸಿದರು. ಅಂದರೆ ೬ (ಆರು) ತಿಂಗಳುಗಳೊಳಗೆ ಚುನಾವಣೆಗಳನ್ನು ನಡೆಸಬೇಕು. ನಾನು ಸರಿಯಾದ ಉತ್ತರಾಧಿಕಾರಿಯೆಂಬುದು ಡಾ. ಶರ್ಮರ ಯೋಚನೆ. ಅಂತಹ ಯೋಚನೆಗಳು ಮೂರ್ಖತನ ಎಂದು ನಾನು ಹೇಳಿದೆ. ಕಾಮರಾಜರು ಸಂಜೆ ಬಂದು ಬಲವಾಗಿರುವ ನಡತೆಯುಳ್ಳ ಮತ್ತು ಕಾಂಗ್ರೆಸ್ಸಿನ ಜೊತೆಯಲ್ಲಿ ದೀರ್ಘವಾದ ಸಹವಾಸವಿರುವ ವ್ಯಕ್ತಿಯನ್ನು ರಾಷ್ಟ್ರಪತಿಯಾಗಿ ನಾವು ಹೊಂದಬೇಕು. ಅದಕ್ಕಾಗಿ ನಾವೆಲ್ಲಾ ಸಾಕಷ್ಟು ಚಿಂತಿಸಬೇಕೆಂದು ಅವರು ಹೇಳಿದರು.

**ಮೇ ೧೫, ೧೯೬೯**

ರಾಷ್ಟ್ರಾಧ್ಯಕ್ಷರ ಚುನಾವಣೆಗೆ ಅಭ್ಯರ್ಥಿಯನ್ನು ಹುಡುಕುವುದು ಎಲ್ಲರ ಮನಸ್ಸನ್ನು ಸೆಳೆದಿದೆ. ಪ್ರಧಾನಮಂತ್ರಿ ವಿ.ವಿ. ಗಿರಿ ಮತ್ತು ಜಗಜೀವನರಾಮ್‌ರವರ ಪರವಾಗಿದ್ದಾರೆ. ಇತ್ತೀಚೆಗೆ ರಷ್ಯಾದ ಕೊಸಿಗಿನ್ ಸಲಹೆಯ ಮೇರೆಗೆ ಸ್ವರ್ಣಸಿಂಗ್‌ರವರ ಪರವಾಗಿದ್ದಾರೆಂಬ ವದಂತಿ ಇವೆ. ತಮ್ಮ ತಾಳಕ್ಕೆ ತಕ್ಕಂತೆ ಕುಣಿಯಲು ಇಚ್ಛಿಸುವಂತಹವರು ತನ್ನ ಆಯ್ಕೆಯಾಗಿರಬೇಕೆಂದು ಆಕೆ ಹುಡುಕಾಡುತ್ತಿದ್ದಾರೆಂದು ಕಾಣುತ್ತದೆ. ಈ ವಿಷಯದ ಬಗ್ಗೆ ಹೇಳಿದಾಗ ಆಕೆ ಸ್ಪಷ್ಟವಾಗಿ ಮುಚ್ಚುಮರೆಯಿಲ್ಲದೆ ಹೇಳಲೇ ಇಲ್ಲ. ಇದಕ್ಕೆ ವಿರುದ್ಧವಾಗಿ ನಾನು ಅಭ್ಯರ್ಥಿಯು ನೈಜವಾದ ಕಾಂಗ್ರೆಸ್ಸಿಗನಾಗಿರಬೇಕು. ಸತ್ಯಸಂಧನಾಗಿದ್ದು, ಅಭಿವೃದ್ಧಿಯ ಬಗ್ಗೆ ಆಸಕ್ತಿಯುಳ್ಳವರು ಮತ್ತು ಯಾವುದೇ ಮೂರ್ಖತನವನ್ನು ಸಹಿಸುವವರಲ್ಲದವರು ಮತ್ತು ಒತ್ತಡಕ್ಕೆ ಮಣಿಯುವವರಲ್ಲವೆಂದು ಪ್ರಸಿದ್ಧರಾದವರಾಗಿರಬೇಕು ಎಂದೆ. ಇವತ್ತು ರಾತ್ರಿ ಸುಮಾರು ೯ ಗಂಟೆ ಸಮಯದಲ್ಲಿ ಆಕೆಯ ಜೊತೆ ೧೫

ನಿಮಿಷಗಳಿದ್ದೆ. ಆಕೆಯ ಬಿಗಿತನ ಕಾಣಬಹುದಾಗಿತ್ತು. ನಾನೂ ಹಾಗೆಯೇ ಇದ್ದೆನೆಂದು ಕಾಣುತ್ತದೆ. ಎಐಸಿಸಿಯು ಕೊಡಬೇಕಾಗಿದ್ದ ೧೭ ಲಕ್ಷ ರೂ ಗಳ ಸಾಲದ ಮರುಪಾವತಿ ಬಗ್ಗೆ ಮಾತು ಬಂದಾಗ ಆಕೆಗೆ ಕೋಪ ಬಂದಿತು. ಎಸ್.ಕೆ.ಯು ಖಜಾಂಚಿಯಾಗಿರುವುದರಿಂದ ಅವರು ಹಣವನ್ನು ಹೊಂದಿಸಬೇಕು. ಅದಕ್ಕೆ ತಾನೇನೂ ಮಾಡುವುದಿಲ್ಲ ಎಂದು ಹೇಳಿದರು. ಎಲ್ಲ ಸಂಗ್ರಹಣೆಗೆ ಆಕೆ ತಾನೇ ಕೀರ್ತಿಯನ್ನು ಪಡೆಯುತ್ತಿದ್ದಾರೆಂದು ಕಾಣುತ್ತದೆ. ಏಕೆಂದರೆ ಎಐಸಿಸಿ ಪರವಾಗಿ ಚೆಕ್ ಬಂದಿದ್ದರೂ ಅದನ್ನೂ ತಮ್ಮ ಮೂಲಕವೇ ಹೋಗುವಂತೆ ವ್ಯವಸ್ಥೆ ಮಾಡಿಕೊಂಡಿದ್ದರು. ಕನಿಷ್ಠ ಬೊಂಬಾಯಿಯಲ್ಲಾದರೂ ನನ್ನ ಮತ್ತು ಎಸ್.ಕೆ. ಯವರ ಜಂಟಿ ಪ್ರಯತ್ನದಿಂದಾಗಿ ಚೆಕ್ಕುಗಳ ಮೂಲಕ ಎಲ್ಲ ಹಣವೂ ಬರುತ್ತಿತ್ತು ಎಂಬುದನ್ನು ಮರೆಯುತ್ತಿದ್ದರು ಆಕೆ. ಎಸ್.ಕೆ. ಬಗ್ಗೆ ಔದಾರ್ಯತೆಯನ್ನು ಹೊಂದಿರಲಿಲ್ಲ. ಬನಸ್ಕಾಂತಾ ಚುನಾವಣೆಯಲ್ಲಿ ಆತನ ಜಯದಿಂದ ತುಂಬಾ ಅತೃಪ್ತರಾಗಿದ್ದರು. ಎರಡನೆ ಸಲ ನಮ್ಮ ಭೇಟಿಯ ಸಮಯದಲ್ಲಿ "ನಾನು ಭಾರತದ ಪ್ರಧಾನಿ" ಎಂಬುದನ್ನು ಒತ್ತಿ ಒತ್ತಿ ಹೇಳಿದರು. ಅವರು ಮಾಡಿದ ಮೊದಲ ಪ್ರತಿಪಾದನೆಯನ್ನು ಸ್ವಲ್ಪ ಹಿಂದೆ ಹಾಸ್ಯ ಮಾಡಿದ್ದೇನೆ. ಆದರೆ ಆಕೆ ಅದನ್ನು ಪುನರಾವರ್ತಿಸುತ್ತಿದ್ದಾರೆ.

**ಮೇ ೧೮, ೧೯೬೯ ದೆಹಲಿ**

ನಾನು ಈಗ ಹೊರಟು ಹೋಗುತ್ತಿರುವುದರಿಂದ ರಾಷ್ಟ್ರಾಧ್ಯಕ್ಷರ ಪ್ರಶ್ನೆಯನ್ನು ಈಗ ಪೂರ್ಣಗೊಳಿಸಲಾಗಿದೆ, ರಷ್ಯಾದ ವೃತ್ತಪತ್ರಿಕೆಗಳು ಅಥವಾ ಅವುಗಳಲ್ಲಿ ಒಂದು ನಮ್ಮ ಸ್ನೇಹಿತ ಪ್ರಭಾರ ಅಧ್ಯಕ್ಷ ಗಿರಿಯನ್ನು ಸ್ವಾಗತಿಸಿರುವುದು ಗಮನಾರ್ಹ. ನಿಸ್ಸಂದೇಹವಾಗಿ ಅವರು ಪರವಾಗಿಲ್ಲ, ಆದರೆ ಅವರಿಗೆ ತುಂಬಾ ವಯಸ್ಸಾಗಿದೆ. ರಾಷ್ಟ್ರಪತಿ ಭವನವು ಇನ್ನೊಂದು ಶವ ಮೆರವಣಿಗೆಯನ್ನು ಹೊಂದಬಹುದೆಂದು ಸ್ನೇಹಿತರು ಹಾಸ್ಯವಾಗಿ ಟೀಕೆ ಮಾಡುತ್ತಾರೆ. ಪ್ರಧಾನಿಯು ಒಂದು ಆಟವನ್ನು ಆಡುತ್ತಿದ್ದಾರೆ ಮತ್ತು ರಷ್ಯದ ಕೈಗಳಿಗೆ ಬೀಳುತ್ತಿದ್ದಾರೆ ಎಂಬುದು ಎಲ್ಲರ ಅಭಿಪ್ರಾಯ, ಕಾದುನೋಡೋಣ.

**ಜೂನ್ ೨೨, ೧೯೬೯ ದೆಹಲಿ**

ಕಾರ್ಯಕಾರಿ ಸಮಿತಿಯ ಸುಮಾರು ಹತ್ತು ಜನರು ನನ್ನ ನಿವಾಸಕ್ಕೆ ಬಂದರು. ನನ್ನ ಮನೆಯಲ್ಲಿ ಬೆಳಗಿನ ಉಪಾಹಾರವನ್ನು ಮಾಡಿದರು. ನಂತರ ಆರ್ಥಿಕ ನೀತಿಯ ಮೇಲೆ ತಯಾರಿಸಬೇಕಾದ ಕರಡನ್ನು ಚರ್ಚಿಸಿದೆವು. ಸುಬ್ರಹ್ಮಣ್ಯಂ, ಸಂಜೀವಯ್ಯ, ಜಗಜೀವನರಾಂ, ಆತುಲ್ಯ, ಫಕ್ರುದ್ದೀನ್ ಆಲಿ, ಕಾರ್ಯದರ್ಶಿಗಳು ಭಾಗವಹಿಸಿದರು. ನಂತರ ಮೊರಾರ್ಜಿ ಭಾಯಿ ಬಂದರು. ಭೂ ಸುಧಾರಣೆಗಳು, ಕುಡಿಯುವ ನೀರು, ಸೆಕೆಂಡರಿ ಮಟ್ಟದವರೆಗೆ ಉಚಿತ ಶಿಕ್ಷಣ ಮುಂತಾದ ವಿಷಯಗಳ ಬಗ್ಗೆ ನಾವು ಗಮನ ಕೇಂದ್ರೀಕರಿಸಬೇಕೆಂದು ತೀರ್ಮಾನಿಸಿದೆವು. ಕೃಷಿಯ ಜೊತೆಯಲ್ಲಿ ಗೃಹ ಕೈಗಾರಿಕೆಗಳು

ಮತ್ತು ಕೃಷಿ ಆಧಾರಿತ ಕೈಗಾರಿಕೆ ಹಾಗೂ ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಶ್ರಮ ತೀವ್ರವಾಗಿ ಬೇಕಾಗಿರುವುದರಿಂದ ಅವುಗಳಿಗೆ ಆದ್ಯತೆ ನೀಡಬೇಕು. ಗ್ರಾಮೀಣ ಪ್ರದೇಶಗಳಲ್ಲಿ ಕನಿಷ್ಠ ಮಜೂರಿಯನ್ನು ನಿಗದಿಪಡಿಸುವುದಕ್ಕೂ ಆದ್ಯತೆ ನೀಡಬೇಕು. ಸಿ.ಎಸ್. ಮತ್ತು ಸಾದಿಕ್ ಆಲಿ ಕರಡನ್ನು ತಯಾರಿಸಬೇಕು. ಅದಾದ ತಕ್ಷಣವೇ ಪ್ರಧಾನಿಗಳ ಮನೆಗೆ ಹೋದೆವು ತೆಲಂಗಾಣ ಮತ್ತು ಆಕೆಯ ಜಪಾನಿನ ಭೇಟಿ ಮುಂತಾದುವುಗಳನ್ನು ಚರ್ಚಿಸಿದೆವು. ಆಕೆ ಬಹಳ ನಮ್ರವಾಗಿ ಮತ್ತು ಸ್ನೇಹ ಪರವಾಗಿದ್ದರೂ ಒಂದು ಸಲವಾದರೂ ರಾಷ್ಟ್ರಾಧ್ಯಕ್ಷರ ಚುನಾವಣೆಯನ್ನು ಪ್ರಸ್ತಾಪಿಸಲಿಲ್ಲ.

ವಿಶ್ರಾಂತಿಯಾದ ನಂತರ ತೆಲಂಗಾಣದ ನಾಯಕರುಗಳಾದ ರಾಮಚಂದ್ರ ರೆಡ್ಡಿ, ಚೊಕ್ಕರಾವ್ ಮತ್ತು ಪುನಃ ಡಾ. ಚಂದ್ರಾರೆಡ್ಡಿ ಮತ್ತು ಕೊಂಡಾ ಬಾಪೂಜಿಯವರುಗಳು ನನ್ನನ್ನು ಪ್ರತ್ಯೇಕವಾಗಿ ಜೋಡಿ ಜೋಡಿಯಾಗಿ ನೋಡಿ ತೆಲಂಗಾಣದ ಸಮಸ್ಯೆ ಬಗ್ಗೆ ಚರ್ಚಿಸಿದರು. ಎಲ್ಲರಿಗೂ ಮುಖ್ಯಮಂತ್ರಿ ಬ್ರಹ್ಮಾನಂದರೆಡ್ಡಿಯವರು ಹೋಗಿ ಆ ಜಾಗದಲ್ಲಿ ರಾಷ್ಟ್ರಾಧ್ಯಕ್ಷರ ಆಳ್ವಿಕೆ ಬರಬೇಕೆಂದಿದ್ದಿತು. ಮೊದಲಿಬ್ಬರೂ ಹೆಚ್ಚು ವಿವೇಚನೆಯುಳ್ಳವರಾಗಿದ್ದು ಪ್ರತ್ಯೇಕ ತೆಲಂಗಾಣಕ್ಕೆ ವಿರೋಧವಾಗಿದ್ದರು. ಆದರೆ ಕೊನೆಯವರು ಎರಡಕ್ಕೂ ಒತ್ತಾಯಿಸಿದ್ದು ಕ್ರಿಮಿನಲ್ ಲಾಯರುಗಳಂತೆ ವಾದಿಸುತ್ತಿದ್ದರು. ಅವರು ಮೊರಾರ್ಜಿಯವರನ್ನು ಕಂಡ ನಂತರ ನಾಳೆ ಬೆಳಿಗ್ಗೆ ಅವರನ್ನು ಭೇಟಿ ಮಾಡುವುದಾಗಿ ಹೇಳಿದೆನು. ನಂತರ ರಾತ್ರಿ ೧೦.೩೦ ರ ಹೊತ್ತಿಗೆ ಪ್ರಧಾನಿಯವರೊಂದಿಗೆ ಮಾತನಾಡಿದೆ. ಈ ಮುಖಂಡರ ಜೊತೆಯಲ್ಲಿ ಮಾತನಾಡಿದ ಬಗ್ಗೆ ಹೇಳಿ ಈ ಸಮಸ್ಯೆಯನ್ನು ಮೊರಾರ್ಜಿಯವರಿಗೆ ವಹಿಸಬೇಕೆಂದು ಹೇಳಿದೆ. ಇದರಲ್ಲಿ ಚವ್ಹಾಣರನ್ನ ಸೇರಿಸಬೇಕೆಂದು ಅವರಿಗೆ ಇಷ್ಟವಿತ್ತು. ಯಾವುದೇ ಪ್ರತ್ಯೇಕ ರಾಜ್ಯವಿಲ್ಲ ಮತ್ತು ರಾಷ್ಟ್ರಾಧ್ಯಕ್ಷರ ಆಳ್ವಿಕೆಯನ್ನು ಯೋಚಿಸುವ ಹಾಗೇ ಇಲ್ಲ ಎಂಬುದು ಸ್ಪಷ್ಟವಾಗಿದ್ದು, ಬೇರೆ ಏನಾದರೂ ಇದ್ದರೆ ನಾವು ಪೂರ್ಣವಾಗಿ ಯೋಚಿಸಬಹುದೆಂದು ಅವರು ಹೇಳಿದರು.

### ಜುಲೈ ೧೬, ೧೯೬೯

ಭದ್ರಾವತಿಯ ವಿಶ್ರಾಂತಿ ಗೃಹದಲ್ಲಿ ೧೧ ಗಂಟೆವರೆಗೆ ವಿಶ್ರಾಂತಿ ಪಡೆದು ಮತ್ತೂ ಅಲ್ಲೇ ೨ ಗಂಟೆಗಳನ್ನು ಕಳೆದೆ. ಒಂದು ಗಂಟೆಗಿಂತ ಹೆಚ್ಚು ಕಾಲ ಮದುವೆ ಬಗ್ಗೆ ಚರ್ಚಿಸಿದೆ. (ಪೂರಿಯದು - ಪೂರ್ಣಿಮಾ) - ನನ್ನ ಹೆಂಡತಿಗೆ ನಿಸ್ಸಂದೇಹವಾಗಿ ವ್ಯಾಕುಲವಿದ್ದರೂ ಆಕೆಗೆ ಅತ್ಯುತ್ತಮ ಅಳಿಯ ಬೇಕು. ಆಕೆಯ ಆಶೋತ್ತರಗಳು ಬಹಳ ಎತ್ತರದವು ಮತ್ತು ಮಿತಿಮೀರಿದವು. ಎಲ್ಲ ಹೆಣ್ಣುಮಕ್ಕಳು ಗಂಡನ ಮನೆಗೆ ಹೋಗುವ ಹಾಗೇ ಅಥವಾ ಹೋಗಿರುವುದರಿಂದ ಪೂರಿಯನ್ನು ತನ್ನ ಜೊತೆಯಲ್ಲಿಯೇ ಇಟ್ಟುಕೊಳ್ಳುವ ಆಸೆ. ಬೆಂಗಳೂರಿನಲ್ಲಿರುವುದು ಆಕೆಗೆ ಸಾಕಾಗಿದೆ ಅಥವಾ ದೆಹಲಿ ಹವಾಗುಣ ಹೇಗೇ

ಇರಲಿ ಆಕೆ ನನ್ನ ಜೊತೆಯಲ್ಲಿ ಇರಲು ಇಷ್ಟ ಪಡುತ್ತಾಳೆ. ಮಧ್ಯಾಹ್ನದ ಊಟದ ನಂತರ ವಿಮಾನ ನಿಲ್ದಾಣಕ್ಕೆ ಹೊರಟೆನು.

ಪ್ರಧಾನಿಯು ಮೊರಾರ್ಜಿ ಭಾಯಿಯವರ ಖಾತೆಯನ್ನು ತೆಗೆದುಕೊಂಡು ಹಣಕಾಸನ್ನು ತನ್ನಲ್ಲಿಯೇ ಉಳಿಸಿಕೊಂಡಿದ್ದಾರೆಂದು ಹೈದರಾಬಾದು ವಿಮಾನ ನಿಲ್ದಾಣದಲ್ಲಿ ತಿಳಿಯಿತು. ಇದು ದುರದೃಷ್ಟ ಎಂದು ಪತ್ರಿಕಾವರದಿಗಾರರಿಗೆ ತಿಳಿಸಿದೆನು. ನಾವು ಅಲ್ಲಿಂದ ಬಿಡುವುದಕ್ಕೆ ಮುಂಚೆ ಮೊರಾರ್ಜಿಯವರು ತಮ್ಮ ರಾಜೀನಾಮೆಯನ್ನು ಕಳುಹಿಸಿದ್ದಾರೆಂಬ ಇತ್ತೀಚಿನ ಸಮಾಚಾರವನ್ನು ನನಗೆ ತಿಳಿಸಲಾಯಿತು. ಅದು ಸ್ವಾಭಾವಿಕ. ಆಕೆಯು ಬುದ್ಧಿವಂತಿಕೆಯಿಲ್ಲದೆ ತಿಳಿಗೇಡಿತನದಿಂದ ವರ್ತಿಸಿದ್ದಾರೆಂದು ನನಗನಿಸುತ್ತದೆ.

ದೆಹಲಿಯಲ್ಲಿ ವರದಿಗಾರರಿಗೆ ಹೈದರಾಬಾದಿನಲ್ಲಿ ನಾನು ಹೇಳಿದಂತೆಯೇ ಹೇಳಿದೆನು. ಈ ಹೊಸ ಸಮಸ್ಯೆಯನ್ನು ಪರಿಗಣಿಸಲು ಕಾರ್ಯಕಾರಿ ಸಮಿತಿ ಅಥವಾ ಪಾರ್ಲಿಮೆಂಟಿನ ಮಂಡಳಿಯನ್ನು ಕರೆಯಲಾಗುತ್ತದೆಯೆ ಎಂಬ ಪತ್ರಕರ್ತನ ಪ್ರಶ್ನೆಗೆ ಮುಂದಿನ ಹೆಜ್ಜೆಗೆ ಸಮಯ ತೆಗೆದುಕೊಳ್ಳುತ್ತದೆ ಎಂದು ಹೇಳಿದೆನು. ಮೊರಾರ್ಜಿಯವರನ್ನು ಸಂಪರ್ಕಿಸಿ ನಾಳೆ ಅವರನ್ನು ನೋಡುವೆನೆಂದು ಹೇಳಿದೆನು. ಪ್ರಧಾನಿಯವರ ಈ ಕಾರ್ಯದ ಬಗ್ಗೆ ಹೆಚ್ಚಿನ ಜನರು ವ್ಯಾಕುಲರಾಗಿದ್ದಾರೆ. ವಿಶೇಷವಾಗಿ ಮಹಿಳಾ ಸದಸ್ಯರೂ ಸೇರಿದಂತೆ ದೊಡ್ಡ ಸಂಖ್ಯೆಯ ಜನರು ಪ್ರಧಾನಿಯವರ ವಿರುದ್ಧವಾಗಿದ್ದಾರೆ. ಏಕೆಂದರೆ ಇದು ಪಕ್ಷದಲ್ಲಿ ಸಮಸ್ಯೆಗಳನ್ನು ಸೃಷ್ಟಿಸುತ್ತದೆ.

**ಆಗಸ್ಟ್ ೫, ೧೯೬೯ ದೆಹಲಿ**

ಸ್ವತಂತ್ರ ಪಕ್ಷದ ಒಬ್ಬ ನಾಯಕರು ಬೆಳಗಿನ ಉಪಹಾರಕ್ಕೆ ನಮ್ಮ ಮನೆಗೆ ಬಂದರು. ಡಾಲ್‌ಹೌಸಿಯ ನಂತರ (ನನ್ನ ಆರೋಗ್ಯದ ಕಾರಣ ನಾವಿಬ್ಬರೂ ಹಿಮಾಲಯದಲ್ಲಿ ಡಾಲ್‌ಹೌಸಿಯಲ್ಲಿ ತಂಗಿದ್ದೆವು ) ಕಾರ್ಯತಃ ಪ್ರತಿದಿನ ಅತುಲ್ಯ ಬರುತ್ತಿದ್ದಾರೆ. ಅವರಿಗೆ ಒಳ್ಳೆಯ ಸ್ವಾಗತ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ನನ್ನ ಮನೆಗೆ ಯಾರು ಬಂದಿದ್ದರೆಂದು ತಿಳಿಯಲು ಕುತೂಹಲವಿದೆಯೆ? ತ್ಯಾಗಿ ಮತ್ತು ಇತರರು ಬಂದರು, ಚುನಾವಣೆ ಅಥವಾ ಮತದಾನದ ಬಗ್ಗೆ ನಾನು ಮಾತಾಡಲೇ ಇಲ್ಲ. ಏಕೆಂದರೆ ಇತರ ಅತಿಥಿಗಳ ಮುಂದೆ ನನ್ನ ಶೋಧನೆಯು ಇಷ್ಟವಾಗುವುದಿಲ್ಲ. ಡಾ. ಕೇಸ್ಕರ್ ಸಹ ಬಂದರು. ೨ನೇ ತಾರೀಕು ಸಂಜೆ ಪ್ರಾರಂಭಿಸಿದ ಕಾಗದಗಳಿಗೆ ರುಜು ಹಾಕುವ ಕೆಲಸವು ಮುಗಿಯಿತು. ನಾನು ೪೦೦೦ ಪತ್ರಗಳಿಗೆ ಸಹಿ ಹಾಕಬೇಕಾಗಿತ್ತು. ನನ್ನ ರುಜು ಹಾಕುವುದು ಶೀಘ್ರವಾಗಿತ್ತು, ಏಕೆಂದರೆ ನಾನು ಒಂದು ಗಂಟೆಗೆ ೬೦೦ ಪತ್ರಗಳಿಗೆ ಸಹಿ ಹಾಕುತ್ತಿದ್ದೆ.

ದೆಹಲಿಯ ಹೊರಗಿದ್ದ ಇತರ ಪಕ್ಷಗಳ ನಾಯಕರುಗಳನ್ನು ದೂರವಾಣಿಯ ಮೂಲಕ ಸಂಪರ್ಕಿಸುತ್ತಿದ್ದೆ. ಜಮ್ಮು ಮತ್ತು ಕಾಶ್ಮೀರದ ಮುಖ್ಯಮಂತ್ರಿ ಮಹಮ್ಮದ್ ಸಾದಿಕ್

ಅಥವಾ ಭಕ್ಷಿ ಗುಲಾಂ ಮಹಮ್ಮದ್‌ಅನ್ನು ಸಂಪರ್ಕಿಸಿದೆ. ನಮ್ಮ ಅಭ್ಯರ್ಥಿ ಶ್ರೀ ಸಂಜೀವರೆಡ್ಡಿಯವರಿಗೆ ಎಲ್ಲ ರೀತಿಯ ಸಹಕಾರ ನೀಡುವುದಾಗಿ ಭರವಸೆಯಿತ್ತರು. ಪ್ರಧಾನಿಗಳಿಂದಾಗಿ ಅವರು ನಮ್ಮ ಜೊತೆಯಲ್ಲಿ ಪೂರ್ಣವಾಗಿ ಇರುವುದಿಲ್ಲ ಎಂದು ಜನರು ಸಂದೇಹಿಸುತ್ತಾರೆ. ಎರಡೂ ನಿಜವೆಂದು ನಾನು ನಂಬುವುದಿಲ್ಲ. ಭಕ್ಷಿಯವರು ಈ ದಿನ ಬೆಳಿಗ್ಗೆ ಬಂದು ಒಬ್ಬರ ವಿನಾ ಉಳಿದ ಜಮ್ಮು ಮತ್ತು ಕಾಶ್ಮೀರದ ಎಲ್ಲಾ ಎಂ.ಪಿ.ಗಳು ನಮ್ಮ ಪರವಾಗಿ ಮತ ಹಾಕುತ್ತಾರೆ ಎಂದು ಹೇಳಿದರು.

ಸಂಜೆ ೭ ಘಂಟೆಗೆ ಪಾರ್ಲಿಮೆಂಟರಿ ಮಂಡಳಿ ಸೇರಿ ಸ್ವಲ್ಪವೇ ಚರ್ಚೆಯಾದ ನಂತರ ಮೊರಾರ್ಜಿಯವರ ಸಲಹೆಯಂತೆ ಮೈಸೂರಿನ ರಾಜ್ಯಪಾಲ ಪಾಠಕ್‌ರವರನ್ನು ಉಪರಾಷ್ಟ್ರಪತಿಯಾಗಿ ಒಪ್ಪಿಕೊಳ್ಳಲಾಯಿತು. ಪ್ರಧಾನಿಯವರು ಅನುಕೂಲವಾದ ಮನೋಭಾವವಿರುವಂತೆ ಕಂಡಿತು. ಇತರ ಹೆಸರುಗಳನ್ನು ಹೇಳಲಾಯಿತು. ಆದರೆ ಇದು ಹೆಚ್ಚು ಪ್ರಚಲಿತವಾಗಿತ್ತು. ನಾನು ಮತ್ತು ಪ್ರಧಾನಿ ಇಬ್ಬರೂ ಬೆಂಗಳೂರಿಗೆ ಫೋನ್ ಮಾಡಿ ೮-೩೦ರಲ್ಲಿ ಪಾಠಕ್‌ರವರ ಒಪ್ಪಿಗೆ ಪಡೆದೆವು. ಇದನ್ನು ವೃತ್ತಪತ್ರಿಕೆಗಳಿಗೆ ಬಹಿರಂಗಪಡಿಸಿದೆನು. ಸ್ಪೀಕರ್ ಮತ್ತು ಡೆಪ್ಯೂಟಿ ಸ್ಪೀಕರ್‌ರವರ ಸ್ಥಾನಕ್ಕೆ ಕೂಡ ಆಕೆ ಸಮಾಲೋಚಿಸಿದರು. ಧಿಲ್ಲಾನ್ ಮತ್ತು ಭಂಡಾರಿಯವರನ್ನು ಒಪ್ಪಿಕೊಳ್ಳಬೇಕೆಂದಾಯಿತು. ನಾನು ಕೆ.ಎಚ್. ಪರವಾಗಿ ವಾದ ಮಾಡಿದರೂ ಅವರು ದುರಾಗ್ರಹದಿಂದ ಅದನ್ನು ಒಪ್ಪಿಕೊಳ್ಳಲಿಲ್ಲವೆಂದು ಕಾಣುತ್ತದೆ.

**ಆಗಸ್ಟ್ ೧೦, ೧೯೬೯ ದೆಹಲಿ**

ಇಡೀ ದಿವಸ ನಾನು ಕಾಂಗ್ರೆಸ್ಸಿಗರು ಮತ್ತು ಕಾಂಗ್ರೆಸ್ಸೇತರರ ಜೊತೆಯಲ್ಲಿ ದೆಹಲಿಯಲ್ಲಿ ಮತ್ತು ಹೊರಗಡೆ ಫೋನಿನಲ್ಲಿ ಮತ್ತು ವೈಯಕ್ತಿಕವಾಗಿ ಮಾತನಾಡುತ್ತಿದ್ದೆ. ಜಾಕಿರ್ ಹುಸೇನ್‌ರವರ ವಿಷಯದಲ್ಲಿ ನಮ್ಮ ಅಭ್ಯರ್ಥಿಗೆ ಮತ ಹಾಕಬೇಕೆಂದು ಕಾಂಗ್ರೆಸ್ಸಿನ ಸದಸ್ಯರಿಗೆ ಆಕೆ ಮನವಿ ಮಾಡಿಕೊಂಡಂತೆ ಪಕ್ಷದ ಒಳಗೆ ಮತ್ತು ಹೊರಗೆ ಆಗುತ್ತಿರುವ ಬೆಳವಣಿಗೆಯ ದೃಷ್ಟಿಯಲ್ಲಿ ಪ್ರಧಾನಿಯು ಒಂದು ಹೇಳಿಕೆ ನೀಡುವುದು ಆಗತ್ಯ ಎಂದು ನಾನು ಆಕೆಗೆ ಬರೆದಿದ್ದೇನೆ. ಆಕೆ ಹಾಗೆ ಮಾಡುತ್ತಾರೆಂದು ನನಗೆ ಖಚಿತವಿಲ್ಲ. ಆಕೆ ಬಹು ಎತ್ತರದಲ್ಲಿ ಹಾರಾಡುತ್ತಿದ್ದಾರೆ. ಆಕೆಯ ಜಂಭ ಮತ್ತು ದುರಹಂಕಾರಕ್ಕೆ ಮಿತಿಯೇ ಇಲ್ಲವೆಂದು ಕಾಣುತ್ತದೆ. ಬೀಳುವುದಕ್ಕೆ ಮುಂಚೆ ಜಂಭ ಜಾಸ್ತಿಯಾಗುತ್ತದೆ. ಕಳೆದ ಒಂದು ವಾರದಿಂದ ಟ್ಯಾಕ್ಸಿ ಚಾಲಕರು ಮತ್ತು ರಿಕ್ಷಾವಾಲಾಗಳು, ವಿದ್ಯಾರ್ಥಿಗಳು ಮುಂತಾದವರು ಆಕೆಯ ಮನೆಯ ಹತ್ತಿರ ಹೋಗಿ ಪ್ರದರ್ಶನ ಮಾಡುತ್ತಿದ್ದಾರೆ; ಆಕೆಯೊಬ್ಬಳೇ ಬಡವರಿಗಾಗಿ ಕೆಲಸ ಮಾಡುವವರು ಮತ್ತು ಕೆಲವೇ ವ್ಯಕ್ತಿಗಳ ವಿರುದ್ಧ ಕೂಡ ಅವರು ಭಾಷಣ ಮಾಡುತ್ತಿದ್ದಾರೆ. ಅಪ್ಪಿತಪ್ಪಿಯೂ ಕಾಂಗ್ರೆಸ್ಸಿನ ಹೆಸರನ್ನು ಕೂಡ ಹೇಳುತ್ತಿಲ್ಲ.

**ಜನವರಿ ೨೨, ೧೯೭೦** **ದೆಹಲಿ**

ಮಾಮೂಲಿನಂತೆ ಅನೇಕ ಜನ ಸಂದರ್ಶಕರು ಮೊರಾರ್ಜಿಯವರ ಮನೆಯಲ್ಲಿ ಸೇರಿ ಚುನಾವಣಾ ಆಯುಕ್ತರ ಕಚೇರಿಯಲ್ಲಿ ಬಾವುಟದ ಬಗ್ಗೆ ಯಾವ ಹೇಳಿಕೆಯನ್ನು ಮಂಡಿಸಬೇಕೆಂದು ಚರ್ಚಿಸುತ್ತಿದ್ದರು. ಶ್ರೀ ರಾಮರೆಡ್ಡಿಯವರಿಂದ ಚುನಾವಣಾ ಪ್ರಕರಣದ ಬಗ್ಗೆ ತಿಳಿದೆವು. ರಾಂರವರಿಗೆ ಜವಾಬು ಕಳುಹಿಸಿದೆ.

ಸಾಯಂಕಾಲ ೬ ಗಂಟೆಗೆ ಕಾಂಗ್ರೆಸ್ ಕಚೇರಿಗೆ ಹೋಗಿ ಜಗಜೀವನರಾಂ ಮತ್ತು ನನ್ನ ಜವಾಬಿನ ಬಗ್ಗೆ ಬಂದು ವಾರ್ತಾಗೋಷ್ಠಿಯನ್ನು ನಡೆಸಿದೆ. ಸಂಜೆ ಐದು ಗಂಟೆಗೆ ಪ್ರತಿಪಕ್ಷ ಕಾಂಗ್ರೆಸ್ಸಿನ ಕಾರ್ಯದರ್ಶಿ ಶರ್ಮ (ಎಸ್. ಡಿ.) ಬಂದಾಗ ಜೆ. ಎಂ. ರಸ್ತೆಯ ನಮ್ಮ ಕಚೇರಿಯ ಗೇಟಿನಲ್ಲಿ ಅವರನ್ನು ಹೋಗಲು ಹೇಳಲಾಗಿ ಅವರು ಹೊರಟುಹೋದರು ಎಂದು ಆಮೇಲೆ ತಿಳಿಯಿತು.

**ಫೆಬ್ರುವರಿ ೧೦, ೧೯೭೦** **ದೆಹಲಿ**

ಹಳೇ ದೆಹಲಿಯಲ್ಲಿ ಊಟ ಮಾಡಿದೆ. ಶ್ರೀ ಜೈನ್ ಒಬ್ಬ ವ್ಯಾಪಾರಿ ಅಭ್ಯಾಗತರಾಗಿದ್ದರು. ಪ್ರಮುಖವಾದ ವ್ಯಾಪಾರಿಗಳು ಅಲ್ಲಿದ್ದರು. ವ್ಯಾಪಾರ, ಕೈಗಾರಿಕೆ, ಉತ್ಪಾದನೆ ಮುಂತಾದುವುಗಳ ಬಗ್ಗೆ ಕಾಂಗ್ರೆಸ್ಸಿನ ನೀತಿಯ ಬಗ್ಗೆ ಅವರಿಗೆ ಭಾಷಣ ಮಾಡಿದೆ. ಅವರಿಗೆ ಸಂತೋಷವಾಗಿತ್ತು. ಕಾಂಗ್ರೆಸ್ಸಿನ ಪರವಾಗಿ ನಿಲ್ಲುವುದಾಗಿ ಅವರು ವಾಗ್ದಾನ ಮಾಡಿದರು.

ಉಚ್ಚತಮ ನ್ಯಾಯಾಲಯವು ಬ್ಯಾಂಕು ರಾಷ್ಟ್ರೀಕರಣವನ್ನು ಹೊಡೆದು ಹಾಕಿತು ಎಂದು ತಿಳಿಯಿತು. ಅದು ಪಕ್ಷಪಾತ ಮುಂತಾದವುಳ್ಳದ್ದಾಗಿರುವುದರಿಂದ ಅಸಿಂಧುವೆಂದು ಘೋಷಿಸಿತು. ಇದು ಪ್ರಧಾನಿಗೆ ಒಂದು ಹೊಡೆತವಾಗಿದ್ದಿತ್ತು. ಅವರು ಬಹಳ ಆತುರಪಟ್ಟರು. ಮೊರಾರ್ಜಿಭಾಯಿಯವರನ್ನು ವಜಾ ಮಾಡುವುದಕ್ಕೆ ಹಾಗೆ ಮಾಡಿರುವುದು. ಯೋಚಿಸಿದರೆ ಅದೊಂದು ಕೊಳಕು ಕೆಲಸ.

ಚರಣಸಿಂಗರ ಪರವಾಗಿ ಗುಪ್ತಾರವರು ರಾಜೀನಾಮೆ ನೀಡಿದರು. ನಾವು ಬಿ.ಕೆ.ಡಿ, ಜನಸಂಘ, ಎಸ್. ಎಸ್. ಪಿ ಮತ್ತು ಪಿ.ಎಸ್.ಪಿ.ಗಳನ್ನೊಳಗೊಂಡ ನಮ್ಮಿಶ್ರ ಸರಕಾರ ರಚಿಸಬೇಕೆಂದು ಲಕ್ನೋದಿಂದ ರಾಮ್ ಸುಭಾಗ್ ಸಿಂಗ್‌ರವರಿಂದ ತಿಳಿದೆ. ಪ್ರಧಾನಿಗೆ ಇನ್ನೊಂದು ಪೆಟ್ಟು. ಇಡೀ ದಿನ ಲಕ್ನೋದವರ ಜೊತೆಯಲ್ಲಿ ಸಮಾಲೋಚಿಸುತ್ತಿದ್ದೆ. ಪತ್ರಕರ್ತರು ನನ್ನನ್ನು ಕಂಡು ನನ್ನ ಅಭಿಪ್ರಾಯವನ್ನು ಪಡೆದರು.

**ಫೆಬ್ರುವರಿ ೧೩, ೧೯೭೦** **ದೆಹಲಿ-ಮುಂಬಯಿ**

ಸಾಯಂಕಾಲ ೫ ಗಂಟೆಗೆ ಮುಂಬೈಗೆ ಹೊರಟೆ. ವಿಮಾನದಲ್ಲಿ ನನ್ನ ಜೊತೆಯಲ್ಲಿ ಮೊರಾರ್ಜಿಭಾಯಿ, ಅಶೋಕ್‌ಮೆಹ್ತಾ ಇದ್ದರು. ಮುಂಬಯಿಯನ್ನು ಸಂಜೆ ೭ ಗಂಟೆಗೆ

ತಲುಪಿದೆ. ಎಂದಿನಂತೆ ವಿಮಾನ ನಿಲ್ದಾಣದಲ್ಲಿ ಉಳಿದೆ. ಶ್ರೀ ಪೂಣಚ್ಚರವರೂ ಕೂಡ ವಿಮಾನದಲ್ಲಿದ್ದರು. ಅವರು ಮತ್ತು ಅಶೋಕ್‌ಮೆಹ್ತಾ ವಿಮಾನ ನಿಲ್ದಾಣದಲ್ಲಿ ಉಳಿದರು. ಎಸ್.ಕೆ. ಪಾಟೀಲ್ ಮತ್ತು ಕೆಲವು ಪದಾಧಿಕಾರಿಗಳು ಮತ್ತು ಇತರರು ಬಂದು ನಮ್ಮನ್ನು ಸ್ವಾಗತಿಸಿದರು. ಪಾಟೀಲರು ಸಂಸ್ಥೆಯ ಬಗ್ಗೆ ಮಾತನಾಡಿದರು. ಇಡೀ ದೇಶವನ್ನು ಕೆಟ್ಟ ಪರಿಸ್ಥಿತಿಗೆ ತಳ್ಳಿದ ಪ್ರಧಾನಿಯ ವಿರುದ್ಧ ಖಾರವಾಗಿ ದೂರಿದರು, ಆಕೆಯು ಕೆಟ್ಟದಾಗಿ ನಡೆದುಕೊಳ್ಳುತ್ತಿದ್ದಾರೆಂಬುದು ನಿಜ ಮತ್ತು ಆಕೆಯು ಯಾವುದನ್ನೂ ಪವಿತ್ರವೆಂದು ತಿಳಿದಂತೆ ಕಾಣುವುದಿಲ್ಲ. ಆಕೆಗೆ ಅಧಿಕಾರವಿದೆ, ಆಕೆಯೇ ಒಳಸಂಚುಗಾರ್ತಿ ಮತ್ತು ಡಿ.ಪಿ. ಮಿಶ್ರರಂತಹ ತಜ್ಞ, ಸಲಹೆಗಾರರು ಆಕೆಗಿದ್ದಾರೆ. ನಾವು ಕಷ್ಟಪಟ್ಟು ಕೆಲಸ ಮಾಡಬೇಕು.

**ಫೆಬ್ರವರಿ ೧೯, ೧೯೭೦**

ಅಸಾಂಪ್ರದಾಯಿಕ ಕಾರ್ಯಕಾರಿ ಸಮಿತಿ ಸಭೆಯನ್ನು ಬೆಳಿಗ್ಗೆ ೧೦ ಗಂಟೆಯಿಂದ ಮಧ್ಯಾಹ್ನ ೧ ಗಂಟೆಯವರೆಗೆ ನಡೆಸಲಾಯಿತು. ಉತ್ತರ ಪ್ರದೇಶ ಮತ್ತು ಬಿಹಾರದ ಪರಿಸ್ಥಿತಿಯನ್ನು ಹಾಗೂ ನಾಳೆ ದಿವಸ ಪ್ರಾರಂಭವಾಗುವ ಪಾರ್ಲಿಮೆಂಟಿನಲ್ಲಿ ಒಂದು ಪಕ್ಷವಾಗಿ ಏನು ಮಾಡಬೇಕೆಂದು ಚರ್ಚಿಸಿದೆವು. ಉತ್ತರ ಪ್ರದೇಶ ಮತ್ತು ಬಿಹಾರ್‌ನಲ್ಲಿ ಕೇಂದ್ರವು ಹಸ್ತಕ್ಷೇಪ ಮಾಡಿದೆ ಹಾಗೂ ಪ್ರಜಾಪ್ರಭುತ್ವವಲ್ಲದ ರೀತಿಯಲ್ಲಿ ನಡೆದುಕೊಳ್ಳುವಂತೆ ರಾಜ್ಯಪಾಲರುಗಳಿಗೆ ಒತ್ತಾಯ ಮಾಡಲಾಗಿದೆ. ಇಡೀ ರಾಜಕೀಯ ವಾತಾವರಣವನ್ನು ಪ್ರಧಾನಿಯು ಕಲುಷಿತಗೊಳಿಸುತ್ತಿದ್ದಾರೆಂಬುದು ದುರಾದೃಷ್ಟ ವಿಚಾರ. ಆಕೆಯನ್ನು ಎಷ್ಟು ಬೇಗ ತೆಗೆದು ಹಾಕಿದರೆ ಆಗ ನಮ್ಮ ದೇಶದ ಪ್ರಜಾಪ್ರಭುತ್ವಕ್ಕೆ ಕ್ಷೇಮ. ಅದು ಅಷ್ಟು ಸುಲಭವಲ್ಲ.

**ಫೆಬ್ರವರಿ ೨೩, ೧೯೭೦** **ದೆಹಲಿ**

ಬೆಳಗಿನ ಫಲಹಾರವಾದ ಮೇಲೆ ಮತ್ತು ಕೆಲವು ಸ್ನೇಹಿತರನ್ನು ಭೇಟಿ ಮಾಡಿದ ಮೇಲೆ ಕಚೇರಿಗೆ ಹೋದೆ. ಬಿಹಾರದ ಮಹೇಶ್‌ಬಾಬು ನನ್ನನ್ನು ಭೇಟಿ ಮಾಡಿ ರಾಜ್ಯಸಭೆ ಸದಸ್ಯತ್ವಕ್ಕೆ ಅಭ್ಯರ್ಥಿಯಾಗಿ ನಿಲ್ಲುವ ತಮ್ಮ ಆಶಯವನ್ನು ವ್ಯಕ್ತಿಪಡಿಸಿದರು. ಪಾರ್ಲಿಮೆಂಟರಿ ಬೋರ್ಡಿನ ಇತರ ಸದಸ್ಯರುಗಳನ್ನು ಭೇಟಿ ಮಾಡಲು ಹೇಳಿದೆನು.

ಪಾರ್ಲಿಮೆಂಟು ಈ ದಿನದಿಂದ ಕೆಲಸ ಮಾಡಲು ಪ್ರಾರಂಭಿಸಿದೆ. ಏನು ನಡೆಯುತ್ತಾ ಇರುತ್ತದೆ ಎಂಬುದನ್ನು ಕುತೂಹಲದಿಂದ ಗಮನಿಸಬೇಕು. ದಿವಸಗಳುರುಳಿದಂತೆ ಈ ಮಹಿಳಾ ಪ್ರಧಾನಿಯು ಹೆಚ್ಚು ಹೆಚ್ಚು ತತ್ವರಹಿತ ಮತ್ತು ಅನಪೇಕ್ಷೀಯರು ಆಗುತ್ತಿರುವುದರಿಂದ ಆಕೆಯನ್ನು ತೆಗೆದುಹಾಕಲು ನಿರಂತರವಾಗಿ ಪ್ರಯತ್ನಿಸಬೇಕು.

ಗಡಿ ಪ್ರಶ್ನೆಯ ಬಗ್ಗೆ ಮೈಸೂರಿನ ಒಂದು ನಿಯೋಗವು ನನ್ನನ್ನ ಕಂಡಿತು. ಪ್ರಧಾನಿಗೆ

ಸ್ಪಷ್ಟವಾಗಿ ಮಹಾರಾಷ್ಟ್ರಕ್ಕೆ ಸಹಾಯ ಮಾಡಬೇಕೆಂದಿದೆ. ಆದರೆ ಎಲ್ಲಾ ಪಕ್ಷಗಳಿಗೂ ಸೇರಿದ ಎಂ.ಪಿ ಗಳು ಈ ವಿಷಯದಲ್ಲಿ ಆಕೆಯ ವಿರುದ್ಧವಾಗಿದ್ದಾರೆ. ಈ ನಿಯೋಗದಲ್ಲಿ ಮಂತ್ರಿ ರಾಚಯ್ಯ, ಕೌಜಲಗಿ, ಸದಸ್ಯರಾದ ಮಲ್ಲಿಮಠ್, ಹಳ್ಳಿಕೇರಿ ಇವರು, ರಾಷ್ಟ್ರಾಧ್ಯಕ್ಷರು ಪ್ರಧಾನಿ ಮೊರಾರ್ಜಿ ಮತ್ತು ರಾಮ್ ಸುಭಾಗ್‌ರನ್ನು ಭೇಟಿ ಮಾಡಿದರು. ಕಾಮರಾಜರು ನನಗೆ ದೂರವಾಣಿಯಲ್ಲಿ ೩-೩-೭೦ ರಂದು ಬರುವೆನೆಂದು ತಿಳಿಸಿದರು. ಭುವನೇಶ್ವರದಿಂದ ಪುರಿಯವರಿಂದ ಫೋನ್ ಬಂದಿದ್ದು ಒರಿಸ್ಸಾದಲ್ಲಿ ಪರಿಸ್ಥಿತಿ ಉತ್ತಮಗೊಳ್ಳುತ್ತಿವೆ ಎಂದು ಹೇಳಿದರು. ಪ್ರಧಾನ ಕಾರ್ಯದರ್ಶಿಗಳು ನನ್ನನ್ನು ಭೇಟಿ ಮಾಡಿ ಅನೇಕ ವಿಷಯಗಳನ್ನು ಚರ್ಚಿಸಿದರು.

**ಫೆಬ್ರವರಿ ೨೫, ೧೯೭೦ ದೆಹಲಿ-ಬೆಂಗಳೂರು**

ವೀರೇಂದ್ರ ಪಾಟೀಲ್ ಮತ್ತು ಇತರರು, ಗಡಿಸಮಸ್ಯೆಯ ಬಗ್ಗೆ ವಿಧಾನ ಸಭೆಯಲ್ಲಿ ಆದ ಚರ್ಚೆಯನ್ನು ತಿಳಿಸಿದರು. ಆ ಸಮಸ್ಯೆಯು ತುಂಟ ಪ್ರಧಾನಿಯು ಸೃಷ್ಟಿಸಿದುದಾಗಿದೆ. ಎಲ್ಲ ಕಡೆಯಲ್ಲೂ ಆಕೆ ಅನಾವಶ್ಯಕವಾಗಿ ಸಮಸ್ಯೆಗಳನ್ನು ಸೃಷ್ಟಿಸುತ್ತಿದ್ದಾರೆ. ಅವರನ್ನು ಓಡಿಸಿಬಿಡಬೇಕು. ಭಾರತದಲ್ಲಿ ಸುರಕ್ಷತೆ ಮತ್ತು ಪ್ರಜಾಪ್ರಭುತ್ವಕ್ಕೆ ಇದೊಂದೇ ಮಾರ್ಗ.

**ಮಾರ್ಚ್ ೪. ೧೯೭೦ ದೆಹಲಿ**

ನಿನ್ನೆ ದಿನ ಉಚ್ಚತಮ ನ್ಯಾಯಾಲಯದಲ್ಲಿ ಮೊರಾರ್ಜಿಭಾಯಿಯವರನ್ನು ಸಾಕ್ಷಿಯಾಗಿ ವಿಚಾರಿಸಲಾಗಿ ಅವರ ಸಾಕ್ಷಿಯನ್ನು ಪತ್ರಿಕೆಗಳಲ್ಲಿ ಪೂರ್ಣವಾಗಿ ವರದಿ ಮಾಡಲಾಗಿದೆ. ಇದು ಒಂದು ವಾರದಿಂದ ನಡೆಯುತ್ತಿರುವ ರಾಷ್ಟ್ರಾಧ್ಯಕ್ಷರ ಚುನಾವಣೆಯ ಪ್ರಕರಣಕ್ಕೆ ಸಂಬಂಧಪಟ್ಟದ್ದು.

ಅದೇ ಪ್ರಕರಣದಲ್ಲಿ ೧೦-೪೫ ರಿಂದ ೧೨-೧೫ ರವರೆಗೆ ನನ್ನನ್ನು ಒಂದು ಸಾಕ್ಷಿಯಾಗಿ ವಿಚಾರಣೆ ಮಾಡಲಾಯಿತು. ನನ್ನ ಸಾಕ್ಷಿಯು ತೃಪ್ತಿಕರವಾಗಿತ್ತೆಂದು ಕಾಣುತ್ತದೆ. ನಾನು ಯಾವುದೇ ಉತ್ಪ್ರೇಕ್ಷೆಯಲ್ಲಿ ತೊಡಗಲಿಲ್ಲ. ನಿರೀಕ್ಷಿಸಿದಂತೆ ಸತ್ಯವನ್ನೇ ಹೇಳಿದೆನು. ನನ್ನ ಹೆಚ್ಚಿನ ಸಾಕ್ಷಿಯು ನನ್ನ ಮತ್ತು ಪ್ರಧಾನಿಯ ನಡುವೆ ಮತ್ತು ಅವರ ಇಬ್ಬರು ಕಟ್ಟಾ ಅನುಯಾಯಿಗಳಾದ ಜಗಜೀವನರಾಂ ಮತ್ತು ಎಫ್. ಎ. ಅಹ್ಮದ್‌ರ ನಡುವೆ ನಡೆದ ಪತ್ರವ್ಯವಹಾರದ ಸುತ್ತ ಸುತ್ತಿತು.

ಸಾಯಂಕಾಲ ಮೊರಾರ್ಜಿ ಭಾಯಿಯವರಲ್ಲಿಗೆ ಹೋಗಿ ಚಿಹ್ನೆ ಪ್ರಕರಣವನ್ನು ಚರ್ಚಿಸಿ ಏನು ಮಾಡಬೇಕೆಂದು ಯೋಚಿಸಿದೆವು. ಶ್ರೀ ಶಾಂತಿಲಾಲ್ ಶಾ ಕೂಡ ಹಾಜರಿದ್ದರು. ಅವರು ಸಹಾಯಕರಾಗಿದ್ದು ಉತ್ತಮ ಸಲಹೆಗಳನ್ನು ನೀಡಿದರು. ಮೊರಾರ್ಜಿಭಾಯಿ ಸರ್ವಾಧಿಕಾರಿ ತರಹದವರು ಮತ್ತು ಅವರಿಗೆ ಕಾನೂನಿನ ಬಗ್ಗೆ ತಿಳಿದಿಲ್ಲದಿದ್ದರೂ ಶಾರವರ ಜೊತೆಯಲ್ಲಿ ಸಹಮತವಿಲ್ಲದಿರುವುದೇ ಅವರಿಗೆ ಖುಷಿ. ಇದನ್ನು ಸರಿಯಾಗಿ

ನಡೆಸದಿದ್ದುದರ ಬಗ್ಗೆ ರಾಮ್ ಸುಭಾಗ್ ಸಿಂಗ್‌ರ ಬಗ್ಗೆ ಪುನಃ ಉಲ್ಲೇಖಿಸಿದರು. ಮೊರಾರ್ಜಿಯವರು ವಿಶಾಲ ಹೃದಯಿಯಲ್ಲ ಮತ್ತು ಇತರರು ಮೇಲೆ ಬರುವುದನ್ನು ಅವರು ಸಹಿಸುವುದಿಲ್ಲ. ಕಾಮರಾಜ್ ಮತ್ತು ಸಂಜೀವರೆಡ್ಡಿ ಬಂದು ಮಧ್ಯಾಹ್ನ ಸ್ವಲ್ಪ ಸಮಯ ಕಳೆದರು.

**ಮಾರ್ಚ್ ೬, ೧೯೭೦** **ದೆಹಲಿ**

ಕಾಮರಾಜರು ಬಂದರು ಮತ್ತು ಈ ಮನಸೋ ಇಚ್ಛೆ ಹೆಂಗಸಿನಿಂದ ಉಂಟಾದ ದುರದೃಷ್ಟ ಪರಿಸ್ಥಿತಿಗೆ ಸಂಬಂಧಿಸಿದಂತೆ ಅನೇಕ ವಿಷಯಗಳನ್ನು ಚರ್ಚಿಸಿದರು.

ಮಧ್ಯಾಹ್ನ ಮತ್ತು ಸಾಯಂಕಾಲ ಲಾಯರುಗಳು ಬಂದು ಚಿಹ್ನೆ ಪ್ರಕರಣದ ಬಗ್ಗೆ ಚರ್ಚಿಸಿದರು. ಎಐಸಿಸಿ ಕಚೇರಿಯಿಂದ ಮಾಹಿತಿ ಬೇಕಾಗಿತ್ತು. ಅದನ್ನು ಪಡೆದುಕೊಳ್ಳಲು ಅವರಿಗೆ ಹೇಳಿದೆ. ಶ್ರೀಯುತರುಗಳಾದ ಸಾದಿಕ್‌ಭಾಯಿ ಮತ್ತು ಮಿಶ್ರರವರು ಕೂಡ ಹಾಜರಿದ್ದರು.

**ಮಾರ್ಚ್ ೭, ೧೯೭೦** **ದೆಹಲಿ**

ಬೆಳಿಗ್ಗೆ ಮತ್ತು ಸಾಯಂಕಾಲ ಕಾಮರಾಜರು ಮತ್ತ ಸಂಜೀವರೆಡ್ಡಿ ಬಂದು ಅನೇಕ ರಾಜ್ಯಗಳ ಮತ್ತು ಅವುಗಳಲ್ಲಿನ ಪರಿಸ್ಥಿತಿಯನ್ನು ಚರ್ಚಿಸುತ್ತ ಸ್ವಲ್ಪ ಜಾಸ್ತಿಯೇ ಸಮಯ ಕಳೆದರು. ಆಕೆಯನ್ನು ತೆಗೆದು ಹಾಕಲು ಅರ್ಹಳಾಗಿದ್ದರೂ ಈಕೆಯನ್ನು ಸುಮ್ಮನೆ ತೆಗೆದು ಹಾಕುವುದರ ಬದಲು ಎಲ್ಲಾ ರಾಜ್ಯಗಳ ಹೆಚ್ಚಿನ ಜನರನ್ನು ಸಂಪರ್ಕಿಸಿ, ಪ್ರತಿರಾಜ್ಯದ ಹಾಗೂ ದೇಶದಲ್ಲಿನ ಆತಂಕ ಪರಿಸ್ಥಿತಿಯನ್ನು ವಿವರಿಸಬೇಕಾದುದು ಅಗತ್ಯವಾಗಿದೆ. ಆಸ್ತಿಯ ಹಕ್ಕುಗಳಿಗೆ ಸಂಬಂಧಿಸಿದ ವಿಷಯಗಳು, ಈ ಮಿತಿಮೀರಿದ ರಾಷ್ಟ್ರೀಕರಣ, ಕಮ್ಯೂನಿಸ್ಟರು ಮತ್ತು ರಷ್ಯಾದ ಕಡೆಗೆ ಪ್ರಧಾನಿಯವರ ಸ್ಪಷ್ಟವಾದ ವಾಲುವಿಕೆ ಮುಂತಾದುವುಗಳನ್ನು ಅವರಿಗೆ ವಿವರಿಸಬೇಕು.

**ಮಾರ್ಚ್ ೧೧, ೧೯೭೦** **ದೆಹಲಿ**

ಬೆಳಿಗ್ಗೆ ೧೦-೩೦ಕ್ಕೆ ಸೇವಾದಳದ ಸಮ್ಮೇಳನವನ್ನು ಉದ್ಘಾಟಿಸಿದೆ. ಹೆಚ್ಚಿನ ರಾಜ್ಯಗಳ ಪ್ರತಿನಿಧಿಗಳು ಬಂದಿದ್ದಾರೆ. ಇಂಡಿಕೇಟ್ ಗುಂಪಿನ ವಿರುದ್ಧ ನಾನು ತುಂಬಾ ಖಾರವಾಗಿದ್ದೆನೆಂದು ಕಾಣುತ್ತದೆ. ಈ ಯುವಕ ಮತ್ತು ಯುವತಿಯರಾದ ಈ ಸಂಚಾಲಕರುಗಳಿಗೆ ಅಧಿಕಾರ ಅಥವಾ ರಾಜಕೀಯ ಪ್ರಭಾವದಿಂದ ಹೆದರಿಕೊಳ್ಳದೆ ನಂಬಿಕೆ, ಒಗ್ಗಟ್ಟು ಮತ್ತು ಶಿಸ್ತಿನಿಂದ ಕೆಲಸ ಮಾಡಬೇಕೆಂದು ಮನವಿ ಮಾಡಿಕೊಂಡೆ.

ನಾನು, ಕಾಮರಾಜ್, ಸಂಜೀವ್‌ರೆಡ್ಡಿ, ಅಶೋಕ್ ಮೆಹ್ತಾ ಮತ್ತು ಪಾಟೀಲರು ಮೊರಾರ್ಜಿಭಾಯಿ ಮನೆಯಲ್ಲಿ ಸೇರಿ ಭೂ ಸುಧಾರಣೆ ಕೃಷಿ, ಕೈಗಾರಿಕೆಗಳು ಮೂಲಭೂತ ಹಕ್ಕುಗಳು ಮುಂತಾದವುಗಳ ಅನೇಕ ಸಮಸ್ಯೆಗಳ ಬಗ್ಗೆ ನಾವು ತೆಗೆದುಕೊಳ್ಳಬೇಕಾದ

ನಿಲುವಿನ ಬಗ್ಗೆ ಚರ್ಚಿಸಿದೆವು. ನಾವು ದೆಹಲಿಯಲ್ಲಿ ಈ ತಿಂಗಳ ೨೪ ಮತ್ತು ೨೫ ರಂದು ಸೇರಬೇಕು. ಈ ಮಧ್ಯದಲ್ಲಿ ಚರ್ಚೆಗಳನ್ನು ಮುಂದುವರಿಸಬೇಕೆಂದು ಒಪ್ಪಿಗೆಯಾಯಿತು. ಇದು ಮಧ್ಯಾಹ್ನ ೪ ಗಂಟೆಯಿಂದ ಸಂಜೆ ೫-೩೦ರವರೆಗೆ ಮುಂದುವರಿಯಿತು.

**ಮಾರ್ಚ್ ೧೨, ೧೯೭೦ ದೆಹಲಿ**

ಮೊನ್ನೆ ದಿನ ಎಂ.ಪಿ. ಗಳ ಮನೆಯಲ್ಲಿ ಕಾಮರಾಜರು ಡಿ.ಪಿ. ಮಿಶ್ರರನ್ನು ಭೇಟಿ ಮಾಡಿ ರಾಜಕೀಯವನ್ನು ಚರ್ಚಿಸಿದರೆಂದು ಕಾಣುತ್ತದೆ. ನಿನ್ನೆ ದಿನದ ಪತ್ರಿಕೆಗಳಲ್ಲಿ ಆಶ್ಚರ್ಯದ ಸಂಗತಿ ಪ್ರಕಟವಾಗಿತ್ತು. ರಾಜಕೀಯವಾಗಿ ಹೊರಹಾಕಲ್ಪಟ್ಟಿರುವ ಮಿಶ್ರರನ್ನು ಕಾಮರಾಜರು ಭೇಟಿ ಮಾಡಬೇಕಾಗಿರಲಿಲ್ಲವೆಂದು ಕಾಣುತ್ತದೆ. ನೆನ್ನೆ ಗೊಂದಲವನ್ನುಂಟು ಮಾಡುವುದೇ ಮಿಶ್ರರ ಪ್ರಯತ್ನವಾಗಿತ್ತು. ಹೆಚ್ಚಿಗೆ ಏನೂ ನಡೆಯಲಿಲ್ಲ ಮತ್ತು ರಾಜಕೀಯವನ್ನು ಚರ್ಚಿಸುವುದಕ್ಕೆ ನಿರಾಕರಿಸಿದರೆಂದು ಕಾಮರಾಜರು ಹೇಳಿದರು. ಇದರಿಂದ ನನಗೆ ಸಂತೋಷವಾಗಿಲ್ಲವೆಂದು ಮಿಶ್ರರಿಗೆ ನಾನು ಹೇಳಿದೆನು. ಕಾಮರಾಜರು ಬಿಚ್ಚು ಮನಸ್ಸಿನವರಂತೆ ಕಾಣಲಿಲ್ಲ. ಏನೂ ಆಗಲಿಲ್ಲವೆಂಬುದರ ಬಗ್ಗೆ ನನಗೆ ಖಾತ್ರಿಯಾಯಿತು.

**ಮಾರ್ಚ್ ೧೬, ೧೯೭೦ ದೆಹಲಿ**

ನನಗೆ, ಸಾದಿಕ್ ಭಾಯಿ ಮತ್ತು ಎಸ್. ಎಂ. ಮಿಶ್ರರಿಗೆ ಅಶೋಕ್ ಮೆಹ್ತಾರವರು ಒರಿಸ್ಸಾದಲ್ಲಿ ಏನು ಮಾಡಿದರೆಂದು ಹೇಳಿದರು. ಈಗ ಅಲ್ಲಿರುವ ಮಂತ್ರಿ ಮಂಡಲವನ್ನು ಉರುಳಿಸುವುದನ್ನು ತಪ್ಪಿಸಿದುದಕ್ಕೆ ನನಗೆ ಸಂತೋಷವಾಗಿದೆ.

ಇಂಡಿಕೇಟಿಗೆ ಪ್ರತಿಯೊಂದು ಸರ್ಕಾರವನ್ನು ಮತ್ತು ಸ್ಥಿರವಾಗಿರುವ ಸರಕಾರಗಳನ್ನು ಉರುಳಿಸುವುದರಲ್ಲಿ ಮಾತ್ರ ಆಸಕ್ತಿಯಿದ್ದಿತು. ಅಸಹ್ಯ ಹೆಂಗಸು ಅಷ್ಟೊಂದು ಸ್ವಪ್ರತಿಷ್ಠೆ ಮತ್ತು ನಿರಂಕುಶಧಿಕಾರಿ, ಆಕೆಗೇನಾದರೂ ನೀತಿ ನಿಯಮವಿದೆಯೆ? ಅಧ್ಯಕ್ಷರು ಎನಿಸಿಕೊಂಡ ಜಗಜೀವನರಾಂರವರು ಗುಜರಾತಿಗೆ ಹೋಗಿ ಈಗಿನ ಸರಕಾರವನ್ನು ಉರುಳಿಸುವುದರಲ್ಲಿ ಸ್ವತಂತ್ರ ಪಕ್ಷಕ್ಕೆ ಸಹಾಯಮಾಡುವುದಾಗಿಯೂ ಸ್ವತಂತ್ರದ ಜೊತೆಯಲ್ಲಿ ಸಹಯೋಗ ಹೊಂದಿರುವ ಪ್ರತಿ ಸರ್ಕಾರವು ಸುಭದ್ರವಾಗಿ ಉಳಿಯಲು ಸಹಾಯ ಮಾಡುವೆನೆಂದು ಹೇಳುತ್ತಾರೆ. ಅವರೋ ಅಥವಾ ನಾವೋ ಅನ್ಯಾಯದ ಜನರು.

**ಮೇ ೧೭, ೧೯೭೦ ದೆಹಲಿ**

ನಾವು ಏನು ಮಾಡಬೇಕೆಂಬುದರ ಬಗ್ಗೆ ಪುನಃ ಸಭೆ ಸೇರಿದೆವು. ಮೈಸೂರು ವಿಧಾನಸಭೆಯ ಮೂರು ಉಪಚುನಾವಣೆಗಳಲ್ಲಿ ಸೋಲಾಗಿದ್ದ ಮೈಸೂರಿನ ಚುನಾವಣೆಗಳು ದೇಶದ

ಎಲ್ಲಾ ಭಾಗಗಳಲ್ಲಿನ ಜನರಿಗೆ ನಿರಾಸೆಯ ಭಾವನೆಯನ್ನುಂಟು ಮಾಡಿದೆ. ಮೈಸೂರು ಇಂದಿರಾ ವಿರೋಧಿಯ ಅತ್ಯಂತ ಬಲರಾಜ್ಯವಾಗಿದ್ದು ಕಾಂಗ್ರೆಸಿನ ಪರ ಬಲವಾಗಿತ್ತೆಂಬುದು ನಿರೀಕ್ಷಿಸಬಹುದಾಗಿತ್ತು. ಆದರೆ ಇಲ್ಲಿ ಹಣವು ತನ್ನ ಪ್ರಭಾವವನ್ನು ಬೀರಿದೆ. ಆದರೆ ನಾವೂ ಕೂಡ ತುಂಬ ಸಂತೃಪ್ತರಾಗಿದ್ದೆವೆಂದು ಕಾಣುತ್ತದೆ. ಏನೇ ಆಗಲಿ, ಇದು ನಾವು ನಿರ್ಲಕ್ಷದಿಂದರ ಕೂಡದು ಎಂಬ ಪಾಠವನ್ನು ಕಲಿಸಿದೆ. ಎಲ್ಲಾ ಏಳು ಎಂ.ಎಲ್.ಸಿ.ಗಳು ಸ್ಥಳೀಯ ಸಂಸ್ಥೆಗಳ ಮತದಾನದ ಕ್ಷೇತ್ರಗಳಲ್ಲಿನ ಜಯವು ನಮ್ಮ ನಷ್ಟವನ್ನು ಗಣನೀಯವಾಗಿ ಸರಿಪಡಿಸಿದೆಯೆಂಬುದು ನಿಜ.

**ಮೇ ೧೯, ೧೯೭೦ ದೆಹಲಿ-ಕಮಲನಯನ ಬಜಾಜರ ಔತಣಕೂಟ ರಾತ್ರಿ ೭-೩೦**

ಕಮಲನಯನ ಬಜಾಜರ ಔತಣಕೂಟಕ್ಕೆ ಹೋಗಿದ್ದೆ. ಅದರಲ್ಲಿ ಎಲ್ಲಾ ಪಕ್ಷದವರೂ ಆಹ್ವಾನಿತರಾಗಿದ್ದರು. ಮೊರಾರ್ಜಿಯವರು ಅಲ್ಲಿದ್ದರು. ಹಳೆಯ ನಾಯಕರ ನಿವೃತ್ತಿಯ ಬಗ್ಗೆ ನನ್ನ ಹೇಳಿಕೆ ಮತ್ತು ಇತರ ಹೇಳಿಕೆಗಳ ಬಗ್ಗೆ ಅವರಿಗೆ ತೃಪ್ತಿಯಿರಲಿಲ್ಲ. ಅವರಷ್ಟೊಂದು ಸೂಕ್ಷ್ಮಮತಿಗಳಾಗಬೇಕೆಂಬುದು ನನಗೆ ತಿಳಿಯದು. ಅವರು ಪ್ರಧಾನ ಮಂತ್ರಿಗಳಾಗಬೇಕೆಂಬ ನಿರಂತರ ಭಾವನೆ ನನಗಿದೆ. ಅವರಿಗೇ ನಂಬಿಕೆಯಿಲ್ಲದಿದ್ದರೂ ಪ್ರಧಾನಿಯವರು ಸಂಜೀವರೆಡ್ಡಿಯವರ ಮೇಲೆ ಪ್ರಭಾವ ಬೀರುತ್ತಿರಬಹುದೆಂದೂ ಅವರು ಸ್ವಲ್ಪ ಮೆತ್ತಗಾಗಿರುವರೆಂದು ಹೇಳಿದರು. ನಿಜ. ಆ ಹೆಂಗಸು ಏನನ್ನೂ ಮಾಡಬಲ್ಲರು. ಆಕೆಯ ಕುತಂತ್ರಕ್ಕೆ ರೆಡ್ಡಿಯವರು ಬಲಿಯಾಗುತ್ತಾರೆಂದು ನನಗೆ ನಂಬಿಕೆಯಿಲ್ಲ.

**ಜೂನ್, ೭, ೧೯೭೦ ದೆಹಲಿ**

ಸಂಜೆ ೬ ಗಂಟೆಯಲ್ಲಿ ಪತ್ರಿಕಾ ಗೋಷ್ಠಿಯಿತ್ತು. ಜಾತೀಯ ಪ್ರಶ್ನೆ, ಹರಿಜನರ ಮತ್ತು ನಕ್ಸಲೈಟರ ಬಗ್ಗೆ ನನ್ನ ಭಾವನೆಗಳನ್ನು ವಿವರಿಸಿದೆನು. ಜೊತೆಗೆ ಪ್ರಧಾನಿಯು ರಾಜಕೀಯ ಉದ್ದೇಶಗಳಿಗೆ ಹೇಗೆ ಪ್ರತಿಯೊಂದು ಅವಕಾಶವನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆಂದು ವಿವರಿಸಿದೆ. ಈ ಎಲ್ಲಾ ತಿಂಗಳುಗಳಲ್ಲಿ ಆಕೆ ಸಕಾರಾತ್ಮಕವಾಗಿ ಅಥವಾ ರಚನಾತ್ಮಕವಾಗಿ ಏನನ್ನೂ ಮಾಡಿಲ್ಲ. ಇತರ ಪಕ್ಷಗಳ ಜೊತೆಯಲ್ಲಿ ಒಪ್ಪಂದದ ಬಗ್ಗೆ ನಿರ್ದಿಷ್ಟ ಉತ್ತರವನ್ನು ನಾನು ತಪ್ಪಿಸಿದೆ. ಆದರೆ ಜಾತ್ಯತೀತ ಪಕ್ಷಗಳು ಕಾಂಗ್ರೆಸ್ ಇಲ್ಲಿಯವರೆಗೆ ಆಚರಿಸಿದ ಮತ್ತು ವಿವರಿಸಿದ ಜಾತ್ಯತೀತತೆಗೆ ಬದ್ಧರಾಗಿದ್ದರೆ ಅವರಿಗೆ ಸಹಕರಿಸಲು ಸಿದ್ಧ ಎಂದು ಹೇಳಿದೆ.

**ಜೂನ್ ೧೨, ೧೯೭೦ ಹುಬ್ಬಳ್ಳಿ**

ಇಂಡಿಕೇಟಿನ ಕಾರ್ಯಕಾರಿ ಸಮಿತಿಯು ನೆನ್ನೆಯಿಂದ ಸಭೆ ನಡೆಸುತ್ತಿರುವುದರಿಂದ ಆರ್. ಎಸ್. ಎಸ್. ಮತ್ತು ಶಿವಸೇನೆಯನ್ನು ನ್ಯಾಯಬಾಹಿರ ಸಂಸ್ಥೆಗಳೆಂದು ಘೋಷಿಸುವ ಬಗ್ಗೆ ಅವರು ಮಾತನಾಡುತ್ತಿರುವುದು ಗಮನಾರ್ಹ. ನಕ್ಸಲೈಟ್‌ಗಳು ಮತ್ತು ಸಿ.ಪಿ.

ಎಂ. ಬಗ್ಗೆ ಮಾತನಾಡಲು ಅವರಿಗೆ ಏನೂ ಇಲ್ಲ. ಈಗವರು ಜಾತೀಯತೆಯ ವಿರುದ್ಧ ಹೋರಾಟ ಎಂಬ ಒಂದು ಹೊಸವಿಷಯವನ್ನು ಕಂಡುಕೊಂಡಿದ್ದಾರೆ. ಆದರೂ ಪ್ರಧಾನಿಯು ಎರಡು ಪ್ರಮುಖ ಸಮುದಾಯಗಳ ನಡುವೆ ದೇಶಕ್ಕೆ ತಪ್ಪು ತಿಳುವಳಿಕೆಯನ್ನುಂಟು ಮಾಡಿ ಕೆಟ್ಟುದನ್ನು ಮಾಡುತ್ತಿದ್ದಾರೆ. ದೇಶದಲ್ಲಿ ಗೊಂದಲವನ್ನುಂಟು ಮಾಡುವುದೇ ಆಕೆಯ ಇಚ್ಛೆಯೆಂದು ನನಗನಿಸುತ್ತದೆ. ಆಕೆ ಎರಡನೇ ಸುಕಾರ್ನೋ ಆಗುತ್ತಿದ್ದಾರೆ.

**ಜುಲೈ ೬, ೧೯೭೦** **ದೆಹಲಿ**

ನಮ್ಮ ಮನೆಯಲ್ಲಿ ಬೆಳಗಿನ ಉಪಹಾರ ಮತ್ತು ಸ್ನೇಹಿತರನ್ನು ಭೇಟಿ ಮಾಡಿದ ಮೇಲೆ ಮೊರಾರ್ಜಿಭಾಯಿಯವರಲ್ಲಿಗೆ ಹೋದೆ. ಅವರು ನನ್ನ ಮನೆಗೆ ಬರುತ್ತೇನೆಂದು ಹೇಳಿದರೂ ಅವರು ಹಿರಿಯರಾದ್ದರಿಂದ ನಾವು ಅವರಲ್ಲಿಗೆ ಹೋಗಬೇಕೆಂದು ನಿರೀಕ್ಷಿಸುತ್ತಾರೆಂದು ನನಗೆ ಗೊತ್ತು. ಯಾವಾಗಲೂ ನಾನೇ ಅವರಲ್ಲಿಗೆ ಹೋಗುತ್ತೇನೆ. ನಾವು ಈಗಿನ ಸ್ಥಿತಿಯ ಬಗ್ಗೆ ಮತ್ತು ಸ್ವತಂತ್ರ, ಪಿ.ಎಸ್.ಪಿ., ಬಿ.ಎಸ್.ಪಿ ಮತ್ತು ಜನಸಂಘದ ನಾಯಕರುಗಳ ಬಗ್ಗೆ ಮಾತನಾಡಿದೆವು. ಇಲ್ಲಿಯವರೆಗೆ ನಮ್ಮ ಮಾತುಕತೆಗಳು ಫಲಪ್ರದವಾಗಿದ್ದಿತೆಂದು ಹೇಳಬಹುದು. ಪ್ರಧಾನಮಂತ್ರಿಯು ಖಂಡಿತವಾಗಿ ಭಾರತದ ಸ್ವಾತಂತ್ರ ಮತ್ತು ಪ್ರಜಾಪ್ರಭುತ್ವಕ್ಕೆ ಅಪಾಯಕಾರಿಯಾಗಿರುವುದರಿಂದ ಆಕೆಯು ಹೋಗಬೇಕೆಂಬುದು ಎಲ್ಲರ ಒಳ ಭಾವನೆ ಇದೆ.

ಸಾಯಂಕಾಲ ೫ ಗಂಟೆಗೆ ಮಾಮೂಲಿನಂತೆ ಕಚೇರಿಗೆ ಹೋದೆ. ಕಮಲಾದೇವಿ ಮತ್ತು ವಿಜಯ ಬ್ಯಾಂಕಿನ ಪ್ರತಿನಿಧಿ ಶೆಟ್ಟಿಯನ್ನು ಭೇಟಿ ಮಾಡಿದೆ. ಮಲ್ಯ ಕಟ್ಟಡಕ್ಕೆ ಸಾಲ ಪಡೆಯುವುದರ ಬಗ್ಗೆ ಚರ್ಚಿಸಿದೆನು.

ಪತ್ರಿಕಾಗೋಷ್ಠಿಯು ಸಂಜೆ ೬ ಗಂಟೆಗೆ ಇತ್ತು. ನಮ್ಮ ರಾಜಕೀಯ ಠರಾವನ್ನು ವಿವರಿಸಿದೆ. ನಮ್ಮ ವಿರುದ್ಧ ಹೇಳಲು ಪ್ರಧಾನಿ ಮತ್ತು ಆಕೆಯ ಗುಂಪಿಗೆ ಹೀಗೆ ಹೇಳಲು ಏನೂ ಇಲ್ಲ ಎಂಬುದನ್ನು ವಿವರಿಸಿದೆನು. ಇದು ಸುಮಾರಾಗಿ ಸಫಲವಾದ ಪತ್ರಿಕಾಗೋಷ್ಠಿಯೆಂದು ನಾನು ಹೇಳಲೇಬೇಕು. ಅನೇಕ ಪತ್ರಕರ್ತರು ಸ್ಪಷ್ಟವಾಗಿ ಸಿಂಡಿಕೇಟಿನಿಂದ ಪ್ರಚೋದಿಸಲ್ಪಟ್ಟವರಾಗಿದ್ದರು. ಇಂತಹ ಸಭೆಯನ್ನು ಹೆಚ್ಚಾಗಿ ನಡೆಸುವುದು ಅಗತ್ಯ. ಜಿಪಿಸಿಸಿ ಕಾರ್ಯದರ್ಶಿ ಬಂದರು, ಅವರಿಗೆ ನಮ್ಮ ಠರಾವನ್ನು ವಿವರಿಸಿದೆನು. ಚಿಹ್ನೆಯ ಪ್ರಕರಣದಲ್ಲಿ ನಮ್ಮ ವಕೀಲರಾದ ಶ್ರೀ ಶರ್ಮ ಬಂದರು. ಸಂಜೀವರೆಡ್ಡಿಯವರು ಬಂದು ನನ್ನ ಕಣ್ಣಿನ ಬಗ್ಗೆ ವಿಚಾರಿಸಿದರು.

ಜುಲೈ ೧೮, ೧೯೭೦

ನಿಗದಿಪಡಿಸಿದಂತೆ ನೆನ್ನೆದಿನ ಬೆಳಿಗ್ಗೆ ಮೊರಾರ್ಜಿಭಾಯಿಯವರ ಮನೆಗೆ ಹೋದೆನು. ಇಂದಿರಾ ಸರ್ಕಾರವನ್ನು ಉಚ್ಚಾಟಿಸಲು ಪ್ರಜಾಪ್ರಭುತ್ವ ಪಕ್ಷಗಳು ಸಹಕರಿಸುವ ಬಗ್ಗೆ ಎಐಸಿಸಿ ಠರಾವನ್ನು ಅನುಷ್ಠಾನಗೊಳಿಸಬೇಕೆಂಬುದರಲ್ಲಿ ತುಂಬಾ ಆಸಕ್ತಿಯುಳ್ಳವರಾಗಿದ್ದರು. ಆ ಪ್ರಜಾಪ್ರಭುತ್ವ ವಿರೋಧಿ ಸರಕಾರವನ್ನು ಉಚ್ಚಾಟಿಸುವ ಅವರ ಆಶಯವನ್ನು ನಾನು ಶ್ಲಾಘಿಸಿದರೂ ಅಷ್ಟೇ ರೀತಿಯಲ್ಲಿ ಅವರು ಅಧಿಕಾರದಲ್ಲಿರುವ ಆಸೆಯಿಂದ ಪ್ರೇರಿತರಾಗಿದ್ದಾರೆಂಬುದು ನನ್ನ ಭಾವನೆ. ಅವರು ಪ್ರಧಾನಿಯಾಗಲು ಅಷ್ಟು ಕುತೂಹಲ, ನಿರೀಕ್ಷೆ ಮತ್ತು ಆತುರದಿಂದಿರುವುದು ಸ್ಪಷ್ಟವಾಗಿ ಕಂಡುಬರುತ್ತಿರುವುದು ದುರದೃಷ್ಟಕರ. ಅವರು ಅಷ್ಟು ಬಹಿರಂಗವಾಗಿ ತಮ್ಮ ಮನಸ್ಸನ್ನು ಪ್ರಕಟಿಸಬಾರದಾಗಿತ್ತು. ಅಲ್ಲದೆ ಅವರಿಗೆ ಅಧಿಕಾರದಲ್ಲಿ ಆಸೆಯಿಲ್ಲ ಎಂದು ಪ್ರಕಟಿಸಬೇಕೆಂದು ನಾನು ಆಸೆಪಡುತ್ತೇನೆ. ಅದು ನಮ್ಮ ಪ್ರಯತ್ನಕ್ಕೆ ತುಂಬಾ ಉತ್ಸಾಹವನ್ನು ತುಂಬುತ್ತದೆ. ಅಧಿಕಾರಕ್ಕೆ ಆಸೆ ಇಲ್ಲದಿರುವ ಭಾರತದಲ್ಲಿ ಯಾವುದೇ ನಾಯಕನನ್ನ ಯಾವುದೆ ಪಕ್ಷದಲ್ಲಿ ಕಂಡುಹಿಡಿಯುವುದು ಕಷ್ಟ. ಈ ಒಂದು ಕಾರಣವೇ ಈ ದೇಶದಲ್ಲಿ ಇಡೀ ರಾಜಕೀಯ ವಾತಾವರಣವನ್ನು ಕಲುಷಿತಗೊಳಿಸಿದೆ. ಯಾವುದೇ ಪಕ್ಷದ ಭೇದವಿಲ್ಲದೆ ರಾಜಕೀಯ ಚಿಂತನಕಾರರು ನಮ್ಮನ್ನು ಕೀಳಾಗಿ ಕಾಣುತ್ತಾರೆ. ಈ ದುರ್ಬಲತೆಯೇ ಜನರಲ್ಲಿ ನಮ್ಮ ಬಗ್ಗೆ ಇರುವ ನಂಬಿಕೆಯನ್ನು ಅಲುಗಾಡಿಸಿ ಬಿಟ್ಟಿದೆ. ಈ ಹಂಬಲವು ಗಾಂಧಿ ತತ್ವ ವಿರೋಧಿ ಮತ್ತು ಹಳೆಯ ಜನರಲ್ಲಿ ಈ ರೀತಿಯ ಭಾವನೆ ಕಂಡುಬರುವುದು ಅವರ ಯೋಗ್ಯತೆಗೆ ತಕ್ಕುದಲ್ಲ.

ಜುಲೈ ೨೧, ೧೯೭೦ **ತಿರುಪತಿ ಸಮ್ಮೇಳನ**

ಬೆಟ್ಟದ ಮೇಲೆ ಬೆಳಗಿನ ಉಪಾಹಾರವಾದ ಮೇಲೆ ಬಾವಾ, ಅಬ್ರಹಾಂ ಸೇರಿದಂತೆ ಕೇರಳದ ಸುಮಾರು ಹನ್ನೆರಡು ನಾಯಕರುಗಳ ಜೊತೆಯಲ್ಲಿ ೪೫ ನಿಮಿಷಗಳ ಕಾಲ ಹಾಗು ಕಾಮರಾಜ್, ಸಂಜೀವರೆಡ್ಡಿ, ಗುರುಪಾದಸ್ವಾಮಿಯವರ ಜೊತೆಯಲ್ಲಿ ಮುಂಬರುವ ಚುನಾವಣೆಗಳಿಗೆ ಸಂಬಂಧಿಸಿದಂತೆ ಕೇರಳದ ಪರಿಸ್ಥಿತಿಯನ್ನು ಚರ್ಚಿಸಿದೆ. ಬೆಳವಣಿಗೆಯ ಬಗ್ಗೆ ನಮಗೆ ಆಗಾಗ್ಗೆ ತಿಳಿಸುತ್ತಿರಬೇಕೆಂದು ಹೇಳಲಾಯಿತು. ಅದು ಅತ್ಯಂತ ಜಟಿಲವಾದುದು. ಸಮ್ಮೇಳನದಲ್ಲಿ ಮೂರು ಠರಾವುಗಳನ್ನು ಅಂಗೀಕರಿಸಲಾಯಿತು. ಮುಖ್ಯವಾದ ಠರಾವು ಎ ಐ ಸಿ ಸಿ ಗೆ ಬೆಂಬಲಿಸುವುದಾಗಿದ್ದಿತು. ಇತರ ಎರಡು ಪ್ರಧಾನಿಯವರ ಮೈಸೂರು ಭೇಟಿ, ರಾಜ್ಯಗಳು ಮತ್ತು ಕೇಂದ್ರದಲ್ಲಿ ಪ್ರಧಾನಿಯ ಹಸ್ತಕ್ಷೇಪವಾಗಿದ್ದು ಕೇರಳವನ್ನು ಹೊರತುಪಡಿಸಲಾಗಿತ್ತು. ವೀರೇಂದ್ರಪಾಟೀಲರು ಮುಖ್ಯ ಠರಾವಿನ ಮೇಲೆ ಮಾತಾಡಿದರು, ಅವರ ಭಾಷಣ ಗೊಂದಲಮಯವಾಗಿತ್ತು. ಅವರ

ವರ್ತನೆಯಿಂದ ನಾನೇನೂ ಪ್ರಭಾವಿತನಾಗಲಿಲ್ಲ. ನಾವೆಲ್ಲ ಇಷ್ಟೆಲ್ಲ ವರ್ಷಗಳು ಹೋರಾಟಗಾರರಾಗಿದ್ದಂತೆ ಅವರು ಹೋರಾಟಗಾರರಲ್ಲ.

ಊಟವಾದ ಮೇಲೆ ಬೆಟ್ಟದ ಮೇಲೆ ವಿಶ್ರಾಂತಿ ಪಡೆದು ಮೊದಲೇ ವ್ಯವಸ್ಥೆಗೊಳಿಸಿದ್ದ 'ದೇವರ ದರ್ಶನಕ್ಕೆ' ದೇವಸ್ಥಾನಕ್ಕೆ ಹೋದೆವು. 'ದೊಡ್ಡವ್ಯಕ್ತಿಗಳಿಗೆ ದೇವರು ದರ್ಶನವನ್ನು ಕೊಡುವಂತೆ ಮಾಡುವುದು ಹೇಗೆಂದು ನನಗೆ ತಿಳಿಯದು. ಆಶ್ಚರ್ಯ. ಕಾಮರಾಜ್, ವೀರೇಂದ್ರ ಪಾಟೀಲ್, ಆಳ್ವ ಮುಂತಾದವರು ಹಾಜರಿದ್ದರು. ನನಗೆ ಇವುಗಳಲ್ಲಿ ಸ್ವಲ್ಪವೂ ನಂಬಿಕೆಯಿಲ್ಲ. ಆದರೆ ಈ ಪ್ರದರ್ಶನಗಳನ್ನು ರಾಜಕೀಯ ಉದ್ದೇಶಗಳಿಗೆ ಉಪಯೋಗಿಸಿಕೊಳ್ಳಲಾಗುತ್ತಿದೆ. ಇದು ಸರಿಯೇ ?

**ಜುಲೈ ೨೫, ೧೯೭೦ ಪಾರ್ಲಿಮೆಂಟರಿ ಬೋರ್ಡ್ ಸಭೆ ದೆಹಲಿ**

ಸಂಜೆ ೫ ಗಂಟೆಯ ಪಾರ್ಲಿಮೆಂಟರಿ ಬೋರ್ಡ್ ಸಭೆಯು ೮-೩೦ ರವರೆಗೆ ನಡೆಯಿತು. ಎಐಸಿಸಿ ಠರಾವಿನ ವಿರುದ್ಧ ತುಂಟುತನದ ಪ್ರಚಾರವು ಪರಿಣಾಮವುಂಟು ಮಾಡಿತು. ನಮ್ಮವರೇ ಅದರಿಂದ ತಪ್ಪು ದಾರಿಗೆಳೆಯಲ್ಪಟ್ಟರು ಮತ್ತು ಅದನ್ನು ಜಾತ್ಯತೀತ ತತ್ವದಿಂದ ದೂರ ಒಯ್ಯಿದ್ದಿತು. ಹೇಗೆಂದರೆ ಪ್ರಧಾನಿಯ ವಿಧಾನಗಳನ್ನು ಸೋಲಿಸುವುದಕ್ಕೆ ಪ್ರಜಾಪ್ರಭುತ್ವ ಪಕ್ಷಗಳಿಗೆ ಸಹಕಾರ ನೀಡಲು ಕೋರುವುದರ ಬದಲು ಜನಸಂಘ ಮತ್ತು ಸ್ವತಂತ್ರ ಪಕ್ಷಗಳ ಜೊತೆಯಲ್ಲಿ ಮಾತ್ರ ಚುನಾವಣಾ ಮೈತ್ರಿಯನ್ನು ಉದ್ದೇಶಿಸಿದೆ ಎಂದು ಅಪಪ್ರಚಾರ ಮಾಡುವಂತಿತ್ತು. ಜಿ.ಪಿ.ಸಿ.ಯ ಅಧ್ಯಕ್ಷ ಒಬ್ಬ ಸತ್ಯಸಂಧ ಕಾಂಗ್ರೆಸ್ಸಿನ ವಿಜುಭಾಯ್ ಅಂತಹವರಲ್ಲಿ ಒಬ್ಬರು. ಅನೇಕರು ಮಾತನಾಡಿದರು. ದೇಶದ ಹಿತಾಸಕ್ತಿಗಳನ್ನು ಕೂಡ ಬಲಿಕೊಟ್ಟು ತನ್ನನ್ನ ತಾನು ಮುಂದುವರೆಸಿಕೊಂಡು ಹೋಗಬೇಕೆಂಬ ಪ್ರಧಾನಿಯ ಕೆಟ್ಟ ಯೋಚನೆಯನ್ನು ಸೋಲಿಸುವುದೇ ಮುಖ್ಯ ಉದ್ದೇಶವಾದುದರಿಂದ ಕೆಲವು ಸಮಯದ ನಂತರ ಅವರು ಅದನ್ನು ಮೆಚ್ಚಿದರು ಎಂಬುದು ಸ್ಪಷ್ಟವಾಗಿತ್ತು. ವೀರೇಂದ್ರ ಪಾಟೀಲರು ತಡವಾಗಿ ಬಂದು ಕೆಲವೇ ಪ್ರಾರಂಭಿಕ ಮಾತುಗಳನ್ನಾಡಿದರು. ಹೀರೇನ್ ಭಾಯಿಯವರು ನಾಳೆ ಬರುತ್ತಾರೆ, ನಮ್ಮ ಎ ಐ ಸಿ ಸಿ ಠರಾವಿನ ಹಿಂದಿರುವ ಕಾರಣಗಳನ್ನು ಅವರು ಮೆಚ್ಚುತ್ತಾರೆಂಬುದರಲ್ಲಿ ನನಗೆ ಸಂದೇಹವಿಲ್ಲ. ಅನೇಕ ನನ್ನ ಸ್ನೇಹಿತರು ಠರಾವನ್ನು ಸರಿಯಾಗಿ ಮತ್ತು ಪೂರ್ತಿಯಾಗಿ ಓದುವುದಿಲ್ಲವೆಂಬುದೇ ವಿಷಾದನೀಯ. ಮಾತಾಡಿದ ಸ್ನೇಹಿತರಲ್ಲಿ ಮನುಭಾಯಿ ಷಾ ಅತ್ಯಂತ ಹೆಚ್ಚಿನ ಟೀಕೆ ಮಾಡಿದರು. ಅವರು ಜನಸಂಘದ ಬಗ್ಗೆ ಹಾನಿಕರ ಭಾಷಣ ಮಾಡಿದರು. ಅವರು ಮೊರಾರ್ಜಿಯವರನ್ನು ಇಷ್ಟಪಡುವುದಿಲ್ಲವೆಂದು ಕಾಣುತ್ತದೆ. ಮುಂದಿನ ಚುನಾವಣೆಗಳಲ್ಲಿ ಲೋಕಸಭೆಗೆ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳ ಬೇಕೆಂದಿರುವರು.

**ಆಗಸ್ಟ್ ೩, ೧೯೭೦** **ದೆಹಲಿ-ಬೊಂಬಾಯಿ**

ಮೊರಾರ್ಜಿ ಭಾಯಿ, ಕಾಮರಾಜ್, ಎಸ್. ರೆಡ್ಡಿ, ರಾಂ ಸುಭಾಗ್ ಸಿಂಗ್‌ರವರು ಬಂದು ಸಹಕಾರದ ಬಗ್ಗೆ ಚರ್ಚಿಸುತ್ತ ಒಂದು ಗಂಟೆಗಿಂತ ಹೆಚ್ಚು ಕಾಲ ಕಳೆದರು. ನಾವು ಜನಸಂಘ ಮತ್ತು ಸ್ವತಂತ್ರ ಸೇರಿದಂತೆ ಒಂದು ಸಮನ್ವಯ ಸಮಿತಿಯನ್ನು ಮಾಡಿಕೊಂಡು ನಾವು ಕೆಲಸ ಪ್ರಾರಂಭಿಸಬಹುದು ಎಂಬ ಸಾಮಾನ್ಯ ತತ್ವವನ್ನು ಒಪ್ಪಿಕೊಳ್ಳಲಾಯಿತು. ಮೊರಾರ್ಜಿಯವರು ಅದರ ಅಧ್ಯಕ್ಷರಾಗಬೇಕೆಂದಿದ್ದಾರೆ. ಅವರು ಹಾಗೆ ಆಗುವುದಕ್ಕೆ ಹೇಗೆ ಪ್ರಯತ್ನಿಸುತ್ತಾರೆಂಬುದು ಕನಿಕರದ ವಿಷಯ. ಇದನ್ನು ಮಾಡುವಾಗ ಬಿ.ಕೆ.ಡಿ., ದ್ರಾವಿಡ(ಡಿಎಂಕೆ), ಎಸ್. ಎಸ್. ಪಿ ಮುಂತಾದವುಗಳು ಒಳಗೆ ಬರಲು ನಾವು ಕಾಯಬೇಕು ಎಂಬುದು ನಮ್ಮಲ್ಲಿ ಉಳಿದವರೆಲ್ಲರ ಭಾವನೆ. ಆದರೆ ಮೊರಾರ್ಜಿಯವರು ಆತುರದಲ್ಲಿದ್ದಾರೆ. ಮಧ್ಯಾಹ್ನ ೪ ಗಂಟೆಗೆ ಸೋಮಾನಿ ಬಂದರು. ದೊಡ್ಡ ಕೈಗಾರಿಕೋದ್ಯಮಿಗಳು ಪುಕ್ಕಲಾದ್ದರಿಂದ ಅವರ ತಂಟೆಗೆ ಹೋಗುವುದು ಬೇಡ ಎಂದು ಹೇಳಿದೆ. ಗ್ವಾಲಿಯರ್‌ನ ರಾಜಮಾತೆ ಬಂದು ಸ್ವಲ್ಪ ಸಮಯ ನನ್ನೊಡನಿದ್ದರು. ಉತ್ತರ ಪ್ರದೇಶದಲ್ಲಿ ಪ್ರಧಾನಿಯವರ ಯೋಜನೆಗಳನ್ನು ಸೋಲಿಸಬೇಕು ಎಂದು ಅವರು ಖಂಡಿತವಾಗಿದ್ದರು. ಅದೇ ಪ್ರಾರಂಭ ಎಂದರು. ಅವರು ಪ್ರಜಾಪ್ರಭುತ್ವವನ್ನು ನಂಬುತ್ತಾರೆ, ಅದು ಸ್ವಾಗತಾರ್ಹ.

**ಆಗಸ್ಟ್ ೨೦, ೧೯೭೦** **ದೆಹಲಿ**

ಮಾಮೂಲಿನಂತೆ ತ್ಯಾಗಿ ಬೆಳಗಿನ ಉಪಾಹಾರಕ್ಕೆ ಬಂದರು. ಅವರಿಗೆ ಯಾವಾಗಲೂ ಸ್ವಾಗತ. ಹೊಸ ಅಡಿಗೆಯವನು ಹೊಂದಿಕೊಳ್ಳುತ್ತಿದ್ದಾನೆ. ಮೊರಾರ್ಜಿಯವರನ್ನು ಕಂಡು ಹಿಂದೆ ಬರುವಾಗ ಕಾಮರಾಜರನ್ನು ನೋಡಿದೆ. ಹೊಸದೇನೂ ಇಲ್ಲ.

ಮಧ್ಯಾಹ್ನ ಮಸಾನಿಯವರು ಬಂದು ಸ್ವಲ್ಪ ಸಮಯ ಕಳೆದರು. ಎ ಐ ಸಿ ಸಿ ಠರಾವು ಬಹಳ ಚೆನ್ನಾಗಿದೆ. ತಮ್ಮ ಪಕ್ಷ ಮತ್ತು ಜನಸಂಘ ಗಣನೀಯವಾಗಿ ಅದರ ಬಗ್ಗೆ ಒಪ್ಪಿಕೊಂಡಿವೆ ಎಂದು ಹೇಳಿದರು. ಅದನ್ನು ಅನುಷ್ಠಾನಗೊಳಿಸುವುದರಲ್ಲಿ ನಾವು ಹಿಂಜರಿಯುತ್ತಿರುವುದು ಅನೇಕರನ್ನು ನಿರಾಶೆಗೊಳಿಸಿದೆಯಾದ್ದರಿಂದ ನಾನು ಅವರನ್ನು ಮತ್ತು ಜನಸಂಘದ ನಾಯಕರನ್ನು ಭೇಟಿ ಮಾಡಲು ಅಕ್ಷೇಪವಿಲ್ಲ. ಆದರೆ ಅವರಿಗೆ ಪ್ರಜಾಪ್ರಭುತ್ವದಲ್ಲಿ ನಂಬಿಕೆಯಿರಬೇಕೆಂದು ಹೇಳಿದೆ. ಸ್ವತಂತ್ರ ಮತ್ತು ಜನಸಂಘವು ಪ್ರಜಾಪ್ರಭುತ್ವವಾದಿಯೆಂದು ನನಗೆ ಗೊತ್ತು. ಕೇರಳದ ಬಗ್ಗೆ ಅಲ್ಲಿ ಒಳ್ಳೆ ಕೆಲಸ ಮಾಡಿ ಹಿಂದಿರುಗಿರುವ ಗುರುಪಾದಸ್ವಾಮಿಯವರನ್ನು ನೋಡಲು ಹೇಳಿದೆನು.

**ಆಗಸ್ಟ್ ೩೦, ೧೯೭೦ ದೆಹಲಿ**

ರಾಜಧನ ಮಸೂದೆಯ ಬಗ್ಗೆ ನಾವು ಏನು ಮಾಡಬೇಕೆಂಬುದರ ಬಗ್ಗೆ ಮೊರಾರ್ಜಿ ಕಾತುರರಾಗಿದ್ದಾರೆ. ಅವರ ಜೊತೆಯಲ್ಲಿ ಚರ್ಚಿಸಿದೆ ಮತ್ತು ಅದನ್ನು ಸರಿಯಾಗಿ ಮಂಡಿಸಿಲ್ಲವೆಂಬ ಕಾರಣದ ಮೇಲೆ ವಿರೋಧಿಸಬೇಕೆಂದು ನಾವು ಒಪ್ಪಿಕೊಂಡೆವು. ಅದರ ಚಿತ್ರಣವೂ ಅಪೂರ್ಣವಾದುದು. ಈ ಮಸೂದೆಗೆ ಒಂದು ತಿದ್ದುಪಡಿಯನ್ನು ಕಳುಹಿಸುವುದರ ಬಗ್ಗೆ ಬಿ.ಆರ್. ಎಲ್. ಐಯ್ಯಂಗಾರ್ ಜೊತೆಯಲ್ಲಿ ಸಮಾಲೋಚಿಸಿದೆ. ಮೊರಾರ್ಜಿ ಅದು ಬೇಕೆಂದರು. ರಾಜಶೇಖರನ್ ಬೆಂಗಳೂರಿನಿಂದ ಹಿಂದಿರುಗಿದರು. ಅಲ್ಲಿ ಎಲ್ಲರೂ ಚೆನ್ನಾಗಿದ್ದಾರೆ. ಪಾಟಿಯಾಲ ಮಹಾರಾಣಿಯವರು ಮಧ್ಯಾಹ್ನ ೪-೩೦ಕ್ಕೆ ಬಂದು ಈ ಮಸೂದೆಗೆ ವಿವಿಧ ಪಕ್ಷಗಳ ಪ್ರತಿಕ್ರಿಯೆಯ ಸಮಾಚಾರವನ್ನು ತಂದರು. ಪ್ರಧಾನಿಯು ಅಶಾಂತಿಯಿಂದ್ದಿದ್ದು ಹೆದರಿದ್ದಾರೆ ಎಂದರು. ಅವರ ಮಂತ್ರಿ ಮಂಡಲದಲ್ಲೇ ಅಭಿಪ್ರಾಯ ಭೇದವಿದೆಯೆಂದು ಕಾಣುತ್ತದೆ. ದೆಹಲಿಯಲ್ಲಿ ಎಲ್ಲ ವಿಧವಾದ ವದಂತಿ ಇರುತ್ತದೆ. ಅವುಗಳನ್ನು ನಾನು ನಂಬುವುದಿಲ್ಲ. ಈ ಮಹಾರಾಣಿಯು ಒಬ್ಬ ಎಂ.ಪಿ ಯಾಗಿದ್ದು ಬಹಳ ಚತುರ ಬುದ್ಧಿವಂತ ವ್ಯಕ್ತಿ.

ಕಾಮರಾಜರು ಮದ್ರಾಸಿನಿಂದ ಬಂದರು. ೫-೩೦ರಲ್ಲಿ ನಾನು, ಮೊರಾರ್ಜಿ, ಕಾಮರಾಜರು ನನ್ನ ಮನೆಯಲ್ಲಿ ಸೇರಿ ರಾಜಧನದ ಮೇಲಿನ ಮಸೂದೆಯನ್ನು ಚರ್ಚಿಸಿದೆವು. ಅದು ದೋಷಯುಕ್ತವಾದುದರಿಂದ ಅದನ್ನು ವಿರೋಧಿಸಬೇಕೆಂದು ನಿರ್ಧರಿಸಿ ಹೆಚ್ಚು ಹಣಮಾಡುತ್ತಿರುವ ತತ್ವಹೀನ ಪ್ರಧಾನಿಗೆ ಕೈ ಕೊಡಬೇಕೆಂದು ನಿರ್ಧರಿಸಿದೆವು. ಚುನಾವಣೆಗೆ ಹಣ, ಸಂಸ್ಥೆಯ ವಿಷಯಗಳು ಮುಂತಾದವುಗಳನ್ನು ಚರ್ಚಿಸಿದೆವು. ಸಾಯಂಕಾಲ ಸಂಜೀವರೆಡ್ಡಿ ಮತ್ತು ಇತರರು ಬಂದು ಹೋದರು.

**ಸೆಪ್ಟೆಂಬರ್ ೧೫, ೧೯೭೦ ಬೆಂಗಳೂರು**

ಕೇರಳದಲ್ಲಿ ಮುಸ್ಲಿಂ ಲೀಗ್ ಮತ್ತು ಮಾರ್ಕ್ಸ್‌ಸಿಸ್ಟರ ನಡುವೆ ವಿಶೇಷವಾಗಿ ಉತ್ತರದ ಜಿಲ್ಲೆಗಳಲ್ಲಿ ಎರಡು ದಿನಗಳಿಂದ ಗಲಾಟೆ ಪ್ರಾರಂಭವಾಗಿದೆ. ಪ್ರಧಾನಿಯು ತನ್ನ ಪಕ್ಷದ ಜೊತೆಯಲ್ಲಿ ಮುಸ್ಲಿಂ ಲೀಗ್ ಮತ್ತು ಸಿಪಿಐ ನ ಹೊಂದಾವಣಿಕೆಯನ್ನು ಮುಚ್ಚಿಡುವುದಕ್ಕೆ ನಮ್ಮ ಜೊತೆಯಲ್ಲಿ ಮಾರ್ಕ್ಸಿಸ್ಟರನ್ನು ಜೋಡಿಸುವ ತುಂಟಾಟವನ್ನು ಮಾಮೂಲಿನಂತೆ ಪ್ರಯತ್ನಿಸಿದ್ದಾರೆ. ಬಹುಸಂಖ್ಯಾತ ಸಮುದಾಯದವರೂ ಅಲ್ಪಸಂಖ್ಯಾತರನ್ನು ಕಾಣುವ ವರ್ತನೆಯ ಬಗ್ಗೆ ಅವರು ಮಾತಾಡಲು ಪುನಃ ಪ್ರಾರಂಭಿಸಿದ್ದಾರೆ. ಕಳೆದ ಆರು ತಿಂಗಳುಗಳಲ್ಲಿ ಹಿಂದೂಗಳು ಮತ್ತು ಮುಸ್ಲಿಮರ ನಡುವೆ ಜಾತಿಯ ತಪ್ಪು ತಿಳುವಳಿಕೆಗೆ ಜವಾಬ್ದಾರರಾಗಿರುವ ಏಕೈಕ ವ್ಯಕ್ತಿ ಈ ಹೆಂಗಸೇ. ಈಕೆಯನ್ನು ಎಷ್ಟು ಬೇಗ ತೆಗೆದು ಹಾಕಿದರೆ ಅಷ್ಟು ಭಾರತಕ್ಕೆ ಒಳ್ಳೆಯದು.

**ಸೆಪ್ಟೆಂಬರ್ ೧೮, ೧೯೭೦** **ಬೆಂಗಳೂರು**

ತುಂಬಾ ಕೆಟ್ಟದಿನ. ಕೇರಳ ಚುನಾವಣೆಗಳ ಫಲಿತಾಂಶಗಳನ್ನು ಬಹಳ ಕಾತುರದಿಂದ ಕೇಳುತ್ತಿದ್ದೇನೆ. ಸಿಂಡಿಕೇಟ್ ಬಹಳ ಚೆನ್ನಾಗಿ, ತುಂಬಾ ಚೆನ್ನಾಗಿ ಫಲಿತಾಂಶ ಪಡೆದಿದೆ. ಅವರು ಮುಸ್ಲಿಂ ಲೀಗ್ ಮತ್ತು ಸಿಪಿಐ ಸೇರಿ ಒಂದು ಸರ್ಕಾರವನ್ನು ರಚಿಸಬಹುದು. ರಾತ್ರಿ ೬-೧೫ಕ್ಕೆ ಪ್ರಧಾನಿಗೆ ಪತ್ರ ಬರೆಯುತ್ತೇನೆ. ಇಲ್ಲಿಯ ಪ್ರಕಟವಾದ ೧೧೩ ಸ್ಥಾನಗಳಲ್ಲಿ ನಮಗೆ ಒಂದೇ ಒಂದು ಸ್ಥಾನ ಬಂದಿಲ್ಲ. ಇದು ದುರದೃಷ್ಟಕರ ಮತ್ತು ಅನಿರೀಕ್ಷಿತ. ಕಾಂಗ್ರೆಸ್ ಹೇಳಿಕೊಳ್ಳುವಂತ ಸಂಸ್ಥೆ ಏನಾಗಿರಲಿಲ್ಲ. ಇಂಡಿಕೇಟ್ ದೊಡ್ಡವರ ಪಕ್ಷವಾಗಿ ಹೊರಹೊಮ್ಮಿರುವುದು ಹಣದಿಂದ ಮಾತ್ರ ಎಂಬ ಕಾರಣವನ್ನು ಸೂಚಿಸಲಾಗಿದೆ.

ಬೆಳಕಾಗುವ ಮುನ್ನ ತುಂಬಾ ಕತ್ತಲಾಗಿರುತ್ತದೆ. ನಾವು ನಿರುತ್ಸಾಹಿಗಳಾಗಬೇಕಾಗಿಲ್ಲ. ಅದಕ್ಕೆ ಬದಲಾಗಿ ನಾವು ಕಷ್ಟಪಟ್ಟು ಕೆಲಸ ಮಾಡಿ ಕೆಳ ಮಟ್ಟದಿಂದ ಸಂಸ್ಥೆಯನ್ನು ಕಟ್ಟಬೇಕು. ನಮ್ಮ ನಿರ್ಲಕ್ಷ್ಯ ಮತ್ತು ಅತೃಪ್ತಿಯಿಂದಾಗಿ ವಿಶೇಷವಾಗಿ ಕೇರಳದಲ್ಲಿ ನಾವು ಹಾಳಾಗಿದ್ದೇವೆ.

**ಅಕ್ಟೋಬರ್ ೮, ೧೯೭೦** **ದೆಹಲಿ**

ಉತ್ತರ ಪ್ರದೇಶ ಸಮಸ್ಯೆಯು ಹೆಚ್ಚು ಹೆಚ್ಚು ಜಟಿಲವಾಗುತ್ತಿದೆ. ಸರ್ವಾನುಮತ ಆಯ್ಕೆಮಾಡುವ ನಮ್ಮ ಪ್ರಯತ್ನಗಳು ಸುಲಭವಾಗಿ ಜಯಿಸುವುದಿಲ್ಲ ಎಂದು ಕಾಣುತ್ತದೆ. ಶ್ರೀ ಚರಣಸಿಂಗರು ತಮ್ಮನ್ನು ಮುಖ್ಯಮಂತ್ರಿಯ ಸ್ಥಾನಕ್ಕೆ ಲೆಕ್ಕಕ್ಕೆ ತೆಗೆದುಕೊಳ್ಳಬಾರದು ಎಂದು ಹೇಳಿದ್ದರೂ ಪ್ರಕಾಶ್ ವೀರ ಶಾಸ್ತ್ರಿ ಮತ್ತು ಅವರ ಸ್ನೇಹಿತರು ಚರಣಸಿಂಗ್‌ರನ್ನು ಮುಖ್ಯಮಂತ್ರಿಯನ್ನಾಗಿ ಮಾಡಲು ಕುತೂಹಲವುಳ್ಳವರಾಗಿದ್ದಾರೆ. ತಮ್ಮ ಭವ್ಯತೆಯನ್ನು ಹೆಚ್ಚಿಸಿಕೊಳ್ಳುವುದಕ್ಕೆ ಇದು ಅವರು ಆಡಿದ ನಾಟಕವೆಂದು ಕಾಣುತ್ತದೆ. ಏಕೆಂದರೆ ಅದೇ ಸಮಯದಲ್ಲಿ ಅವರ ಸ್ನೇಹಿತರು ಅವರಿಗಾಗಿ ಕೆಲಸ ಮಾಡುತ್ತಲೇ ಇದ್ದಾರೆ. ಗುಪ್ತ ಮತ್ತು ತುಂಬಾ ಸ್ನೇಹಿತರು ಇಲ್ಲಿದ್ದಾರೆ. ಸಿಂಗರ ಹೇಳಿಕೆಗಳ ಬಗ್ಗೆ ಗುಪ್ತಾರವರಿಗೆ ಕೋಪ. ಡಾ. ರಾಂ ಸುಭಾಗ್ ಸಿಂಗರು ಅವರ ಮುಖ್ಯಮಂತ್ರಿ ಸ್ಥಾನಕ್ಕೆ ಪ್ರಚಾರ ಮಾಡುತ್ತಿರುವುದು ಮತ್ತು ಒತ್ತಾಯಿಸುತ್ತಿರುವುದು ಸಹ ಅವರಿಗೆ ಕೋಪ ತಂದಿದೆ. ಅನೇಕ ಸಲ ಡಾ. ಆರ್‌ರವರು ಒಮ್ಮೆಲೇ ಪ್ರಚೋದಿತರಾಗುವರು ಮತ್ತು ಬುದ್ಧಿಹೀನರಂತೆಯೂ ಆಡುತ್ತಾರೆ. ಅದು ಉದ್ದೇಶಪೂರ್ವಕವಾದುದೆಂಬುದರ ಬಗ್ಗೆ ನನಗೆ ಖಚಿತವಾಗಿಲ್ಲ. ಕೆಲವು ಸ್ನೇಹಿತರು ನನಗೆ ದೂರವಾಣಿ ಮಾಡುತ್ತಿದ್ದಾರೆ.

ಸಾಯಂಕಾಲ ಎಸ್.ಕೆ.ಯವರ ಮನೆಯಲ್ಲಿ ಭೋಜನವಾಯಿತು. ಪುನಃ ನಾವು ಉತ್ತರ ಪ್ರದೇಶದ ವಿಷಯ ಚರ್ಚಿಸಿದೆವು. ಪ್ರಧಾನಿಯ ಕೆಟ್ಟ ಮತ್ತು ನಾಚಿಕೆಗೆಟ್ಟ ಪ್ರಯತ್ನಗಳನ್ನು

ಹಾಳು ಮಾಡುವುದರಲ್ಲಿ ಸಫಲರಾದರೆ ಮತ್ತು ಅವರ ಕೈಗೊಂಬೆ ಕಮಲಾಪತಿ ತ್ರಿಪಾಠಿಯನ್ನು ನಿಯಂತ್ರಣ ಮಾಡಿದರೆ ಅಥವಾ ರಾಜ್ಯಪಾಲರ ಆಳ್ವಿಕೆ ತಡೆದರೆ ಮಾತ್ರ ಆಕೆಯ ವಿರುದ್ಧ ಒಂದು ಹೆಜ್ಜೆ ಕ್ರಮವನ್ನು ತೆಗೆದುಕೊಳ್ಳುವುದರಲ್ಲಿ ನಾವು ಸಫಲರಾಗುತ್ತೇವೆ ಎಂದು ಸಾಮಾನ್ಯವಾಗಿ ಎಲ್ಲರೂ ಭಾವಿಸುತ್ತಾರೆ. ಇಲ್ಲದಿದ್ದರೆ ಪ್ರಜಾಪ್ರಭುತ್ವ ಪಕ್ಷಗಳು ಮತ್ತೇ ತಮ್ಮ ತಲೆಗಳನ್ನು ಮೇಲಕ್ಕೆತ್ತುವುದು ಕಷ್ಟವಾಗುತ್ತದೆ. ಎಲ್ಲ ಕಡೆಯಲ್ಲಿಯೂ ಇದೇ ಭಾವನೆ ಇದೆ.

ಚರಣ್‌ಸಿಂಗರು ನನ್ನ ಕೋರಿಕೆಯ ಮೇರೆಗೆ ಈ ರಾತ್ರಿ ದೆಹಲಿಗೆ ಬಂದಿರುವುದರಿಂದ ಗುಪ್ತಾರ ಮನೆಯಲ್ಲಿ ಬೆಳಗಿನ ಉಪಹಾರದ ಸಮಯದಲ್ಲಿ ಭೇಟಿಮಾಡಬೇಕೆಂದು ಒಪ್ಪಿಕೊಳ್ಳಲಾಯಿತು. ಅಲ್ಲದೆ ಸಿಂಗರು ದೆಹಲಿಯಲ್ಲಿ ಏನೂ ಮಾಡಲಾಗುವುದಿಲ್ಲವೆಂದು ನಾವು ಭಾವಿಸಿದೆವು.

**ಅಕ್ಟೋಬರ್ ೯, ೧೯೭೦ ದೆಹಲಿ**

ಇವತ್ತು ನಿಜವಾಗಿ ಒಳ್ಳೆದಿನ. ನಿರೀಕ್ಷಿಸಿದಂತೆ ಈ ಬೆಳಿಗ್ಗೆ ಗುಪ್ತಾ ಮತ್ತು ಸಿಂಗ್ ಭೇಟಿ ಮಾಡಿದುದರಿಂದ, ಬೆಳವಣಿಗೆಗಳಿಗೆ ಕಾತುರದಿಂದ ಕಾಯುತ್ತಿದ್ದೆ. ಅದೃಷ್ಟವಶಾತ್ ಸಿಂಗರು ನಿರೀಕ್ಷಿಸಿದಂತೆ ಎಸ್.ಕೆ. ಮತ್ತು ಇತರ ಸ್ನೇಹಿತರೊಡನೆ ಬಂದರು. ಇತರ ಎಲ್ಲರೂ ಹೊರಗಿರುವಂತೆ ಹೇಳಿ, ನಾನು ಎಸ್.ಕೆ ಮತ್ತು ಸಿಂಗ್‌ರು ಮಾತ್ರ ದೀರ್ಘವಾಗಿ ಮಾತನಾಡಿ, ಅವರಿಬ್ಬರೂ ಒಂದು ಸಾಮಾನ್ಯ ನಿರ್ಧಾರಕ್ಕೆ ಬರುವಂತೆ ನಾವಿಬ್ಬರೂ ಮನವಿ ಮಾಡಿದೆವು. ಗುಪ್ತರವರನ್ನು ಬರಮಾಡಿಕೊಂಡೆವು. ಎಸ್.ಕೆ. ಯವರೇ ಹೋಗಿ ಕರೆದುಕೊಂಡು ಬಂದರು. ನಾವು ನಾಲ್ವರು ಸ್ವಲ್ಪಕಾಲ ಮಾತನಾಡಿದೆವು. ಪ್ರಜಾಪ್ರಭುತ್ವದ ಮತ್ತು ದೇಶದ ಹಿತದೃಷ್ಟಿಯಿಂದ ಅವರಿಬ್ಬರೂ ತಮ್ಮ ತಮ್ಮಲ್ಲಿಯೇ ಇತ್ಯರ್ಥ ಮಾಡಿಕೊಳ್ಳಬೇಕು. ಅವರ ತೀರ್ಮಾನವನ್ನು ಕಾರ್ಯಗತಗೊಳಿಸಲು ಎಲ್ಲವನ್ನು ಮಾಡುತ್ತೇವೆ ಎಂದು ಅಂತಿಮವಾಗಿ ಎಸ್.ಕೆ. ಮತ್ತು ನಾನು ಅವರಿಗೆ ಮನವಿ ಮಾಡಿದೆವು. ನಾವು ಬಾಗಿಲನ್ನು ಮುಚ್ಚಿಕೊಂಡು ಹೊರಬಂದು ಅವರಿಬ್ಬರನ್ನೇ ಬಿಟ್ಟು ಒಂದು ಪರಿಹಾರ ಕಂಡುಕೊಂಡ ಮೇಲೆ ಅವರು ಹೊರಗೆ ಬರಬೇಕೆಂದು ಹೇಳಿದೆವು. ಮೊರಾರ್ಜಿ ಭಾಯಿಯೂ ಸೇರಿದಂತೆ ನಾವೆಲ್ಲ ಹಾಲ್‌ನಲ್ಲಿ ಕುಳಿತೆವು. ೪೫ ನಿಮಿಷಗಳ ನಂತರ ಅವರಿಬ್ಬರೂ ಹಸನ್ಮುಖರಾಗಿ ಬಂದರು. ಟಿ. ಎನ್. ಸಿಂಗರನ್ನು ಆಯ್ಕೆ ಮಾಡಿದ್ದೇವೆ ಎಂದು ಹೇಳಿದರು. ಅವರಿಬ್ಬರೂ ಇತರ ಪಕ್ಷಗಳ ನಾಯಕರನ್ನು ಭೇಟಿ ಮಾಡಲು ಹೋದರು. ಬಹಳ ಬೇಗನೆ ಟಿ.ಎನ್. ಸಿಂಗರ ಹೆಸರನ್ನು ಸರ್ವಾನುಮತದಿಂದ ಒಪ್ಪಿಕೊಳ್ಳಲಾಯಿತು. ೧೧-೦೦ ಗಂಟೆ ಸಮಯದಲ್ಲಿ ಈ ತೀರ್ಮಾನವನ್ನು ಆಚರಿಸಲು ೬, ಜನಪತ್‌ನಲ್ಲಿ ಒಂದು ಚಹಾಕೂಟವನ್ನು ಮಾಡಿದೆವು. ನಾನು, ಗುಪ್ತ, ಚರಣ್‌ಸಿಂಗ್, ಗಿರಿಧರ್‌ಲಾಲ್, ಜನಸಂಘದ ಪ್ರತಿನಿಧಿಗಳು, ಎಸ್.ಎಸ್.ಪಿ., ಸ್ವತಂತ್ರ. ಪಿ.ಎಸ್.ಪಿ.

ಮತ್ತು ಬಿಹಾರಿನ ಶೋಷಿತದಳದವರೆಲ್ಲಾ ಮಾತನಾಡಿದೆವು. ಪುನಃ ಕಾರ್ಯಕಾರಿ ಸಮಿತಿಯಲ್ಲಿ ಸೇರಿದೆವು. ಉತ್ತರ ಪ್ರದೇಶವೂ ಸೇರಿದಂತೆ ಕೆಲವು ತೀರ್ಮಾನಗಳನ್ನು ಕೈಗೊಂಡೆವು. ಮಧ್ಯಾಹ್ನ ಊಟಕ್ಕೆ ನಾನು ಮತ್ತು ಹೆಚ್.ವಿ. ಕಾಮತ್ ಇದ್ದೆವು. ಸುದೀರ್ಘವಾದ ಮಾತುಕತೆ ನಡೆಸಿದೆವು. ಬೆಳಿಗ್ಗೆ ಮಸಾನಿ ಬಂದು ಕ್ಯಾಬಿನೆಟ್‌ಮಂತ್ರಿ ದಿನೇಶ್‌ಸಿಂಗ್ ಉತ್ತರಪ್ರದೇಶದ ಮುಖ್ಯಮಂತ್ರಿಯಾಗಲು ಮಂತ್ರಿಮಂಡಲವನ್ನು ಬಿಡಲು ಇಷ್ಟವುಳ್ಳವರೆಂದು ಹೇಳಿದರು.

**ಡಿಸೆಂಬರ್ ೨೨, ೧೯೭೦ ದೆಹಲಿ**

ಆರ್.ಎಸ್.ಎಸ್.ನ (ಸ್ಥಳೀಯ ) ಮುಖ್ಯಸ್ಥ ಹಾಗೂ ರಾಜ್‌ನಾರಾಯಣ ನನ್ನನ್ನ ಕಂಡು ಒಂದು ಗಂಟೆಗಳ ಕಾಲ ಇದ್ದರು. ಮಸಾನಿ - ಮಧ್ಯಾಹ್ನ ೧೨ ಗಂಟೆ. ತ್ಯಾಗಿಯವರು ಬೆಳಗಿನ ಉಪಾಹಾರಕ್ಕೆ ಬಂದರು. ಹಾಗೆಯೇ 'ಟೈಂಸ್ ಆಫ್ ಇಂಡಿಯಾ'ದ ಶ್ರೀ ಮತ್ತು ಶ್ರೀಮತಿ ಮಲ್‌ಗಾವಂಕರ್ ಬಂದರು. ಪ್ರತಿಭಾಳ ಮಕ್ಕಳು ಅದರಲ್ಲಿಯೂ ವಿಶೇಷವಾಗಿ ಚಿಕ್ಕವನು ಸಂಜಯ್ ತುಂಬಾ ಗಲಾಟೆ ಮಾಡುವವನು. ಸುಮನ್ ಹೆಚ್ಚು ಶಾಂತಳು, ಮನೋಹರವಾದ ಹುಡುಗಿ. ಇಂಗ್ಲಿಷ್ ಅನ್ನು ಆಂಗ್ಲ ಉಚ್ಚಾರಣೆಯಲ್ಲೇ ಮಾತಾಡುತ್ತಾಳೆ. ಮಕ್ಕಳ ಧ್ವನಿಗಳನ್ನು ಕೇಳಲು ಸಂತೋಷವಾಗುತ್ತದೆ. ಪ್ರತಿಭಾಳಿಗೆ ದೆಹಲಿಯಲ್ಲಿ ಸ್ವಲ್ಪ ಕಾಲ ಉಳಿಯಲು ಇಷ್ಟ, ನಮಗೂ ಅದು ಬಹಳ ಮಟ್ಟಿಗೆ ಬೇಕಾಗಿದೆ.

ಮಸಾನಿಯವರು ಅವರ ತಂತಿಸಮಾಚಾರದಂತೆ ನಾಳೆಗೆ ಬದಲು ಇಂದೇ ಬಂದರು. ಅವರು ದುಸ್ಸಹವಾದ ವ್ಯಕ್ತಿಯಾಗಿದ್ದು ತಮ್ಮ ಸ್ವಂತ ಅಭಿಪ್ರಾಯಗಳಿಗೆ ನಮ್ಮನ್ನು ಒಪ್ಪುವಂತೆ ಮಾಡಲು ಕಾತುರರಾಗಿದ್ದಾರೆ. ನನಗೆ ಆತನನ್ನು ಕಂಡರೆ ಬೇಜಾರು. ತಾನು ಮತ್ತು ತನ್ನ ಸ್ವತಂತ್ರ ಪಕ್ಷ ಮಾತ್ರ ಅಸ್ತಿತ್ವದಲ್ಲಿದೆಯೆಂದು ಅವರು ಯೋಚಿಸುತ್ತಾರೆ. ಇಡೀ ಪ್ರಪಂಚವು ಅವರಿಗೆ ಹೊಂದಿಕೊಳ್ಳಬೇಕು. ನಾನು ೩೧ನೇ ತಾರೀಕಿನವರೆಗೆ ಕಾಯಬೇಕಾಗುತ್ತದೆ, ಏಕೆಂದರೆ ಅಷ್ಟರಲ್ಲಿ ಎಲ್ಲಾ ಪಕ್ಷಗಳ ಸ್ಪಷ್ಟವಾದ ಚಿತ್ರಣ ದೊರೆಯಬಹುದು ಎಂದು ಹೇಳಿದೆ. ನೆನ್ನೆ ಸಂಜೆ ೬ ಗಂಟೆಗೆ ಬಂದ ಸಮಾಚಾರವೇನೆಂದರೆ ಕರ್ಪೂರಿ ಠಾಕೂರರವರು ಎಸ್‌ವಿಡಿ ನಾಯಕರಾಗಿ ಮತ್ತು ಇನ್ನೂ ೬ ಜನರಿಗೆ ಪ್ರಮಾಣವಚನ ಬೋಧಿಸಲಾಯಿತು. ಅಂಬಿಕಾ ಚರಣ್ ಮತ್ತು ಸತ್ಯೇಂದ್ರರವರ ದೂರವಾಣಿ ಕರೆಗಳ ಮೂಲಕ ನನಗೆ ಸಮಾಚಾರ ಬರುತ್ತಿದೆ. ಇದು ಒಳ್ಳೆಯದು. ಏನೇ ಆಗಲಿ ರಾಜ್ಯಪಾಲರು ಪ್ರಮಾಣ ವಚನ ಬೋಧಿಸಿದ್ದಾರೆ. ಇಂಡಿಕೇಟರ ಸರಕಾರ ರಚಿಸಲ್ಪಟ್ಟಿದೆ.

**ಮಾರ್ಚ್ ೮, ೧೯೭೧** **ಖಾಸಗಿ ಸಮ್ಮೇಳನ, ದೆಹಲಿ**

ಮಧ್ಯಾಹ್ನ ಆಶ್ಚರ್ಯವಾದ ವಿಷಯ ಜೆ.ಡಿ. ಬಿರ್ಲಾ ನನಗೆ ಫೋನ್ ಮಾಡಿ ಚುನಾವಣೆಯ ಬಗ್ಗೆ ಕೇಳಿದರು. ಎರಡೂ ಪಕ್ಷಗಳಿಗೆ ಸಮಾನ ಅವಕಾಶಗಳಿವೆಯೆಂದು ಹೇಳಿದಾಗ ಪುನಃ ಸಂಪರ್ಕಿಸುವುದಾಗಿ ಹೇಳಿದರು. ಈ ೩-೪ ವಾರಗಳು ನನ್ನಿಂದ ತಪ್ಪಿಸಿಕೊಳ್ಳುತ್ತಿದ್ದರು. ಏಕೆಂದರೆ ಚುನಾವಣೆಗೆ ಸಹಾಯ ಕೇಳಬಹುದೆಂದು ಈ ಕೈಕಾರಿಕೋದ್ಯಮಿಗಳು ಯೋಚಿಸುತ್ತಾರೆ. ಅದರಲ್ಲಿ ಹೆಚ್ಚಿನವರು ಅಧಿಕಾರದಲ್ಲಿರುವ ಅಥವಾ ಪ್ರಭಾವಶಾಲಿ ಸ್ಥಾನದಲ್ಲಿರತಕ್ಕವರ ದೃಷ್ಟಿಯಲ್ಲಿರಬೇಕೆನ್ನುತ್ತಾರೆ. ಅವರನ್ನು ನಾನು ಕರುಣೆಯಿಂದ ನೋಡುತ್ತೇನೆ.

**ಮಾರ್ಚ್ ೧೦, ೧೯೭೧**

ಸಾಯಂಕಾಲದ ಹೊತ್ತಿಗೆ ರೇಡಿಯೋದಿಂದ ಪ್ರಸಾರವಾಗುತ್ತಿರುವ ಚುನಾವಣಾ ಫಲಿತಾಂಶಗಳು ನಮಗೆ ವಿನಾಶಕಾರಿಯಾಗಿವೆ. ಕಾಂಗ್ರೆಸ್ ಆಡಳಿತ ಅಥವಾ ಕಾಂಗ್ರೆಸ್ ಆರ್‌ಅನ್ನು ಬಿಟ್ಟು ಬಾಕಿ ಎಲ್ಲಾ ಪಕ್ಷಗಳು ನಾಶವಾಗಿವೆಯೆಂದು ಕಾಣುತ್ತದೆ. ಬಹಳ ಹೀನಾಯವಾದ ಸೋಲು. ನಮ್ಮ ಸಂಸ್ಥಾ ಕಾಂಗ್ರೆಸ್ಸ್ ಸರ್ಕಾರ ಉತ್ತರ ಪ್ರದೇಶ ಮತ್ತು ಬಿಹಾರ ಮತ್ತು ಇತರ ದೊಡ್ಡ ರಾಜ್ಯಗಳಲ್ಲಿ ಗಣನೀಯವಾದ ಮುನ್ನಡೆ ಸಾಧಿಸುತ್ತದೆಂದೂ ಭಾವಿಸಲಾಗಿದೆ. ಜೆ.ಪಿ.ಯವರೂ ಸೇರಿದಂತೆ ನಾವೆಲ್ಲ ಸೋತೆವು. ಉತ್ತರ ಪ್ರದೇಶದಲ್ಲಿ ೧೫ ಸ್ಥಾನಗಳನ್ನು ನಿರೀಕ್ಷಿಸಿದ್ದು ನಮಗೆ ಒಂದೇ ಒಂದು ಸ್ಥಾನ ಸಿಕ್ಕಿತು.

ರಾಜ್ ನಾರಾಯಣ್ ಇಂದಿರಾರವರನ್ನು ವಿರೋಧಿಸಿದ್ದು ಅವರನ್ನು ಸೋಲಿಸುತ್ತೇನೆಂದಿದ್ದವರು, ಒಂದು ಲಕ್ಷ ಹತ್ತು ಸಾವಿರ ಮತಗಳಿಗಿಂತ ಹೆಚ್ಚು ಅಂತರದಲ್ಲಿ ಸೋತರು. ಇದು ನಿರೀಕ್ಷಿತ. ಆದರೆ ದೇಶದ ಇತರ ಭಾಗಗಳದ್ದೇನು? ಕಾಡ್ಗಿಚ್ಚಿನಂತೆ ಆಕೆ ಎಲ್ಲವನ್ನು ಗುಡಿಸಿಬಿಡುತ್ತಿದ್ದಾರೆ. ಆಶ್ಚರ್ಯ ಆದರೂ ನಮ್ಮಲ್ಲಿ ಇತ್ತೀಚಿನವರೆಲ್ಲಾ ಸೋತರು. ಎಸ್. ಕೆ. ಪಾಟೀಲ್ ಸೋತರು. ಅಶೋಕ್ ಮೆಹ್ತಾ ಮತ್ತು ಸಂಜೀವ ರೆಡ್ಡಿ ಸೋಲುತ್ತಿದ್ದಾರೆ. ತಾರಕೇಶ್ವರಿ, ರಾಂಸುಭಾಗ್ ನಂತಹ ಇತರರು ಸೋಲುತ್ತಿದ್ದಾರೆ. ಇತರ ರಾಜ್ಯಗಳಲ್ಲಿ ಏನಾಗಿದೆ? ಏನೂ ಉತ್ತರವಿಲ್ಲ. ಇದೇನು ಹಣವೇ, ಎ ಐ ಆರ್ ಸಂಸ್ಥೆಯ ಪ್ರಚಾರವೆ, ಅದೃಷ್ಟವೇ ಅಥವಾ ಇವೆಲ್ಲಾ ಒಟ್ಟಾಗಿ ಸೇರಿವೆಯೆ? ಮೈಸೂರು ಕೂಡ ಸಂಪೂರ್ಣವಾಗಿ ನಮ್ಮ ಕೈಬಿಟ್ಟು ಹೋಗುತ್ತಿದೆ. ಎಲ್ಲಾ ೨೭ ಮತ ಕ್ಷೇತ್ರಗಳಲ್ಲಿ ಅದು ಮುಂದಿದೆ ಎಂದು ಕಾಣುತ್ತದೆ. ಇದು ಆಶ್ಚರ್ಯ. ಆದರೂ ನಿಜ.

**ಮೇ ೧೫, ೧೯೭೧**

ಬೆಳಿಗ್ಗೆ ೫ ಗಂಟೆಗೆ ಎದ್ದೆ. ಬೆಳಗಿನ ಉಪಾಹಾರವಾದ ಮೇಲೆ ಅಂತರರಾಷ್ಟ್ರೀಯ ಗೃಹವನ್ನು (ಭೂಲಭಾಯಿ ಸಭಾಗೃಹ) ೮ ಗಂಟೆಗೆ ಬಿಟ್ಟೆ. ಸ್ವಲ್ಪ ದುರ್ಬಲತೆ ಕಂಡುದರಿಂದ ಸ್ವಲ್ಪ ವಿಶ್ರಾಂತಿ ತೆಗೆದುಕೊಂಡೆ. ನಾನು ೯-೩೦ಕ್ಕೆ ಧ್ವಜಾರೋಹಣ ಮಾಡಿದೆ. ೧೦ ಗಂಟೆಗೆ ಎಐಸಿಸಿ ಸಭೆಗೆ ಹೋದೆ. ಎರಡೂ ಕಡೆಯಲ್ಲಿ ಭಾಷಣ ಮಾಡಿದೆ. ಚಿಕ್ಕವಾದರೂ ಎರಡೂ ಭಾಷಣಗಳನ್ನು ಸಹೃದಯರು ಹೊಗಳಿದರು. ಕಾಂಗ್ರೆಸ್ ಇತರ ಪಕ್ಷಗಳೊಂದಿಗೆ ಮೈತ್ರಿ ಮತ್ತು ಒಪ್ಪಂದವನ್ನು ಹೊಂದಿರಬಾರದು, ಐಕಮತ್ಯದ ಬಗ್ಗೆ ಮಾತುಕತೆ ಇರಕೂಡದು; ಘೋಷಣೆಗಳು ಮತ್ತು ಸಾಹಸ ಕೃತ್ಯಗಳ ಬದಲು ರಚನಾತ್ಮಕ ಮಾರ್ಗವನ್ನು ಅನುಸರಿಸಬೇಕು; ಹೆಚ್ಚಿನ ಉತ್ಪಾದನೆ ಮತ್ತು ಹೆಚ್ಚಿನ ಸಂಪತ್ತು ಹಂಚಿಕೆ ಮುಂತಾದವುಗಳಿಗೆ ಆದ್ಯತೆ, ನೀರಾವರಿ ಮತ್ತು ವಿದ್ಯುತ್ ಉತ್ಪಾದನೆಯಂತೆ ಮೂಲಭೂತ ಸೌಕರ್ಯಗಳ ರಚನೆಗೆ ಸರ್ಕಾರ ಮುಂದಾಗಬೇಕು ಎಂದು ಹೇಳಿದೆ.

ಪ್ರಾರಂಭಿಕಗಳಾದ ಮೇಲೆ ಸಿ.ಬಿ.ಗುಪ್ತರವರು ಮುಂದಿನ ಅಧ್ಯಕ್ಷರನ್ನು ನಾಮಕರಣ ಮಾಡಬೇಕೆಂಬ ಠರಾವು ಮಂಡಿಸಿದರು. ಎಸ್.ಕೆ.ಪಾಟೀಲರು ಅನುಮೋದಿಸಿದರು. ಕೇವಲ ೬ ಜನ ವಿರೋಧಿಸಿದ್ದು, ಠರಾವು ಮಂಜೂರಾಯಿತು. ನಾನು ಆ ಜವಾಬ್ದಾರಿಯನ್ನು ಒಪ್ಪಿಕೊಳ್ಳಬೇಕಾಯಿತು. ಸಾರ್ವತ್ರಿಕವಾಗಿ ಬೆಂಬಲಿಸಲ್ಪಡುತ್ತಿರುವ ಸಾದಿಕ್‌ಭಾಯಿಯವರು ಅಧ್ಯಕ್ಷರಾಗಲು ನಿರಾಕರಿಸಿದರು. ಇತರರ ಬಗ್ಗೆ ವಿರೋಧವಿದೆ. ರಾಂ ಸುಭಾಗ್‌ಸಿಂಗ್, ಪ್ರತಾಪ್ ಚಂದರ್, ವರ್ಮ, ಅಬಿದ್‌ಆಲಿ ಮುಂತಾದವರು. ಕಾಮರಾಜರು ಸಿಂಗರನ್ನು ಬೆಂಬಲಿಸಿದರೆ ಮೊರಾರ್ಜಿಯವರು ಅದನ್ನು ವಿರೋಧಿಸುತ್ತಾರೆ. ಇವರಿಬ್ಬರೂ ಸಂಪೂರ್ಣವಾಗಿ ಹಠಮಾರಿಗಳು. ತಾವು ದುರ್ಬಲವಾಗಿ ಹೋಗಿದ್ದರೂ ಇಬ್ಬರಿಗೂ ನಾಯಕತ್ವ ಬೇಕು. ಈ ಇಬ್ಬರೂ ಕಾಂಗ್ರೆಸ್ ಸಂಸ್ಥೆ ದುರ್ಬಲವಾಗಲು ಕಾರಣರು. ಕಾಮರಾಜರು ತಮ್ಮ ರಾಜ್ಯದಲ್ಲಿ ಕಷ್ಟಪಟ್ಟು ದುಡಿದರು. ಅವರು ಸಂಕುಚಿತ ದೃಷ್ಟಿಯುಳ್ಳವರಾಗಿದ್ದಾರೆ. ಹಾಗೆಯೇ ಇನ್ನೊಬ್ಬರೂ. ಆರ್.ಎನ್.ಸಿಂಗರು ಅತ್ಯುತ್ತಮ ಆಯ್ಕೆಯೆಂದಲ್ಲವಾದರೂ ಅವರಿಗೆ ತುಂಬ ಬೆಂಬಲವಿದೆಯೆಂದು ನನಗೆ ಕಂಡಿತು.

**ಸೆಪ್ಟೆಂಬರ್ ೮, ೧೯೭೧** **ದೆಹಲಿ**

ನಿನ್ನೆ ದಿನ ಎಸ್.ಕೆ. ಪಾಟೀಲರು, ನಾನು ಎರಡು ಅಥವಾ ಮೂರು ದಿನ ಮುಂಬೈಯಲ್ಲಿ ತಂಗಬಹುದೆಂದರು. ಅವರು ಈ ಬೆಳಿಗ್ಗೆ ಹೊರಟರು. ನಾನು ನಾಳೆ ಬೆಳಿಗ್ಗೆ ಬೊಂಬಾಯಿಗೆ ಹೊರಡುತ್ತೇನೆ. ಈ ಬೆಳಿಗ್ಗೆ ಕಾಮರಾಜ್, ಸಾದಿಕ್‌ಭಾಯಿ, ಎಸ್.ಡಿ.ಮಿಶ್ರ ಬಂದು ಇತ್ತೀಚಿನ ಬೆಳವಣಿಗೆ ಮತ್ತು ಪ್ರಧಾನಿಯ ಪ್ರಜಾಪ್ರಭುತ್ವ ವಿರೋಧಿ ಮತ್ತು

ನಿರಂಕುಶಾಧಿಕಾರದ ಬಗ್ಗೆ ಚರ್ಚಿಸಿದೆವು-ಹೀಗೆ ಮುಂದುವರಿದರೆ ದೇಶದ ಗತಿ ಏನಾಗುತ್ತದೆ ಎಂದು ಕಾಮರಾಜರು ಆಶ್ಚರ್ಯಪಡುತ್ತಿದ್ದರು. ಆಕೆ ಅಥವಾ ಆಕೆಯ ಪಕ್ಷ ಅಥವಾ ಕೀಳು ಅಭಿಪ್ರಾಯವಿರುವ ಸುಬ್ರಹ್ಮಣ್ಯಂರವರ ಜೊತೆಯಲ್ಲೇ ಆಗಲಿ ಏನೇ ಸಂಬಂಧ ಹೊಂದಿರಲು ಸ್ಪಷ್ಟವಾಗಿ ನಿರಾಕರಿಸಿದರು.

ಬೆಳಿಗ್ಗೆ ೧೧ ಗಂಟೆಗೆ ಮೊರಾರ್ಜಿಭಾಯಿಯವರಲ್ಲಿಗೆ ಹೋದೆ. ಅವರ ಜೊತೆಯಲ್ಲಿ ಗುಜರಾತ್ ಮುಂತಾದ ವಿಷಯಗಳನ್ನು ಚರ್ಚಿಸುತ್ತಾ ಸ್ವಲ್ಪಕಾಲ ಕಳೆದನು. ಕಳೆದ ತಿಂಗಳು ಸಭೆ ಸೇರಿದ್ದಾಗ ಕಾರ್ಯಕಾರಿ ಸಮಿತಿಯ ೨೪ನೇ ತಿದ್ದುಪಡಿಯ ಪರವಾಗಿ ಅವರಿದ್ದರು ಮತ್ತು ನನ್ನ ವಿರೋಧವಿದ್ದರೂ ನಾವು ಬೆಂಬಲಿಸಿದೆವು. ಆದರೆ ಇವತ್ತು ತಾವು ಅದರ ಪರವಾಗಿಲ್ಲ ಎಂದು ಹೇಳಿದರು. ಹಾಸ್ಯಾಸ್ಪದ, ವಿಚಾರವಂತರಾಗಿ ಕಾಣಲು ನಮ್ಮ ಈ ದುರ್ಬಲತೆಯು ನಮ್ಮನ್ನು ಮತ್ತು ರಾಷ್ಟ್ರವನ್ನು ಕೊಲ್ಲುತ್ತಿದೆ. ನಾವು ನಿಸ್ಸಹಾಯಕರಾಗಿ ಕಮ್ಯೂನಿಸಂ ಕಡೆಗೆ ಎಳೆಯಲ್ಪಡುತ್ತಿದ್ದೇವೆ. ಉತ್ಪಾದನೆಗಿಂತ ಒಡೆತನ ಕಸಿದುಕೊಳ್ಳುವುದರಲ್ಲಿಯೇ ನಾವು ಹೆಚ್ಚು ತೃಪ್ತಿಪಡುತ್ತಿದ್ದೇವೆ. ಈ ಅವಿವೇಕಮಾರ್ಗದಿಂದ ನಾವು ದಿವಾಳಿತನ ಮತ್ತು ದುರ್ಬಲತೆಯಲ್ಲಿ ಅಂತ್ಯಗೊಳ್ಳುತ್ತೇವೆ.

**ನವೆಂಬರ್ ೧೩, ೧೯೭೧ ಬಾಂಗ್ಲಾದೇಶ**

ರಾತ್ರಿ ಸುಮಾರು ೮ ಗಂಟೆಗೆ ಯುಎನ್ಐ ಮನುಷ್ಯನೊಬ್ಬ ಬಂದು ಎಐಸಿಸಿ ಇಬ್ಬರು ಕಾರ್ಯದರ್ಶಿಗಳಾದ ಶರ್ಮ ಮತ್ತು ಯಾದವ್ ೨೦೦ ಜನ ಗೂಂಡಾಗಳೊಂದಿಗೆ ೨, ಜಂತರ್‌ಮಂತರ್‌ಗೆ ನುಗ್ಗಿ ಬಲಾತ್ಕಾರವಾಗಿ ಶರೀರ ಸಹಿತ ಸಾದಿಕ್‌ಭಾಯಿಯನ್ನು ಕಟ್ಟಡದಿಂದ ಹೊರಗೆ ದೂಡಿ ಆ ಕಟ್ಟಡವನ್ನು ಆಕ್ರಮಿಸಿಕೊಂಡಿದ್ದಾರೆ. ಈ ದಿನ ಬೆಳಿಗ್ಗೆ ೯ ಗಂಟೆಗೆ ಪ್ರವಾಸದಿಂದ ಹಿಂದಿರುಗಿದ ಪ್ರಧಾನಿಯವರಿಗೆ ವಿಷಯ ತಿಳಿಸಿದರೂ ಏನೂ ಆಗಿಲ್ಲ. ಈ ಕೃತ್ಯವು ಆಕೆಯು ವಾಪಸಾದ ೨ ರಿಂದ ೮ ಗಂಟೆಗಳಲ್ಲಿ ನಡೆಯಿತು. ಮುಂದೆ ಇದೇ ರೀತಿ ಬೇರೆ ರಾಜ್ಯಗಳಲ್ಲಿ ನಡೆಯುತ್ತದೆ. ಈ ಸರ್ಕಾರದಿಂದ ನಾವು ಏನು ನಿರೀಕ್ಷಿಸಬಹುದು ಎಂಬುದರ ಮುನ್ಸೂಚನೆ ಇದು. ಈ ಸರ್ಕಾರವು ಯಾವ ಆಜ್ಞೆಯನ್ನೂ ಅಥವಾ ಕಾನೂನನ್ನೂ ಗೌರವಿಸುವುದಿಲ್ಲ. ಆಸ್ತಿಯ ಪ್ರಶ್ನೆಯಾಗಿ ಸಕ್ರಮ ಸಿವಿಲ್ ನ್ಯಾಯಾಲಯಗಳು ನಿರ್ಧರಿಸುತ್ತವೆ ಎಂಬ ಉಚ್ಚತಮ ನ್ಯಾಯಾಲಯದ ಆದೇಶವಿದ್ದರೂ ಇದನ್ನು ಮಾಡಲಾಗಿದೆ. ಈಗ ಉಳಿದಿರುವ ಒಂದೇ ಮಾರ್ಗವೆಂದರೆ ಸರ್ಕಾರದ ವಿರುದ್ಧ ಹೋರಾಡಿ ಪರಿಣಾಮಗಳನ್ನು ಎದುರಿಸುವುದು.

**ನವೆಂಬರ್ ೨೦, ೧೯೭೧ ದೆಹಲಿ - ಮದರಾಸು**

ಇಬ್ಬರು ಅಮೆರಿಕನ್ನರು ಮತ್ತು ಒಬ್ಬ ಪತ್ರಕರ್ತನ ಜೊತೆಯಲ್ಲಿ ಬೆಳಗಿನ ಉಪಾಹಾರ ಮಾಡಿದೆ. ಈ ಇಬ್ಬರು ಅಮೆರಿಕನ್ನರು ಶಿಕ್ಷಣದಲ್ಲಿ ಆಸಕ್ತಿಯುಳ್ಳವರೆಂದೂ ಮತ್ತು

ಸಂಪೂರ್ಣವಾಗಿ ಕಮ್ಯೂನಿಸ್ಟ್ ವಿರೋಧಿಗಳಾಗಿದ್ದರೆಂದು ಕಾಣುತ್ತದೆ. ಅವರು ನಮ್ಮ ಸಸ್ಯಾಹಾರಿ ಉಪಾಹಾರವನ್ನು ಇಷ್ಟಪಟ್ಟರು. ಕಮ್ಯೂನಿಸಂ ಪ್ರಧಾನಿಯ ವರ್ತನೆ ಮುಂತಾದವುಗಳ ಬಗ್ಗೆ ನನ್ನ ಅಭಿಪ್ರಾಯವನ್ನು ದಾಖಲಿಸಿಕೊಂಡರು. ಅವರು ನೀಗ್ರೋ ವಿರೋಧಿಗಳೆಂದು ಕಾಣುತ್ತದೆ.

ಹೆಂಡತಿಯ ಅನುಮತಿ ಪಡೆದು ೬-೨೫ಕ್ಕೆ ಸಕಾಲದಲ್ಲಿ ಮದ್ರಾಸಿಗೆ ಹೊರಟು ಅಲ್ಲಿಗೆ ಸಕಾಲದಲ್ಲಿ ತಲುಪಿದೆ. ವಿಮಾನ ನಿಲ್ದಾಣದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸ್ನೇಹಿತರು ಹಾರಗಳಿಂದ ಸ್ವಾಗತಿಸಿದರು. ಕೃಷ್ಣರಾಯರ ವುಡ್‌ಲ್ಯಾಂಡ್ ಹೋಟೆಲ್‌ನಲ್ಲಿ ತಂಗಿದ್ದು ತುಂಬಾ ಅನುಕೂಲವಾಗಿದ್ದಿತು.

ಸಂಜೆ ೫-೧೫ಕ್ಕ ರಾಜಾಜಿ ಮನೆಗೆ ಹೋಗಿ ೧೫ ನಿಮಿಷಗಳ ಕಾಲ ಅವರ ಜೊತೆಯಲ್ಲಿ ಕಳೆದೆ. ವಿರೋಧಿ ಪ್ರಜಾಪ್ರಭುತ್ವ ದಳವೊಂದನ್ನು ಪಾರ್ಲಿಮೆಂಟಿನಲ್ಲಿ ರಚಿಸಲಾಗಲಿಲ್ಲವೆಂದು ಅವರಿಗೆ ನಿರಾಶೆಯಾಗಿದೆ. ಅವರು ಆಸೆಗಳನ್ನೇ ಬಿಟ್ಟುಬಿಟ್ಟಿದ್ದರೂ ಈಗಲೂ ಅದು ಸಾಧ್ಯವೆಂದು ಹೇಳಿದರು. ಅವರ ಬುದ್ಧಿಶಕ್ತಿ ತುಂಬಾ ತೀಕ್ಷ್ಣವಾಗಿದೆ. ಸ್ವಾತಂತ್ರ ಹೋರಾಟದ ಕಾಲದಲ್ಲಿ ನಮ್ಮನ್ನು ಪ್ರಚೋದಿಸಿ ಆಪತ್ತುಗಳನ್ನು ಎದುರಿಸಿದಂತ ಚೈತನ್ಯ ಈಗ ಅಗತ್ಯವಾಗಿದೆ ಎಂದು ಅವರು ಭಾವಿಸಿದ್ದಾರೆ. ನಾನು ನನ್ನ ಕೈಲಾದಷ್ಟನ್ನು ಮಾಡುತ್ತೇನೆಂದು ಭರವಸೆಯಿತ್ತೆ. ಅವರಿಗೆ ಸಂತೋಷವಾಯಿತು. ಪ್ರಧಾನಿಯ ಕುತಂತ್ರಗಳು ಸಫಲವಾಗುವುದಿಲ್ಲ ಎಂಬ ಆಶಯ ವ್ಯಕ್ತಪಡಿಸಿದರು. ನೆನ್ನೆ ದಿವಸ ಹೆಂಡತಿಯನ್ನು ಕಳೆದುಕೊಂಡ ಭಕ್ತವತ್ಸಲಂರವರನ್ನು ಕಂಡೆ. ಇದೊಂದು ಸೌಜನ್ಯದ ಭೇಟಿ. ಮಧ್ಯಾಹ್ನ ಮತ್ತು ಸಾಯಂಕಾಲ ಪತ್ರಿಕಾಜನರು ನನ್ನನ್ನು ಭೇಟಿ ಮಾಡಿದರು. ವಿಕ್ಕಿ ಕಪೂರ್ ಇಲ್ಲಿದ್ದಾರೆ.

**ಡಿಸೆಂಬರ್ ೨, ೧೯೭೧ ಧಾರವಾಡ**

ನಿನ್ನೆದಿನ ೨೫ನೇ ತಿದ್ದುಪಡಿಯನ್ನು ಅಂಗೀಕರಿಸಲಾಯಿತು. ಕಾಮರಾಜ್ ಮತ್ತು ಮೊರಾರ್ಜಿ ಕೂಡ ಅದನ್ನು ಬೆಂಬಲಿಸಿದರೆನ್ನಲಾಗಿದೆ. ಒಂದು ಕಾರ್ಯಕಾರಿ ಸಭೆಯಲ್ಲಿ ತೀರ್ಮಾನಿಸಿದಂತೆ ನಮ್ಮ ಕಚೇರಿಯಲ್ಲಿ ಯಾವುದೇ ಲಾಯರ್ ಜೊತೆಯಲ್ಲಿ ಸಮಾಲೋಚಿಸದಿರುವುದು ದುರದೃಷ್ಟಕರ. ಕಾಮರಾಜರು ನಿಜವಾಗಿ ಇದರ ಕಾನೂನು ತೊಡಕುಗಳನ್ನು ಅರ್ಥಮಾಡಿಕೊಂಡಿದ್ದಾರೆಯೆ ಎಂದು ನನಗೆ ತಿಳಿಯದು. ಆದರೆ ತಾವು ವಿಚಾರವಾದದ ಪ್ರತಿರೂಪ ಎಂಬ ತೃಪ್ತಿಯನ್ನು ಅವರು ಪಡೆದಿದ್ದಾರೆ. ನನಗೆ ತುಂಬಾ ಬೇಸರವಾಗಿದೆ. ದೆಹಲಿಯನ್ನು ೧೧ ಅಥವಾ ೧೨ನೇ ತಾರೀಕು ತಲುಪುತ್ತೇನೆಂದು ಸಾದಿಕ್‌ಭಾಯಿಗೆ ಬರೆದಿದ್ದೇನೆ. ಮಸೂದೆಯ ತೊಡಕುಗಳನ್ನು ಸ್ನೇಹಿತರ ಜೊತೆಯಲ್ಲಿ ಚರ್ಚಿಸುತ್ತೇನೆ. ನನ್ನ ದೃಷ್ಟಿಯಲ್ಲಿ ಈ ಪ್ರತಿಗಾಮಿ ಮಸೂದೆಯು ಕಾನೂನಾದರೆ ಇದನ್ನು ಬೆಂಬಲಿಸಬೇಕೆ ಅಥವಾ ಕಾಂಗ್ರೆಸ್‌ನಿಂದ ಹೊರಬಿದ್ದು ನನ್ನ ಭವಿಷ್ಯವನ್ನು ನಾನು

ಹುಡುಕಿಕೊಳ್ಳಬೇಕೇ ಎಂದು ಸ್ನೇಹಿತರ ಜೊತೆಯಲ್ಲಿ ಚರ್ಚಿಸುತ್ತೇನೆ. ನನಗೆ ಕೆಲವೇ ವರ್ಷಗಳ ರಾಜಕೀಯ ಉಳಿದಿದ್ದರೂ ಕೂಡ ಈ ಕಾನೂನನ್ನು ಸಹಿಸಲಾರೆ.

ಮಹಾಲಿಂಗ ಶೆಟ್ಟಿ ಮತ್ತು ಪಾರ್ವತಿ ಬಂದರು. ಶೆಟ್ಟಿಯವರ ಜೊತೆಯಲ್ಲಿ ದೀರ್ಘವಾದ ಚರ್ಚೆಗಳನ್ನು ಮಾಡಿದೆ. ಈ ಕಾನೂನನ್ನು ನಾನು ಒಪ್ಪಿಕೊಳ್ಳಬೇಕೆಂಬುದು ಅವರ ಇಷ್ಟ. ನನಗೆ ಇದರಿಂದ ತುಂಬಾ ಬೇಜಾರಾಗಿದೆ. ಇವುಗಳೆಲ್ಲದರಿಂದ ಹೊರಬಂದು ನನ್ನದೇ ಆದ ರೀತಿಯಲ್ಲಿ ಹೋರಾಡಬೇಕು.

**ಡಿಸೆಂಬರ್ ೩, ೧೯೭೧ ಧಾರವಾಡ - ತುರ್ತುಪರಿಸ್ಥಿತಿ ಘೋಷಿಸಲಾಯಿತು**

ಈ ೨೪ನೇ ತಿದ್ದುಪಡಿಯು ನನ್ನನ್ನು ಗೊಂದಲಕ್ಕೀಡುಮಾಡಿದೆ. ಇವತ್ತು ನಾನು ಎಸ್.ಕೆ.ಪಾಟೀಲರಿಗೆ ಈ ಮಸೂದೆಯ ಫಲಿತಾಂಶಗಳನ್ನು ಕುರಿತು ಬರೆದೆ. ನಾನು ಬೊಂಬಾಯಿಗೆ ಹೋದಾಗ ಅವರ ಜೊತೆಯಲಿ ಬಾಂಗ್ಲಾದೇಶದ ಬಗ್ಗೆ ಮತ್ತು ಪಾಕಿಸ್ತಾನದ ಜೊತೆಯಲ್ಲಿ ಸಂಬಂಧಗಳನ್ನು ಕುರಿತು ಮಾತನಾಡುತ್ತೇನೆಂದು ಬರೆದೆ. ಆದರೆ ಪರಿಸ್ಥಿತಿ ಬಹಳ ಅಶಾಂತವಾಗಿದೆ. ನಿರೀಕ್ಷಿಸಿದಂತೆ ಚೀನಾವು ಪಾಕಿಸ್ತಾನದ ಪರ ಸ್ಪಷ್ಟ ನಿಲುವನ್ನು ತಳೆದಿದೆ. ಅಮೆರಿಕನ್ನರು ತುಯ್ದಾಡಿ-ಹೊಯ್ದಾಡಿ ಚೀನಾದ ಕಡೆ ಹೋಗಬಹುದೆ? ಬ್ರಿಟನ್ ಕೂಡ ಹಾಗೆ ಮಾಡಬಹುದು. ಮಧ್ಯ ಏಷ್ಯಾ ಮತ್ತು ಮುಸ್ಲಿಂ ದೇಶಗಳು ಸ್ಪಷ್ಟವಾದ ಕಾರಣಗಳಿಗಾಗಿ ಪಾಕಿಸ್ತಾನಕ್ಕೆ ಅನುಕೂಲವಾಗಿರಬಹುದು. ಉಳಿದಂತೆ ಒಂದೇ ಸ್ನೇಹಿತ ದೇಶ ರಷ್ಯಾ. ಅವರೂ ಕೂಡ ಬಹಿರಂಗವಾಗಿ ಸಹಾಯಮಾಡುತ್ತಾರೆಂದು ನನಗನಿಸುವುದಿಲ್ಲ. ಅವರು ನಮ್ಮ ಸ್ನೇಹವನ್ನು ಕೇಳಿದ್ದಾರೆ. ನಾವು ಅವರನ್ನು ಕೇಳಿದ್ದೇವೆ. ಏಕೆಂದರೆ ನಮ್ಮಿಬ್ಬರನ್ನೂ ಪ್ರತ್ಯೇಕಿಸಿ ಬಿಡಲಾಗಿದೆ. ನಾವೇನಾದರೂ ಸೋಲುವ ಹಾಗಿದ್ದರೆ ಅವರು ನಿಜವಾಗಿ ಸಹಾಯ ಮಾಡುತ್ತಾರೆಯೇ ಎಂದು ಕಾದುನೋಡಬೇಕು. ಮಿಲಿಟರಿ ಸರ್ವಾಧಿಪತಿ ಯಾಹ್ಯಾಖಾನ್ ತಾನು ಯುದ್ಧ ಪ್ರಾರಂಭಿಸುವೆನೆಂದು ವಟಗುಟ್ಟುತ್ತಿದ್ದಾನೆ. ನಾವು ಎಲ್ಲಾ ಕಾಲದಲ್ಲಿ ಅವಕಾಶಗಳಿಗಾಗಿ ಕಾಯುತ್ತಿದ್ದೇವೆ. ನಾವು ರಕ್ಷಣಾತ್ಮಕವಾಗಿದ್ದೇವೆ. ಈ ನಿಲುವನ್ನು ತಾಳಿದರೆ ಪ್ರಪಂಚವು ನಮ್ಮನ್ನು ಗೌರವಿಸುತ್ತದೆಂದು ಕಾಣುತ್ತದೆ. ಇದು ಮೂರ್ಖತನ. ಪ್ರಪಂಚವು ಬಲವನ್ನು ಮಾತ್ರ ಗೌರವಿಸುತ್ತದೆ. ಈಗಲೂ ಕೂಡ ನಾವು ಬಾಂಗ್ಲಾದೇಶವನ್ನು ಮಾನ್ಯಮಾಡಿ ಪಾಕಿಸ್ತಾನದೊಳಕ್ಕೆ ನುಗ್ಗಿ ಅವರನ್ನು ಪೂರ್ವದಲ್ಲಿ ಸದೆಬಡಿಯಲು ಪ್ರಯತ್ನಿಸಬಹುದು. ಪ್ರಪಂಚವು ಏನನ್ನೂ ಮಾಡುವುದಿಲ್ಲ. ಸಾಯಂಕಾಲದ ಹೊತ್ತಿಗೆ ರೇಡಿಯೋದಲ್ಲಿ ಪ್ರಧಾನಮಂತ್ರಿ ಮತ್ತು ರಕ್ಷಣಾ ಮಂತ್ರಿಯವರು ದೆಹಲಿಗೆ ಬರುತ್ತಾರೆ. ಮಧ್ಯರಾತ್ರಿಯಲ್ಲಿ ಪ್ರಧಾನಿ ಒಂದು ಘೋಷಣೆಯನ್ನು ಮಾಡುತ್ತಾರೆ ಎಂದು ಬಿತ್ತರಿಸಲಾಯಿತು. ಒಳ್ಳೆಯದು. ಯುದ್ಧವನ್ನು ಘೋಷಿಸುತ್ತಾರೆಂಬುದು ನನ್ನ ನಿರೀಕ್ಷೆ.

ಡಿಸೆಂಬರ್ ೪, ೧೯೭೧

ನಿನ್ನೆದಿನ ರಾತ್ರಿ ೨೫ ನಿಮಿಷಗಳ ಅಕಾರಣವಾದ ವಿಳಂಬದ ನಂತರ ಮಧ್ಯರಾತ್ರಿ ೧೨-೨೫ಕ್ಕೆ ಪ್ರಧಾನಿಯು ಆಕಾಶವಾಣಿಯಲ್ಲಿ ಮಾತನಾಡಿ ತುರ್ತುಪರಿಸ್ಥಿತಿಯನ್ನು ಘೋಷಿಸಿದರು. ಈ ಭಾಷಣದಲ್ಲಿ ತೀವ್ರತೆ, ಹುಮ್ಮಸ್ಸು ಮತ್ತು ಖಾರವಿಲ್ಲ. ಏನೇ ಆಗಲಿ ಕೊನೆಗೆ ಕೆಲವು ಸಕಾರಾತ್ಮಕ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ. ಅದೂ ಉತ್ತರದಲ್ಲಿ ಕಾಶ್ಮೀರ, ಪಂಜಾಬು ಮತ್ತು ರಾಜಸ್ಥಾನದ ವಾಯುನೆಲೆಗಳ ಮೇಲೆ ಬಾಂಬ್ ಹಾಕಿದನಂತರವೇ ಪ್ರಾರಂಭಿಸಲಾಯಿತು. ಪದೇಪದೇ ಬರುತ್ತಿರುವ ಪ್ರಸಾರಗಳನ್ನು ಕುತೂಹಲದಿಂದ ಕೇಳುತ್ತಿದ್ದೇನೆ. ನಮ್ಮ ಭೂಸೈನಿಕರು ಮತ್ತು ನೌಕೆಯು ಒಳ್ಳೆಯ ರೀತಿಯಲ್ಲಿ ಕೆಲಸ ಮಾಡುತ್ತಿರುವುದು ಸಂತೋಷ. ಪಾಕಿಸ್ತಾನವು ಯುದ್ಧವನ್ನು ಘೋಷಿಸಿದೆ. ಸ್ವಾಗತ. ನಾವು ತುರ್ತುಪರಿಸ್ಥಿತಿಯನ್ನು ಘೋಷಿಸಿದ್ದೇವೆ: ಪಶ್ಚಿಮ ಮತ್ತು ಪೂರ್ವದಲ್ಲಿ ಪಾಕಿಸ್ತಾನ ಪ್ರಾಂತ್ಯದೊಳಕ್ಕೆ ಹೋಗಿದ್ದೇವೆ. ಭಾರತದ ರಕ್ಷಣಾ ಕಾಯ್ದೆಯನ್ನು ನಮ್ಮ ಪಾರ್ಲಿಮೆಂಟು ಅಂಗೀಕರಿಸಿದೆ. ನಾವು ಎದುರಿಸಿ ಹೋರಾಡೋಣ. ನಾವು ಗೆಲ್ಲುತ್ತೇವೆ.

ಡಿಸೆಂಬರ್ ೫, ೧೯೭೧

ಪಾಕಿಸ್ತಾನದ ಜೊತೆಯಲ್ಲಿ ಯುದ್ಧದ ಬಗ್ಗೆ ಬರುತ್ತಿರುವ ಸಮಾಚಾರವನ್ನು ಇಡೀ ದಿವಸ ಕೇಳಿದೆ. ನಮ್ಮ ಭೂ, ವಾಯು ಮತ್ತು ನೌಕಾ ರಕ್ಷಣಾಬಲಗಳು ಬಹುಚೆನ್ನಾಗಿ ಕೆಲಸ ಮಾಡುತ್ತಿವೆ. ಆದರೂ ನಮ್ಮ ಜಯದ ಬಗ್ಗೆ ಉತ್ಪ್ರೇಕ್ಷೆ ಮಾಡುತ್ತಿರಬಹುದು ಅಥವಾ ಎದುರಾಳಿಗಳು ನಮ್ಮ ನಷ್ಟಗಳ ಬಗ್ಗೆ ಹಾಗೆ ಮಾಡುತ್ತಿರಬಹುದು. ಹೊರಹೊಮ್ಮುತ್ತಿರುವ ಚಿತ್ರಣವು ಬಹಳ ಉತ್ತೇಜನವಾಗಿದೆ. ಪಶ್ಚಿಮ ಮತ್ತು ಪೂರ್ವವಲಯಗಳಲ್ಲಿ ನಮ್ಮ ಜವಾನರನ್ನು ಶ್ಲಾಘಿಸಬೇಕು ಮತ್ತು ಹೆಮ್ಮೆಪಡಬೇಕು. ಬಾಂಗ್ಲಾದೇಶದಲ್ಲಿನ ಜಗಳವು ಬೇಗ ಮುಗಿಯಬಹುದೆಂಬ ಭಾವನೆ ನನಗಿದೆ. ಏಕೆಂದರೆ ಪಾಕಿಸ್ತಾನ ಸೈನ್ಯವು ಹೊರಗಿನ ಸೈನ್ಯವನ್ನು ಮಾತ್ರವಲ್ಲದೆ ದೇಶದೊಳಗಿನದನ್ನು ಎದುರಿಸಬೇಕು. ಸ್ಥಳೀಯ ಜನರು ಸಂಪೂರ್ಣವಾಗಿ ಅವರಿಗೆ ವಿರೋಧವಾಗಿರಬೇಕು. ಆದ್ದರಿಂದ ಯುದ್ಧವು ಬೇಗ ಮುಗಿಯಬಹುದು. ಆದರೆ ಪಶ್ಚಿಮದಲ್ಲಿ ಅಷ್ಟು ಸುಲಭವಲ್ಲ. ಚೀನಾದ ಸಹಾಯ, ಅಲ್ಲದೆ ಮಧ್ಯ ಏಷ್ಯಾ ಮುಸ್ಲಿಂ ರಾಜ್ಯಗಳ ಮತ್ತು ಅಮೆರಿಕಾದ ಸಹಾಯದಿಂದ ಮತ್ತು ರಷ್ಯಾವನ್ನು ಹೊರತುಪಡಿಸಿ, ಪ್ರಪಂಚದ ಉಳಿದ ದೇಶಗಳ ನಿರ್ಲಕ್ಷ್ಯ ಇವುಗಳಿಂದಾಗಿ ಪಾಕಿಸ್ತಾನವು ಅಷ್ಟು ಸುಲಭವಾಗಿ ಬಗ್ಗಲಾರದು. ಹಾಗಾಗಿ ದೀರ್ಘಕಾಲದ ಯುದ್ಧವನ್ನು ನಾವು ಎದುರಿಸಬೇಕಾಗಬಹುದು. ನಾವು ಅದಕ್ಕೆ ತಯಾರಾಗಿರಬೇಕು.

**ಡಿಸೆಂಬರ್ ೮, ೧೯೭೧**

ಇವತ್ತಿನ ಯು.ಎನ್.ಅಸೆಂಬ್ಲಿಯ ಮತದಾನವು ಹೇಗೆ ಭಾರತವು ಅಂತರರಾಷ್ಟ್ರೀಯವಾಗಿ ಪ್ರಭಾವ ಮತ್ತು ಸ್ಥಾನದಲ್ಲಿ ಗಣನೀಯವಾಗಿ ನಷ್ಟಪಟ್ಟಿದೆಯೆಂಬ ಸೂಚನೆಯಾಗಿದೆ. ನಮಗೆ ೪ ಮತಗಳು ಬಂದರೆ ನಮ್ಮ ವಿರುದ್ಧ ೧೦೪ ಮತಗಳು. ತಪ್ಪುದಾರಿಗೆಳೆಯುವ, ದುರಹಂಕಾರದ, ಉದ್ಧಟ, ಅಪಕ್ವ ಹೆಂಗಸು ಈ ಪ್ರಧಾನಿಯು ಅನೇಕ ದೇಶಗಳಿಗೆ ಹತಾಶೆಯಿಂದ ವಾಯುಯಾನ ಮಾಡಿದ್ದರಿಂದ ಪ್ರಪಂಚಕ್ಕೆ ಏನು ತಿಳಿಸಿದಂತಾಯಿತು? ಆಕೆಯ ಉಪಮಂತ್ರಿಗಳು, ಸಂಪುಟ ದರ್ಜೆಯ ಮಂತ್ರಿಗಳು ಪ್ರತಿ ಪ್ರಮುಖ ದೇಶವನ್ನೂ ಭೇಟಿಮಾಡಿ ಇಡೀ ಪ್ರಪಂಚವು ಆಕೆಯ ಅಭಿಪ್ರಾಯಗಳಿಗೆ ಸಹಾನುಭೂತಿಯಿಂದಿದೆ ಎಂದು ಹೇಳುತ್ತಿದ್ದಾರೆ. ನಮ್ಮ ರಾಯಭಾರಿಗಳು ಪೂರ್ಣವಾಗಿ ವಿಫಲರಾಗಿದ್ದಾರೆ ಮತ್ತು ನಮ್ಮ ಪ್ರತಿನಿಧಿಗಳು ಸುಖಸಂತೋಷದಿಂದ ಕುಡಿಯುತ್ತಿದ್ದು ಮತ್ತು ನನಗೆ ಹೇಳಿದಂತೆ ಹೆಚ್ಚಿನವರು ಹೆಂಗಳೆಯರ ಸಹವಾಸದಲ್ಲಿ ನಿರತರಾಗಿದ್ದಾರೆ. ಪಾಕಿಸ್ತಾನವು ಉತ್ತಮ ಕೆಲಸ ಮಾಡಿದೆ. ನಮ್ಮದು ಬಹಳ ಉತ್ತಮವಾದ ಪ್ರಕರಣವಾಗಿದ್ದರೂ ಅದನ್ನು ಕೆಟ್ಟರೀತಿಯಲ್ಲಿ, ಅಸಮಂಜಸವಾಗಿ ಮತ್ತು ಅಸಾಮರ್ಥ್ಯದಿಂದ ವ್ಯವಹರಿಸಲಾಗಿದೆ. ಏನೇ ಆಗಲಿ ನಾವೇನೂ ಹೆದರಬೇಕಾಗಿಲ್ಲ. ನಮ್ಮ ಸ್ನೇಹಿತರೆನ್ನಿಸಿಕೊಳ್ಳುವವರನ್ನು ತೃಪ್ತಿಪಡಿಸಲು ನಾವು ಅಷ್ಟೊಂದು ತೊಡಗಿಸಿಕೊಳ್ಳುವುದರ ಬದಲು ನಮ್ಮ ಬಲವನ್ನು ತೋರಿಸಿ ಅದನ್ನು ಅಭಿವದ್ಧಿಪಡಿಸಿದರೆ ಎಲ್ಲರೂ ಗೌರವಿಸುತ್ತಾರೆ. ನಾವು ಐಕಮತ್ಯವನ್ನು ಬಲವನ್ನು ಹೆಚ್ಚಿಸಿಕೊಳ್ಳಬೇಕು. ನಮ್ಮಲ್ಲಿ ಏನೇ ಭಿನ್ನಾಭಿಪ್ರಾಯವಿದ್ದರೂ ಒಂದು ತಂಡದ ಹಾಗೆ ಒಟ್ಟಿಗೆ ನಾವೆಲ್ಲರೂ ಕೆಲಸ ಮಾಡಬೇಕು.

**ಡಿಸೆಂಬರ್ ೧೭, ೧೯೭೧** **ಯುದ್ಧ ವಿರಾಮ**

ಈ ಮಧ್ಯಾಹ್ನ ಪಾಕಿಸ್ತಾನವು ಭಾರತದ ಸಲಹೆಯನ್ನು ಒಪ್ಪಿಕೊಂಡು ಯುದ್ಧ ವಿರಾಮಕ್ಕೂ ಒಪ್ಪಿಕೊಂಡಿರುವುದು ಒಳ್ಳೆಯದು. ಬಾಂಗ್ಲಾದೇಶದ ಸ್ವಾತಂತ್ರ್ಯವು ಪಾಕಿಸ್ತಾನಕ್ಕೆ ದೊಡ್ಡ ಹೊಡೆತ ಮತ್ತು ಯುಎಸ್ಎ ಪ್ರತಿಷ್ಠೆಗೂ ಕೂಡ ದೊಡ್ಡ ಹೊಡೆತವಾಗಿದೆ. ನಿಕ್ಸನ್ ಮೂರ್ಖ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದಾನೆ. ಇಂದಿರಾ ಗಾಂಧಿ ಹೇಳುವಂತೆ ನಾವು ಸಮಾಧಾನದಿಂದರಲಾಗುವುದಿಲ್ಲ. ಆಕೆ ಅನೇಕ ದೇಶಗಳಿಗೆ ಹಾರಾಟ ನಡೆಸಿದುದು ಮೂರ್ಖತನ ಮತ್ತು ಅಪಕ್ವ ನಡತೆ ಎಂದೆನಿಸಿದರೂ ಈ ಎರಡು ವಾರಗಳಲ್ಲಿ ಆಕೆಯ ದಿಟ್ಟ ವರ್ತನೆಗೆ ಆಕೆಯನ್ನು ಪ್ರಶಂಸಿಸಲೇಬೇಕು. ಆಕೆ ಮತ್ತು ಆಕೆಯ ಪಕ್ಷವು ರಾಜಕೀಯದಲ್ಲಿ ಇನ್ನೂ ಬಲವಾಗುತ್ತದೆ. ಈ ಯುದ್ಧದಲ್ಲಿ ಗೆದ್ದುದರಿಂದ ಅವರು ರಾಜಕೀಯ ಬಂಡವಾಳವನ್ನು ಮಾಡಿಕೊಳ್ಳುತ್ತಾರೆ ಎಂಬುದು ನನಗೆ ಖಚಿತ. ಇದಕ್ಕೆ ಗೌರವವು ನಿಜವಾಗಿ ರಕ್ಷಣಾ ಬಲದ ಮೂರು ಭಾಗಗಳಿಗೆ ಹೋಗಬೇಕು. ಅವರು ತುಂಬಾ ಉಜ್ವಲರಾಗಿದ್ದಾರೆ. ಪ್ರತಿಯೊಬ್ಬ ಭಾರತೀಯನೂ ಅವರ ಬಗ್ಗೆ

ಹೆಮ್ಮೆಪಡುತ್ತಾನೆ. ಈ ಯುದ್ಧವು ನಿಜವಾಗಿ ನಮ್ಮ ಸ್ನೇಹಿತರು ಯಾರು ಎಂಬುದನ್ನು ತೋರಿಸಿರುವುದು ಒಳ್ಳೆಯ ವಿಷಯ. ರಷ್ಯಾ ಮತ್ತು ಅದರ ಉಪದೇಶಗಳಾದ ಸಣ್ಣ ರಾಜ್ಯಗಳು ಸಹಾನುಭೂತಿ ವ್ಯಕ್ತಪಡಿಸಿರುವುದಲ್ಲದೆ ಬೇರಾರೂ ಇಲ್ಲ ಎಂದು ನನ್ನ ಭಾವನೆ. ನೆಹ್ರೂರವರಿಂದ ಪ್ರಾರಂಭಿಸಲ್ಪಟ್ಟ ಮುಸ್ಲಿಂ ರಾಜ್ಯಗಳ ನಮ್ಮ ತಿಳಿಗೇಡಿ ಸ್ನೇಹವು ಎಷ್ಟು ತಪ್ಪಾಯಿತು ಎಂಬುದನ್ನು ತೋರಿಸಿದೆ. ಅವರ ಬಗ್ಗೆ ನಾವು ಜಾಗರೂಕರಾಗಿರೋಣ. ಸ್ಥಳೀಯ ಮುಸ್ಲಿಮರನ್ನು ತೃಪ್ತಿಪಡಿಸಲು ವಿದೇಶಿ ಮುಸ್ಲಿಂರನ್ನು ಆಲಂಗಿಸಲು ಪ್ರಯತ್ನಿಸಬೇಕಾಗಿಲ್ಲ.

**ಜನವರಿ ೧೩, ೧೯೭೨ ಧಾರವಾಡ**

ರಾಜಧಾನಿಯಲ್ಲಿ ಇಂದಿರಾ ಗಾಂಧಿಗೆ ಹಿಡಿತವಿರುವಂತೆ ರಾಜ್ಯಗಳಲ್ಲಿ ಕೂಡ ಸಂಪೂರ್ಣ ಹಿಡಿತವಿರಬೇಕೆಂದು ಆಕೆಗೆ ಇಷ್ಟವಿದೆ. ಉತ್ತರಪ್ರದೇಶವನ್ನು ಹೊರತುಪಡಿಸಿ ಒರಿಸ್ಸಾ, ಮದ್ರಾಸ್ ಮತ್ತು ಕೇರಳದಲ್ಲಿ ರಾಜ್ಯ ಚುನಾವಣೆಗಳು ನಡೆಯುತ್ತವೆ. ಆಕೆ ರಾಜ್ಯದಲ್ಲಿ ಏಕೆ ಚುನಾವಣೆಗಳನ್ನು ನಿರ್ಧರಿಸಿಲ್ಲ ಎಂಬುದು ತಿಳಿಯದು. ಏಕೆಂದರೆ ಮುಖ್ಯಮಂತ್ರಿ ಕಮಲಾಪತಿ ತ್ರಿಪಾಠಿಯನ್ನು ಹೊರಕ್ಕೆ ಹಾಕಬೇಕೆಂಬುದರ ಬಗ್ಗೆ ಆಕೆ ಬಹಳ ನಿರ್ದಿಷ್ಟವಾಗಿದ್ದಾರೆ. ಆಕೆ ತ್ರಿಪಾಠಿಯವರನ್ನು ಯಾವತ್ತೂ ಇಷ್ಟಪಡಲಿಲ್ಲ. ಆತ ಕೊಳಕು ಮನುಷ್ಯ. ಯಾವುದೇ ಸನ್ನಡತೆಯಿಲ್ಲದ ಸಂಪೂರ್ಣವಾಗಿ ಅಸಂತೃಪ್ತ ಮನುಷ್ಯ. ಆದರೆ ಯಾರಿಗೆ ನಡತೆಯಿದೆ ? ಈ ಪ್ರಧಾನಿಗೆ ಏನಾದರೂ ನಡತೆಯಿದೆಯೆ ? ಅವಳಲ್ಲಿ ಇರುವ ಹೊಗಳಬಹುದಾದ ಒಂದೇ ಗುಣವೆಂದರೆ ಬೇಗನೆ ತೀರ್ಮಾನಗೊಳಿಸುವ ಸಾಮರ್ಥ್ಯ. ಆಕೆ ಮತ್ತು ಅವರ ಅನುಯಾಯಿಗಳು ರಷ್ಯಾದೊಡನೆ ಮಾಡಿಕೊಂಡ ಒಪ್ಪಂದವನ್ನು ಕೊಂಡಾಡಿದರೂ ಮತ್ತು ಭಾರತದ ತಟಸ್ಥ ನೀತಿಯ ಮೇಲೆ ಪರಿಣಾಮವುಂಟಾಗುವುದಿಲ್ಲವೆಂದು ಹೇಳಿದರೂ ಒಪ್ಪಂದದ ನಂತರ ಮಾಡಲಾದ ಪ್ರತಿಯೊಂದೂ ರಷ್ಯಾ ಪರವಾದ ನಿಲುವಿನ ಕಡೆಗೆ ತೋರಿಸುತ್ತದೆ. ರಷ್ಯಾದ ಹಿಂಬಾಲಕರಾದ ಪೋಲೆಂಡ್, ಜೆಕೊಸ್ಲೊವೇಕಿಯಾ, ಪೂರ್ವ ಜರ್ಮನಿ ಮುಂತಾದ ದೇಶಗಳ ಜೊತೆಯಲ್ಲಿ ದಿನ ನಿತ್ಯದ ಒಪ್ಪಂದಗಳನ್ನು ಮಾಡಿಕೊಳ್ಳುತ್ತಿದ್ದು, ಅವುಗಳು ರೂಪಾಯಿಗಳಲ್ಲಿ ವ್ಯವಹರಿಸುವುದರಿಂದ ಕೋಟ್ಯಾಂತರ ರೂಪಾಯಿಗಳನ್ನು ಲೂಟಿ ಹೊಡೆಯುತ್ತಿದ್ದಾರೆ. ಪ್ರಜಾಪ್ರಭುತ್ವದ ಮುಕ್ತ ಪ್ರಪಂಚವು, ನಮ್ಮ ಲೆಕ್ಕಾಚಾರದಿಂದ ದೂರ ಹೋಗುತ್ತಿವೆಯೆನಿಸುತ್ತದೆ. ಇದು ಭಾರತದ ಪ್ರಜಾಪ್ರಭುತ್ವಕ್ಕೆ ಒಳ್ಳೆಯ ಸೂಚನೆಯಲ್ಲ. ನಾವು ಅದರ ವಿರುದ್ಧ ಹೋರಾಡಬೇಕು. ವಿರೋಧ ಪಕ್ಷದವರೂ ಸೇರಿ ಹೆಚ್ಚಿನವರು ನಾವು ಹೇಡಿಗಳು. ಆಕೆಯ ವಿರುದ್ಧ ಯಾರೂ ಏನೂ ಹೇಳಲು ಇಷ್ಟಪಡುವುದಿಲ್ಲ. ಕಾಮರಾಜ್‌ರಂತಹ ನಾಯಕರು ಕೂಡ. ಸದಾ ಅಧಿಕಾರ ಮತ್ತು ಸ್ಥಾನಕ್ಕೆ ಹಂಬಲಿಸುವ ವೀರೇಂದ್ರ ಪಾಟೀಲರಂತಹ ಸಣ್ಣ ವ್ಯಕ್ತಿಗಳು ಆಕೆಯ ಬಗ್ಗೆ ಮಾತಾಡಲು ಹೆದರುತ್ತಾರೆ. ಈಗ ಅಧಿಕಾರವು ನಮ್ಮನ್ನು ಭ್ರಷ್ಟಗೊಳಿಸಿದೆಯೆಂದರೆ ಅದು ಪೂರ್ಣವಾಗಿ ಆಗಿದೆ!

**ಮಾರ್ಚ್ ೫, ೧೯೭೨ ಮತದಾನದ ಮೊದಲ ದಿನ**

೭ನೇ ತಾರೀಕೂ ಸೇರಿ ಎರಡು ಮುಖ್ಯವಾದ ದಿನಗಳಲ್ಲಿ ಇವತ್ತೂ ಬಹಳ ಮುಖ್ಯವಾದ ದಿನ. ಏಕೆಂದರೆ ರಾಜ್ಯ ವಿಧಾನಸಭೆಗಳಿಗೆ ಚುನಾವಣೆ ನಡೆಯುತ್ತಿದೆ. ಈ ಮತದಾನವು ನಿರ್ಣಾಯಕವಾದದ್ದು, ಏಕೆಂದರೆ ತಕ್ಷಣದ ರಾಜಕೀಯ ಭವಿಷ್ಯವು ನಿರ್ಧಾರವಾಗಬೇಕು ಪ್ರಜಾಪ್ರಭುತ್ವವೆ ಅಥವಾ ನಿಯಂತ್ರಿತ ಪ್ರಜಾಪ್ರುಭುತ್ವವೆ, ಬೇರೆ ಅರ್ಥದಲ್ಲಿ ನಿರಂಕುಶ ಪ್ರಭುತ್ವವಿರಬೇಕೇ ಎಂಬುದು ನಿರ್ಧಾರವಾಗುತ್ತದೆ. ಇಡೀ ದೇಶದ ಚಿತ್ರಣ ಹೊರಬರಬೇಕಾದರೆ ಒಂದು ವಾರ ನಾವು ಕಾಯಬೇಕು.

ನಾನು ರಾಜನ ಜೊತೆಯಲ್ಲಿ ಹೋಗಿ ವೋಟು ಹಾಕಿದೆ. ಸಾಹುಕಾರ್ ವೀರಭದ್ರಪ್ಪನವರನ್ನು ಅವರ ಮನೆಯಲ್ಲಿ ಕಂಡೆ. ಅವರ ಎಡಕಿವಿಗೆ ಶಸ್ತ್ರಚಿಕಿತ್ಸೆಯಾಗಿದೆ. ಅವರು ಚೆನ್ನಾಗಿದ್ದಾರೆ.

೫೦೦ಕ್ಕೂ ಹೆಚ್ಚಾದ ಮತಕ್ಷೇತ್ರಗಳಲ್ಲಿ ಮತದಾನವು ಶಾಂತಿಯುತವಾಗಿತ್ತು, ಒಂದೆರಡು ಕಡೆ ಸಣ್ಣ ಘಟನೆಗಳು ನಡೆದವು ಎಂದು ರೇಡಿಯೋ ಪ್ರಸಾರ ಮಾಡಿತು. ಚುನಾವಣೆಗಳ ಬಗ್ಗೆ ನಮ್ಮ ಜಿಲ್ಲೆಯ ೮ ಮತಕ್ಷೇತ್ರಗಳಲ್ಲಿ ನಿರ್ದಿಷ್ಟ ಸಮಾಚಾರವಿಲ್ಲ. ಹುಬ್ಬಳ್ಳಿ ಮತ್ತು ಒಂದೆರಡು ಸ್ಥಳಗಳಿಗೆ ನಾನು ಹೋಗಬೇಕೆಂದು ತಂತಿ ಸಮಾಚಾರ ಬಂದಿತು. ನಾಳೆ ಮಧ್ಯಾಹ್ನ ೧ ಗಂಟೆಗೆ ಹುಬ್ಬಳ್ಳಿ ತಲುಪುವೆನೆಂದು ಜವಾಬು ಕೊಟ್ಟೆನು.

**ಮಾರ್ಚ್ ೧೨, ೧೯೭೨ ಧಾರವಾಡ**

ದಿನ ಕಳೆದಂತೆ ಆಡಳಿತ ಕಾಂಗ್ರೆಸ್‌ನ ಜಯದ ಬಗ್ಗೆ ರೇಡಿಯೋ ಪತ್ರಿಕೆ ಮುಂತಾದವುಗಳಲ್ಲಿ ಹೆಚ್ಚು ಹೆಚ್ಚು ಸಮಾಚಾರವು ಪ್ರತಿಯೊಂದು ಕಡೆಯಿಂದ ಬರುತ್ತಿತ್ತು. ತುಂಬಾ ಅನಿರೀಕ್ಷಿತ ಸ್ಥಳಗಳಲ್ಲಿ ಅವರು ಗೆದ್ದಿದ್ದಾರೆ. ಈ ಫಲಿತಾಂಶಗಳನ್ನು ನೋಡಿ ಅವುಗಳನ್ನು ಪರಿಗಣಿಸಿದಾಗ ಪುನಃ ಮತಪೆಟ್ಟಿಗೆಯ ದುರುಪಯೋಗವಾಗಿದೆ ಎಂದು ನನಗನಿಸುತ್ತದೆ. ಈ ಸಲ ಬಣ್ಣದ ಕಾಗದವನ್ನು ಉಪಯೋಗಿಸಲಾಗಿದೆ. ಅವರಿಗೆ ಆಗಲೇ ಮೈಸೂರು, ಆಂಧ್ರ, ಮಹಾರಾಷ್ಟ್ರದಲ್ಲಿ ಸ್ಪಷ್ಟ ಬಹುಮತವಿದೆ. ಇತರ ಕಡೆಗಳಲ್ಲಿಯೂ ಪಡೆಯುತ್ತಾರೆ. ಅವರು ಮುಂದಿದ್ದಾರೆ. ಅತ್ಯಾಶ್ಚರ್ಯ, ದೆಹಲಿಯಲ್ಲಿ ಕೂಡ ಅವರು ಸ್ಪಷ್ಟ ಬಹುಮತವನ್ನು ಪಡೆದಿದ್ದಾರೆ. ಹಣವು ಖಂಡಿತವಾಗಿ ಪಾತ್ರವಹಿಸಿದೆ. ಬಡಜನರು ಇನ್ನೂ ಗರೀಬಿ ಹಠಾವೊ ಎಂಬ ಭ್ರಮೆಯಲ್ಲಿದ್ದಾರೆ. ಬಹಳ ಮುಖ್ಯವಾದ ಅಂಶವೆಂದರೆ ಕೇಡಿನ ಮತ. ತಪ್ಪು ಯಾವತ್ತಿದ್ದರೂ ಹೊರಬರುತ್ತದೆ. ಆಕೆ ಗಾಳಿಯನ್ನು ಬಿತ್ತಿದ್ದಾರೆ. ಆಕೆಯು ಬಿರುಗಾಳಿಯ ಫಲವನ್ನು ಬೇಗನೆ ಪಡೆಯುತ್ತಾರೆಂಬುದು ನನಗೆ ಖಂಡಿತ. ನಾವು ಕಾಯ್ದು ನೋಡಬೇಕು. ಆದರೆ ನಮ್ಮ ಸ್ನೇಹಿತರು ನಿರಾಶೆಗೊಳ್ಳಬಾರದು. ಈ ಸ್ಪರ್ಧೆಯನ್ನು ಛಲದಿಂದ ಸ್ವೀಕರಿಸಬೇಕು. ಇನ್ನೂ ಚೆನ್ನಾಗಿ ವ್ಯವಸ್ಥೆಗೊಳಿಸಿ ಸಾಮಾನ್ಯ ಜನರಿಗೆ ರಾಜಕೀಯ ಶಿಕ್ಷಣ ಕೊಡಬೇಕು. ಕೇಂದ್ರ ಮತ್ತು ರಾಜ್ಯಗಳ ಆಯವ್ಯಯಗಳು ನಮಗೆ

ಇದಕ್ಕೆ ಸಾಕಷ್ಟು ಅವಕಾಶ ಕೊಡುತ್ತವೆಯೆಂದು ಕಾಣುತ್ತದೆ. ನನ್ನ ಸ್ನೇಹಿತರು ಅಂದರೆ ವೀರೇಂದ್ರ ಪಾಟೀಲ್ ಮತ್ತು ಅವರ ಸಮೀಪದ ಸಹಪಾಠಿಗಳು ಹೇಗೆ ನಡೆದುಕೊಳ್ಳುತ್ತಾರೆಂದು ಹೇಳಲಾಗುವುದಿಲ್ಲ.

**ಜುಲೈ ೪, ೧೯೭೨ ಚಿತ್ರದುರ್ಗ**

ಸಾಮಾನ್ಯವಾಗಿ ಪ್ರಪಂಚದಾದ್ಯಂತ ಭಾರತ-ಪಾಕಿಸ್ತಾನ್ ಒಪ್ಪಂದಕ್ಕೆ ಸ್ವಾಗತವಿದೆ. ಇದು ಸಾಮಾನ್ಯವಾಗಿ ಆಗುತ್ತದೆ. ಅಲ್ಲದೆ ಒಪ್ಪಂದದಲ್ಲಿಯೇ ಆಕ್ಷೇಪಣೆ ಮಾಡುವಂತಹುದೇನೂ ಇರುವುದಿಲ್ಲ. ಎರಡೂ ದೇಶಗಳು ಒಪ್ಪಂದದಲ್ಲಿ ಹೇಳಿರುವುದನ್ನು ಮನಃಪೂರ್ವಕವಾಗಿ ಅನುಷ್ಠಾನಗೊಳಿಸುವುವೆಂಬುದು ಪ್ರತಿಯೊಬ್ಬರ ಆಶಯ. ನೆಹ್ರೂರವರ ಕಾಲದಲ್ಲಿ ಈ ರೀತಿಯಾದ ಒಪ್ಪಂದವು ನಮ್ಮ ಮತ್ತು ಪಾಕಿಸ್ತಾನದ ನಡುವೆ ಇತ್ತು. ಆದರೆ ಅದು ಪ್ರಯೋಜನವಾಗಲಿಲ್ಲ. ಈಗ ಪಾಕಿಸ್ತಾನವು ಒಂದು ಪಾಠವನ್ನು ಕಲಿತಿದೆ. ಅದು ಹೆಚ್ಚು ಸಕಾರಣವಾದುದೆಂದು ಕಾಣುತ್ತದೆ. ಆದರೆ ತೊಡಕಾಗಿರುವ ಒಂದು ವಿಷಯವೆಂದರೆ ಕಾಶ್ಮೀರ. ಆದರೆ ಬಾಂಗ್ಲಾ ದೇಶವು ಸಾರ್ವಭೌಮವಾದ ಮೇಲೆ ಅದರ ಅರ್ಥ ಮತ್ತು ವಿಷಯಗಳಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಕಳೆದುಕೊಂಡಿದೆ. ಈ ಒಪ್ಪಂದವು ಇನ್ನೂ ಹೇಗೆ ಕೆಲಸ ಮಾಡುತ್ತದೆಯೆಂದು ಕನಿಷ್ಠ ೬ ತಿಂಗಳ ಕಾಲವಾದರೂ ನಾವು ಕಾಯ್ದು ನೋಡಬೇಕು.

**ಆಗಸ್ಟ್ ೧೫, ೧೯೭೨ ಸ್ವಾತಂತ್ರ್ಯೋತ್ಸವದ ದಿನ, ಧಾರವಾಡ**

ಇದು ಆನಂದದಾಯಕವಾದ ದಿನ. ಮೋಡ ಕವಿದು ದಟ್ಟವಾಗಿದ್ದರೂ ಚುರುಕಾಗಿ ಸ್ವಚ್ಛವಾಗಿದ್ದಿತು. ನಡೆಯಲು ನನಗೆ ಸಂತೋಷವಾಯಿತು. ಇಡೀ ದಿನ ಮಾಮೂಲಿನಂತೆ ಎಐಆರ್‌ನಲ್ಲಿ ಸಮಾಚಾರ ತುಂಬಿದ್ದು ಅದರಲ್ಲಿ ಹೆಚ್ಚಿನ ಭಾಗವು ಪ್ರಧಾನಿ ಏನು ಹೇಳುತ್ತಿದ್ದಾರೆ ಅಥವಾ ಏನು ಹೇಳಿದರೆಂಬುದರ ಬಗ್ಗೆಯಾಗಿದ್ದಿತು. ನಿಜ, ಸ್ವಲ್ಪಮಟ್ಟಿಗೆ ಹಾಗೆ ಮಾಡಬೇಕಾಗುತ್ತದೆ. ಆದರೆ ಇಷ್ಟರ ಮಟ್ಟಿಗೆಯಲ್ಲ.

ನನ್ನನ್ನು ಯಾವುದೇ ಕಾರ್ಯಕ್ರಮಕ್ಕೆ ಆಹ್ವಾನಿಸಲಿಲ್ಲ. ಧಾರವಾಡ ಮತ್ತು ಹುಬ್ಬಳ್ಳಿಯಲ್ಲಿ ಕೂಡ ನನ್ನ ವಿಳಾಸ ಕೆಲವರಿಗೆ ಮಾತ್ರ ತಿಳಿದಿತ್ತು. ಆದರೆ ನಮ್ಮವರೇ ಆದ ಕಾಂಗ್ರೆಸಿನ ಜನ ನನ್ನನ್ನು ತಿರಸ್ಕಾರದಿಂದ ನೋಡಿದರು, ನಿರ್ಲಕ್ಷ್ಯದಿಂದ ಕಂಡರೆಂದು ನಾನು ಯೋಚಿಸಿದೆ. ನನ್ನನ್ನು ಆಹ್ವಾನಿಸಬೇಕಾಗಿತ್ತು ಎಂದು ಭಾವಿಸಿ ನಂತರ ಏಕೆ ನಾನು ನಿರಾಶೆಗೊಳ್ಳಬೇಕಾಗಿತ್ತು? ಏನೇ ಆಗಲಿ, ನಾವು ಸ್ವತಂತ್ರ ದೇಶದವರು ಮತ್ತು ಅಷ್ಟರಮಟ್ಟಿಗೆ ಅದರ ಅಂತ್ಯ, ಆದರೂ ಇನ್ನೂ ಬೇಕಾದಷ್ಟು ಮಾಡಬೇಕು. ಇನ್ನೂ ಹೆಚ್ಚಾಗಿ ಮಾಡಬೇಕಾಗಿರಬಹುದು. ಇಂದಿರಾರವರ ಕಳೆದ ಮೂರು ವರ್ಷಗಳ ಆಳ್ವಿಕೆಯಲ್ಲಿ ಏನೆಲ್ಲ ನಡೆಯಿತು. ಪ್ರಜಾಪ್ರಭುತ್ವ ಹಕ್ಕುಗಳು ಮತ್ತು ಸಿದ್ಧಾಂತಗಳ ಮೇಲೆ ಹೇಗೆ

ಪರಿಣಾಮ ಬೀರಿತು; ಪ್ರಜಾಪ್ರಭುತ್ವದ ಹೆಸರಿನಲ್ಲಿ ಹೇಗೆ ಎಲ್ಲವನ್ನೂ ದುರುಪಯೋಗ ಪಡಿಸಿಕೊಳ್ಳಲಾಯಿತು ಎಂಬುದನ್ನು ಪರಿಗಣಿಸಿದರೆ ಇನ್ನೂ ಬೇಕಾದಷ್ಟು ಮಾಡಬೇಕು ಮತ್ತು ತುಂಬಾ ಹೆಚ್ಚಾಗಿ ಆಗಬೇಕೆಂದಿನಿಸುತ್ತದೆ.

**ನವೆಂಬರ್ ೧, ೧೯೭೨** **ಕನ್ನಡ ರಾಜ್ಯೋತ್ಸವದ ದಿನ**

ಕರ್ನಾಟಕ ಏಕೀಕರಣದ ೧೬ನೇ ವಾರ್ಷಿಕ ದಿನ. ಇವತ್ತು ಮತ್ತು ಅಂದು ಒಂದೇ ಒಂದು ರಾಜ್ಯವಾಗಿ ರೂಪುಗೊಂಡಿತು. ೧೯೫೬ರಲ್ಲಿ ಇದೇ ದಿನ ರಾಷ್ಟ್ರಾಧ್ಯಕ್ಷ ರಾಜೇಂದ್ರ ಪ್ರಸಾದರು ರಾಜ್ಯವನ್ನು ಉದ್ಘಾಟಿಸಿದರು. ಜಯಚಾಮರಾಜ ಒಡೆಯರ್ ರಾಜ್ಯಪಾಲರು ಮತ್ತು ನಾನು ಮುಖ್ಯಮಂತ್ರಿ ಆಗಿದ್ದೆವು. ನಾನು ರೇಡಿಯೋವನ್ನು ಕೇಳಿದೆ. ನಮ್ಮ ಬಗ್ಗೆ ಒಂದೇ ಒಂದು ಪದ ಹೇಳಲಿಲ್ಲ. ೧೯೨೫ರಿಂದ ಅನೇಕರು ದುಡಿದು ತಮ್ಮ ಸೇವೆಯನ್ನು ಇದಕ್ಕಾಗಿ ಮುಡಿಪಾಗಿಟ್ಟಿದ್ದರೂ ಕರ್ನಾಟಕದ ಏಕೀಕರಣಕ್ಕಾಗಿ ದುಡಿದವರ ಬಗ್ಗೆ ಕೂಡ ಒಂದು ಪದವನ್ನೂ ಹೇಳಲಿಲ್ಲ. ದುರಾದೃಷ್ಟ, ಜನರು ತಮ್ಮನ್ನು ತಾವು ಹೆಚ್ಚಿಸಿಕೊಳ್ಳಬೇಕೆಂಬ ದುರಾಸೆಯಿಂದ ಇತಿಹಾಸವನ್ನು ತಳ್ಳಿಹಾಕಲಾಗುತ್ತಿದೆ.

ಹೆಸರನ್ನು ಬೇಗನೆ ಮೈಸೂರು ಎಂಬುದರಿಂದ ಅರ್ಥಪೂರ್ಣ ಮತ್ತು ಐತಿಹಾಸಿಕ ಕರ್ನಾಟಕವೆಂದು ಬದಲಾಯಿಸಲಾಗುತ್ತದೆಂಬುದು ನನಗೆ ಸಂತೋಷ. ಈ ಹೆಸರು ಇರಬೇಕೆಂದು ತುಂಬಾ ಆಸೆಪಟ್ಟಿದ್ದ ದೊಡ್ಡಮೇಟಿಯವರು ಇಲ್ಲದಿರುವುದು ತುಂಬಾ ದುಃಖಕರವಾಗಿದೆ. ಹಾಗೆಯೇ ನಮ್ಮ ಸ್ನೇಹಿತ ಹಳ್ಳಿಕೇರಿಯವರೂ ಬದುಕಿರಬೇಕಾಗಿತ್ತು. ಅವರಿಬ್ಬರೂ ಇಲ್ಲದಿರುವುದು ದುರದೃಷ್ಟ. ಈ ಹೆಸರನ್ನು ವಿರೋಧಿಸಿದವರು ಮತ್ತು ರಾಜ್ಯದ ರಚನೆಯನ್ನು ವಿರೋಧಿಸಿದವರೂ ಇಂದು ಈ ಅಭಿಪ್ರಾಯಕ್ಕೆ ತಾವು ಬದ್ಧರಾಗಿದ್ದೇವೆಂದು ಹೇಳಿಕೊಳ್ಳುತ್ತಿರುವುದು ಕುತೂಹಲಕಾರಿಯಾದ ವಿಚಾರ. ಈಗ ಜತ್ತಿ ಹೊಸ ಗವರ್ನರ್ ಆಗಿದ್ದಾರೆ. ಉಚ್ಚತಮ ನ್ಯಾಯಾಲಯದಲ್ಲಿ ೧೩ ಜನ ನ್ಯಾಯಧೀಶರುಗಳು ಮೂಲಭೂತ ಹಕ್ಕುಗಳನ್ನು ಕುರಿತು ಇವತ್ತಿನಿಂದ ವಾದಗಳನ್ನು ಕೇಳುತ್ತಿದ್ದಾರೆ.

**ಡಿಸೆಂಬರ್ ೨೫, ೧೯೭೨**

ಈ ದಿನ ಸಾಯಂಕಾಲ ರೇಡಿಯೋದಲ್ಲಿ ಬಿತ್ತರವಾದ ಸಮಾಚಾರವೆಂದರೆ ರಾಜಾಜಿಯವರು ಮೃತರಾದ ಸುದ್ದಿ. ಅವರ ಸಾವು ನಿರೀಕ್ಷಿತವಾಗಿದ್ದಾದರೂ ಇಂದು ಮಧ್ಯಾಹ್ನ ರೇಡಿಯೋವಿನಲ್ಲಿ ಅವರ ಸ್ಥಿತಿ ಉತ್ತಮಗೊಳ್ಳುತ್ತಿದೆ ಎಂಬುದಾಗಿದ್ದಿತು. ಈ ವಯಸ್ಸಿನಲ್ಲಿ ಯುರೇಮಾ ಕಂಡುಬಂದರೆ ಸಾವು ನಿರೀಕ್ಷಿತ. ಒಬ್ಬ ಮಹಾನ್ ವ್ಯಕ್ತಿ ಮಹತ್ತಾಗಿ ಬಾಳಿದವರು. ಗಾಂಧೀಜಿಯ ನೇತೃತ್ವದಲ್ಲಿ ಸ್ವಾತಂತ್ರ್ಯ ಹೋರಾಟವನ್ನು ನಡೆಸಿದವರು. ನೆಹರು ಮನೆತನದ ವಿರುದ್ಧ ಹೋರಾಡಿದ ಮಹಾನ್ ವ್ಯಕ್ತಿಗಳಲ್ಲಿ

ವಾಸ್ತವವಾಗಿ ಇವರು ಕೊನೆಯವರು. ಈಗ ಬದುಕಿರುವವರು, ಜೆ.ಬಿ. ಕೃಪಲಾನಿ. ಪಿ.ಟಿ.ಐ. ಮೂಲಕ ನಾನು ಒಂದು ಸಂದೇಶವನ್ನು ನೀಡಿದೆ. ಅವರ ಮಗ ನರಸಿಂಹನ್‌ರವರಿಗೆ ಸಂತಾಪ ಸೂಚಿಸಿ ತಂತಿಯೊಂದನ್ನು ಕಳುಹಿಸಿದೆ.

**ಡಿಸೆಂಬರ್ ೨೯, ೧೯೭೨ ಧಾರವಾಡ**

ಕಾಂಗ್ರೆಸ್ ಆರ್‌ನ ಅಧ್ಯಕ್ಷ ಈ ಶಂಕರ ದಯಾಳ್‌ಶರ್ಮ ಅವರಿಗೆ ಹೊಸತೇನೂ ಹೇಳಲು ಬರುವುದಿಲ್ಲ. ಗ್ರಾಂಡ್ ಒಪ್ಪಂದ, ಬಾಹ್ಯ ಪ್ರಭಾವಗಳು, ಪ್ರತಿಗಾಮಿಶಕ್ತಿಗಳು ಮುಂತಾದವುಗಳ ಬಗೆ ತಮ್ಮ ಅಧ್ಯಕ್ಷ ಭಾಷಣದಲ್ಲಿ ಮೂರು ವರ್ಷಗಳ ಹಿಂದೆ ಇಂಡಿಕೇಟ್ ಹೇಳಿದ್ದನ್ನು ಗಿಣಿಯಂತೆ ಪುನರಾವರ್ತಿಸಿದ್ದಾರೆ. ಅವರು ನನ್ನ ಜನರಲ್ ಸೆಕ್ರೆಟರಿಯಾಗಿದ್ದಾಗ ಅವರು ಅದಕ್ಷರಾಗಿದ್ದರೆಂಬುದನ್ನು ನೋಡುವ ಅವಕಾಶ ನನಗಿತ್ತು. ಅವರು ಅಷ್ಟೊಂದು ಪರೀಕ್ಷೆಗಳಲ್ಲಿ ಹೇಗೆ ಉತ್ತೀರ್ಣರಾದರೆಂಬುದೇ ನನಗೆ ಆಶ್ಚರ್ಯ. ಪ್ರಾಯಶಃ ಉರು ಹೊಡೆದಿರಬೇಕು. ಹಿಂದಿನ ರಾತ್ರಿ ನನಗೆ ನಿಷ್ಠೆಯಿಂದಿದ್ದವರು ಮಾರನೆ ಬೆಳಿಗ್ಗೆ ಪಕ್ಷ ಬದಲಾಯಿಸಿದ ಮನುಷ್ಯ ಆತ. ಆಕೆಯ ಪಕ್ಷವನ್ನು ಸೇರಿ ಇತರರಿಗೆ ನಿಷ್ಠೆ ಹಾಗೂ ಶಿಸ್ತಿನಿಂದಿರಬೇಕೆಂದು ಎಚ್ಚರಿಸುವ ಆತನ ಎದೆಗಾರಿಕೆ ಮೆಚ್ಚುವಂತಹುದು, ಆತನನ್ನು ಬಯ್ದೇನು ಪ್ರಯೋಜನ. ಆತನ ನಾಯಕಿಯೇ ಅಸತ್ಯಸಂಧತೆ, ನಿಷ್ಠೆಯಿಲ್ಲದಿರುವಿಕೆ, ಭ್ರಷ್ಟಾಚಾರ, ಅಶಿಸ್ತಿಗೆ ಉದಾಹರಣೆಯಾಗಿದ್ದಾರಲ್ಲ. ಇವೇ ಆ ಪಕ್ಷದ ಗುಣಲಕ್ಷಣಗಳಾಗಿದ್ದು ಹೆಚ್ಚಿನ ನಾಯಕರು ಈ ಗುಣಗಳಿಂದ ಕೂಡಿದ್ದು, ಅವುಗಳಿಂದಲೇ ಅಧಿಕಾರವನ್ನು ಅನುಭವಿಸುತ್ತಿದ್ದಾರೆ.

ಕೈಗೊಂಡ ನಿರ್ಣಯಗಳು ಹೊಸದೇನನ್ನೂ ತೋರಿಸುತ್ತಿಲ್ಲ. ಜನರನ್ನು ಉತ್ತೇಜಿಸುವಂತಹುದೇನೂ ಇಲ್ಲ. ರಚನಾತ್ಮಕವಾದುದೇನೂ ಇಲ್ಲ. ಹೆಚ್ಚಿನ ಉತ್ಪಾದನೆಗೆ ವಿಧಾನಗಳಾಗಲಿ ಅಥವಾ ದಾರಿಗಳಾಗಲಿ ಸಲಹೆಯಾಗಿಲ್ಲ. ಬರಿ ಅಂಕಿ ಅಂಶಗಳು, ಇವು ಕಮ್ಯೂನಿಸ್ಟ್ ಸಿದ್ಧಾಂತಗಳಿರುವುದಕ್ಕೆ ಸಾಕಷ್ಟು ಪುರಾವೆಗಳಿವೆ.

**ಜನವರಿ ೨೩, ೧೯೭೩ ಧಾರವಾಡ**

ಪಶ್ಚಿಮ ಬಂಗಾಳದ ಒಂದು ಹಳ್ಳಿಯಲ್ಲಿ ತಮ್ಲುಕ್ ಅಥವಾ ಇನ್ಯಾವುದೋ ಹಳ್ಳಿಯಲ್ಲಿ ಪ್ರಧಾನಮಂತ್ರಿ ಭಾಷಣ ಮಾಡುತ್ತಾ ದೇಶದ ಅನೇಕ ಭಾಗಗಳಲ್ಲಿರುವ ಎಲ್ಲಾ ಹಿಂಸಾಚಾರವು ತನ್ನ ವಿರುದ್ಧವಾದವೇ ಮತ್ತು ಅದು ತನ್ನ ವಿರುದ್ಧದ ಒಳಸಂಚು ಎಂದು ಹೇಳಿದ್ದಾರೆ. ಹಸಿ ಸುಳ್ಳನ್ನು ಹೇಳುತ್ತಿರುವ ಸರ್ವಾಧಿಕಾರಿಯ ಭಾವನೆ ಇದಾಗಿದೆ. ಅದನ್ನು ಏಕೆ ಮಾಡಲಾಗುತ್ತಿದೆ ಎಂಬುದನ್ನು ಅರ್ಥಮಾಡಿಕೊಳ್ಳುವ ಶಕ್ತಿ ಆಕೆಗಿಲ್ಲ. ಆಕೆಯ ಸುತ್ತಮುತ್ತ ಇರುವ ಮುಖಸ್ತುತಿಗಾರರು ಮತ್ತು ಹೊಗಳುಭಟರು ಹಾಗೆ ತಿಳಿಸಿರಬಹುದು ಅಥವಾ ನಂಬುವಂತೆ ಮಾಡಿರಬಹುದು. ಇವೆಲ್ಲ ಯಾವಾಗ ಹೋಗುತ್ತದೆಂಬುದು ಆಶ್ಚರ್ಯವಾಗಿದೆ.

**ಮಾರ್ಚ್ ೬, ೧೯೭೩** **ಬಿಜಾಪುರ ಜಿಲ್ಲೆ ಪ್ರವಾಸ**

ಇಂಡಿ ತಾಲ್ಲೂಕಿನ ಪ್ರವಾಸಕ್ಕೆ ಎಂ.ಎಲ್.ಸಿ. ಕಬಡಿ ಮತ್ತು ಇಬ್ಬರು ಕಾರ್ಯಕರ್ತರ ಜೊತೆಯಲ್ಲಿ ಬಿಜಾಪುರವನ್ನು ಬಿಟ್ಟೆ. ಸುಮಾರು ೧೦೦ ಮೈಲಿಗಳಷ್ಟು ಪ್ರಯಾಣ ಮಾಡಿದರೂ ಎಲ್ಲಿಯೂ ಯಾವುದೇ ಕೃಷಿ ಕಾರ್ಯಗಳು ಕಾಣಲಿಲ್ಲ. ಇದು ಒಕ್ಕಲು ಕಾಲ. ಜೋಳದ ಬೆಳೆಯ ಒಂದೇ ಒಂದು ಮೆದೆ ಇರಲಿಲ್ಲ. ನಾವು ಸುಮಾರು ೪೦ ಹಳ್ಳಿಗಳನ್ನು ಭೇಟಿ ಮಾಡಿದೆವು. ಪ್ರತಿಯೊಂದು ಹಳ್ಳಿಯಲ್ಲಿಯೂ ಸಂತಪ್ತ ದೃಶ್ಯ ಕಾಣುತ್ತಿತ್ತು. ದನಕರುಗಳು ತುಂಬಾ ತೊಂದರೆಗೊಳಗಾಗಿದ್ದವು. ಅವುಗಳಲ್ಲಿ ಅರ್ಧದಷ್ಟನ್ನು ಬಹಳ ಕಡಿಮೆ ಬೆಲೆಗೆ ಮಾರಿದ್ದರು. ರೈತರಿಗೆ ಅವುಗಳನ್ನು ಸಾಕುವುದಾಗಲೀ, ಆಹಾರ ಒದಗಿಸುವುದಾಗಲೀ ಆಗುತ್ತಿರಲಿಲ್ಲ. ತಮ್ಮನ್ನು ತಾವು ಉಪವಾಸದಿಂದ ತಪ್ಪಿಸಿಕೊಳ್ಳಲು ಅವರು ಏನನ್ನಾದರೂ ಪಡೆಯಬೇಕಾಗಿತ್ತು. ನೀರಿನ ಅಭಾವವು ಹೆಚ್ಚುತ್ತಿದೆ ಮತ್ತು ಕೆಲವು ಹಳ್ಳಿಗಳಲ್ಲಿ ಅದು ಆಗಲೇ ತೀವ್ರವಾಗಿದೆ. ಆಹಾರ ಅಭಾವವಾಗಿದೆ, ಜೊತೆಗೆ ಸರಕಾರದ ನಿರ್ಲಕ್ಷ್ಯವು ವ್ಯಕ್ತವಾಗಿದೆ. ಎಲ್ಲೆಡೆ ಕ್ಷಾಮವಿದೆ. ವಾಸ್ತವವಾಗಿ ಜನರ ಮುಖದಲ್ಲಿ ಅದು ಎದ್ದು ಕಾಣುತ್ತಿದೆಯೆಂದು ಅವರು ಭಾವಿಸಿದಂತೆ ಕಾಣುವುದಿಲ್ಲ. ಅದನ್ನು ಬಹಳ ಹಗುರವಾದ ರೀತಿಯಲ್ಲಿ ನೋಡಲಾಗುತ್ತಿದೆ. ಮಹಾರಾಷ್ಟ್ರದಲ್ಲಿನ ಗಡಿಯ ಕಡೆ ನೋಡಿದರೆ ಅದು ಎದ್ದು ಕಾಣುತ್ತದೆ. ಅನೇಕ ಜನರು ತಾವು ಮಹಾರಾಷ್ಟ್ರದಲ್ಲಿದ್ದಿದ್ದರೆ ಹೆಚ್ಚು ಸುಖವಾಗಿರುತ್ತಿದ್ದೆವೆಂದು ಯೋಚಿಸುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಮೈಸೂರು ಸರಕಾರದ ವರ್ತನೆಯ ಅಮಾನವೀಯತೆ, ಊಹಿಸಲಸಾಧ್ಯವಾದ ಬೇಜವಾಬ್ದಾರಿಯಾದದ್ದು. ಯಾವುದೇ ವಾಗ್ದಾನಗಳು ಅಥವಾ ಭರವಸೆಗಳು ಬಾಯಿ ಮಾತಿನಲ್ಲಾಗಲಿ ಅಥವಾ ಪ್ರಕಟಿಸಿದುದಾಗಲಿ ಕಾರ್ಯಗತ ವಾಗಿಲ್ಲವಾದುದರಿಂದ ಅಲ್ಲಿನ ಜನರು ನಿರಾಶೆಗೊಂಡಿದ್ದಾರೆ.

ಇಂಡಿಯನ್ನು ರಾತ್ರಿ ೯-೩೦ಕ್ಕೆ ತಲುಪಿದೆ. ಮಾಮೂಲಿನ ಊಟವನ್ನು ಮಾಡಿದೆವು. ತಾಲ್ಲೂಕು ಬೋರ್ಡು ವಿಶ್ರಾಂತಿ ಗೃಹವು ತುಂಬಾ ಕೊಳಕಾಗಿದೆ.

**ಮಾರ್ಚ್ ೧೩, ೧೯೭೩** **ಬೆಂಗಳೂರು**

ನೆನ್ನೆಯ ಸಭೆಯಲ್ಲಿ ವೀರೇಂದ್ರ ಪಾಟೀಲರ ವರ್ತನೆ ಮತ್ತು ಪ್ರಧಾನಿಯ ಬಗ್ಗೆ ಅವರ ಮೆಚ್ಚುಗೆಯ ಮಾತುಗಳನ್ನು ಕುರಿತು ಚಿಂತಿಸುತ್ತಿದ್ದೇನೆ. ಆಕೆಯ ಜೊತೆಯಲ್ಲಿ ಸ್ವಲ್ಪ ಒಪ್ಪಂದ ಮಾಡಿಕೊಳ್ಳುವ ಕೆಟ್ಟ ಆಲೋಚನೆಯಲ್ಲಿದ್ದಾರೆಯೆ ಅವರೆಂಬುದು ನನಗೆ ಆಶ್ಚರ್ಯವಾಗುತ್ತಿದೆ. ನನಗೆ ಸಂದೇಹವೇನೆಂದರೆ ಅವರಿಗೆ ಒಳ್ಳೆಯ ಸ್ಥಾನವನ್ನು ಕೊಟ್ಟರೆ ಆಕೆಯ ಕಡೆಗೆ ಹೋಗಬಹುದೆಂದು ಕಾಣುತ್ತದೆ. ಆದರೆ ನನಗೆ ತಿಳಿದ ಮಟ್ಟಿಗೆ ಹಾಗಾಗುವುದಿಲ್ಲವೆಂದು ಕಾಣುತ್ತದೆ. ಆತನನ್ನು ಎಂ.ಪಿ.ಸಿ.ಸಿ. ಅಧ್ಯಕ್ಷನನ್ನಾಗಿ ಮಾಡಿ

ನಾನೇನಾದರೂ ಪುನಃ ತಪ್ಪು ಮಾಡಿದೆನೆ ? ಆದರೆ ಈತನಕ ಒಳ್ಳೆಯ ರೀತಿಯಲ್ಲಿ ವರ್ತಿಸಿದ್ದಾರೆ. ಹೋರಾಟದ ಮತ್ತು ಅನ್ಯಾಯದ ವಿರುದ್ಧ ಎದ್ದು ನಿಲ್ಲುವ ಹಿನ್ನೆಲೆಯಿಲ್ಲದ್ದರಿಂದ ಆತ ವಾಸ್ತವತೆಗಿಂತ ಲೌಕಿಕವಾಗಿರಬಹುದು.

**ಏಪ್ರಿಲ್ ೨೬, ೧೯೭೩ ಬೆಂಗಳೂರು**

ಮೊನ್ನೆ ದಿನ ಅಂದರೆ ೨೪ರಂದು ಸಂವಿಧಾನ ೨೪, ೨೫, ೨೬ ಮತ್ತು ೨೯ರ ತಿದ್ದುಪಡಿಗಳನ್ನೊಳಗೊಂಡ ಮೂಲಭೂತ ಹಕ್ಕುಗಳು ಮತ್ತು ಸಂಬಂಧಪಟ್ಟ ಪ್ರಕರಣಗಳಿಗೆ ಉಚ್ಚತಮ ನ್ಯಾಯಾಲಯವು ತೀರ್ಪನ್ನು ನೀಡಿದೆ. ಹೆಚ್ಚಿನ ನ್ಯಾಯಾಧೀಶರುಗಳು ಪಾರ್ಲಿಮೆಂಟಿಗೆ ತಿದ್ದುಪಡಿ ಮಾಡುವ ಹಕ್ಕಿರುವುದನ್ನು ಎತ್ತಿ ಹಿಡಿದಿದ್ದಾರೆಂದು ನನಗನಿಸುತ್ತದೆ. ಪರಿಹಾರದ ಬಗ್ಗೆ ಪ್ರಮಾಣವನ್ನು ನ್ಯಾಯಯುತವಾಗಿ ಮಾಡಲಾಗಿದೆ. ನಾವು ತೀರ್ಮಾನದ ಬಗ್ಗೆ ಜಗಳವಾಡಲಾಗುವುದಿಲ್ಲ. ಆದರೆ ಪ್ರಧಾನಿ ಏನು ಬೇಕಾದರೂ ಮಾಡಬಹುದು. ಆಕೆಯು ತನ್ನ ಕಿರೀಟಕ್ಕೆ ಇನ್ನೊಂದು ಗರಿಯನ್ನು ಸೇರಿಸಿರಬಹುದು. ನನಗೆ ಇದೇ ಅಂತಿಮ ಪದವೆಂದೆನಿಸುವುದಿಲ್ಲ. ಇದನ್ನು ಪುನಃ ವಾದ ಮಾಡಬಹುದು. ನೆನ್ನೆ ತೀರ್ಮಾನದ ಪೂರ್ಣ ಪಾಠ ಬಂದಿತು. ಈ ದಿನ ಹೆಗ್ಡೆಯೂ ಸೇರಿದಂತೆ ಮೂರು ನ್ಯಾಯಧೀಶರುಗಳನ್ನು ಅಧಿಕ್ರಮಿಸಿ ನ್ಯಾಯಾಧೀಶ ರೇ ಅವರನ್ನು ಭಾರತದ ಮುಖ್ಯ ನ್ಯಾಯಾಧೀಶರನ್ನಾಗಿ ಮಾಡಿ ಹೊಸದೇ ಆದ ಒಂದು ಪೂರ್ವ ನಿದರ್ಶನವನ್ನು ಸೃಷ್ಟಿಸಿದರು. ಈ ನೇಮಕಾತಿಗೆ ಕಾರಣವೇನೆಂದರೆ ತಿದ್ದುಪಡಿ ೨೫ರಲ್ಲಿ ರಾಜ್ಯಗಳಿಗೆ ಹೆಚ್ಚಿನ ಅಧಿಕಾರಗಳನ್ನು ನೀಡುವುದರ ಹೊರತು ಪ್ರತಿಯೊಂದು ವಿಷಯದಲ್ಲೂ ಸರ್ಕಾರವನ್ನು ಬೆಂಬಲಿಸುವ ಈತನ ತೀರ್ಮಾನವು ಇದಕ್ಕೆ ಕಾರಣವೆಂದು ನನಗೆ ಖಚಿತವಾಗಿದೆ. ಬಹಿರಂಗವಾಗಿ ಅಥವಾ ಗುಪ್ತವಾಗಿ ಈತನು ಬದ್ಧನಾದ ನ್ಯಾಯಧೀಶರೆಂದು ಕಾಣುತ್ತದೆ. ಇದು ಒಂದು ಕುತೂಹಲಕಾರಿಯಾದ ಬೆಳವಣಿಗೆ. ಮೂರು ನ್ಯಾಯಾಧೀಶರುಗಳ ಬಗ್ಗೆ ಏನು ?

**ಜುಲೈ ೧೦, ೧೯೭೩ ಬೆಂಗಳೂರು**

ಕಾಂಗ್ರೆಸ್ ಅಧ್ಯಕ್ಷರಾಗಿ ಅಶೋಕ್ ಮೆಹ್ತಾರವರನ್ನು ಒಪ್ಪಿಕೊಳ್ಳುವ ಬಗ್ಗೆ ಸಿ.ಬಿ. ಗುಪ್ತ, ಮೊರಾರ್ಜಿ ಭಾಯಿ, ಎಸ್.ಕೆ. ಪಾಟೀಲ್ ಮತ್ತು ಸಾದಿಕ್ ಭಾಯಿಗೆ ಪತ್ರಗಳನ್ನು ರವಾನಿಸಿದೆ. ಆತನು ಚುನಾಯಿತನಾಗುವುದರಲ್ಲಿ ತೀವ್ರವಾದ ಆಕ್ಷೇಪಣೆಯಿದೆಯೆಂದು ನಾನು ನಂಬುವುದಿಲ್ಲ. ಶ್ರೀಮತಿ ತಾರಕೇಶ್ವರಿ ಸಿನ್ಹಾರ ಹೆಸರನ್ನು ಸೂಚಿಸಲಾಗಿದೆ ಎಂದು ಯಾರೋ ಹೇಳಿದರು. ಆಕೆ ಆಕರ್ಷಕವಾದ ಭಾಷಣಗಳನ್ನು ಮಾಡುತ್ತಾರೆಂಬುದರ ವಿನಾ ಪ್ರತಿಯೊಂದು ಅಂಶದಲ್ಲಿಯೂ ಆಕೆಯು ಸೂಕ್ತವಲ್ಲವೆಂದು ನನಗನಿಸುತ್ತದೆ. ಅಧ್ಯಕ್ಷ ಸ್ಥಾನಕ್ಕೆ ಆಕೆಗೆ ಅರ್ಹತೆ ಇಲ್ಲ.

**ಜುಲೈ ೧೭, ೧೯೭೩** **ಬೆಂಗಳೂರು**

ವೀರೇಂದ್ರ ಪಾಟೀಲರು ಅಶೋಕ ಹೋಟೆಲಿನಲ್ಲಿ ವ್ಯವಸ್ಥೆ ಮಾಡಿದ್ದರೂ ಅಶೋಕ ಮೆಹ್ತಾ ವೆಸ್ಟ್‌ಕೋಸ್ಟ್ ಪೇಪರ್ ಮಿಲ್ಸ್‌ನ ಅತಿಥಿ ಗೃಹದಲ್ಲಿ ಉಳಿದುಕೊಂಡಿದ್ದಾರೆ. ಅವರಿಗೆ ಅಲ್ಲಿ ಅನುಕೂಲವಾಗಿದೆ. ನಾನು ಆತನನ್ನು ಭೇಟಿಯಾಗಿ ಸುದೀರ್ಘವಾದ ಚರ್ಚೆಗಳನ್ನು ಮಾಡಿದೆ. ನನಗೆ ಖಂಡಿತವಾದಂತೆ ಆತ ಅಧ್ಯಕ್ಷರಾಗುವುದು ಖಚಿತ. ಆತ ತಮ್ಮ ಭವಿಷ್ಯ ರೂಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಪರ್ಯಾಯಗಳನ್ನು ಹೊಂದಿರಬೇಕೆಂದು ಅವರು ಹೇಳುತ್ತಾರೆ. ಪ್ರಧಾನಮಂತ್ರಿಯು ನಮ್ಮನ್ನು ಸಂಪರ್ಕಿಸಿದರೆ ನಾವೇನು ಮಾಡಬೇಕು ? ಪರ್ಯಾಯ ಸರ್ಕಾರವನ್ನು ಮಾಡುವುದಕ್ಕೆ ಮತ್ತು ಆಕೆಯು ನಮ್ಮನ್ನು ಸಂಪರ್ಕಿಸುವಂತೆ ಮಾಡಿದರೆ, ಇತರ ಪಕ್ಷಗಳು ಮುಂತಾದವುಗಳ ಜೊತೆಯಲ್ಲಿ ನಮ್ಮ ಪ್ರವೃತ್ತಿ ಹೇಗಿರಬೇಕೆಂಬುದಕ್ಕೆ ನಾವು ಬಲವಾಗಬೇಕು. ನಾನು ಪಕ್ಷವನ್ನು ಬಲಪಡಿಸುವುದಕ್ಕೆ ಆದ್ಯತೆ ಕೊಡಬೇಕು ಮತ್ತು ಪ್ರಧಾನಿಯನ್ನು ಸಂಪರ್ಕಿಸುವುದರಲ್ಲಿ ಅಥವಾ ಅವರು ನಮ್ಮನ್ನು ಸಂಪರ್ಕಿಸುವುದಕ್ಕೆ ಅವಕಾಶ ಕೊಡುವುದರಲ್ಲಿ ನಾವು ಜಾಗರೂಕರಾಗಿರಬೇಕು ಎಂದು ನಾನು ಅವರಿಗೆ ಹೇಳಿದೆ. ಅವರು ನಾಡಿಯ ಮಿಡಿತವನ್ನು ಗಮನಿಸುತ್ತಿದ್ದಾರೆಂಬುದು ಸ್ಪಷ್ಟವಾಗಿತ್ತು. ಪಾಟೀಲರ ಮನೆಯಲ್ಲಿ ಬೆಳಗಿನ ಉಪಾಹಾರ ನಡೆಯಿತು. ೧೦-೩೦ಕ್ಕೆ ಅಶೋಕರದು ಪತ್ರಿಕಾ ಸಮ್ಮೇಳನವಿತ್ತು. ನಾವು ಪುನಃ ೧೨ ರಿಂದ ೧ ಗಂಟೆಯಲ್ಲಿ ಭೇಟಿ ಮಾಡಿದೆವು. ೧ ಗಂಟೆಗೆ ಊಟ ಮಾಡಿದೆವು. ಆರ್.ಕೆ. ಹೆಗಡೆ ಅವರಿಗೆ ಇಂತಹ ಮನೆಯನ್ನು ಕಟ್ಟಲು ಅವರಿಗೆ ಎಲ್ಲಿಂದ ಹಣ ಬಂತು ಎಂಬುದೇ ನನಗೆ ಇಂದಿಗೂ ರಹಸ್ಯವಾಗಿದೆ. ಹಾಗೆಯೇ ವೀರೇಂದ್ರ ಪಾಟೀಲ್ ಕಟ್ಟಿಸುತ್ತಿರುವ ಮನೆಯು ಅಷ್ಟೇ ದೊಡ್ಡದಾಗಿ ಶೋ ಆಗಿದೆಯಂತೆ. ನಾನು ಹೆಗಡೆ ಮನೆಯಲ್ಲಿ ವಿಶ್ರಾಂತಿ ಪಡೆದ ಮೇಲೆ ಸಂಜೆ ೪ ಗಂಟೆಗೆ, ನಾನು, ಅಶೋಕ್, ಪಾಟೀಲ್, ಹೆಗಡೆ ಮತ್ತು ಗುರುಪಾದಸ್ವಾಮಿ ಅವರನ್ನು ಅಲ್ಲಿಯೇ ಭೇಟಿ ಮಾಡಿದೆ. ಹೆಗ್ಡೆಯವರು ಮಾತಾಡುವುದರಲ್ಲಿ ಬಹಳ ಜಾಗರೂಕರಾಗಿದ್ದರು. ಪಾಟೀಲರು ಒರಟಾಗಿದ್ದರು. ಕಾಂಗ್ರೆಸ್ ಕಾರ್ಯಕರ್ತರು ಈಗಲೂ ಕೂಡ ನಿರಾಸಕ್ತರಾಗಿದ್ದಾರೆ. ಉತ್ಸಾಹರಹಿತರಾಗಿದ್ದು ಆರ್ ಜೊತೆಯಲ್ಲಿ ಒಟ್ಟಿಗೆ ಕೆಲಸ ಮಾಡುವುದಕ್ಕೆ ಸಂತೋಷಿಸುತ್ತಾರೆಂದು ಅವರು ಹೇಳಿದರು. ರಾಜ್ಯದ ಪಿಸಿಸಿಯಲ್ಲಿ ಒಗ್ಗಟ್ಟಾಗಿರುವ ಚೈತನ್ಯದ ಕೊರತೆಯಿದೆಯೆಂದು ಗುರುಪಾದಸ್ವಾಮಿ ಭಾವಿಸಿದರು. ಜನರನ್ನು ಸಂಪರ್ಕಿಸಿ ಸಂಸ್ಥೆಯನ್ನು ಬಲಗೊಳಿಸುವ ಪ್ರಯತ್ನವೇ ಇಲ್ಲ ಎಂದು ನಾನು ಹೇಳಿದೆ. ಮಾಮೂಲಿನಂತೆ ಪಾಟೀಲರು ಹಣಕಾಸಿನ ವಿಷಯವನ್ನು ಹೇಳಿದರು. ಗುರುಪಾದಸ್ವಾಮಿ ಯವರ ಮನೆಯಲ್ಲಿ ರಾತ್ರಿ ಊಟವಾಯಿತು.

**ಸೆಪ್ಟೆಂಬರ್ ೨೬, ೧೯೭೩ ಬೆಂಗಳೂರು ವರ್ಕಿಂಗ್ ಕಮಿಟಿ**

ಅತಿಥಿ ಗೃಹದಲ್ಲಿ ಬೆಳಗಿನ ಉಪಾಹಾರವಾಯಿತು. ನೆನ್ನೆಯ ಹಾಗೇ ಬೆಳಿಗ್ಗೆ ೯ ಗಂಟೆಗೆ ಹೆಗಡೆಯವರ ಮನೆಯಲ್ಲಿ ವರ್ಕಿಂಗ್ ಕಮಿಟಿ ಸೇರಿತು. ಮನೆಯು ದೊಡ್ಡ ಬಂಗಲೆ ಮತ್ತು ಬಹಳ ಚೆನ್ನಾಗಿ ಅಲಂಕೃತವಾಗಿ ಪೀಠೋಪಕರಣಗಳಿಂದ ಸುಸಜ್ಜಿತವಾಗಿತ್ತು. ಅವರು ಕನಿಷ್ಟ ೫ ಲಕ್ಷ ರೂ.ಗಳನ್ನಾದರೂ ಆ ಮನೆಗೆ ಖರ್ಚು ಮಾಡಿರಬೇಕು.

ಪ್ರಾರಂಭಿಕಗಳಾದ ಮೇಲೆ ನಡವಳಿಗಳನ್ನು ಅನುಮೋದನೆ ಮಾಡಿದ ಮೇಲೆ ರಾಜಕೀಯ ವಿಷಯವನ್ನು ತೆಗೆದುಕೊಂಡೆವು. ಸ್ನೇಹಿತರಿಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಲು ಸಾಕಷ್ಟು ಅವಕಾಶವಿದ್ದಿತು. ಚರ್ಚೆಯಲ್ಲಿ ಉತ್ತರ ಪ್ರದೇಶ ರಾಜ್ಯದಲ್ಲಿ ಭಾಗಶಃ ಚರ್ಚಿತವಾಗಿದ್ದ ಚುನಾವಣೆಗಳ ಪ್ರಶ್ನೆ ಬಂದಿತು. ನನ್ನ ಸಲಹೆಯಿದ್ದರೂ ಕೂಡ ಮೆಹ್ತಾರವರು ಪಾಂಡುಚೇರಿ ಚುನಾವಣೆಯ ಬಗ್ಗೆ ಕಾಮರಾಜರ ಅಭಿಪ್ರಾಯವನ್ನು ಕೇಳಿದರು. ಡಿಎಂಕೆ ಮತ್ತು ಎಡಿಎಂಕೆಯನ್ನು ಉರುಳಿಸಲು ಅಗತ್ಯವಾದರೆ ತಾವು ಕಾಂಗ್ರೆಸ್ ಆರ್ ಜೊತೆಯಲ್ಲಿ ಕೈ ಜೋಡಿಸುತ್ತೇನೆ ಎಂದು ಕಾಮರಾಜರು ತಮ್ಮ ಅಭಿಪ್ರಾಯವನ್ನು ಹೊರಗೆಡವಿದರು. ನನಗೆ ಯಾವಾಗಲೂ ಅನಿಸಿದ ಹಾಗೆ ಭಾರತದ ಉಳಿದ ಭಾಗಕ್ಕೆ ಏನಾಗಬಹುದು ಎಂಬುದರ ಬಗ್ಗೆ ಅವರು ಲಕ್ಷಿಸುವುದಿಲ್ಲ. ತಮಿಳುನಾಡು ಅವರಿಗೆ ಮುಖ್ಯ. ತಮ್ಮ ಮಾರ್ಗದಿಂದ ನಡೆಯಲಾಗದಿದ್ದರೆ ತಾವು ನಿವೃತ್ತಿ ಹೊಂದುವುದಾಗಿ ಹೇಳಿದರು. ಡಿಎಂಕೆ ಮತ್ತು ಎಡಿಎಂಕೆ ಭ್ರಷ್ಟವಾಗಿವೆ ಎಂದು ತಿಳಿಸಿ ಅವರ ಜೊತೆಯಲ್ಲಿ ಸೇರುವುದಿಲ್ಲ ಎಂದು ಹೇಳಿದಾಗ ನನಗೆ ತಡೆಯಲಾಗಲಿಲ್ಲ. ಏಕೆಂದರೆ ಇಂದಿರಾ ಭ್ರಷ್ಟರಲ್ಲವೆ ಅಥವಾ ಅದನ್ನು ಅವರು ಗಟ್ಟಿಯಾಗಿ ಹೇಳಿಲ್ಲ ಅಷ್ಟೆ. ಹಾಗಿದ್ದರೆ ಭ್ರಷ್ಟಾಚಾರವನ್ನು ಬಿಡುವುದು ಒಳ್ಳೆಯದು. ೨೦ ವರ್ಷಗಳವರೆಗೆ ದೂರ ಇದ್ದು ಈ ಅನೀತಿಯುತ ವಿಲೀನ ಅಥವಾ ತಿಳುವಳಿಕೆಯ ಬದಲು ನಮ್ಮ ಪಕ್ಷವನ್ನು ಕಟ್ಟೋಣ ಎಂದು ನಾನು ಹೇಳಿದೆ. ಈ ವಿಷಯವನ್ನು ಮುಂದಿನ ಕಾರ್ಯಕಾರಿ ಸಮಿತಿಯವರೆಗೆ ಮುಂದೂಡಲಾಯಿತು. ಈ ಮಧ್ಯಾಹ್ನ ರಾಜಕೀಯ ಪರಿಸ್ಥಿತಿಯ ಬಗ್ಗೆ ಒಂದು ಠರಾವನ್ನು ಅಂಗೀಕರಿಸಲಾಯಿತು. ಅದು ಬಹಳ ಚಿಕ್ಕದಾಗಿ ಚೊಕ್ಕವಾಗಿತ್ತು. ಕಾಂಗ್ರೆಸ್ ಭವನದಲ್ಲಿ ರಾತ್ರಿಯೂಟ ಮಾಡಿದೆವು. ಅಭ್ಯಾಗತರು ಡಾ. ಆಳ್ವರಾಗಿದ್ದರು.

**ನವೆಂಬರ್ ೧೧, ೧೯೭೩ ಚಿತ್ರದುರ್ಗ**

ಇಂದು ದೆಹಲಿಯಲ್ಲಿ ವರ್ಕಿಂಗ್ ಕಮಿಟಿ ಸಭೆಯಿದೆ. ನನಗೆ ತಿಳಿದ ಹಾಗೆ ೧೯೬೯ರಲ್ಲಿ ಕಾಂಗ್ರೆಸ್ ಪಕ್ಷ ಒಡೆದುಹೋದಂದಿನಿಂದ ಇದೇ ಮೊದಲನೆ ಸಲ ನಾನು ಅದರಲ್ಲಿ ಭಾಗವಹಿಸುತ್ತಿಲ್ಲ. ಅದಕ್ಕೂ ಮುಂಚೆ ೧೯೪೪೮ರಲ್ಲಿ ನಾನು ಪಟ್ಟಾಭಿ ಸೀತಾರಾಮಯ್ಯನವರ ಕಾಲದಲ್ಲಿ ಕಾರ್ಯಕಾರಿ ಸಮಿತಿಯ ಸದಸ್ಯನಾದಾಗಿನಿಂದ

ಕಾರ್ಯಕಾರಿ ಸಮಿತಿಯ ಸಭೆಗಳನ್ನು ಅಪರೂಪವಾಗಿ ತಪ್ಪಿಸಿಕೊಂಡಿದ್ದೇನೆ. ನೆಹ್ರೂರವರ ಪರವಾಗಿ ಟಂಡನ್ ರಾಜೀನಾಮೆ ನೀಡಿದಾಗ ಮಾತ್ರ ನಾನು ಕಾರ್ಯಕಾರಿ ಸಮಿತಿಯ ಸದಸ್ಯನಾಗಿರಲಿಲ್ಲ. ನೆಹ್ರೂರವರು ಎರಡು ವರ್ಷಗಳವರೆಗೆ ನನ್ನನ್ನು ಕಾರ್ಯಕಾರಿ ಸಮಿತಿಗೆ ತೆಗೆದುಕೊಂಡಿರಲಿಲ್ಲ. ಉತ್ತರ ಕರ್ನಾಟಕದ ಬ್ರಾಹ್ಮಣರು, ದಿವಾಕರ್, ಕರ್ಮರ್‌ಕರ್ ಮತ್ತು ಸ್ವಲ್ಪಮಟ್ಟಿಗೆ ಹರ್ಡಿಕರ್ ಹಾಗೂ ಇವರೆಲ್ಲರಿಗಿಂತ ಹೆಚ್ಚಾಗಿ ಮಲ್ಯ ನನ್ನ ವಿರುದ್ಧ ಅಪಪ್ರಚಾರ ಮಾಡಿದುದರಿಂದಿರಬಹುದು. ಹೊಗಳುಭಟರಿಂದ ಮತ್ತು ಭಟ್ಟಂಗಿಗಳಿಂದ ಪ್ರಭಾವಿತರಾಗುತ್ತಿದ್ದ ನೆಹ್ರೂ ನನ್ನನ್ನು ಇಷ್ಟಪಡುತ್ತಿರಲಿಲ್ಲ. ಅಥವಾ ನಾನು ಅವರ ಬಗ್ಗೆ ತುಂಬಾ ಹೆಚ್ಚಾಗಿ ಶ್ರೇಷ್ಠರು ಎಂದು ತೋರಿಸಿಕೊಳ್ಳಲಿಲ್ಲ; ವಾಸ್ತವವಾಗಿ ನಾನು ಅವರನ್ನು ಸ್ತುತಿಸಲು ಇಷ್ಟಪಡಲಿಲ್ಲ. ನನ್ನನ್ನು ಹಾಳು ಮಾಡಲು ತುಂಬಾ ಪ್ರಯತ್ನಿಸಿದರು. ಆದರೆ ಅವರು ಸಫಲರಾದರೆ ? ನಾನು ಗೊತ್ತಿಲ್ಲ. ಅವರ ಸಹಾಯ ಮತ್ತು ಗಮನವನ್ನು ನಾನು ಲಕ್ಷಿಸುವುದಿಲ್ಲ ಎಂದು ಅವರಿಗೆ ಗೊತ್ತಿತ್ತು.

ಈ ದಿನ ಕಾರ್ಯಕಾರಿ ಸಮಿತಿಯು ನನ್ನನ್ನು ಕಳೆದುಕೊಂಡಂತೆ ಭಾವಿಸುವುದಿಲ್ಲ ಎಂದು ನನಗನಿಸುತ್ತದೆ. ಕ್ರಮೇಣ ನಾನು ಸಕ್ರಿಯ ರಾಜಕೀಯದಿಂದ ದೂರವಿರುತ್ತೇನೆ. ನಾನು ಸೇವೆ ಮಾಡಲು ಕಡಿಮೆ ಉತ್ಸಾಹವುಳ್ಳವನಾಗಿದ್ದೇನೆಂದಲ್ಲ. ಪ್ರತಿಯೊಂದು ಕಾರ್ಯಕಾರಿ ಸಮಿತಿಯ ಸಭೆಗೆ ಹಾಜರಾಗಲು ನಾನು ಒಂದು ಸಾವಿರ ರೂ.ಗಳನ್ನು ಖರ್ಚು ಮಾಡುವಷ್ಟು ಆರ್ಥಿಕ ಶಕ್ತಿ ನನಗಿಲ್ಲ.

**ಡಿಸೆಂಬರ್ ೨, ೧೯೭೩**

ರಾತ್ರಿಯ ಹೊತ್ತೂ ನನ್ನ ತೋಳುಗಳು ತುಂಬಾ ತೊಂದರೆ ಕೊಡುತ್ತಿವೆ. ನೆನ್ನೆ ರಾತ್ರಿ ನೋವು ಎಷ್ಟಿತ್ತೆಂದರೆ ನನಗೆ ನಿದ್ರೆಯೇ ಬರಲಿಲ್ಲ. ನೆನ್ನೆ ದಿವಸ ನಾನು ತೆಗೆದುಕೊಂಡ ಹಾರ್ಮೋನ್ ಇಂಜಕ್ಷನ್‌ನಿಂದಿರಬಹುದು. ಇಡೀ ದಿವಸ ನನಗೆ ನಿದ್ದೆ ಬರುತ್ತಿತ್ತು. ಬೆಳಿಗ್ಗೆ ೧೦ ರಿಂದ ೧೨ ರವರೆಗೆ ಎರಡು ಗಂಟೆ ಮತ್ತು ಮಧ್ಯಾಹ್ನ ೨-೩೦ ರಿಂದ ೪-೩೦ರವರೆಗೆ ಬಹಳ ಚೆನ್ನಾಗಿ ನಿದ್ದೆ ಮಾಡಿದೆ.

ಅಶೋಕ್ ಮೆಹ್ತಾ ಮತ್ತು ಕಲ್ಕತ್ತಾದ ದತ್‌ರವರಿಂದ ಪತ್ರಗಳು ಬಂದು ಕಾಮರಾಜ್ ಮತ್ತು ಇಂದಿರಾರವರ ಹೊಂದಾಣಿಕೆಯ ಬಗ್ಗೆ ನನ್ನ ಪ್ರತಿಕ್ರಿಯೆ ಮತ್ತು ಅದಕ್ಕೆ ಸಂಬಂಧಿಸಿದಂತೆ ಕಾರ್ಯಕಾರಿ ಸಮಿತಿಯಿಂದ ಅಂಗೀಕೃತವಾದ ಠರಾವಿಗೆ ನನ್ನ ಪ್ರತಿಕ್ರಿಯೆಯನ್ನು ತಿಳಿಯಲು ಬರೆದರು. ಇಡೀ ವಿಷಯಗಳ ಬಗ್ಗೆ ನನಗೆ ಸಹಮತವಿಲ್ಲ ಹಾಗೂ ನನ್ನ ವಿಶ್ವಾಸಪೂರ್ವಕ ಭಾವನೆಯೆಂದರೆ ಕಾಮರಾಜರು ಕಾಂಗ್ರೆಸ್ ಸಂಸ್ಥೆಗೆ ದ್ರೋಹ ಬಗೆದಿದ್ದಾರೆ. ಇವರ ಉದ್ದೇಶ ಕೇವಲ ಡಿಎಂಕೆಯನ್ನು ತಮಿಳುನಾಡಿನಲ್ಲಿ ಸೋಲಿಸುವುದಾಗಿದೆ. ಏಕೆಂದರೆ ದೇಶದ ಉಳಿದ ಭಾಗಗಳ ಮೇಲೆ ನಂಬಲನರ್ಹವಾದ

ಮತ್ತು ಅಸತ್ಯಸಂಧ ಪ್ರಧಾನಿಯೊಂದಿಗೆ ಸೇರಿ ತಮ್ಮ ಪ್ರತಿಷ್ಠೆಯನ್ನು ಉಳಿಸಿ ಕೊಳ್ಳುವುದಾಗಿದೆ. ಅಂತಿಮ ವಿಶ್ಲೇಷಣೆಯೆಂದರೆ ಈ ಪುಟ್ಟ ಮನುಷ್ಯನನ್ನು ನಾನು ತುಂಬಾ ಗೌರವಿಸಿದೆವೆಂದು ಕಾಣುತ್ತದೆ. ಕಳೆದ ಮತ್ತು ಈ ವಾರವೆರಡರಲ್ಲೂ ಕಾಮರಾಜ್-ಇಂದಿರಾರವರು ಒಟ್ಟಿಗೆ ಸೇರಿದುದನ್ನು ಬರೆದ ಎಸ್.ಕೆ. ಪಾಟೀಲರ ವಾರಪತ್ರಿಕೆ ಸೋಶಿಯಲಿಸ್ಟ್ ಸೊಸೈಟಿಯ ಬಗ್ಗೆ ಕನಿಕರವೆನಿಸುತ್ತದೆ. ನನ್ನ ಭಾವನೆಗಳ ಬಗ್ಗೆ ಮೊರಾರ್ಜಿಗೆ ಬರೆದೆ. ಅಶೋಕ್ ಮೆಹ್ತಾ ಮತ್ತು ದತ್ತಾರವರಿಗೆ ನಾಳೆ ಬರೆಯುತ್ತೇನೆ.

**ಫೆಬ್ರವರಿ ೨೦, ೧೯೭೪**

ಬೆಳಿಗೆ ೫ ಗಂಟೆಗೆ ಎದ್ದ ಮೇಲೆ ಲಕ್ನೋಗೆ ಪಂಜಾಬ್ ಮೇಲ್‌ಗೆ ಹೋಗಲು ತಯಾರಾದೆ. ಅದು ೭-೨೦ಕ್ಕೆ ಹೊರಡಬೇಕಾದದ್ದು ೮ ಗಂಟೆಗೆ ಹೊರಟಿತು. ಹವಾನಿಯಂತ್ರಿತ ಗಾಡಿಯಲ್ಲಿ ಒಂದು ಸ್ಥಳವನ್ನು ನನಗೆ ಮೀಸಲಿಡಿಸಿದ್ದರು. ಆರಾಮವಾಗಿ ಪ್ರವಾಸ ಹೋಗಲು ನನಗೆ ಸಂತೋಷವಾಯಿತು. ಬೆಳಿಗೆ ೧೧-೪೦ಕ್ಕೆ ಲಕ್ನೋ ತಲುಪಿದೆ. ಕೆಲವು ಸ್ನೇಹಿತರು ನನ್ನನ್ನು ಸಂತೋಷದಿಂದ ಸ್ವಾಗತಿಸಿದರು. ಸಿ.ಬಿ. ಗುಪ್ತಾರವರ ಅತಿಥಿಯಾಗಿ ಉಳಿದೆ. ಅವರು ತಮ್ಮ ಮತಕ್ಷೇತ್ರಕ್ಕೆ ಭೇಟಿ ಕೊಟ್ಟು ಮಧ್ಯಾಹ್ನ ಸುಮಾರು ೧ ಗಂಟೆಗೆ ಬಂದರು. ನಾವು ಒಟ್ಟಿಗೆ ಊಟ ಮಾಡಿದೆವು. ನಮ್ಮ ಜೊತೆಯಲ್ಲಿ ಕೆಲವು ಸ್ನೇಹಿತರ ಜೊತೆಯಲ್ಲಿ ಮದ್ರಾಸಿನಿಂದ ಬಂದಿದ್ದ ಪತ್ರಕರ್ತ ಸಂಪಾದಕರೂ ಇದ್ದರು. ಇವರು ಚುನಾವಣಾ ಪ್ರಚಾರದಲ್ಲಿ ಉತ್ತರ ಪ್ರದೇಶದ ಸಾರ್ವಜನಿಕರಿಗೆ ಕಾಮರಾಜರ ತಮಿಳು ಭಾಷಣವನ್ನು ತರ್ಜುಮೆ ಮಾಡುವುದಕ್ಕೆ ಬಂದಿದ್ದರು. ವಿಶ್ರಾಂತಿಯಾದ ಮೇಲೆ ೫ ಗಂಟೆಗೆ ಲಜಪತ್‌ರಾಯ್ ಭವನಕ್ಕೆ ಹೋದೆವು. ಹೆಚ್ಚಾಗಿ ಕಾಮರಾಜರ ಬಗ್ಗೆ ಗೊಂದಲವನ್ನು ನಿವಾರಣೆ ಮಾಡುವುದಕ್ಕೆ ಒಂದು ಪತ್ರಿಕೆ ಸಮ್ಮೇಳನವನ್ನು ನಡೆಸಿದೆವು. ಪ್ರಧಾನಿಯ ಕೈಗಳನ್ನು ಬಲಪಡಿಸಬೇಕು ಮತ್ತು ದೇಶಕ್ಕೋಸ್ಕರ ಆಕೆಗೆ ಎಲ್ಲ ರೀತಿಯ ಸಹಕರಾವನ್ನು ನೀಡಬೇಕು ಎಂದು ಕಾಮರಾಜರು ಹೇಳಿದರೆಂದು ಭಿತ್ತಿಪತ್ರಗಳನ್ನು ಮುದ್ರಿಸಿ ಪ್ರಸಾರ ಮಾಡುತ್ತಿದ್ದುದು ಆಡಳಿತ ಕಾಂಗ್ರೆಸ್ಸ್‌ನ ಹತಾಶಭಾವನೆಯಾಗಿದ್ದಿತ್ತು. ಪತ್ರಕರ್ತರಿಗೆ ನಾನೇನು ಹೇಳಿದೆನೆಂದರೆ ಡಿಎಂಕೆಯನ್ನು ಸೋಲಿಸುವ ಸೀಮಿತ ಉದ್ದೇಶಕ್ಕಾಗಿ ಮಾತ್ರ ತಾತ್ಕಾಲಿಕ ಒಂದುಗೂಡುವಿಕೆಗೆ ಅನುಮತಿ ನೀಡಲಾಗಿದೆಯೇ ಹೊರತು ಇಲ್ಲಿಂದೀಚೆಗೆ ವಿಲೀನದ ಪ್ರಶ್ನೆಯೇ ಉದ್ಭವಿಸುವುದಿಲ್ಲ ಎಂದು ಹೇಳಿದೆ. ರಾಧಾಕೃಷ್ಣನ್ ಕೂಡ ಅದನ್ನೇ ವಿವರಿಸಿದರು. ಸಾಯಂಕಾಲ ಒಂದು ಸಾರ್ವಜನಿಕ ಸಭೆಯಿದ್ದು ಅಲ್ಲಿ ಗುಪ್ತಾಜಿ ನನ್ನನ್ನು ಪರಿಚಯಿಸಿ ಇನ್ನೊಂದು ಸಭೆಗೆ ಹೋದರು. ರಾಧಾಕೃಷ್ಣನ್‌ರು ಹಿಂದಿಯಲ್ಲಿ ಕಾಮರಾಜರ ಮನೋವೃತ್ತಿಯನ್ನು ವಿವರಿಸಿದರು. ನಾನು ಇಂಗ್ಲಿಷಿನಲ್ಲಿ ಒಂದು ಗಂಟೆ ಮಾತನಾಡಿದೆ. ಅದನ್ನು ಹಿಂದಿಗೆ ಭಾಷಾಂತರಿಸಲಾಯಿತು.

ಸುಮಾರು ೫೦೦೦ ವಿದ್ಯಾವಂತ ಶ್ರೋತೃಗಳಿದ್ದರು. ಮೇಲಿನ ಮೂಲೆಗಳಲ್ಲಿ ಒಂದು ಕಡೆಯಲ್ಲಿ ಕಾಮರಾಜ್ ಮತ್ತು ಇನ್ನೊಂದು ಕಡೆ ಇಂದಿರಾರವರಿರುವ ಭಿತ್ತಿಪತ್ರವೊಂದನ್ನು ತೋರಿಸಿ ಕಾಮರಾಜರು ನಮಸ್ಕರಿಸುತ್ತಿದ್ದು ಅವರು ಹೇಳಿದ ಹೇಳಿಕೆಗಳನ್ನು ದಪ್ಪದಾಗಿ ಮುದ್ರಿಸಿರುವುದನ್ನು ನನಗೆ ತೋರಿಸಿದರು. ಫಲಿತಾಂಶವೇನೇ ಇರಲಿ ಕಾಮರಾಜರು ನಮ್ಮನ್ನು ಕೈ ಬಿಟ್ಟಿದ್ದರು. ಇದು ಉದ್ದೇಶಪೂರ್ವಕವಾಗಿರಬೇಕು. ಅವರ ಬಗ್ಗೆ ನನಗೆ ಸಂದೇಹವಿದ್ದೇ ಇತ್ತು. ಇವತ್ತು ಶಿವರಾತ್ರಿ. ಮಾಮೂಲಿನಂತೆ ನಾನು ಉಪವಾಸ ಮಾಡಲಿಲ್ಲ.

**ಫೆಬ್ರವರಿ ೨೪, ೧೯೭೪ ದೆಹಲಿ**

ನೆನ್ನೆ ರಾತ್ರಿಯಿಂದ ಗಂಟೆಗೊಮ್ಮೆ ಫಲಿತಾಂಶಗಳು ಬರುತ್ತಿವೆ. ಪಾಂಡಿಚೇರಿಯು ಕಾಮರಾಜರಿಗೆ ದೊಡ್ಡ ಹೊಡೆತ ಕೊಟ್ಟಿದೆ. ಹಾಗೆಯೇ ಕೊಯಮತ್ತೂರು. ಕೊಯಮತ್ತೂರಿನಲ್ಲಿ ಲೋಕಸಭೆ ಮತ್ತು ಅಸೆಂಬ್ಲಿ ಸ್ಥಾನಗಳನ್ನು ನಮ್ಮ ಪಕ್ಷ ಕಳೆದುಕೊಂಡಿದ್ದೇವೆ. ಪಾಂಡಿಚೇರಿಯಲ್ಲಿ ೧೬ ಅಭ್ಯರ್ಥಿಗಳ ಪೈಕಿ ನಮಗೆ ೫ ದಕ್ಕಿತು. ಆಡಳಿತ ಕಾಂಗ್ರೆಸ್ ೧೪ ರಲ್ಲಿ ೭, ಡಿಎಂಕೆಯು ಸಂಪೂರ್ಣ ಸೋತಿದೆ. ಎಐಡಿಎಂಕೆ ಮತ್ತು ಸಿಪಿಐ ಎರಡೂ ಸೇರಿ ೧೯ ಸ್ಥಾನ ಗಳಿಸಿವೆ. ಕಾಮರಾಜ್ ತಮ್ಮ ಪ್ರಶ್ನಾರ್ಹ ನಡತೆಯಿಂದ ತಮ್ಮನ್ನು ತಾವೇ ಕೀಳು ಮಾಡಿಕೊಂಡು ಕಾಂಗ್ರೆಸ್ (ಒ)ವನ್ನು ಕೆಳಗಿಳಿಸಿದರು. ರಾಧಾಕೃಷ್ಣನ್ ಬಂದು ೧೦-೧೫ರಿಂದ ೧೧-೪೫ ರವರೆಗೆ ನನ್ನ ಜೊತೆಯಲ್ಲಿ ಮಾತನಾಡಿ ಆಡಳಿತ ಕಾಂಗ್ರೆಸ್ ಆರ್ ಮತ್ತು ಎಐಡಿಎಂಕೆ ಒಟ್ಟಿಗೆ ಪಾಂಡಿಚೇರಿಯಲ್ಲಿ ಸರ್ಕಾರ ರಚಿಸುತ್ತಾರೆಂದು ತಿಳಿಸಿದರು. ಎಡಿಎಂಕೆ ಮತ್ತು ಸಿಪಿಐ ಮಾತ್ರ ಮಾಡಬಲ್ಲವು. ಮಣಿಪುರದಲ್ಲಿ ಅವರು ತುಂಬಾ ಹಿಂದಿರುವುದರಿಂದ ಅವರು ಅದನ್ನು ಕಳೆದುಕೊಂಡಿದ್ದಾರೆ.

ಸಂಕೇಶ್ವರ ವಿಧಾನಸಭೆ ಸ್ಥಾನವನ್ನು ಗೆದ್ದ ಅಪ್ಪಣ್ಣ ಪಾಟೀಲರಿಗೆ ಅಭಿನಂದಿಸಿ ಒಂದು ತಂತಿಯನ್ನು ಕಳುಹಿಸಿದೆ. ಒರಿಸ್ಸಾ ಮತ್ತು ಉತ್ತರ ಪ್ರದೇಶದಲ್ಲಿ ಎಣಿಕೆ ನಡೆಯುತ್ತಿದೆ, ಪ್ರಾರಂಭಿಕ ಜಯ ಆಡಳಿತ ಕಾಂಗ್ರೆಸ್‌ಗೆ ಹೋಗುತ್ತದೆಂದು ಕಾಣುತ್ತದೆ. ಗುಪ್ತಾಜಿಯವರು ಸೋತರೆಂದು ಎಐಆರ್‌ನಲ್ಲಿ ಪ್ರಕಟಿಸಲಾಯಿತು. ಇದು ಸುಳ್ಳೆಂದು ಮತ್ತು ಫಲಿತಾಂಶಕ್ಕೆ ಕಾಯುತ್ತಿರುವುದಾಗಿ ತಿವಾರಿಯವರು ಅವರ ಮನೆಯಿಂದ ಹೇಳಿದರು. ಸ್ವಲ್ಪ ಕಾಲಾನಂತರ ಗುಪ್ತಾಜಿಯವರಿಗೆ ಫೋನು ಮಾಡಿ ೯-೩೦ ಗಂಟೆಗೆ ಎರಡನೆ ಎಣಿಕೆ ನಡೆಯುತ್ತಿದೆ ಮತ್ತು ಸ್ವಲ್ಪ ಸಮಯದ ನಂತರ ಫಲಿತಾಂಶ ತಿಳಿಯುತ್ತದೆಂದು ಹೇಳಿದರು. ಆದರೆ ಒರಿಸ್ಸಾ ಮತ್ತು ಉತ್ತರ ಪ್ರದೇಶದಲ್ಲಿ ಕಾಂಗ್ರೆಸ್ (ಆರ್) ಮುಂದಿದೆ. ಆದರೆ ಸುಮಾರು ಒಂದು ಡಜನ್ ಫಲಿತಾಂಶಗಳು ಹೊರಬಿದ್ದಿವೆ. ಉತ್ತರ ಪ್ರದೇಶದಲ್ಲಿ ಮತಪೆಟ್ಟಿಗೆಯ ಬಗ್ಗೆ ಅಡ್ಡಿಯಾಗುತ್ತಿದೆಯೆಂದು ಹೇಳಲಾಗುತ್ತಿದೆ. ಅಂತಹ ಕಡೆಗಳಲ್ಲೆಲ್ಲ

ಲಿಖಿತವಾಗಿ ಆಕ್ಷೇಪಣೆ ಕೊಡಬೇಕೆಂಬ ಸೂಚನೆಗಳನ್ನು ನೀಡಬೇಕೆಂದು ಗುಪ್ತಾಜಿಗೆ ಹೇಳಿದೆ. ಗುಪ್ತಾಜಿಯ ಬಗ್ಗೆ ಮಹಾರಾಣಿಗೆ ಮತ್ತು ಮೊರಾರ್ಜಿಗೆ ಫೋನ್ ಮಾಡಿದೆ. ಕಾಯೋಣ. ನಾಳೆ ಸಾಯಂಕಾಲದ ಹೊತ್ತಿಗೆ ಸ್ಪಷ್ಟವಾದ ಚಿತ್ರಣ ಬರಬಹುದು. ಮಾರ್ಚ್ ೧೦ರಂದು ಹಿಂದಿರುಗುವೆನೆಂದು ದಯಾಗೆ ಬರೆದನು.

**ಫೆಬ್ರವರಿ ೨೮, ೧೯೭೪ ಬಿದ್ದುಬಿಟ್ಟೆ**

ಅನೇಕ ಸಲ ಭಾವನಾತ್ಮಕವಾಗಿ ಜನರು ಗೊಂದಲದಲ್ಲಿದ್ದು ಬಿದ್ದುಬಿಟ್ಟರೆ ಮೂಳೆ ಮುರಿತವಾಗುತ್ತದೆಂದು ಹೇಳಲಾಗಿದೆ. ಇದು ಮುಂಚೆಯೂ ಆಗಿದೆ. ಉತ್ತರ ಪ್ರದೇಶದಲ್ಲಿ ನಮ್ಮ ಪತನ ಮತ್ತು ಅದರಲ್ಲಿಯೂ ಗುಪ್ತಾಜಿಯವರು ಠೇವಣಿ ಕಳೆದುಕೊಳ್ಳುವ ರೀತಿಯಲ್ಲಿ ಅವರ ಸೋಲು ಈ ದಿನ ನನಗೆ ಸಂಪೂರ್ಣವಾಗಿ ನಿರಾಶೆಯಾಗಿದೆ. ಹಾಗೇ ಚಿಂತಿಸುತ್ತಾ ಬೆಳಿಗ್ಗೆ ನಡೆಯುತ್ತಿದ್ದಾಗ ಜಾರಿ ಎಡಗಡೆ ತೋಳಿನ ಮೇಲೆ ಆಧರಿಸಿ ಬಿದ್ದುಬಿಟ್ಟೆ. ಬೆರಳುಗಳು ತುಂಬಾ ನೋಯುತ್ತಿವೆ. ಕರ್ನಾಟಕ ಭವನವನ್ನು ತಲುಪಿ ನನ್ನ ಮೇಲುಕೋಟನ್ನು ಡ್ರೈಕ್ಲೀನಿಂಗ್‌ಗೆ ಕೊಟ್ಟೆನು. ಡಾ. ಶಂಕರನ್‌ಗೆ ಫೋನ್ ಮಾಡಿದೆ. ಬೆಳಿಗ್ಗೆ ೯ ಗಂಟೆಗೆ ಆಸ್ಪತ್ರೆಗೆ ಬರುವಂತೆ ಹೇಳಿದರು. ಅಲ್ಲಿ ನನ್ನ ಕೈನ ಎಕ್ಸ್‌ರೇ ತೆಗೆಯಲಾಯಿತು. ಯಾವುದೇ ಮೂಳೆ ಮುರಿದಿಲ್ಲವೆಂಬುದು ಸಂತೋಷದ ವಿಷಯ. ಮೂರು ಸಲ ಕೈಯನ್ನು ಬಿಸಿನೀರಿನಲ್ಲಿಡುವಂತೆ ಡಾಕ್ಟರು ಹೇಳಿದರು. ಮಾಮೂಲಿನ ಅಲ್ಟ್ರಾಸೋನಿಕ್ ಮ್ಯಾಸೇಜನ್ನು ಪಡೆದೆ. (ಅಂಗಮರ್ದನ). ಕೈ ತುಂಬಾ ನೋಯುತ್ತಿದ್ದುದರಿಂದ ಎರಡು ನಿಮಿಷಗಳಿಗಿಂತ ಹೆಚ್ಚಾಗಿ ಒಂದು ಮೆಟ್ಟಲ ಮೇಲೆ ನಿಂತು ಚಕ್ರದ ವ್ಯಾಯಾಮವನ್ನು ಮಾಡಲಾಗುತ್ತಿರಲಿಲ್ಲ. ಮಧ್ಯಾಹ್ನ ಅಶೋಕ್ ಮೆಹ್ತಾರವರಲ್ಲಿಗೆ ಹೋದೆ. ಅವರು ನಿರಾಶಾದಾಯಕ ಸ್ಥಿತಿಯಲ್ಲಿದ್ದರು. ನಿರಂತರವಾಗಿ ನಾಲ್ಕು ಸೋಲುಗಳನ್ನು ನಾವು ಪಡೆದುದರಿಂದ ಕಾರ್ಯತಃ ಹಳೇ ಕಾಂಗ್ರೆಸಿಗೆ ಭವಿಷ್ಯವೇ ಇಲ್ಲವೆಂದು ಕಂಡುಬಂದಿತು. ಮೊದಲು ಕೇರಳದಲ್ಲಿ, ನಂತರ ೧೯೭೧ರಲ್ಲಿ ಲೋಕಸಭೆಯಲ್ಲಿ, ೧೯೭೨ರಲ್ಲಿ ರಾಜ್ಯಗಳ ಶಾಸಕಾಂಗಗಳಲ್ಲಿ ಮತ್ತು ಈಗ ಒರಿಸ್ಸಾ ಮತ್ತು ಉತ್ತರ ಪ್ರದೇಶ. ಅವರ ಪ್ರಕಾರ ಇನ್ನೂ ಹೆಚ್ಚಿನ ಜನರು ನಮ್ಮಿಂದ ಪರಿತ್ಯಾಗ ಮಾಡುತ್ತಾರೆ. ನಮಗೂ ಯಾವುದೇ ನಿರ್ದಿಷ್ಟ ಕಾರ್ಯಕ್ರಮಗಳಿಲ್ಲ. ಜನರಿಗೆ ಶಿಕ್ಷಣ ಕೊಡುತ್ತಾ ದೇಶಾದ್ಯಂತ ಪ್ರವಾಸ ಮಾಡಿಲ್ಲ. ನಿಜವಾಗಿ ಸಾಂಪ್ರದಾಯಿಕವಾಗಿ ಅವರ ಮನೆಯಲ್ಲಿ ನಾಳೆ ಸಂಜೆ ನಾಲ್ಕು ಗಂಟೆಗೆ ಸೇರಿದಾಗ ಈ ವಿಷಯ ಮತ್ತು ನಮ್ಮ ಭವಿಷ್ಯದ ಬಗ್ಗೆ ಚರ್ಚಿಸುತ್ತಿದ್ದೇವೆ. ನಾವು ಚರ್ಚೆ ಮಾಡುತ್ತಿದ್ದಾಗ ಪಾಟಿಯಾಲಾದ ಮಹಾರಾಣಿ ಅವರೊಡನಿದ್ದರು. ಅವರು ಗುಪ್ತಾಜಿಯವರ ಬಗ್ಗೆ ತುಂಬಾ ನಿರಾಶರಾಗಿದ್ದರು. ಆದರೂ ಅವರು ಭವಿಷ್ಯವನ್ನು ಧೈರ್ಯವಾಗಿ ಎದುರಿಸಬೇಕೆಂದಿದ್ದಾರೆ.

ಗುಪ್ತಾರವರ ಜೊತೆಯಲ್ಲಿ ಎರಡು ಸಲ ದೂರವಾಣಿಯಲ್ಲಿ ಮಾತನಾಡಿದೆ. ನಮ್ಮ ಭವಿಷ್ಯ ಮತ್ತು ಹಣದ ವಿಷಯದಲ್ಲಿ ಎರಡೂ ಕಾಂಗ್ರೆಸ್‌ಗಳು ಒಂದಾಗುವುದರಿಂದ ಒಳ್ಳೆಯದೆಂದು ಅವರು ಹೇಳಿದರು. ಕಲ್ಕತ್ತಾದ ಒಬ್ಬರು ಆರ್.ಕೆ. ಗೋಯೆಂಕಾ ಎನ್ನುವವರು ಉತ್ತರ ಪ್ರದೇಶದ ಚುನಾವಣೆಗಳಿಗೆ ಇಂದಿರಾರವರಿಗೆ ೫ ಕೋಟಿ ರೂ.ಗಳನ್ನು ಕೊಟ್ಟಿರುವವರೆಂದು ಅವರು ಹೇಳಿದರು. ವದಂತಿಯೊಂದರ ಪ್ರಕಾರ ಆಕೆ ಈ ಚುನಾವಣೆಗಾಗಿ ೨೫ ರಿಂದ ೩೦ ಕೋಟಿ ರೂ.ಗಳನ್ನು ಸಂಗ್ರಹಿಸಿರಬಹುದು.

**ಮಾರ್ಚ ೧, ೧೯೭೪** **ದೆಹಲಿ**

ಎಡಕೈ ಊದಿಕೊಂಡು ನೋಯುತ್ತಿದೆ. ಶ್ರೀ ರಾಮನಾಥನ್ ಚೆಟ್ಟಿಯಾರ್ ಬೆಳಗಿನ ಉಪಾಹಾರಕ್ಕೆ ಬಂದು ಪಾಂಡಿಚೇರಿ, ಕೊಯಮತ್ತೂರು, ಉತ್ತರ ಪ್ರದೇಶ ಮತ್ತು ಒರಿಸ್ಸಾ ಚುನಾವಣೆಗಳ ಬಗ್ಗೆ ದೀರ್ಘವಾಗಿ ಮಾತನಾಡಿದರು. ಕಾಮರಾಜರ ಬಗ್ಗೆ ನಮಗೆ ವ್ಯಸನವಾಯಿತು. ಟಿ.ಟಿ.ಕೆಯೂ ಈ ಬಗ್ಗೆ ದ್ರೋಹಿಯಾಗಿದ್ದಾರೆ, ಅವರು ಕಾಮರಾಜರನ್ನು ದಾರಿತಪ್ಪಿಸಿದರು ಎಂದು ಚಟ್ಟಿಯಾರ್ ಅವರು ಹೇಳಿದರು. ಕಾಮರಾಜರು ತಮ್ಮ ಮನೆಯಲ್ಲಿ ವಿರೋಧ ಪಕ್ಷವನ್ನು ಪಡೆಯುವುದಕ್ಕೆ ಜಂಟಿ ಪಕ್ಷದ ನಾಯಕನನ್ನು ಆರಿಸಿದ್ದರು. ಇದರ ಅರ್ಥವೇನೆಂದರೆ ಕೇಂದ್ರ ಪಾರ್ಲಿಮೆಂಟರಿ ಮಂಡಳಿಯ ಅನುಮತಿಯಿಲ್ಲದೆ ತಮ್ಮ ಕೈಯಲ್ಲಿನ ಅಧಿಕಾರವನ್ನು ತೆಗೆದುಕೊಂಡಿದ್ದಾರೆ. ಸ್ಪಷ್ಟವಾಗಿ ಪಕ್ಷವನ್ನು ಬದಲಾಯಿಸುವ ಹಂತಕ್ಕೆ ತಲುಪಿದ್ದಾರೆಂದು ಕಾಣುತ್ತದೆ. ಈ ವಿಷಯವು ಸದಸ್ಯರ ಮತ್ತು ಕಾರ್ಯಕಾರಿಣಿ ಸಮಿತಿಯಲ್ಲಿ ಆಹ್ವಾನಿತರ ಸಾಂಪ್ರದಾಯಿಕ ಸಭೆಯಲ್ಲಿ ಚರ್ಚಿತವಾಯಿತು. ಈ ವಿಷಯದಲ್ಲಿ ಕಾಮರಾಜರಿಗೆ ಪತ್ರ ಬರೆಯಬೇಕೆಂಬ ಭಾವನೆ ಇತ್ತು. ವಿಶೇಷವಾಗಿ ಉತ್ತರ ಪ್ರದೇಶಕ್ಕೆ ಸಂಬಂಧಿಸಿದಂತೆ ಇತ್ತೀಚಿನ ಚುನಾವಣೆಗಳ ಬಗ್ಗೆ ಸಾಮಾನ್ಯ ಅವಲೋಕನಗಳನ್ನು ಮಾಡಲಾಯಿತು. ಹಣ, ಜಾತಿ ಮತ್ತು ಕಾಮರಾಜರ ನಿಲುವನ್ನು ಜನಸಂಘ, ಬಿಕೆಡಿ ಮತ್ತು ಸಿಪಿಐ ಮತ್ತು ತುಂಬಾ ಹೆಚ್ಚಾಗಿ ಕಾಂಗ್ರೆಸ್ ಆರ್ ಉಪಯೋಗಿಸಿಕೊಂಡವು. ಅಂದರೆ ಕಾಂಗ್ರೆಸ್ ಆರ್ ಮತ್ತು ಒ ಎರಡೂ ಪಕ್ಷಗಳು ಚುನಾವಣೆಗಳಾದ ನಂತರ ವಿಲೀನಗೊಳ್ಳುತ್ತವೆ ಎಂದೂ ಹೇಳಲಾಗುತ್ತಿತ್ತು. ಇದೇ ಕಾಂಗ್ರೆಸ್ಸಿನ ಅಭಿಪ್ರಾಯವೆಂದು ಬಿಹಾರದ ಸ್ನೇಹಿತರಾದ ಎಸ್.ಎನ್. ಮಿಶ್ರ, ಸತ್ಯೇಂದ್ರ ನಾರಾಯಣ್‌ರವರು ಭಾವಿಸಿದ್ದು ಅಂತಹ ವಿಲೀನಕ್ಕೆ ಅವರು ಪರವಾಗಿದ್ದಾರೆಂದು ಕಾಣುತ್ತಿತ್ತು. ಇತರರು ಅಂದರೆ ಬನಾರಸಿದಾಸ್, ಸುಚೇತ, ಬಿ.ಡಿ. ಶರ್ಮ ಮತ್ತು ಬಾಬುಲಾಲ್ ಹಾಗೆ ಭಾವಿಸಿರಬೇಕು : ಆದರೆ ಸಿಕಂದರ್‌ಭಕ್ತ್, ನಾನು ಹಾಗೂ ಮೊರಾರ್ಜಿ ಖಂಡಿತವಾಗಿ ವಿರುದ್ಧವಾಗಿದ್ದೇವೆ. ಅಶೋಕ ಮೆಹ್ತಾ, ಸಾದಿಕ್‌ಭಾಯಿ, ಮೊಹಿಂದರ್ ಕೌರ್ ಯಾವುದೇ ಅಭಿಪ್ರಾಯವನ್ನು ವ್ಯಕ್ತಪಡಿಸಲಿಲ್ಲ. ೪ ರಿಂದ ೬-೩೦ರವರೆಗೆ ಸಭೆ ಸೇರಿದ್ದೆವು. ಮೆಹ್ತಾರವರಿಗೆ ಸುಸ್ತಾಗಿದ್ದಿತು. ೬ನೇ

ತಾರೀಕು ಸಂಜೆ ೪ ಗಂಟೆಗೆ ಪುನಃ ನಾವು ಸಾಂಪ್ರದಾಯಿಕವಾಗಿ ಸಭೆ ಸೇರಿದೆವು ಎಡಗೈ ಗಣನೀಯವಾಗಿ ಊದಿಕೊಂಡು ತುಂಬಾ ನೋವಿದೆ. ಆದರೂ ಎರಡು ಮೆಟ್ಟಲುಗಳಲ್ಲಿ ಚಕ್ರ ವ್ಯಾಯಾಮವನ್ನು ಮಾಡಿದೆ. ರಾಜನ ಕಾಗದ ಬಂದಿತು.

**ಮಾರ್ಚ್ ೩೦, ೧೯೭೪ ಚಿತ್ರದುರ್ಗ**

ನಡಿಗೆ ಮುಂತಾದುವು ಮಾಮೂಲಿನಂತಿವೆ. ಮನೆಯಲ್ಲಿ ಮಕ್ಕಳು ಅದರಲ್ಲಿಯೂ ಚಿಕ್ಕವರು ಇದ್ದರೆ ಅದೇ ಸಂತೋಷ. ಸುಮನ್ ಮತ್ತು ಸಂಜಯ್ ನಮ್ಮೆಲ್ಲರನ್ನೂ ಸಂತೋಷಪಡಿಸುತ್ತಾರೆ. ಮಧ್ಯಾಹ್ನ ಕಾಮರಾಜರು ನನಗೆ ಮದರಾಸಿನಿಂದ ಫೋನ್ ಮಾಡಿ, ನಾವು ಮೂವರು ಎಸ್.ಕೆ. ಪಾಟೀಲ್, ಕಾಮರಾಜ್ ಮತ್ತು ನಾನು ಕಾರ್ಯಕಾರಿ ಸಮಿತಿಯು ಭೇಟಿಯಾಗುವುದಕ್ಕೆ ಮುಂಚೆ ೩ನೇ ತಾರೀಕು ಮಧ್ಯಾಹ್ನ ದೆಹಲಿಯಲ್ಲಿ ಸೇರಬೇಕೆಂದು ಬರೆದಿದ್ದಾರೆ. ಆಗ ಕೆಲವು ಸಮಸ್ಯೆಗಳನ್ನು ಚರ್ಚಿಸಬೇಕೆಂದರು. ನಾನು ಅವರ ಜೊತೆಯಲ್ಲಿರಬೇಕೆಂದು ತುಂಬಾ ಕುತೂಹಲಿಗಳಾಗಿದ್ದಾರೆಂದು ನನಗೆ ಗೊತ್ತು. ಕಾಮರಾಜರ ಪ್ರಯತ್ನವಾದ ಇಂದಿರಾರ ಸಮೀಪ ಹೋಗುವುದಕ್ಕೆ ಮತ್ತು ಅಲ್ಲಿಂದ ಎರಡೂ ಕಾಂಗ್ರೆಸ್ ನಡುವೆ ಒಮ್ಮತ ಮತ್ತು ವಿಲೀನ ತರುವುದರ ಪ್ರಯತ್ನಕ್ಕೆ ನಾವು ಅವರಿಗೆ ಬೆಂಬಲಿಸಬೇಕೆಂಬುದು ಅವರ ಇಚ್ಛೆಯೆಂದು ಕಾಣುತ್ತದೆ. ಅವರಿಗೆ ಸರಿಯಾಗಿ ಈ ಬಗೆ ಏನು ಹೇಳಬೇಕೆಂಬುದರ ನನಗೆ ಖಚಿತವಾಗಿಲ್ಲ. ಅವರು ನನ್ನ ಹಳೆಯ ಸ್ನೇಹಿತರಲ್ಲೊಬ್ಬರು ಮತ್ತು ಅನೇಕ ವಿಷಯಗಳಲ್ಲಿ ನಮಗೆ ಒಮ್ಮತವಿದೆ. ಕೆಲವೇ ಭಿನ್ನಾಭಿಪ್ರಾಯಗಳನ್ನು ಹೊಂದಿದ್ದೇವೆ. ಆದ್ದರಿಂದ ನಾನು ೩ನೇ ತಾರೀಕು ಮಧ್ಯಾಹ್ನ ದೆಹಲಿಯನ್ನು ತಲುಪಲಿದ್ದೇನೆ. ಆಗ ನಾವು ಭೇಟಿ ಮಾಡಿ ಚರ್ಚಿಸಬಹುದೆಂದು ಕಾಮರಾಜರಿಗೆ ತಿಳಿಸಿದೆನು. ನಾವು ಯಾವ ವಿವರಗಳನ್ನೂ ಹೇಳಲಿಲ್ಲ ಅಥವಾ ಅವರೂ ತಮ್ಮ ಅಭಿಪ್ರಾಯವನ್ನು ಹೇಳಲಿಲ್ಲ, ಇದು ಅವರಲ್ಲಿ ಸಾಮಾನ್ಯವಾದ ರೀತಿ, ನಾನೂ ಹಾಗೆಯೇ ಇದ್ದೆ. ಸಾಯಂಕಾಲ ರಾಜಶೇಖರನ್‌ನಿಂದ ಫೋನ್ ಬಂದು ದೆಹಲಿಗೆ ನನ್ನ ಟಿಕೆಟು ೨ನೇ ತಾರೀಕು ಬೆಳಿಗ್ಗೆ ನಿಗದಿಯಾಗಿದೆ. ೨ನೇ ತಾರೀಕು ಮಧುವಿನ ಹುಟ್ಟುಹಬ್ಬವಾದ್ದರಿಂದ ನಾವು ಮಧ್ಯಾಹ್ನದ ಊಟಕ್ಕೆ ಬೆಂಗಳೂರಿಗೆ ಬರಬೇಕೆಂದು ಹೇಳಿದರು. ನಾನು ಒಪ್ಪಿಕೊಂಡು ಪ್ರತಿಭಾಗೆ ಹಾಗೇ ಹೇಳಿದೆ.

**ಏಪ್ರಿಲ್ ೫, ೧೯೭೪ ದೆಹಲಿ ಕಾರ್ಯಕಾರಿ ಸಮಿತಿ ಸಭೆ**

ನಡಿಗೆಯ ಕಾಲದಲ್ಲಿ ಮನುಭಾಯಿ ಷಾ ನನ್ನನ್ನು ಭೇಟಿ ಮಾಡಿ ಒ ಮತ್ತು ಆರ್ ಎರಡೂ ಒಟ್ಟಾಗಬೇಕೆಂದರು. ನಮ್ಮ ಕಡೆಯಿಂದ ಈ ಪ್ರಸ್ತಾಪ ಬಂದರೆ ಪ್ರಧಾನಿ ಖಂಡಿತವಾಗಿ ಈ ವಿಷಯವನ್ನು ದುರುಪಯೋಗಪಡಿಸಿಕೊಳ್ಳುವುದರಿಂದ ಆಹ್ವಾನ ಆಕೆಯಿಂದ ಬರಬೇಕೆಂದು ನಾನು ಹೇಳಿದೆ. ನಮಗೆ ಹೆಚ್ಚು ನಷ್ಟವಾಗದಿದ್ದರೆ ಆಕೆಯನ್ನು

ಆಗಲೇ ಭೇಟಿ ಮಾಡಿರುವ ಕಾಮರಾಜರು ಪುನಃ ಭೇಟಿ ಮಾಡುವುದು ಒಳ್ಳೆಯದು ಮತ್ತು ಉಪಯುಕ್ತ ಎಂದು ಹೇಳಿದೆ. ಮರ್ಯಾದೆಯಿಂದ ಆತನನ್ನು ಕಳುಹಿಸಿದೆ.

ಕಾರ್ಯಕಾರಿ ಸಮಿತಿ ಸಭೆಯಲ್ಲಿ ಈ ಬಗ್ಗೆ ಚರ್ಚೆ ಮುಂದುವರಿಯಿತು. ನನ್ನ ಅಭಿಪ್ರಾಯವನ್ನು ಕೇಳಿದಾಗ ಇದು ಕೆಟ್ಟದ್ದು ಮತ್ತು ಕಾಂಗ್ರೆಸ್ ಆರ್ ಜೊತೆಯಲ್ಲಿ ಯಾವುದೇ ರಾಜಿ ಸಾಧ್ಯವಿಲ್ಲ. ಸರಿಯಾಗಿ ಆಡಳಿತ ನಡೆಸಲು ಸಂಪೂರ್ಣವಾಗಿ ವಿಫಲರಾಗಿದ್ದಾರೆ ಮತ್ತು ಭ್ರಷ್ಟಾಚಾರ ಎಲ್ಲೆಡೆ ಹರಡಿವೆ ಎಂದು ಸ್ಪಷ್ಟಪಡಿಸಿದೆ. ನಾವು ನಮ್ಮ ಪಕ್ಷವನ್ನು ಬಲಪಡಿಸಿಬೇಕು ಮತ್ತು ನಾವು ಧೃತಿಗೆಡಬೇಕಾಗಿಲ್ಲ, ಕಾಮರಾಜರ ಅಭಿಮತವನ್ನು ಪರಿಶೀಲಿಸಬೇಕು ಮತ್ತು ಉದ್ದೇಶಿತ ಒಕ್ಕೂಟದ ಸಲಹೆಯ ಬಗ್ಗೆ ಒಮ್ಮತವಿಲ್ಲದಿದ್ದರೆ ಅಥವಾ ಹೊಸ ಪಕ್ಷವನ್ನು ರಚಿಸಬೇಕಾದರೆ ಗಂಭೀರವಾಗಿ ಆಲೋಚಿಸಬೇಕಾಗಿರುವುದರಿಂದ ಈಗದನ್ನು ಮಾಡಲಾಗುವುದಿಲ್ಲ. ನಾನು ಡಾ. ಮದನ್‌ಮೋಹನ್‌ರಲ್ಲಿಗೆ ಹೋಗಲು ತ್ಯಾಗಿ ಮತ್ತು ನಾಥ್ ಜೊತೆಯಲ್ಲಿ ೧೨ ಗಂಟೆಗೆ ಬಿಟ್ಟೆ. ಡಾ. ಮದನ್ ನನ್ನನ್ನು ಪರೀಕ್ಷಿಸಿದರು. ಈಗಿನ ಚಿಕಿತ್ಸೆಯನ್ನೇ ಮುಂದುವರಿಸಿ, ಮುಂದಿನ ಸಲ ನಾನು ದೆಹಲಿಗೆ ಬಂದಾಗ ೩-೪ ದಿನಗಳವರೆಗೆ ಒಳರೋಗಿಯಾಗಿ ಇರಬೇಕು ಎಂದು ಹೇಳಿದರು.

ಚರ್ಚೆಗಳು ಮುಂದುವರಿದವು ಮತ್ತು ಸಂಜೆ ಸುಮಾರು ೭ ಘಂಟೆ ಹೊತ್ತಿಗೆ ಅಶೋಕ್‌ಮೆಹ್ತಾ ನನ್ನ ಕೈಗೆ ಒಂದು ಕರಡನ್ನು ಇಟ್ಟರು. ಅದು ಒಮ್ಮತದ ಅಭಿಪ್ರಾಯವಾಗಿದ್ದು ನಾಳೆ ದಿನ ಮಂಜೂರಾಗಬೇಕಾದ ಠರಾವಿಗೆ ಆಧಾರವಾಗುತ್ತದೆ ಎಂದು ಹೇಳಿದರು.

ಈ ಚರ್ಚೆಗಳಲ್ಲಿ ಕಾಮರಾಜ್‌ರ ಚೇಲಾ ಆದ ತಮಿಳುನಾಡು ಪಿಸಿಸಿ ಅಧ್ಯಕ್ಷರನ್ನು ಹೊರತುಪಡಿಸಿ ಎಲ್ಲಾ ಕಾರ್ಯಕಾರಿ ಸಮಿತಿಯ ಸದಸ್ಯರು, ಶಾಶ್ವತ ಮತ್ತು ಈ ಸಭೆಗೆ ಮಾತ್ರ ಆಹ್ವಾನಿತರಾದವರು, ಪಾಂಡಿಚೇರಿ ಮತ್ತು ತಮಿಳುನಾಡಿನ ಒಡಂಬಡಿಕೆಯ ವಿರುದ್ಧ ಮಾತನಾಡಿದರು. ಜೊತೆಗೆ ವಿಧಾನಸಭೆ ಚುನಾವಣೆಗಳಾದ ಮೇಲೆ ಪಾಂಡಿಚೇರಿಯಲ್ಲಿ ಮಾಡಿದುದ್ದು ತಪ್ಪು ಎಂದು ಕಾಮರಾಜರಿಗೆ ಮನವರಿಕೆ ಮಾಡಲಾಯಿತು. ಈ ಒಮ್ಮತದ ಹೊಡೆತ ಅವರಿಗೆ ನೋವು ತಂದಿತು. ಹೊರಗಿನಿಂದ ಪ್ರಧಾನಿಯನ್ನು ಬೆಂಬಲಿಸುವಿರಾ ಎಂದು ಕಾಮರಾಜರನ್ನು ಕೇಳಿದಾಗ ಅವರು ಇಲ್ಲ ಎಂದು ಹೇಳಿದುದು ಗೊಂದಲಕ್ಕೆಡೆ ಮಾಡಿತು. ಇದು ಅವರ ವಿರುದ್ಧ ಹೋಯಿತು.

**ಜೂನ್ ೧೦, ೧೯೭೪ — ದೆಹಲಿ**

ಮಾಮೂಲಿನ ಕೆಲಸಗಳು ಮತ್ತು ಸ್ನಾನವಾದ ಮೇಲೆ ಎಂದಿನಂತಿನ ಉಲ್ಲಾಸ ಕಂಡು ಬರಲಿಲ್ಲ. ಅಶೋಕ್ ಮೆಹ್ತಾ ಮತ್ತು ಹೆಗಡೆ ಬೆಳಗಿನ ಉಪಾಹಾರಕ್ಕೆ ಬಂದರು.

ನಮ್ಮ ಸಂಸ್ಥೆಯ ಬಗ್ಗೆ ಕೆಲವು ಅಸಂಬದ್ಧ ಮಾತುಗಳನ್ನಾಡಿದರು. ಎಐಸಿಸಿ ಕಚೇರಿಗೆ ಹೋದೆವು ಚರ್ಚೆಗಳು ಮುಂದುವರಿದು ದೀರ್ಘವಾದ ಭಾಷಣಗಳು ಬೆಳಿಗ್ಗೆ ಮತ್ತು ಮಧ್ಯಾಹ್ನ ಮುಂದುವರಿದವು. ಬನಾರಸಿದಾಸ್, ಹೆಗಡೆ, ಎಸ್.ಎನ್. ಮಿಶ್ರ, ಸತ್ಯೇಂದ್ರನಾರಾಯಣ, ವಕೀಲರಾದ ಶರ್ಮರೂ ಸೇರಿದಂತೆ ಹೆಚ್ಚಿನವರು ಬಾವುಟ ಮತ್ತು ಹೆಸರನ್ನು ಬದಲಾಯಿಸಬೇಕೆಂದು ಮತ್ತು ಆವರಣದಲ್ಲಿರುವ (ಓ) ವನ್ನಾದರೂ ತೆಗೆಯಬೇಕೆಂದೂ ಒತ್ತಾಯಿಸಿದರು. (ಓ)ವನ್ನು ಬದಲಾಯಿಸಲು ಪ್ರಜಾಪ್ರಭುತ್ವವನ್ನು ಸೂಚಿಸುವ (ಡಿ) ಯನ್ನು ಹಾಕಬೇಕೆಂದು ಎಸ್.ಎನ್. ಮಿಶ್ರ ಇಚ್ಛಿಸಿದರು. ನಾನೂ ಸೇರಿದಂತೆ ಗುರ್ಜಾರ್‌ಮಲ್ ಮತ್ತು ಇತರರು ಇದಕ್ಕೆ ವಿರೋಧವಾಗಿದ್ದೆವು. ಆದರೂ (ಓ) ಎಂಬುದನ್ನು ಬದಲಾಯಿಸಿ (ಡಿ)ಎಂಬುದನ್ನು ಹೊಂದಲೂ ನನಗೆ ಇಷ್ಟವಿಲ್ಲದಿದ್ದರೂ ಒಪ್ಪಿಕೊಂಡೆ. ಗುಜರಾತ್ ಪಿಸಿಪಿಯ ಕಾರ್ಯದರ್ಶಿ, ಯುವಕ ಒಳ್ಳೆಯ ಭಾಷಣವನ್ನು ಮಾಡಿದರು. ಅದನ್ನು ತುಂಬಾ ಇಷ್ಟಪಟ್ಟೆ. ಗಾಂಧಿಯ ಸಮಾಜವಾದವನ್ನು ಬೆಂಬಲಿಸಬೇಕು ಮತ್ತು ಅದನ್ನು ಬೆಳೆಸಬೇಕೆಂದು ಅವರು ಹೇಳಿದರು. ಹೆಸರು ಮತ್ತು ಬಾವುಟವನ್ನು ಬದಲಾಯಿಸುವುದರ ಬಗ್ಗೆ ಅವರು ಒಪ್ಪಲಿಲ್ಲ. ಅಂತಿಮವಾಗಿ ಎರಡೂ ದಿನದ ಚರ್ಚೆಗಳ ವಿಷಯಗಳನ್ನು ಎತ್ತಿ ತೋರಿಸುವಂತೆ ಒಂದು ಸಾರಾಂಶವನ್ನು ಬರೆದೆವು. ನಾವು ಚದುರಿದೆವು. ಇದು ಒಂದು ಒಳ್ಳೆಯ ಚರ್ಚೆ ಎಂದು ನನಗನಿಸಿತು. ಇದರಿಂದ ಕೆಲವು ವಿಷಯಗಳು ಹೊರಬಂದವು. ಆದರೆ ನಮ್ಮ ಆರ್ಥಿಕತೆಯನ್ನು ಹೆಚ್ಚು ಮಾಡುವುದು ಮತ್ತು ಜನರ ಆರ್ಥಿಕ ಮಟ್ಟವನ್ನು ಮೇಲಕ್ಕೇರುವಂತೆ ಮಾಡುವ ಬದಲು ಚುನಾವಣೆ ಮತ್ತು ಅದರ ಫಲಿತಾಂಶಗಳ ಬಗ್ಗೆ ನಮ್ಮ ಪಕ್ಷ ಹೆಚ್ಚು ಚಿಂತೆಗೊಳಗಾಗಿರುವ ಭಾವನೆ ನನಗಾಗಿತ್ತು. ಈಗಿನ ಸಮಸ್ಯೆಗಳಾದ ಭ್ರಷ್ಟಾಚಾರ, ಏರುತ್ತಿರುವ ಬೆಲೆಗಳು, ಹಣದುಬ್ಬರ ಮುಂತಾದ ಕೆಲವು ವಿಷಯಗಳ ಮೇಲೆ ಚಳವಳಿ ನಡೆಸುವುದು ತಕ್ಷಣದ ಅಗತ್ಯವಾಗಿದ್ದುದು ಹೆಚ್ಚಿನ ಉತ್ಪಾದನೆ ಮತ್ತು ಉದ್ಯೋಗ ಮುಂತಾದವುಗಳಿಗೆ ಗಾಂಧೀಜಿಯವರ ಮಾರ್ಗವನ್ನು ಆಧರಿಸಿ ದೀರ್ಘಾವಧಿ ಯೋಜನೆಯನ್ನು ನಾವು ಹೊಂದಿರಬೇಕೆಂದೂ ನಾನು ಹೇಳಿದೆ. ಅವರು ಇವುಗಳನ್ನು ಸಮರ್ಥಿಸಿದರು. ಆದರೆ ಅವುಗಳನ್ನು ಅವರು ಒಪ್ಪಿಕೊಂಡರೆಂಬುದರ ಬಗ್ಗೆ ನನಗೆ ಖಚಿತವಾಗಿಲ್ಲ.

**ಜುಲೈ ೩, ೧೯೭೪ ಚಿತ್ರದುರ್ಗ**

ನಿನ್ನೆ ದಿನದ ವೃತ್ತಪತ್ರಿಕೆಗಳು ಮತ್ತು ರೇಡಿಯೋದಲ್ಲಿ ಕಾಂಗ್ರೆಸ್ ಆರ್ ಪಕ್ಷದ ರಾಷ್ಟ್ರಪತಿ ಸ್ಥಾನಕ್ಕೆ ಪ್ರಧಾನಮಂತ್ರಿಯ ಆಯ್ಕೆ ಫಕ್ರುದ್ದೀನ್ ಆಲಿ ಅಹಮದ್ ಎಂದು ಗಟ್ಟಿಯಾಗಿ ಘೋಷಿಸುತ್ತಿವೆ. ಏಕೆಂದರೆ ಭಾರತದ ಅಧ್ಯಕ್ಷಸ್ಥಾನಕ್ಕೆ ಇತರರು ಎಣಿಕೆಗೆ ಬರುವುದಿಲ್ಲ ಎಂದಾಗಿತ್ತು. ಎಂತಹ ಆಯ್ಕೆ ? ಬಡಪ್ರಾಣಿ ಗಿರಿ ! ಅವರಿಗೆ ನಿರಾಶೆಯಾಗಬಹುದು.

ಆದರೆ ಇವರಿಬ್ಬರ ನಡುವೆ ಅಂತಹ ಆಯ್ಕೆಯೇನಿಲ್ಲ. ಇಬ್ಬರೂ ಪ್ರಧಾನಿಯ ಜೋಹುಕುಂವಾಲಾಗಳು. ಆದರೆ ಈಗ ವಾತಾವರಣ ಅವರ ಪರವಾಗಿದೆ. ಅವರೇ ಅವರ ಕೊನೆ ಆಯ್ಕೆ ಎಂದು ಕಾಣುತ್ತದೆ. ಏನನ್ನೂ ಮಾಡಲಾಗುವುದಿಲ್ಲ. ವಾಸ್ತವವಾಗಿ ಚುನಾವಣೆಗೆ ಮುಂಚೆಯೇ ಇದು ನಿರ್ಧಾರಿತವಾದುದು.

**ಆಗಸ್ಟ್ ೨೪, ೧೯೭೪**

ಫಕ್ರುದ್ದೀನ್ ಆಲಿ ಅಹಮದ್ ಭಾರತದ ಐದನೆಯ ರಾಷ್ಟ್ರಾಧ್ಯಕ್ಷರಾಗಿದ್ದಾರೆ. ಗುಣಮಟ್ಟದಲ್ಲಿ ಪುನಃ ಎಂತಹ ಬೀಳು ಎಂದು ನಾನು ಹೇಳಲೇಬೇಕಾಗುತ್ತದೆ. ಜತ್ತಿಯವರನ್ನು ಮುಂದಿನ ಉಪರಾಷ್ಟ್ರಾಧ್ಯಕ್ಷರಾಗಿ ನಿಲ್ಲಿಸುವರೆಂದು ಎಸ್.ಕೆ. ಪಾಟೀಲರು ತಮ್ಮ ಹಿಂದಿನ ಕಾಗದದಲ್ಲಿ ನಮೂದಿಸಿದ್ದರು. ಈ ಮನುಷ್ಯನನ್ನು ಮಿಕಿಮೌಸ್ ಎಂದು ಅನೇಕರು ತೆಗಳಿದ್ದಾರೆ. ನಿಜ ಅವರು ಹಾಗೇ ಇದ್ದಾರೆ. ಒರಿಸ್ಸಾದಲ್ಲಿ ವಿರೋಧ ಪಕ್ಷವನ್ನು ಸರಕಾರದೊಳಕ್ಕೆ ಹೋಗದೆ ಇರುವಂತೆ ಮಾಡಲು ಅವರು ನಡೆದುಕೊಂಡ ರೀತಿಯಿಂದ ಅಧಿಕಾರದಲ್ಲಿರುವವರಿಗೆ ಸಂತೋಷವುಂಟು ಮಾಡಿದ್ದಾರೆ. ಒರಿಸ್ಸಾದ ಉಚ್ಚ ನ್ಯಾಯಾಲಯವು ಅವರ ವಿರುದ್ಧ ಖಂಡನೆ ಮಾಡಿದರೆಂಬುದು ನಿಜ. ಅವರು ಉಪರಾಷ್ಟ್ರಾಧ್ಯಕ್ಷರಾಗಲು ಇದೂ ಒಂದು ಸರ್ಟಿಫಿಕೇಟ್ ಎಂದು ಕಾಣುತ್ತದೆ. ಮಾಮೂಲಿನ ರೀತಿಯಲ್ಲಿ ಅಹಮದರು ಎಂದಿನಂತಹ ಹಳಸಲು ಮಾತಿನ ಹೇಳಿಕೆಯನ್ನು ನೀಡಿ ಜನರಲ್ಲಿ ಮನವಿ ಮಾಡಿಕೊಂಡಿದ್ದಾರೆ. ನನಗೆ ಆಶ್ಚರ್ಯವೇನೆಂದರೆ ಯಾವುದೇ ನಂಬಿಕೆ ಇಲ್ಲದೆ ಎಲ್ಲಾ ವೃತ್ತಪತ್ರಿಕೆಗಳು ಅವರನ್ನು ಗುಣಗಾನ ಮಾಡಿ ಅವರಲ್ಲಿಲ್ಲದಿರುವ ನೈತಿಕ ಗುಣಗಳನ್ನು ಹೊಗಳಿವೆ. ಇದು ಸಾಮಾನ್ಯ. ನಾವು ಇನ್ನೂ ಪ್ರಜಾಪ್ರಭುತ್ವ ಗುಣಲಕ್ಷಣಗಳನ್ನು ಬೆಳೆಸಿಕೊಳ್ಳಬೇಕೆಂದು ಕಾಣುತ್ತದೆ. ನಾವು ಇಲ್ಲಿಯವರೆಗೆ ಅಧಿಕಾರದಲ್ಲಿರುವವರ ಮುಂದೆ ಹಲ್ಲು ಕಿರಿಯುತ್ತಿದ್ದೆವು. ಅದರಿಂದ ಬೇಗನೆ ಹೊರಬರಲಾಗುವುದಿಲ್ಲ.

**ಸೆಪ್ಟೆಂಬರ್ ೩೦, ೧೯೭೪** **ದೆಹಲಿ**

ಬೆಳಿಗ್ಗೆ ೧೧ ಘಂಟೆಗೆ ರಾಜನಾರಾಯಣ್ ಮತ್ತು ಪಿಲೂಮೋದಿ ಬಂದರು. ಸುಮಾರು ಒಂದು ಘಂಟೆ ಕಾಲ ಸುದೀರ್ಘವಾಗಿ ಮಾತನಾಡಿದರು. ಬಿಜುವಿನಂತಲ್ಲದೆ ವೈಯಕ್ತಿಕವಾಗಿ ಅವರ ವಿರುದ್ಧ ಹೆಚ್ಚೇನೂ ವಿರೋಧವಿಲ್ಲ. ನಾನು, ವೀರೇಂದ್ರ ಪಾಟೀಲ್ ಮತ್ತು ಹೆಗಡೆ ಮನಸ್ಸು ಮಾಡಿದರೆ ಕರ್ನಾಟಕದಲ್ಲಿ ಕಷ್ಟವೇನಾಗುವುದಿಲ್ಲ ಎಂದು ಹೇಳಿದರು. ಗುಜರಾತಿನಲ್ಲಿ ಚಿಮನ್‌ಭಾಯಿ ಪಟೇಲ್ ಸೇರಿಕೊಳ್ಳುತ್ತಾರೆ. ಸತ್ಯೇಂದ್ರ ಎನ್. ಸಿಂಗ್ ಮತ್ತು ಶ್ಯಾಮನಂದನ ಮಿಶ್ರ ಕೂಡ ಸೇರಿಕೊಳ್ಳುವ ಸಾಧ್ಯತೆಯಿದೆ. ನನಗೆ ಸಂದೇಹವಿದೆ. ನಾವು ನಲವತ್ತು ವರ್ಷಗಳ ಕಾಲ ಸೇವೆ ಮಾಡಿರುವ ಸಂಸ್ಥೆಯನ್ನು

ಬಿಡಲು ಮನಸ್ಸು ಮಾಡುವುದಕ್ಕೆ ಮುಂಚೆ ನಮ್ಮ ಕಾರ್ಯಕರ್ತರ ಮತ್ತು ನಮ್ಮ ಮುಂದಾಳುಗಳ ಮನಸ್ಸನ್ನು ತಿಳಿದುಕೊಳ್ಳಬೇಕೆಂದು ನಾನೂ ಹೇಳಿದೆ. ನಂತರ ನಾನು ಮೊರಾರ್ಜಿಯವರಲ್ಲಿಗೆ ಹೋಗಿ ಅನೇಕ ಸಮಸ್ಯೆಗಳ ಬಗ್ಗೆ ಚರ್ಚಿಸಿದೆ. ಮಾಮೂಲಿನಂತೆ ತಮ್ಮ ಬಗ್ಗೆ ಅಭಿಪ್ರಾಯವಿರುವುದನ್ನು ಹೇಳಿದರು. ಚಿಮನ್ ಭಾಯಿಯವರ ಬಗ್ಗೆ ಅವರನ್ನು ನೆನ್ನೆ ನೋಡಿದ್ದರೆಂದು ಅವರು (ಸಿಸಿಪಿ) ಹೇಳಿದರೆಂದೂ, ವಿಷಾದ ವ್ಯಕ್ತಪಡಿಸಲು ಒಪ್ಪಿಕೊಂಡಿದ್ದಾರೆಂದೂ ಅಂತಿಮವಾಗಿ ಸೇರಿಕೊಳ್ಳುವುದಾಗಿ ಹೇಳಿದರೆಂದು ಹೇಳಿದರು. ಮೋದಿ ಮತ್ತು ನಾರಾಯಣ್ ಹೇಳಿದುದಕ್ಕಿಂತ ಇದು ಭಿನ್ನವಾಗಿತ್ತು. ಗುಜರಾತ್ ಭವನ್‌ಗೆ ಫೋನ್ ಮಾಡಿದಾಗ ಚಿಮನ್ ಭಾಯಿಯವರು ಈ ಬೆಳಿಗ್ಗೆ ದೆಹಲಿಯನ್ನು ಬಿಟ್ಟರೆಂದು ತಿಳಿದುಬಂದಿತು. ಒಂದು ವಿಷಯ ಸ್ಪಷ್ಟವಾಗಿದೆ. ಹೆಗಡೆ ಮತ್ತು ವೀರೇಂದ್ರ ಪಾಟೀಲರು, ಬಿ.ಎಲ್.ಡಿ. ಮುಂದಾಳುಗಳು ಅವರು ಬಿಎಲ್‌ಡಿಗೆ ಸೇರಿಕೊಳ್ಳುವರೆಂದು ತಿಳಿದುಕೊಳ್ಳಬೇಕೆಂದು ಹೇಳುತ್ತಿದ್ದರು. ಆದರೆ ಅವರ ಮಧ್ಯೆ ನಾನು ಬರುತ್ತಿದ್ದೆ. ಈಗ ಹಸಿರು ನಿಶಾನೆಯನ್ನು ತೋರಿಸಬೇಕು. ಅವರು ಎಷ್ಟರಮಟ್ಟಿಗೆ ನಿಷ್ಠರು ಎಂದು ನನಗೆ ಗೊತ್ತಿಲ್ಲ. ಅವರಿಗೆ ಚುನಾವಣಾ ಹೋರಾಟಗಳ ಬಗ್ಗೆ ಒಲವಿರಲಿಲ್ಲ. ಅವುಗಳಿಂದ ಅವರು ದೂರವಾಗಿರುತ್ತಾರೆಂದು ಕಾಣುತ್ತದೆ.

**ನವೆಂಬರ್ ೫, ೧೯೭೪ ದೆಹಲಿ ಕಾರ್ಯಕಾರಿ ಸಮಿತಿ ಸಭೆ**

ನೆನ್ನೆ ದಿವಸದ ಪಾಟ್ನಾ ಮತ್ತು ದೆಹಲಿಯಲ್ಲಿನ ಪಥಸಂಚಲನದ ಬಗ್ಗೆ ಪತ್ರಿಕೆಗಳು ತುಂಬಿಹೋಗಿದ್ದವು. ಲಾಠಿಗಳಿಂದ ಜಯಪ್ರಕಾಶ ನಾರಾಯಣರನ್ನು ಥಳಿಸಿದರೆಂದು ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ನೆನ್ನೆ ದಿನ ಒಂದು ರೇಡಿಯೋ ಪ್ರಸಾರದಲ್ಲಿ ಅವರು ಗಾಯಗೊಂಡಿರುವ ವಿಷಯವನ್ನು ಒಪ್ಪಿಕೊಂಡು ಐದು ಜನ ಸರ್ಕಾರಿ ಡಾಕ್ಟರುಗಳು ಅವರ ಶುಶ್ರೂಷೆ ಮಾಡುತ್ತಿರುವರೆಂದು ಪ್ರಕಟಿಸಿದುದನ್ನು ಇನ್ನೊಂದು ಪ್ರಸಾರದಲ್ಲಿ ಅಲ್ಪವಾಗಿ ಹೇಳುತ್ತಾ ಅದನ್ನು ನಿರಾಕರಿಸುತ್ತಿದ್ದರು. ಈ ಎಐಆರ್‌ಅನ್ನು ಪ್ರತಿಯೊಂದು ಕಡೆಯಲ್ಲೂ ಸುಮ್ಮನಿರುವಂತೆ ಮಾಡಲು ನಾವು ಏನೂ ಮಾಡಲಾಗುವುದಿಲ್ಲವೆ ? ದೆಹಲಿಯಲ್ಲಿ ಹೆಚ್ಚಿನ ಅಂಗಡಿಗಳು ಮುಚ್ಚಿದ್ದು ಕೆಲವು ಮಾತ್ರ ತೆಗೆದಿದ್ದವು. ಖಾಲಿ ಬಸ್ಸುಗಳು ಮಾತ್ರ ಓಡಾಡುತ್ತಿವೆಯೆಂದು ಹೇಳುತ್ತಿದ್ದು ಎಲ್ಲವೂ ಸಮಾಧಾನವಾಗಿವೆ ಎಂದು ಪ್ರಚಾರಪಡಿಸಲಾಗುತ್ತಿತ್ತು. ಜೆಪಿಯವರನ್ನು ಹೊಡೆಯಲಾಗಿದ್ದು ಅವರಿಗೆ ಗಾಯಗಳಾಗಿದ್ದು ಡಾಕ್ಟರುಗಳು ಅವರಿಗೆ ಚಿಕಿತ್ಸೆ ಮಾಡುತ್ತಿದ್ದಾರೆ ಮತ್ತು ಒಂದು ಪಕ್ಕೆಲುಬು ಮುರಿದಿದೆಯೆಂದು ಪ್ರಚಾರ ಮಾಡಲಾಗುತ್ತಿತ್ತು. ಅವರು ಈ ದಿನ ಬಂದ್‌ಗೆ ಕರೆಯಿತ್ತಿದ್ದಾರೆ. ಅದು ಜಯಪ್ರದಾವಾಗುತ್ತದೆಂದು ಕಾಣುತ್ತದೆ.

ನಾವು ೧೧ ರಿಂದ ೧ ಗಂಟೆ ಮತ್ತು ೪ ರಿಂದ ಆರವರೆಗೆ ಕಾರ್ಯಕಾರಿ ಸಮಿತಿಯಲ್ಲಿ ಸೇರಿದ್ದೆವು. ಮೈಸೂರಿನ ಪಾಟೀಲ್, ಹೆಗಡೆ, ಜಿ.ಪಿ. ಸ್ವಾಮಿ, ಕೇರಳ ಮತ್ತು

ತಮಿಳುನಾಡಿನ ಪಿಸಿಸಿ ಅಧ್ಯಕ್ಷರುಗಳು ದೆಹಲಿ, ಮಹಾರಾಷ್ಟ್ರ (ಎಸ್‌ಕೆ), ಯುಪಿ (ಸುಚೇತಾ), ಬಂಗಾಳ, ಒರಿಸ್ಸಾ (ಹಳೆಯ ಸ್ನೇಹಿತರು ಪವಿತ್ರ, ಮೋಹನ್ ಪ್ರಧಾನ್), ಹರ್‍ಯಾನಾ (ಶರ್ಮ) ಮತ್ತು ಮೊರಾರ್ಜಿಯವರೂ ಸೇರಿದಂತೆ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು. ವೀರೇಂದ್ರ ಪಾಟೀಲರು ಚುನಾವಣೆಗಳ ಬಗ್ಗೆ ಮಾತನಾಡಿ ಅದರ ಜಯಕ್ಕೆಲ್ಲಾ ತಾವೇ ಕಾರಣ ಎಂದು ತಮ್ಮನ್ನು ತಾವೇ ಹೊಗಳಿಕೊಳ್ಳುತ್ತಿದ್ದರು. ಅವರು ಗರ್ವಿಷ್ಠರು ಎಂದು ಸದಸ್ಯರು ಭಾವಿಸಲು ಪ್ರಾರಂಭಿಸಿದ್ದರು. ಅವರು ಮಾತ್ರ ಸಂಗ್ರಹಣೆಗಳಿಗೆ ಸಾಮರ್ಥ್ಯವುಳ್ಳವರೆಂದು ಬಡಾಯಿ ಕೊಚ್ಚಿಕೊಳ್ಳುತ್ತಿದ್ದರು. ನಾನು ಕೊನೆಯಲ್ಲಿ ಮಾತನಾಡಿ ಸರಕಾರವನ್ನು ಕಿತ್ತುಹಾಕಲು ಅವಿಶ್ರಾಂತ ಚಳವಳಿಯನ್ನು ಮುಂದುವರಿಸಬೇಕು. ಹೇಗೋ ಹಣದ ಸಂಗ್ರಹಣೆಯಾಗುತ್ತದೆ. ಚುನಾವಣೆಗಳ ಮೇಲೆ ಅನವಶ್ಯಕವಾಗಿ ಅವಲಂಬಿಸಬಾರದೆಂದು ಹೇಳಿದೆ. ಇದು ಪಾಟೀಲರಿಗೆ ತೃಪ್ತಿ ತರಲಿಲ್ಲ. ಎಐಸಿಸಿಯು ತಮಗೆ ಹಣಸಹಾಯ ಮಾಡಬೇಕೆಂದಾಗ ಮೆಹ್ತಾ, ದೇಸಾಯಿ ಮತ್ತು ನಾನು ಅವರನ್ನು ಸುಮ್ಮನಾಗಿರಿಸಿದೆವು.

**ನವೆಂಬರ್ ೧೬, ೧೯೭೪ (ಮೀಸಾ)**

ಭಾರತದ ರಾಷ್ಟ್ರಾಧ್ಯಕ್ಷರು ಒಂದು ಅತಿ ವಿಶೇಷವಾದ ಆಜ್ಞೆಯನ್ನು ಹೊರಡಿಸಿದ್ದಾರೆ. ಅದರ ಪ್ರಕಾರ ಮೀಸಾದ ಅಡಿಯಲ್ಲಿ ಸೆರೆಮನೆಯಲ್ಲಿರುವ ಕಳ್ಳಸಾಗಣಿಕೆದಾರರು ಯಾವ ನ್ಯಾಯಾಲಯದಲ್ಲೂ ಪರಿಹಾರವನ್ನು ಪಡೆಯಲಾಗುವುದಿಲ್ಲ. ಇದರ ಅರ್ಥವೇನೆಂದರೆ ನಾಗರಿಕನ ಮೂಲಭೂತ ಹಕ್ಕುಗಳನ್ನು ಕಿತ್ತುಕೊಳ್ಳಲಾಗಿದೆ. ಈ ಆದೇಶವು ಕಳ್ಳಸಾಗಾಣಿಕೆದಾರರಿಗೆ ಅನ್ವಯವಾಗುವಂತಿದ್ದು ಸರಕಾರವು ಒಬ್ಬ ನಾಗರಿಕನನ್ನು ಕಳ್ಳಸಾಗಣೆದಾರನೆಂದು ಘೋಷಿಸಿ ಅವನನ್ನು ಒಂದು ನಿರ್ದಿಷ್ಟ ಕಾಲಕ್ಕಾದರೂ ಬಂಧನದಲ್ಲಿಡಬಹುದು ಎಂದು ಅರ್ಥವಾಗುತ್ತದೆ. ಸರಕಾರಕ್ಕೆ ಅದರಲ್ಲಿಯೂ ನಿರ್ದಿಷ್ಟವಾಗಿ ಪ್ರಧಾನಿಗೆ ಇರುವ ಹೆದರಿಕೆಯೇನೆಂದರೆ ಇದು ನ್ಯಾಯಾಲಯಕ್ಕೆ ಹೋದರೆ ಕೊಳೆಬಟ್ಟೆ ಅಂದರೆ ಪಕ್ಷಕ್ಕೆ ಹಣ ಸಂಗ್ರಹಣೆ. ಆಕೆ ಮತ್ತು ಇತರ ಮಂತ್ರಿಗಳು ಸಂಗ್ರಹಿಸಿರುವುದನ್ನು ಒಗೆಯಬೇಕಾಗುತ್ತದೆ. ಇದು ಹಾಳು ಕೆಲಸ, ಪ್ರಜಾಪ್ರಭುತ್ವವು ಈ ರೀತಿಯ ಅಸಂಬದ್ಧತೆಯನ್ನು ಸಹಿಸುವುದಿಲ್ಲ. ಈ ದಿನ ಕಾಂಗ್ರೆಸ್ ಆರ್ ಪಕ್ಷದಿಂದ ಪಾಟ್ನಾದಲ್ಲಿ ಪಥಸಂಚಲನವಿದ್ದು ಅದರಲ್ಲಿ ಅಧ್ಯಕ್ಷರಾದ ಬರೂವಾ, ಜಗಜೀವನರಾಂ, ಎಸ್.ಎನ್. ಮಿಶ್ರ (ಎಲ್ಲಾ ಅಪ್ರಾಮಾಣಿಕರು), ಗಫೂರ್, ಸೀತಾರಾಂ ಮುಂತಾದವರು ಭಾಗವಹಿಸಿದ್ದು ಇದನ್ನು ತುಂಬಾ ಹೆಚ್ಚಾಗಿ ಪ್ರಚಾರಗೊಳಿಸಲಾಗಿತ್ತು. ಒಂದು ವಾರದ ಹಿಂದೆ ಸಿಪಿಐ ಈ ರೀತಿ ಪ್ರಚಾರ ನಡೆಸಿತ್ತು ಮತ್ತು ರಾಂಚಿಯಲ್ಲಿ ಬರೂವಾ ನಡೆಸಿದ್ದರು. ಇವೆಲ್ಲವೂ ನಿಜವಾಗಿ ಸರಕಾರವನ್ನು ತುಂಬಾ ಚಿಂತೆಗೊಳಗಾಗಿಸಿವೆ. ಸರ್ಕಾರ ಹೆದರಿ ಕೊಂಡಿದೆಯೆಂಬುದುರ ಸೂಚನೆಯಾಗಿದೆ. ಈ ರೀತಿಯ ಪಥಸಂಚಲನಕ್ಕೆ ಲಕ್ಷಗಟ್ಟಲೆ ಖರ್ಚು ಮಾಡಿರಬೇಕು.

**ಜನವರಿ ೨, ೧೯೭೫ ಚಾಲಿಸ್‌ಗಾಂವ್ ಕಾರ್ಯಕಾರಿ ಸಮಿತಿ**

ಸರ್ಕ್ಯೂಟ್ ಹೌಸ್ ಸಾಕಷ್ಟು ಆಧುನಿಕವಾಗಿಲ್ಲ. ಆದರೆ ಸಾಕು. ಅದೃಷ್ಟವಶಾತ್ ಪಾಶ್ಚಿಮಾತ್ಯ ರೀತಿಯ ಕಮ್ಮೋಡ್ ಇದೆ. ಏನೆಂದರೆ ಅದನ್ನು ಚೆನ್ನಾಗಿ ತೊಳೆದು ನೀರನ್ನು ನಾವೇ ಸ್ವತಃ ಹಾಕಬೇಕು. ಅದರಿಂದೇನು ಬಾಧಕ. ಗುಪ್ತ, ಅಶೋಕ್ ಮೆಹ್ತಾ, ಭಕ್ಷಿ, ಪಾಟೀಲ್ ನನ್ನ ಜೊತೆಯಲ್ಲಿ ಸರ್ಕ್ಯೂಟ್ ಹೌಸ್‌ನಲ್ಲಿದ್ದಾರೆ. ನಾವು ಒಟ್ಟಿಗೆ ರಾತ್ರಿ ಊಟ ಮತ್ತು ಮಧ್ಯಾಹ್ನದ ಊಟ ಮಾಡಿದೆವು.

ಕಾರ್ಯಕಾರಿ ಸಮಿತಿಯು ಬೆಳಿಗ್ಗೆ ೧೧ ಘಂಟೆಗೆ ಸೇರಿತು. ನಾನು ಮತ್ತು ಮೆಹ್ತಾ, ಮೊರಾರ್ಜಿ ಭಾಯಿಯವರು ಚುನಾವಣೆ ವಿಷಯ ಚರ್ಚಿಸಿದೆವು. ಸ್ವಾಭಾವಿಕವಾಗಿ ಎದ್ದ ಪ್ರಶ್ನೆಯೆಂದರೆ ವಿಲೀನ ಮತ್ತು ಒಕ್ಕೂಟ. ಲೋಕಸಭೆಯಲ್ಲಿ ನಮ್ಮ ಪಕ್ಷದ ನಾಯಕರಾದ ಶ್ಯಾಮನಂದನ ಮಿಶ್ರಾರವರು ಬಿಎಲ್‌ಡಿ ಜೊತೆಯಲ್ಲಿ ಒಂದು ಹೊಂದಾಣಿಕೆ ಬರಲು ತುಂಬಾ ಹೊತ್ತು ಮಾತಾಡಿದರು. ಮಧ್ಯಸ್ಥಿಕೆಯ ಮನುಷ್ಯನಾಗಿ ಚರಣಸಿಂಗರು ಪ್ರಧಾನಿಗೆ ಮತ್ತು ಫೆಡರಲ್ ವಿರೋಧಪಕ್ಷ ಮುಂತಾದವುಗಳ ಬಗ್ಗೆ ವಚನವಿತ್ತಿದ್ದಾರೆಂದು ಕಾಣುತ್ತದೆ. ಇಡೀ ದಿವಸದ ಸಭೆಯಿಂದ ಅದಕ್ಕೆ ಅನುಕೂಲ ವಾಗಿರಲಿಲ್ಲ. ವಿಷಯವು ಮುಖ್ಯವಾದುದರಿಂದ ಮಧ್ಯಾಹ್ನ ೪ ರಿಂದ ೭ರವರೆಗೆ ಮುಂದುವರಿಯಿತು. ನಾವು ತೆಗೆದುಕೊಂಡ ನಿಲುವಿನ ಚೌಕಟ್ಟಿನೊಳಗೆ ರಾಜ್ಯಗಳಿಗೆ ಸಾಕಷ್ಟು ಅವಕಾಶವಿರಬೇಕೆಂದು ಚರ್ಚೆ ಮಾಡಿದ ಮೇಲೆ ಎರಡು ಹೆಚ್ಚುವರಿ ವಿಷಯವನ್ನು ಸೇರಿಸಿ ಕರಡು ಠರಾವನ್ನು ಅಂಗೀಕರಿಸಿದೆವು. ತಮಿಳುನಾಡಿನ ಇತ್ತೀಚಿನ ಬೆಳವಣಿಗೆಗಳ ದೃಷ್ಟಿಯಿಂದ ಅಲ್ಲಿ ನಾವು ಪ್ರತ್ಯೇಕವಾಗಿಯೇ ಇರಬೇಕಾಗಬಹುದೆಂದು ರಾಮಚಂದ್ರನ್ ನಮಗೆ ಹೇಳಿದರು. ಆರ್ಥಿಕ ಪರಿಸ್ಥಿತಿಯ ಮೇಲೆ ಇನ್ನೊಂದು ಠರಾವನ್ನು ಅಂಗೀಕರಿಸಿದೆವು. ಅವರು ಒಂದು ಸಾರ್ವಜನಿಕ ಸಭೆಯನ್ನು ವ್ಯವಸ್ಥೆಗೊಳಿಸಿದ್ದರು. ಸುಮಾರು ೨೫,೦೦೦ ಜನರಿದ್ದ ಸಭೆಯನ್ನುದ್ದೇಶಿಸಿ ಪಾಟೀಲ್ ಮತ್ತು ಮೊರಾರ್ಜಿ ಮಾತಾಡಿದರು. ಬಾರಕ್ ಚುನಾವಣೆಯಲ್ಲಿ ಜಯ ಗಳಿಸಿದ ಬಗ್ಗೆ ವಿವೇಕ್ ಕಳುಹಿಸಿದ ತಂತಿ ಸಮಾಚಾರ ಬಂದಿತು.

**ಜನವರಿ ೩, ೧೯೭೫ ರೈಲೆ ಮಂತ್ರಿಗಳಾದ ಎಲ್.ಎನ್. ಮಿಶ್ರ ಬಿಹಾರದಲ್ಲಿ ಬಾಂಬಿನಿಂದ ಕೊಲ್ಲಲ್ಪಟ್ಟರು**

ಕಾರ್ಯಕಾರಿ ಸಮಿತಿಯು ಎರಡು ಠರಾವುಗಳನ್ನು ಅಂಗೀಕರಿಸಿದ ಮೇಲೆ ಸುಚೇತ ಕೃಪಲಾನಿ, ಮೃದುಲಾ ಸಾರಾಭಾಯಿ ಮತ್ತು ಶಂಕರರಾವ್ ದೇವ್‌ರನ್ನು ವಿಶೇಷವಾಗಿ ಉಲ್ಲೇಖಿಸುತ್ತಾ ಶ್ರದ್ಧಾಂಜಲಿಯ ಠರಾವನ್ನು ಅಂಗೀಕರಿಸಿತು. ನಾವು ಚರ್ಚೆ ಮಾಡುತ್ತಿದ್ದಾಗ ಸ್ವಲ್ಪ ಮುಂಚೆ ಕುಪ್ರಸಿದ್ಧ ಭ್ರಷ್ಟಾಚಾರದ ಮನುಷ್ಯ ಮತ್ತು ಇಂದಿರಾರಿಗೆ ನಿಧಿ ಸಂಗ್ರಹಕಾರ

ಮತ್ತು ರೈಲ್ವೆ ಹಗರಣ ಮತ್ತು ಇತರವುಗಳಿಂದ ಹೊರೆಯಾಗಿದ್ದ ರೈಲ್ವೆ ಮಂತ್ರಿ ಎಲ್.ಎನ್. ಮಿಶ್ರರವರು ಒಂದು ರೈಲ್ವೆ ಮಾರ್ಗವನ್ನು ಉದ್ಘಾಟಿಸುತ್ತಿದ್ದಾಗ ರೈಲ್ವೆ ಜಂಕ್ಷನ್‌ನಲ್ಲಿ ಅವರ ಮೇಲೆ ಎಸೆದ ಬಾಂಬಿನಿಂದಾಗಿ ಕೊಲ್ಲಲ್ಪಟ್ಟರು ಎಂಬ ಸಮಾಚಾರವನ್ನು ಕೇಳಿದೆವು. ಇತರ ಕೆಲವರ ಜೊತೆಯಲ್ಲಿ ಅವರಿಗೆ ಗಾಯವಾಗಿತ್ತು. ಈ ದಿನ ಬೆಳಗಿನ ಜಾವ ಒಂದು ರೈಲ್ವೆ ಆಸ್ಪತ್ರೆಯಲ್ಲಿ ಮೃತಪಟ್ಟರು. ನಾವು ಸಹಾನುಭೂತಿಯನ್ನು ವ್ಯಕ್ತಪಡಿಸಿದೆವು ಮತ್ತು ಈ ಹೇಡಿ ಕೃತ್ಯವನ್ನು ಖಂಡಿಸಿದೆವು. ಜನರ ಪ್ರತಿಕ್ರಿಯೆ ಹೇಗಿತ್ತೆಂದರೆ ಅವರ ಕುಪ್ರಸಿದ್ಧತೆ ಮತ್ತು ಸಚಿವ ಹುದ್ದೆಯಿಂದ ಅವರನ್ನು ತೆಗೆಯಬೇಕಾದ ಅಪೇಕ್ಷೆ ಮತ್ತು ರಾಜೀನಾಮೆ ಕೊಡಲು ಅವರ ನಿರಾಕರಣೆ, ಇವುಗಳಿಂದೆಲ್ಲ ಈ ರೀತಿಯಲ್ಲಿ ಈತನನ್ನು ತೆಗೆದುಹಾಕಲು ಇಂದಿರಾ ಪ್ರಚೋದನೆಗೊಂಡಿರಬಹುದೆಂಬ ಗಾಳಿಸುದ್ದಿ ಇದೆ. ಇದು ನಿಜವಲ್ಲ. ಆದರೆ ಆಕೆಯ ವಿಶ್ವಾಸ ಮಾತ್ರ ಕೆಳಮಟ್ಟಕ್ಕೆ ಇಳಿದಿದೆ.

ನಮಗೇನೂ ಕೆಲಸವಿಲ್ಲದ್ದರಿಂದ ನಾನು, ಸಿಕಂದರ್ ಭಕ್ತ್, ಮನುಭಾಯಿ ಮತ್ತು ಶ್ರೀಮತಿ ಪಟೇಲ್ ಮತ್ತು ಇನ್ನೊಬ್ಬ ಮಹಿಳೆ ಒಂದು ಕಾರನ್ನು ತೆಗೆದುಕೊಂಡು ಇಲ್ಲಿಂದ ೩೭ ಮೈಲಿಗಳ ದೂರದ ಎಲ್ಲೋರ ಗುಹೆಗಳಿಗೆ ಹೋಗಿ ಅದ್ಭುತವಾದ ಗುಹೆಗಳು ಮತ್ತು ೧೦೦೦ ವರ್ಷ ಹಳೆಯದಾದ ಸುಂದರವಾದ ಪುರಾತನ ಕೆತ್ತನೆಗಳನ್ನು ನೋಡಿದೆವು. ಮೊದಲಿಗೆ ಬೌದ್ಧಧರ್ಮದ್ದು, ನಂತರ ಶೈವಧರ್ಮದ್ದು ಮತ್ತು ಕೊನೆಯಲ್ಲಿ ಜೈನಧರ್ಮದ್ದು ನೋಡಿದೆವು. ನಾವು ೪-೩೦ ರಿಂದ ೬-೩೦ ರವರೆಗೆ ಎರಡು ಗಂಟೆಗಳನ್ನು ಮಾತ್ರ ಕಳೆದೆವು. ಅಹಲ್ಯಾ ಬಾಯಿಯು ಕಟ್ಟಿಸಿದ ಮಹಾದೇವ ದೇವಾಲಯಕ್ಕೆ ಭೇಟಿ ಕೊಟ್ಟು ರಾತ್ರಿ ೮ ಗಂಟೆಗೆ ಚಾಲಿಸ್‌ಗಾಂವ್‌ಗೆ ಬಂದೆವು. ಗುಹೆಗಳಲ್ಲಿ ಮೇಲೆ ಕೆಳಗೆ ಓಡಾಡಿ ತುಂಬಾ ಸುಸ್ತಾಗಿದ್ದುದರಿಂದ ಸಾರ್ವಜನಿಕ ಸಭೆಯಲ್ಲಿ ಭಾಷಣ ಮಾಡುವುದನ್ನು ತಪ್ಪಿಸಿಕೊಂಡೆ.

**ಜನವರಿ ೪, ೧೯೭೫ ಚಾಲಿಸ್‌ಗಾಂವ್ ಎಐಸಿಸಿ**

ಧ್ವಜಾರೋಹಣ ಸಮಾರಂಭವಾದ ಮೇಲೆ ಬೆಳಿಗೆ ೧೦ ಗಂಟೆಗೆ ಎಐಸಿಸಿ ಸಭೆ ಸೇರಿತು. ಪ್ರಾರಂಭಿಕಗಳಾದ ಮೇಲೆ ರಾಜಕೀಯ ಪರಿಸ್ಥಿತಿಯ ಮೇಲಿನ ಮುಖ್ಯಠರಾವನ್ನು ಮೊರಾರ್ಜಿಭಾಯಿ ಮಂಡಿಸಿದರು. ಪಾಟೀಲರು ಅನುಮೋದಿಸಿದರು. ಅದು ಮಧ್ಯಾಹ್ನದ ಸಭೆಯಲ್ಲಿ ಸಂಜೆ ೬-೩೦ಕ್ಕೆ ಅಂಗೀಕೃತವಾಯಿತು. ಎರಡನೆಯದಾದ ಆರ್ಥಿಕ ಸ್ಥಿತಿಯ ಠರಾವನ್ನು ಹಿತೇಂದ್ರ ದೇಸಾಯಿ ಮಂಡಿಸಿದರು. ಸತ್ಯೇಂದ್ರ ನಾರಾಯಣಸಿಂಹರು ಅನುಮೋದಿಸಿದರು. ನಾಳೆ ಬೆಳಿಗೆ ೯ ಗಂಟೆಗೆ ಅದು ಮುಂದುವರಿಯುತ್ತದೆ. ಒಬ್ಬ ವ್ಯಾಪಾರಿ ಅಗರವಾಲರ ಮನೆಯಲ್ಲಿ ಊಟ ಮಾಡಿದೆ. ಗುಪ್ತಾರವರು ಮಂಡಿಸಿದ ಒಂದು ಠರಾವನ್ನು ಮಂಡಿಸಿ ಎಐಸಿಸಿಯು ಅಂಗೀಕರಿಸಿದ ನಂತರ ಡಾ. ಸುಶೀಲಾ ನಯ್ಯಾರ್ ಕಾರ್ಯಕಾರಿ ಸಮಿತಿಗೆ ಚುನಾಯಿತರಾದರು. ಅವರಿಗೆ ಪರಮ

ಸಂತೋಷವಾಗಿದೆ. ಆಂಧ್ರದ ಬಗ್ಗೆ ಭೀಮಾರೆಡ್ಡಿ, ಸುಭಾಷ್‌ರೆಡ್ಡಿ ಮತ್ತು ಕ್ರಿಷ್ಟ್ ನಾರಾಯಣ ರೆಡ್ಡಿಯವರ ಜೊತೆಯಲ್ಲಿ ಚರ್ಚಿಸಿದೆ. ನಂತರ ರಾಮಚಂದ್ರನ್ ಜೊತೆಯಲ್ಲಿ ಚರ್ಚಿಸಿದೆ.

**ಜನವರಿ ೫, ೧೯೭೫ ಚಾಲಿಸ್‌ಗಾಂವ್ ಎಐಸಿಸಿ**

ಎಲ್ಲ ಕಾರ್ಯಕಾರಿ ಸಮಿತಿ ಸ್ನೇಹಿತರು ಮತ್ತು ಇತರರ ಜೊತೆಯಲ್ಲಿ ಡಾ. ಪೂರ್ಣಪಟ್ವಾರವರ ಮನೆಯಲ್ಲಿ ಬೆಳಗಿನ ಉಪಾಹಾರ ಮಾಡಿದೆ. ಅವರು ಒಂದು ಹೆಣ್ಣು ಸಿಂಹವನ್ನು ಹೊಂದಿದ್ದು ಅದರ ಜೊತೆಯಲ್ಲಿ ನಿರ್ಬಂಧವಿಲ್ಲದೆ ಇರುತ್ತಾರೆ. ನಾವೆಲ್ಲ ಅದರ ಹತ್ತಿರ ಹೋದೆವು. ಅದನ್ನು ಮುಟ್ಟಿ ಛಾಯಾಚಿತ್ರಗಳನ್ನು ತೆಗೆಸಿಕೊಂಡೆವು. ಅದು ಪೂರ್ಣವಾಗಿ ಬೆಳೆದಿದೆ.

ಎಐಸಿಸಿಯು ಆರ್ಥಿಕ ಪರಿಸ್ಥಿತಿಯ ಬಗ್ಗೆ ೨ನೇ ಠರಾವನ್ನು ಅಂಗೀಕರಿಸಿತು. ಅದರ ಬಗ್ಗೆ ನಾನು ಬಹಳ ಸಂಕ್ಷಿಪ್ತವಾಗಿ ಮಾತನಾಡಿದೆ. ಡಾ. ಸುಶೀಲಾ ನಯ್ಯಾರ್‌ರವರ ಠರಾವೂ ಅಂಗೀಕೃತವಾಯಿತು. ಒಬ್ಬ ಗುಜರಾತಿ ವ್ಯಾಪಾರಿಯ ಮನೆಯಲ್ಲಿ ಮಧ್ಯಾಹ್ನದ ಊಟ ಮಾಡಿದೆ. ಹೆಚ್ಚಿನ ಸಂಖ್ಯೆಯಲ್ಲಿ ಲಿಂಗಾಯತರು ಬಂದು ನನ್ನನ್ನು ಮಧ್ಯಾಹ್ನ ಮತ್ತು ಸಾಯಂಕಾಲ ಭೇಟಿ ಮಾಡಿದರು. ಧಾರ್ಮಿಕ ಶಿಕ್ಷಣಕ್ಕೆ ಯಾರನ್ನಾದರೂ ಕಳುಹಿಸಿಬೇಕೆಂಬುದು ಅವರ ಕೋರಿಕೆಯಾಗಿತ್ತು. ರಾತ್ರಿ ೯ ಗಂಟೆಗೆ ಮೆಹ್ತಾ ದೆಹಲಿಗೆ ಹೊರಟರು. ನಾನು, ಗುಪ್ತ, ಮೊರಾರ್ಜಿಭಾಯಿ ೧೧-೩೦ಕ್ಕೆ ಹೌರಾ-ಬೊಂಬಾಯಿ ಎಕ್ಸ್‌ಪ್ರೆಸ್ ರೈಲಿನಲ್ಲಿ ಹೊರಟೆವು. ನಾನು ಕೇಳಿದ್ದಂತೆ ಅವರು ನನಗೆ ಹಾಸಿಗೆಯನ್ನು ಒದಗಿಸಲಿಲ್ಲ. ಎರಡು ಸಲ ಸರಪಣಿಯನ್ನು ಎಳೆದು ಟ್ರೇನ್‌ಅನ್ನು ನಿಲ್ಲಿಸಿದೆ. ಹಾಸಿಗೆ ಸಿಕ್ಕಿತು.

**ಜನವರಿ ೧೮, ೧೯೭೭ ದೆಹಲಿ**

ನಾವು ಬೆಳಿಗ್ಗೆ ೧೦-೩೦ಕ್ಕೆ ಕಾರ್ಯಕಾರಿ ಸಮಿತಿಯಲ್ಲಿ ಸೇರಿದೆವು ಮತ್ತು ಚರ್ಚೆಯ ಮುಖ್ಯ ವಿಷಯವೆಂದರೆ ಅಶೋಕ್ ಮೆಹ್ತಾರವರು ಇತರ ಪಕ್ಷಗಳ ನಾಯಕರುಗಳ ಜೊತೆಯಲ್ಲಿ ಅನೇಕ ಚರ್ಚೆಗಳು / ಮಾತುಗಳನ್ನಾಡಿದುದರ ಬಗ್ಗೆ ಸಂಕ್ಷಿಪ್ತವಾಗಿ ಉಲ್ಲೇಖಿಸಿದುದರ ಮೇರೆಗೆ ಒಂದೇ ಪಕ್ಷದ ರಚನೆಯ ಪ್ರಶ್ನೆಯಾಗಿದ್ದಿತು. ಮೊದಲಿನಂತೆಯೇ ಪಶ್ಚಿಮ ಬಂಗಾಳವು ಕಾಂಗ್ರೆಸ್ (ಒ)ನ ಅನನ್ಯತೆಯನ್ನು ಮುಂದುವರಿಸಬೇಕೆಂದಿದ್ದು ಅದರ ಬಗ್ಗೆ ಬಹಳ ದೃಢವಾಗಿದ್ದಿತು. ಡಾ. ಚಂದರ್‌ರವರು ಮಾಮೂಲಿನಂತೆ ಪ್ರತ್ಯೇಕವಾದ ಅಸ್ತಿತ್ವಕ್ಕೆ ಒಪ್ಪಿಕೊಂಡರು. ರಾಮಚಂದ್ರನ್ ಪುನರಾವರ್ತಿಸಿ ತಮ್ಮದೇ ಆದ ಕಷ್ಟಗಳನ್ನು ಉಲ್ಲೇಖಿಸಿದರು. ಪಕ್ಷದ ಬಲವನ್ನು ಹೆಚ್ಚಿಸುವುದರಲ್ಲಿ ತಮ್ಮ ಸಾಧನೆಯ ಬಗ್ಗೆ ಅವರಿಗೆ ಹೆಮ್ಮೆಯಿದ್ದಂತೆ ಕಾಣುತ್ತದೆ.

ಅದರ ಬಗ್ಗೆ ಅವರು ಬಹಳ ಜಾಗರೂಕರಾಗಿದ್ದಾರೆ. ಗುಜರಾತ್ ಬಹಳ ಸಕಾರಣವಾಗಿ ತಮ್ಮ ಅಹವಾಲನ್ನು ಮಂಡಿಸಿದರು ಬನಾರಸಿದಾಸ್, ಸತ್ಯೇಂದ್ರ ನಾರಾಯಣಸಿನ್ಹ, ಎಸ್.ಎನ್. ಮಿಶ್ರರವರು ಇತ್ತೀಚೆಗೆ ಜೇಲಿನಿಂದ ಬಿಡುಗಡೆಯಾಗಿದ್ದರು. ಭಗವತ್ ದಯಾಳ್ ಶರ್ಮರು ಸಂದೇಹಾಸ್ಪವಾದ ರೀತಿಯಲ್ಲಿ ಮಾತನಾಡಿದರು. ನನ್ನ ಕಡೆಗೆ ನೋಡಿದರು ಮತ್ತು ಅವರ ರೀತಿಯು ವಿಷಯಾತ್ಮಕವಾಗಿದ್ದಿತು. ಇತರರೂ ತಕ್ಷಣವೇ ಒಂದೇ ಪಕ್ಷದ ರಚನೆಯನ್ನು ಸಾಮಾನ್ಯವಾಗಿ ಬೆಂಬಲಿಸಿದರು. ನಾನು, ಸಿ.ಬಿ. ಗುಪ್ತ, ಅಸ್ಸನ್ ಬರೋವಾ, ಕೇರಳದ ಪಿಸಿಸಿಯ ಉಪಾಧ್ಯಕ್ಷ, ಉಪಾಧ್ಯಕ್ಷರುಗಳಾದ ರಾಮಮೂರ್ತಿ, ವೀರೇಂದ್ರ ಪಾಟೀಲ್, ಶಾಂತಿಭೂಷಣ್, ತಮ್ಮದೇ ಆದ ರೀತಿಯಲ್ಲಿ ಡಾ. ಸುಶೀಲಾ, ಸಿಕಂದರ್‌ಭಕ್ತ್, ತಮ್ಮದೇ ಆದ ರೀತಿಯಲ್ಲಿ ನಿಯಾಜ್ ಹುಸೇನ್ ಇವರುಗಳೆಲ್ಲ ಒಂದೇ ಪಕ್ಷದ ಪರವಾಗಿದ್ದರು. ದೇವೇಗೌಡ ಮತ್ತು ಬೊಮ್ಮಾಯಿ ಹಾಜರಿದ್ದರು. ಅವರು ನಾಳೆ ಮಾತನಾಡುವರು. ಚರ್ಚೆಗಳು ಮುಂದುವರಿಯುತ್ತಿವೆ. ಅಶೋಕ್ ಮೆಹ್ತಾರವರ ಬೇಡಿಕೆಯಾದ ಒಂದೇ ಪಕ್ಷದ ಬಲವಾದ ಮನವಿಯಿಂದ ನಾನು ಚರ್ಚೆಯನ್ನು ಪ್ರಾರಂಭಿಸಿದೆ.

**ಜನವರಿ ೧೯, ೧೯೭೭**

ಈಗ ಇರುವ ಲೋಕಸಭೆಯು ವಿಸರ್ಜಿಸಲ್ಪಡುತ್ತದೆ ಮತ್ತು ಮಾರ್ಚಿಯಲ್ಲಿ ಹೊಸ ಚುನಾವಣೆಗಳು ನಡೆಯುತ್ತವೆ ಎಂಬ ಸುದ್ದಿಯು ದೊಡ್ಡ ದೊಡ್ಡ ತಲೆಬರಹಗಳಲ್ಲಿ ಸಿಡಿಯಿತು. ಅದರ ಜೊತೆಯಲ್ಲಿಯೇ ಮೊರಾರ್ಜಿ ಭಾಯಿ ಮತ್ತು ಆದ್ವಾನಿಯವರೂ ಕೂಡ ಸೆರೆಯಿಂದ ಬಿಡುಗಡೆಯಾಗಿದ್ದಾರೆ ಎಂಬ ಸುದ್ದಿಯೂ ಇದೆ. ತುರ್ತು ಪರಿಸ್ಥಿತಿಯನ್ನು ಸಡಿಲಗೊಳಿಸಲಾಗುತ್ತದೆ ಎಂದು ಪ್ರಧಾನಿಯು ಹೇಳಿದ್ದಾರೆ. ಅಂದರೆ ಅದು ಮುಂದುವರಿಯುತ್ತದೆ ಎಂದು ಅರ್ಥ. ವಿರೋಧಪಕ್ಷಗಳು ಚುನಾವಣೆಯಲ್ಲಿ ಭಾಗವಹಿಸುವುದು ಬುದ್ಧಿವಂತಿಕೆಯೆ ಮತ್ತು ಅಪೇಕ್ಷಣೀಯವೆ ಎಂಬುದರ ಬಗ್ಗೆ ನನಗೆ ಖಚಿತವಿಲ್ಲ. ಸ್ಪಷ್ಟೀಕರಣ ಮತ್ತು ಪ್ರತಿಕ್ರಿಯೆಗಳಿಗೆ ನಾವು ಒಂದು ವಾರವಾದರೂ ಕೆಲಸ ಮಾಡಬೇಕು. ಮೊರಾರ್ಜಿಯವರಿಗೆ ಅವರು ತಮ್ಮ ಜವಾಬ್ದಾರಿಗಳಿಗೆ ಹಿಂದಿರುಗುವಂತೆ ಸೂಚಿಸಿ ಅವರನ್ನು ಸ್ವಾಗತಿಸುವ ಒಂದು ತಂತಿಯನ್ನು ಕಳುಹಿಸಿದೆ.

ನಿರೀಕ್ಷಿಸಿದಂತೆ ನಮ್ಮ ಸ್ನೇಹಿತರುಗಳಾದ ಎಸ್.ಎನ್. ಮಿಶ್ರ, ಬನಾರಸಿದಾಸ್ ಮತ್ತು ಎಸ್.ಎನ್. ಸಿನ್ಹರವರು ಹಾಸ್ಯವಾಗಿರುವುದಕ್ಕೆ ಪ್ರಯತ್ನಿಸುತ್ತಿದ್ದಾರೆ. ಅವರ ಉದ್ದೇಶವೇನೆಂದು ಯಾರೂ ಅರ್ಥ ಮಾಡಿಕೊಳ್ಳಲಾಗುವುದಿಲ್ಲ. ಸಿನ್ಹರವರು ತಮ್ಮ ತಂದೆಯಂತಿರದೆ ಜಗಳಗಂಟ ಮತ್ತು ಸ್ವಾರ್ಥಿಯಾಗಿದ್ದಾರೆ. ಸ್ವಂತ ಆಸಕ್ತಿಯಿಂದ ಅವರು ಇಂದಿರಾ ಕಡೆಗೆ ಹಾರುತ್ತಾರೆಂದು ನನಗೆ ಮನದಟ್ಟಾಗಿದೆ. ಇನ್ನಿಬ್ಬರು ತಮ್ಮ ಪ್ರಾಮುಖ್ಯತೆಯನ್ನು ಹೆಚ್ಚಿಸಿಕೊಳ್ಳುವುದಕ್ಕಿರಬಹುದು.

**ಫೆಬ್ರವರಿ ೨, ೧೯೭೭** **ಜಗಜೀವನರಾಮ್ ರಾಜೀನಾಮೆ ನೀಡಿದ್ದಾರೆ**

ಮಧ್ಯಾಹ್ನ ೩ ಗಂಟೆಗೆ ಬಂದ ರೇಡಿಯೋ ಸುದ್ದಿಯೆಂದರೆ ಜಗಜೀವನರಾಂ ಕೇಂದ್ರದ ಅತ್ಯಂತ ಹಿರಿಯಮಂತ್ರಿ ಕಾಂಗ್ರೆಸಿಗೆ ಮತ್ತು ಕೇಂದ್ರದ ಸಚಿವ ಮಂಡಳಿಗೆ ರಾಜೀನಾಮೆಯಿತ್ತಿದ್ದಾರೆ. ಸ್ವತಂತ್ರವಾಗಿ ಸ್ಪರ್ಧಿಸಲು ಇಚ್ಛಿಸುತ್ತಾರೆ. ಆಡಳಿತ ಕಾಂಗ್ರೆಸ್ ಅವರ ಜೊತೆಯಲ್ಲಿ ನಂದಿನಿ ಸತ್ಪಥಿ ಒರಿಸ್ಸಾದ ಮಾಜಿ ಮುಖ್ಯಮಂತ್ರಿ, ಯುಪಿಯ ಮುಖ್ಯಮಂತ್ರಿ ಬಹುಗುಣರೂ ಸೇರಿದಂತೆ ಇನ್ನೂ ಐವರು ಬಹಳ ಮುಖ್ಯವಾದ ಸದಸ್ಯರು ಕಾಂಗ್ರೆಸಿಗೆ ರಾಜೀನಾಮೆಯಿತ್ತಿದ್ದಾರೆ. ಆಡಳಿತ ಕಾಂಗ್ರೆಸ್ ಪಕ್ಷ ಮತ್ತು ಆಕೆಗೆ ವೈಯಕ್ತಿಕವಾಗಿ ಇದು ದೊಡ್ಡ ಹೊಡೆತ. ಇನ್ನೂ ಹೆಚ್ಚಿನ ಬೆಳವಣಿಗೆಗಳನ್ನು ನಾವು ನಿರೀಕ್ಷಿಸಬಹುದು. ರಾಜಶೇಖರನ್‌ಗೆ ಚುನಾವಣೆಗಳಲ್ಲಿ ಅವಕಾಶವಿಲ್ಲ ಎಂದು ಹೆಗಡೆ ಹೇಳಿದ್ದಾರೆಂದು ಅಶೋಕ್ ಮೆಹ್ತಾ ಅವರು ತಿಳಿಸಿದರು. ರಾಮ್‌ರ ರಾಜೀನಾಮೆಯನ್ನು ಸ್ವಾಗತಿಸುತ್ತ ಅವರಿಗೆ ಮತ್ತು ಇತರರಿಗೆ ಶುಭಾಶಯಗಳನ್ನು ಕೋರಿ ಒಂದು ಹೇಳಿಕೆಯನ್ನು ಕಳುಹಿಸಿದೆ.

**ಫೆಬ್ರವರಿ ೬, ೧೯೭೭**

ಜಗಜೀವನರಾಂರವರ ಹೊಸ ಪಕ್ಷವಾದ "ಕಾಂಗ್ರೆಸ್ ಫಾರ್ ಡೆಮೊಕ್ರಸಿ"ಗೆ ಕಾಂಗ್ರೆಸ್‌ನಿಂದ ಮತ್ತು ಇತರ ಪಕ್ಷಗಳಿಂದ ಕಾಂಗ್ರೆಸ್ ಪಕ್ಷಕ್ಕೆ ಪಕ್ಷಾಂತರದ ಸುದ್ದಿಯಿಂದ ವೃತ್ತಪತ್ರಿಕೆಗಳು ತುಂಬಿದ್ದವು. ತ್ರಿಕೋಣ ಸ್ಪರ್ಧೆಗೆ ತಾವು ಅವಕಾಶ ಕೊಡುವುದಿಲ್ಲವೆಂದು ಜೆ. ರಾಂ ಹೇಳಿದರು. ಅಂದರೆ ಅವರು ಹೊಂದಾಣಿಕೆ ಮಾಡಿಕೊಂಡು ಪರಿಸ್ಥಿತಿ ಅನುಕೂಲವಾಗಿದ್ದರೆ ನಮ್ಮ ಪಕ್ಷವನ್ನು ಸೇರುವರೆಂದು ಅರ್ಥವಾಗುತ್ತದೆ. ದೊಡ್ಡ ಯುಕ್ತಿಗಾರ, ಅವರು ಯಾವಾಗಲೂ ಹಾಗೆಯೇ.

**ಫೆಬ್ರವರಿ ೧೧, ೧೯೭೭**

ಸಣ್ಣಪ್ಪ ಕಾರು ಚಲಾಯಿಸುತ್ತಿದ್ದು ಪರಮೇಶಿ ಜೊತೆಯಲ್ಲಿ ವಿವೇಕನ ಸಹೋದರನ ಫಿಯಟ್ ಕಾರಿನಲ್ಲಿ ಚಿತ್ರದುರ್ಗದಿಂದ ಹೊರಟೆ. ನಾವು ೮-೪೫ಕ್ಕೆ ಬಿಟ್ಟು ೧೧-೪೦ಕ್ಕೆ ಕಿರಣನ ಮನೆಯನ್ನು ತಲುಪಿದೆ. ಪಾರ್ವತಿಯಿಂದ ತಿಳಿದ ಸಮಾಚಾರವೆಂದರೆ ರಾಷ್ಟ್ರಾಧ್ಯಕ್ಷ ಫಕ್ರುದ್ದೀನ್ ಅಲಿ ಅಹ್ಮದ್‌ರು ಅನಾರೋಗ್ಯದ ಕಾರಣದಿಂದ ತಮ್ಮ ಉಳಿದ ಪ್ರವಾಸವನ್ನು ರದ್ದುಪಡಿಸಿ ಮಲೇಷಿಯಾದಿಂದ ನೆನ್ನೆ ತಾನೆ ಹಿಂದಿರುಗಿದ ಅವರು ಹೃದಯ ಸ್ಥಂಭನದಿಂದ ದೆಹಲಿಯಲ್ಲಿ ಬೆಳಿಗ್ಗೆ ೮-೫೨ಕ್ಕೆ ನಿಧನರಾದರೆಂಬುದು. ಅನಿರೀಕ್ಷಿತವಾದ ಸಾವು. ಇಂದಿರಾಗೆ ಒಂದು ಹಿನ್ನಡೆ. ಈ ಮನುಷ್ಯ ಜತ್ತಿಯ ಹಂಗಾಮಿ ರಾಷ್ಟ್ರಪತಿಯಾಗಿ ಪ್ರಮಾಣವಚನ ಸ್ವೀಕರಿಸಿದರು.

**ಫೆಬ್ರವರಿ ೧೭, ೧೯೭೭**

ಎಲ್ಲಾ ರಾಜ್ಯಗಳಲ್ಲೂ ನಮ್ಮ ಚಟುವಟಿಕೆಗಳ ಬಗ್ಗೆ ಪತ್ರಿಕೆಗಳು ತುಂಬಿ ಹೋಗಿವೆ. ಇಲ್ಲಿರುವ ಒಂದೇ ಒಂದು ಕಷ್ಟವೆಂದರೆ ಸಮಯದ ಕೊರತೆ, ಸಂಪನ್ಮೂಲಗಳ ತೀವ್ರವಾದ ಕೊರತೆ. ಹೆಚ್ಚಿನ ರಾಜ್ಯಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿಶೇಷವಾಗಿ ಮುಂಚಿನ ಜನಸಂಘದ ಒಳ್ಳೆಯ ಕೆಲಸಗಾರರು ನಮಗಿದ್ದಾರೆಂದು ಕಾಣುತ್ತದೆ. ಆದರೆ ಅದು ಸಾಕಾಗುವುದಿಲ್ಲ. ಪಕ್ಷಕ್ಕೆ ವಂತಿಗೆಗಳನ್ನು ಪಡೆಯುವುದು ತುಂಬಾ ಕಷ್ಟ. ಶ್ರೀಮಂತರು ನಮಗೆ ಸಹಾಯ ಮಾಡುವುದಕ್ಕೆ ಹೆದರುತ್ತಾರೆ. ಅವರು ಹೇಡಿಗಳು ಮತ್ತು ಅಂಜುಬುರುಕರಾಗಿದ್ದಾರೆ. ಅವರು ಕುತಂತ್ರದಿಂದ ನಮಗೆ ಸಹಾಯ ಮಾಡಬಹುದೆಂಬುದೇ ನಮ್ಮ ನಂಬಿಕೆ. ಅಲ್ಲಿ ಕೂಡ 'ಹೆದರಿಕೆಯ ಮನಸ್ಸು' ಕೆಲಸ ಮಾಡುತ್ತಿದೆಯೆಂದು ಕಾಣುತ್ತದೆ. ಇಂದಿರಾಗೆ ಹೆದರಿಕೆಯ ಕಾಯಿಲೆ ಪ್ರಾರಂಭವಾಗಿದೆ. ಆ ಹೆಂಗಸು ತನ್ನ ಬೆದರಿಕೆಯ ಆಟವನ್ನು ಪುನಃ ಪ್ರಾರಂಭಿಸಿದ್ದಾಳೆ. ತುರ್ತು ಪರಿಸ್ಥಿತಿಯನ್ನು ಈಗ ಸಡಿಲಗೊಳಿಸಿರುವುದೂ ಕೂಡ ರಾಷ್ಟ್ರದ್ರೋಹಿ ಚಟುವಟಿಕೆಗಳನ್ನು ಪುನರುಜ್ಜೀವನಗೊಳಿಸಿದೆಯೆಂದು ಆಕೆ ಹೇಳುತ್ತಿದ್ದಾರೆ. ಈ ಸಡಿಲಿಕೆಗಳನ್ನು ಕೂಡ ಆಕೆ ತೆಗೆದುಬಿಡಬಹುದೆಂದು ಕಾಣುತ್ತದೆ. ಅದು ಆಗದಿರಬಹುದು. ಆ ಹೆಂಗಸಿನ ಲಹರಿ ಯಾರಿಗೆ ಗೊತ್ತು.

**ಫೆಬ್ರವರಿ ೨೫, ೧೯೭೭**

ಬೆಳಿಗ್ಗೆ ಪತ್ರ ವ್ಯವಹಾರವನ್ನು ಮಾಡಿದೆ. ಎಸ್.ಕೆ. ಯವರು ತಾವು ಸ್ಪರ್ಧಿಸುವುದಿಲ್ಲ ವೆಂದೂ ಮತ್ತು ಪಕ್ಷದ ಜಯಕ್ಕೆ ತಮ್ಮ ಕೈಲಾದಷ್ಟು ಮಾಡುತ್ತೇನೆಂದು ಬರೆದಿದ್ದಾರೆ. ಮೊರಾರ್ಜಿ-ಜಗಜೀವನರಾಮ್-ಚರಣಸಿಂಗರ ಜೋಡಿಯ ಬಗ್ಗೆ ಅವರು ಅಷ್ಟೊಂದು ಆಶಾವಾದಿಯಾಗಿಲ್ಲ.

**ಮಾರ್ಚ್ ೧೮, ೧೯೭೭**

ಜನತಾ ಪಕ್ಷವು ಬಲಗೊಳ್ಳುತ್ತಿದೆ ಮತ್ತು ಕಾರ್ಯ ಮಾಡಲು ಬೇಕಾದ ಬಹುಮತವನ್ನು ನಾವು ಹೊಂದಬಹುದೆಂದು ವರದಿಗಳು ಬರುತ್ತಿವೆ. ಆಶ್ಚರ್ಯಗಳಿರಬಹುದಾದುದರಿಂದ ಯಾವುದನ್ನೂ ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಮತ ಪೆಟ್ಟಿಗೆಗಳಿಗೆ ಸರಕಾರದಿಂದ ಮೋಸವಾಗಬಹುದು ಎಂಬ ಹೆದರಿಕೆ ನನಗಿದೆ. ಏಕೆಂದರೆ ಲೋಕಸಭೆಯ ೧೯೭೧ರ ಚುನಾವಣೆಗಳಲ್ಲಿ ಇದು ನಡೆಯಿತು ಎಂಬುದು ನನಗೆ ಖಚಿತವಾಗಿದೆ. ಆದರೂ ಇದು ಬಹಳ ಮುಖ್ಯವಾದ ಚುನಾವಣೆ. ಏಕೆಂದರೆ ಪ್ರಜಾಪ್ರಭುತ್ವವು ಸ್ಥಿರವಾಗಿ ನಿಂತುಬಿಟ್ಟಿದೆ. ಇಂದಿರಾ ಗಾಂಧಿಯವರ ಸರ್ವಾಧಿಕಾರ ೨೦ ತಿಂಗಳ ಹಿಂದೆ ಘೋಷಿಸಿದ ತುರ್ತು ಪರಿಸ್ಥಿತಿಯಿಂದ ಇದು ತುಂಬಾ ಸ್ಪಷ್ಟವಾಗಿದೆ. ಆಕೆಯ ಆಳ್ವಿಕೆಯು ಅಂತ್ಯಗೊಳ್ಳುತ್ತದೆ,

ಭಾರತದಲ್ಲಿ ಪ್ರಜಾಪ್ರಭುತ್ವವು ಪುನಃ ಸ್ಥಾಪನೆಗೊಳ್ಳುತ್ತದೆ ಎಂಬುದು ನನ್ನ ಭಕ್ತಿಪೂರ್ವಕವಾದ ಆಶಯ.

ನನ್ನ ಮಟ್ಟಿಗೆ ಸಕ್ರಿಯ ರಾಜಕೀಯದಿಂದ ದೂರ ಇರಬೇಕೆಂದು ಕಾರ್ಯತಃ ನಾನು ದೃಢ ಮನಸ್ಸು ಮಾಡಿದ್ದೇನೆ. ಆದರೆ ಪುನಃ ಇಂದಿರಾ ಸರಕಾರ ಬಂದರೆ ನಾನು ಸುಮ್ಮನೆ ಕುಳಿತುಕೊಳ್ಳುವುದಿಲ್ಲ. ಪ್ರಜಾಪ್ರಭುತ್ವವನ್ನು ಪುನಃ ಸ್ಥಾಪಿಸಲು ಎಲ್ಲ ಪ್ರಯತ್ನಗಳನ್ನೂ ಮಾಡುತ್ತೇನೆ. ಏನೇ ಆಗಲಿ ಬಲವಾದ ವಿರೋಧಪಕ್ಷವಿರುವುದೆಂಬುದು ನನ್ನ ಖಚಿತಾಭಿಪ್ರಾಯ.

**ಮಾರ್ಚ ೨೧, ೧೯೭೭**

ಚುನಾವಣೆಯಲ್ಲಿ ಇಂದಿರಾಗಾಂಧಿ ಹಾಗೂ ಆಕೆಯ ಮಗ ೫೫,೦೦೦ ಮತ್ತು ೭೫,೦೦೦ ಮತಗಳಿಂದ ಸೋತಿದ್ದಾರೆಂದು ತಿಳಿದು ಸಂತೋಷವಾಯಿತು. ಮಧ್ಯಾಹ್ನ ಮೂರು ಗಂಟೆಗೆ ಬಿತ್ತರಿಸಲ್ಪಟ್ಟ ಸಂತೋಷದ ಸಮಾಚಾರ ತಿಳಿಸಲು ನನ್ನ ಮನೆಗೆ ಜನರು ದೂರವಾಣಿ ಮಾಡುವುದು ಮತ್ತು ಬರುತ್ತಿದ್ದುದರಿಂದ ನನಗೆ ನಿದ್ದೆ ಮಾಡಲು ಅವಕಾಶವಾಗಲಿಲ್ಲ. ಆಕೆಯ ಉಳಿದ ಭವಿಷ್ಯವು ಎಲ್ಲ ಕಡೆಯಲ್ಲೂ ಕಾಂಗ್ರೆಸ್ಸಿಗರ ಮೇಲೆ ಮೋಡ ಕವಿದಂತಾಗಿದೆ. ಅವರು ನಿಗ್ರಹಿಸಲ್ಪಟ್ಟು ನಿಶ್ಯಬ್ದರನ್ನಾಗಿ ಮಾಡಿದೆ. ಪ್ರತಿ ಗಂಟೆಗೂ ಫಲಿತಾಂಶಗಳು ಪ್ರಕಟವಾಗುತ್ತಿದ್ದಂತೆ ದಕ್ಷಿಣವು ಅಂದರೆ ಕರ್ನಾಟಕ, ತಮಿಳುನಾಡು ಮತ್ತು ಆಂಧ್ರ ಪ್ರದೇಶಗಳು ಸೇರಿದಂತೆ ಕಾಂಗ್ರೆಸಿಗೆ ಮನಃಪೂರ್ವಕವಾಗಿ ಬೆಂಬಲಿಸಿದ್ದು ೧೧೦ ಸ್ಥಾನಗಳಲ್ಲಿ ೬ ರಿಂದ ೯ ಸ್ಥಾನಗಳು ಮಾತ್ರ ಹೊರತಾಗಿವೆ. ಆದರೆ ಉತ್ತರವು ನಿಶ್ಚಿತವಾಗಿ ಇಂದಿರಾಗೆ ವಿರುದ್ಧವಾಗಿ ಬಂದಿವೆ. ಆಡಳಿತ ಕಾಂಗ್ರೆಸ್ಸು ಇಲ್ಲಿಯವರೆಗೆ ಮಧ್ಯಪ್ರದೇಶ, ಉತ್ತರ ಪ್ರದೇಶ ಮತ್ತು ಬಿಹಾರದಲ್ಲಿ ಒಂದು ಸ್ಥಾನವನ್ನೂ ಪಡೆದಿಲ್ಲ. ರಾಜಾಸ್ಥಾನದಲ್ಲಿ ಒಂದು ಮತ್ತು ಮಹಾರಾಷ್ಟ್ರದಲ್ಲಿ ಅರ್ಧ ದೊರಕಿದೆ. ಇನ್ನೂ ೨೨೦ ಫಲಿತಾಂಶಗಳು ಬರಬೇಕಿದ್ದು ಸರಕಾರವನ್ನು ರಚಿಸಲು ಬೇಕಾಗಿರುವುದಕ್ಕಿಂತ ಹೆಚ್ಚಿಗೆ ಸ್ಥಾನಗಳು ಜನತಾಕ್ಕೆ ದೊರಕುತ್ತದೆಂದು ಖಂಡಿತವಾಗಿದೆ. ಇಲ್ಲಿಯವರೆಗೆ ೩೨೭ ಸ್ಥಾನಗಳಲ್ಲಿ ನಮಗೆ ೧೭೦, ಕಾಂಗ್ರೆಸ್‌ಗೆ ೧೨೭, ಇತರರು ಸ್ನೇಹಿತರು ಮತ್ತು ವಿರೋಧಿಗಳೂ ಸೇರಿದಂತೆ ೩೦ ಸ್ಥಾನಗಳು ಬಂದಿವೆ.

**ಮಾರ್ಚ ೩೦, ೧೯೭೭**

ಹೆಚ್ಚಿನ ಸಂಖ್ಯೆಯಲ್ಲಿ ದೊಡ್ಡ ಮತ್ತು ಸಣ್ಣ ಬಂಡವಾಳಶಾಹಿಗಳು ನಮ್ಮಲ್ಲಿಗೆ ಬರುತ್ತಿದ್ದು ಹೊಸ ಸರಕಾರವು ಬಂದಿದೆ ಎಂದು ತಿಳಿಸಲು ಸಂತೋಷ ಮತ್ತು ತೃಪ್ತಿಯನ್ನು ವ್ಯಕ್ತಪಡಿಸುತ್ತಿದ್ದಾರೆ. ಅವರು ನನ್ನನ್ನು ಹೊಗಳುತ್ತಿದ್ದರು. ರಾಜಕೀಯದಲ್ಲಿ ನಾನು ಹಳಬನಾಗಿರುವುದರಿಂದ ಪ್ರಧಾನಮಂತ್ರಿಗೆ ಸಲಹೆ ನೀಡಲು ದೆಹಲಿಯಲ್ಲಿರಲು ನನ್ನನ್ನು

ಕೇಳಿಕೊಂಡರು. ಅವರು ನನ್ನನ್ನು ಉಪಯೋಗಿಸಿಕೊಳ್ಳಬೇಕೆಂದಿರಬಹುದು. ಅದೇ ಹಳೆಯ ವಿಷಯಗಳು, ಹಳೆಯ ಸ್ನೇಹಿತರು ಸೇರುವ ಸೆಂಟ್ರಲ್ ಹಾಲ್‌ಗೆ ಹೋದೆ. ಪತ್ರಿಕಾಕರ್ತರಿಂದ ಮತ್ತು ಕೆಲವು ಹಳೆಯ ಸ್ನೇಹಿತರಿಂದ ಸುತ್ತುವರಿಯಲ್ಪಟ್ಟು ೩ರಿಂದ ೪-೩೦ರವರೆಗೆ ಕಾಲ ಕಳೆದೆ. ರಷ್ಯಾಕ್ಕೆ ನಮ್ಮ ರಾಯಭಾರಿಯಾದ ಗುಜ್ರಾಲ್ ವಿಶೇಷವಾಗಿ ನಾನು ರಷ್ಯಾಕ್ಕೆ ಭೇಟಿ ನೀಡಿ ಅಲ್ಲಿನ ವಿಷಯಗಳನ್ನು ಸ್ವತಃ ನೋಡಬೇಕೆಂದರು. ನಾನು ರಷ್ಯಾ ಮತ್ತು ಕಮ್ಯೂನಿಸಂ ಅನ್ನು ಪ್ರಶಂಸಿಸುವುದಿಲ್ಲವೆಂದು ತಿಳಿದೂ ಹಾಗೆ ಹೇಳಿದರು. ಆದರೆ ನಾನು ಹೇಗೆ ಹೋಗಬಹುದೆಂದು ತಿಳಿಯದು. ಪಕ್ಷದ ಕಚೇರಿಯಲ್ಲಿ ನಾಳೆ ಪತ್ರಿಕಾ ಸಮ್ಮೇಳನದಲ್ಲಿ ನನ್ನನ್ನು ಭೇಟಿ ಮಾಡಬೇಕೆಂದು ಪತ್ರಕರ್ತರು ಹೇಳಿದರು. ನಾನು ಒಪ್ಪಿಕೊಂಡೆ.

ಬಂಡವಾಳಷಾಹಿ ಸ್ನೇಹಿತರುಗಳ ಬಗ್ಗೆ ಒಂದು ವಿಷಯ. ಹೆಚ್ಚು ಕಡಿಮೆ ಎಲ್ಲರೂ ಮಂತ್ರಿಮಂಡಲದಲ್ಲಿ ವೀರೇಂದ್ರ ಪಾಟೀಲರನ್ನು ಹಾಕಬೇಕೆಂದು ಒತ್ತಾಯಿಸುತ್ತಿದ್ದಾರೆ. ಹಾಗೆಂದರೆ ಏನರ್ಥ? ಈ ಮನುಷ್ಯ ಮತ್ತು ಅವರ ಮುಖಾಂತರ ಅವರುಗಳು ತಮ್ಮ ಕೆಲಸಗಳನ್ನು ಮಾಡಿಸಿಕೊಳ್ಳಬಹುದೆಂದಿರಬಹುದು. ಇದು ಆತನಿಗೆ ಹೊಗಳಿಕೆಯಲ್ಲ.

**ಮಾರ್ಚ್ ೩೧, ೧೯೭೭**

ಬಹಳ ಕೆಲಸವಿರುವ ದಿನ. ಬಿಹಾರ, ಉತ್ತರಪ್ರದೇಶ, ದೆಹಲಿ ಮುಂತಾದ ಸ್ಥಳಗಳಿಂದ ಸುಮಾರು ಒಂದು ಡಜನ್ ಜನರು ಬೆಳಗಿನ ಉಪಾಹಾರಕ್ಕೆ ಬಂದರು. ದಾದಾ ಕೃಪಲಾನಿಯವರಲ್ಲಿಗೆ ಹೋಗಿ ಅವರ ಜೊತೆಯಲ್ಲಿ ಅರ್ಧ ಗಂಟೆ ಮಾತನಾಡಿದೆ. ದೃಷ್ಟಿದೋಷವಿದ್ದರೂ ಅವರು ಕಾಗದ ಬರೆಯುವ ತರಾತುರಿಯಲ್ಲಿದ್ದರು. ನಮ್ಮ ಭಾವನೆಗಳೇನಿದ್ದರೂ ರಷ್ಯಾದ ಜೊತೆಯಲ್ಲಿ ತಿಕ್ಕಾಟ ಮಾಡಬಾರದು. ಅವರ ಪ್ರಾಮುಖ್ಯತೆಯ ದೃಷ್ಟಿಯಿಂದ ಅವರ ಜೊತೆಯಲ್ಲಿ ಸ್ನೇಹದಿಂದಿರಬೇಕೆಂದು ಅವರು ನನಗೆ ಹೇಳಿದರು. ಪ್ರಾಮಾಣಿಕತೆಯ ಕೊರತೆಯಿರುವ ಕೆಲವು ಮಂತ್ರಿಗಳ ಬಗ್ಗೆ ಅವರು ಅಸಂತುಷ್ಟರಾಗಿದ್ದಾರೆ. ಪ್ರಧಾನಮಂತ್ರಿ ಅವರನ್ನು ನೋಡಲು ಮನಸ್ಸು ಕೊಡಲಿಲ್ಲವೆಂಬುದರ ಬಗ್ಗೆ ಅವರಿಗೆ ಸಂತೋಷವಾಗಿಲ್ಲ ಎಂದು ಕಂಡುಬಂತು. ಈ ದಿನ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಪ್ರಧಾನಿಯನ್ನು ಭೇಟಿ ಮಾಡಿದಾಗ ರಷ್ಯಾ ಮತ್ತು ಈ ದಿನದ ಸಂಜೆಯ ಬಗ್ಗೆ ಮಾತನಾಡಿದೆ. ಅವರು ಒಪ್ಪಿಕೊಂಡರು, ಆದರೆ ಅವರನ್ನು ನೋಡಲು ಸಮಯವಿಲ್ಲ ಎಂದು ಕೇಳಿದರು. ನೆನ್ನೆ ದಿನ ಕಲ್ಕತ್ತಾದ ಆರ್.ಪಿ. ಗೊಯೆಂಕಾರವರು ಸ್ವಲ್ಪ ಸಮಯವನ್ನು ಕಳೆದಿದ್ದು ನನ್ನನ್ನು ಆಹ್ವಾನಿಸಿದ್ದುದರಿಂದ ನಾನು ಅವರ ಜೊತೆಯಲ್ಲಿ ಮಧ್ಯಾಹ್ನ ಊಟ ಮಾಡಿದೆ. ಅದಕ್ಕೆ ಮುಂಚೆ ರಾಜಶೇಖರನ್ ಸಮಯವನ್ನು ನಿಗದಿಪಡಿಸಿದ್ದುದರಿಂದ ಮಾಜಿ ಪ್ರಧಾನಿ ಇಂದಿರಾ ಗಾಂಧಿಯವರಲ್ಲಿಗೆ ಸೌಹಾರ್ದಯುತ ಭೇಟಿಗಾಗಿ ಹೋದೆ. ಮಾಮೂಲಿನ ವಿನಿಮಯಗಳಾದ ಮೇಲೆ

ಬಲವಾದ ಒಗ್ಗಟ್ಟಿನ ಚೆನ್ನಾಗಿ ತಿಳಿದಿರುವ ವಿರೋಧಪಕ್ಷವನ್ನು ಕಟ್ಟುವಂತೆ ಸಲಹೆ ಮಾಡಿದೆ. ಆಕೆಗೆ ಒಳ್ಳೆಯದಾಗಲಿ ಎಂದು ಹೇಳಿ ಅಲ್ಲಿಂದ ಹೊರಟೆ. ಜಗಜೀವನರಾಂರನ್ನು ಭೇಟಿ ಮಾಡಿದೆ. ನಿಧಾನ ಮಾಡದೆ ತಮ್ಮ ಪಕ್ಷ ಸಿಎಫ್‌ಡಿಯನ್ನು ವಿಲೀನಗೊಳಿಸಬೇಕೆಂದು ಹೇಳಿದೆ. ಅವರು ಒಪ್ಪಿಕೊಂಡರು. ಪ್ರಧಾನಿಯನ್ನು ಭೇಟಿ ಮಾಡಿ ಕೃಪಲಾನಿ ಮತ್ತು ರಾಂರ ಭೇಟಿಗಳನ್ನು ಕುರಿತು ಹೇಳಿದೆ. ಕಾರ್ಯಕಾರಿ ಸಮಿತಿಯು ರಾತ್ರಿ ೮-೩೦ ರಿಂದ ೧೦ ಗಂಟೆವರೆಗೆ ಸೇರಿತ್ತು. ಸಂವಿಧಾನವನ್ನು ತಿದ್ದುಪಡಿ ಮಾಡಲಾಯಿತು. ಉದ್ರಿಕ್ತತೆ ಇದ್ದು ಕೋಪದ ಮಾತುಗಳು ವಿನಿಮಯ ಆದವು. ರಾತ್ರಿ ೧೧ ಗಂಟೆಗೆ ವಿಶ್ರಾಂತಿಗೆ ಹೋದೆ. ರಾಮಕೃಷ್ಣ ಹೆಗಡೆ ಇನ್ನೂ ಇಲ್ಲಿದ್ದಾರೆ. ಏಕೆ ?

**ಮೇ ೬, ೧೯೭೭**

ಕರ್ನಾಟಕದಿಂದ ಜನತಾ ವಿಶೇಷ ರೈಲಿನಲ್ಲಿ ಹೋಗಿದ್ದ ಸ್ನೇಹಿತರು ನೆನ್ನೆ ಸಾಯಂಕಾಲ ಹಿಂತಿರುಗಿದರು. ಅವರಲ್ಲಿ ಕೆಲವರು ಬಂದು ನನ್ನನ್ನು ಭೇಟಿ ಮಾಡಿದರು. ದೆಹಲಿಯಲ್ಲಿ 'ನಾಲ್ವರ ಕೂಟ'ದ ಚಟುವಟಿಕೆಗಳ ಬಗ್ಗೆ ಹೇಳಿದರು. ಅವರು ಈಗ ಬೊಂಬಾಯಿಯಲ್ಲಿದ್ದಾರೆ ಮತ್ತು ನಿರಾಶೆಗೊಂಡಿದ್ದಾರೆಂದು ಕಾಣುತ್ತದೆ.

ರಾಜ್ಯ ವಿಧಾನಸಭೆ ವಿಸರ್ಜನೆಯನ್ನು ಉಚ್ಚತಮ ನ್ಯಾಯಾಲಯದ ತೀರ್ಪು ಎತ್ತಿ ಹಿಡಿದಿದ್ದು ಅದನ್ನು ಇವತ್ತು ಪೂರ್ತಿಯಾಗಿ ವರದಿ ಮಾಡಿದ್ದರೂ ಒಮ್ಮತದ ತೀರ್ಪನ್ನು ೩-೪ ದಿನಗಳ ಹಿಂದೆಯೇ ಘೋಷಿಸಲಾಯಿತು. ಜತ್ತಿಯವರ ಬಗ್ಗೆ ಒಬ್ಬ ನ್ಯಾಯಾಧೀಶರು ಪ್ರತಿಕೂಲ ಟೀಕೆ ಮಾಡಿದ್ದು, ಭಾರತದ ಮುಖ್ಯ ನ್ಯಾಯಾಧೀಶರು ಅದನ್ನು ಸಮರ್ಥಿಸಿದರು. ಬ್ರಹ್ಮಾನಂದ ರೆಡ್ಡಿಯವರು ದೊಡ್ಡ ಬಹುಮತದಿಂದ ಕಾಂಗ್ರೆಸ್ ಅಧ್ಯಕ್ಷರಾಗಿ ಚುನಾಯಿತರಾಗಿದ್ದಾರೆ. ಈಗಲೂ ಇಂದಿರಾ ಪ್ರಭಾವಶಾಲಿ ಎಂಬುದನ್ನು ತೋರಿಸುತ್ತದೆ. ಆದರೆ ಆತ ಸರಿಯಾದ ಮನುಷ್ಯನಲ್ಲ. ಇದಕ್ಕೆ ಕಾರಣವೇನಿರಬಹುದೆಂದರೆ ಇಂದಿರಾಗೆ ಬೆಂಬಲವಾಗಿರುತ್ತಾನೆ. ಅಂತಹುದೇ ಮನುಷ್ಯ ಮಾಜಿ ಮಂತ್ರಿ ರಘುರಾಮಯ್ಯ. ಕಾಂಗ್ರೆಸ್ಸಿಗೆ ಮತ್ತು ಮುಖ್ಯಮಂತ್ರಿ ವೆಂಗಲ್‌ರಾವ್ ಸ್ಥಾನಕ್ಕೆ ರಾಜೀನಾಮೆ ಇತ್ತಿದ್ದಾರೆ.

**ಮೇ ೨೫, ೧೯೭೭ ಮದುವೆಯ ಸುವರ್ಣ ಮಹೋತ್ಸವ**

ಒಂದು ವಿಧದಲ್ಲಿ ಬಹಳ ಪ್ರಸಿದ್ಧ ದಿನ. ಪೂರಿಯ ವಿನಾ ಎಲ್ಲಾ ಮಕ್ಕಳ ಮತ್ತು ೨೦ ಮೊಮ್ಮಕ್ಕಳಲ್ಲಿ ಐವರನ್ನು ಬಿಟ್ಟು ಎಲ್ಲರೂ ಮತ್ತು ಇಬ್ಬರನ್ನು ಬಿಟ್ಟು ಎಲ್ಲಾ ಅಳಿಯಂದಿರೂ ಸೇರಿದ್ದರು. ಮೂರು ದಿನಗಳಿಂದ ಜಂಗಮರೊಬ್ಬರಿಂದ ಪೂಜೆಯನ್ನು ಮಾಡಲಾಗುತ್ತಿದೆ. ನನಗೆ ಮತ್ತು ನನ್ನ ಹೆಂಡತಿ ಶ್ರೇಯಸ್ಸಿಗಾಗಿ ಪ್ರಾರ್ಥನೆ ನಡೆಯುತ್ತಿದೆ. ನನ್ನ ಮೈದ ಮುರಿಗಪ್ಪ ಮತ್ತು ಅವನ ಹೆಂಡತಿಯನ್ನು ಆಮಂತ್ರಿಸಿದ್ದೆವು. ಏಕೆಂದರೆ ನಮ್ಮ ಮದುವೆಗಳು

೫೦ ವರ್ಷಗಳ ಹಿಂದೆ ೨೫-೫-೧೯೨೭ರಂದು ನಡೆಯಿತು. ನನ್ನ ಹೆಂಡತಿಯ ಇಚ್ಛೆಯಂತೆ ನನಗೆ ಇಷ್ಟವಿಲ್ಲದಿದ್ದರೂ ಇವತ್ತು ಮತ್ತು ನೆನ್ನೆ ಪೂಜೆಗೆ ಕುಳಿತುಕೊಂಡೆ. ಕೆಲವು ಸಂಪ್ರದಾಯಗಳನ್ನು ಪುನರಾವರ್ತಿಸಿ ಕಾರ್ಯತಃ ನಾವು ಪುನಃ ಮದುವೆಯಾದೆವು. ನಂತರ ನಾವು ನಾಲ್ವರನ್ನು ಹಾಲಿನಲ್ಲಿ ಕೂರಿಸಲಾಯಿತು. ೨೫-೩೦ ಜನ ಮಹಿಳೆಯರು ಅವರ ಗಂಡಂದಿರು ಆರತಿ ಎತ್ತಿದರು ಮತ್ತು ಉಡುಗೊರೆಗಳನ್ನು ನಮಗೆ ನೀಡಿದರು. ೨ ಸಿಹಿ ತಿಂಡಿಗಳು ಮುಂತಾದವುಗಳ ಜೊತೆಯಲ್ಲಿ ನಾವು ಮಧ್ಯಾಹ್ನದ ಭೋಜನ ಮಾಡಿದೆವು. ಅದನ್ನು ಎಲ್ಲರೂ ಸಂತೃಪ್ತಿಯಿಂದ ತಿಂದರು. ಅತ್ಯಂತ ಸಮೀಪದ ಬಂಧುಗಳು ಸುಮಾರು ೨೦೦ ಅತಿಥಿಗಳು ಸೇರಿದ್ದರು. ಇದು ನಿಜವಾಗಿಯೂ ಸಂತೋಷದ ದಿನ. ನಾವಿಬ್ಬರೂ ಅಪಾರವಾಗಿ ಸಂತೋಷಿಸಿದೆವು. ಎಲ್ಲಾ ಮಕ್ಕಳೂ ಹಾಜರಿದ್ದರು. ಮನೆಯನ್ನು ಮಾವಿನ ಎಲೆಯ ಹಸಿರು ತೋರಣಗಳು ಮತ್ತು ಬಾಳೆ ಕಂದುಗಳಿಂದ ಅಲಂಕರಿಸಲಾಗಿತ್ತು. ವಾಸ್ತವವಾಗಿ ವಿಶ್ರಾಂತಿಯೇ ಇಲ್ಲ. ೫ ಜನ ಹೆಣ್ಣು ಮಕ್ಕಳು ಮತ್ತು ಸೊಸೆ ಪಾರ್ವತಿಗೆ ಒಬ್ಬೊಬ್ಬರಿಗಾಗಿ ಒಂದೊಂದು ರೇಷ್ಮೆ ಸೀರೆಯನ್ನು ಕೊಟ್ಟೆವು. ಅದಕ್ಕೆ ನಮಗೆ ೨೦೦೦ ರೂ. ಖರ್ಚಾಯಿತು. ಇದೇ ಮೊದಲ ಸಲ ಮುಂದಿನ ತಾರೀಕಿಗೆ ೨೦೦೦ ರೂ.ನ ಚೆಕ್ ಕೊಟ್ಟೆ, ಏಕೆಂದರೆ ಬ್ಯಾಂಕಿನಲ್ಲಿ ಅಷ್ಟು ಶಿಲ್ಕು ಇರಲಿಲ್ಲ. ಬಡ್ಡಿಯು ಬೆಳೆಯುವವರೆಗೆ ನಾನು ಕಾಯಬೇಕಿತ್ತು. ನಮ್ಮ ಮದುವೆಯ ಸುವರ್ಣ ಮಹೋತ್ಸವವನ್ನು ತುಂಬಾ ಸಂತೋಷದಿಂದ ಆಚರಿಸಿದೆವು. ಹಾಗೆಯೇ ನನ್ನ ಹೆಂಡತಿ, ಅದರಲ್ಲಿಯೂ ವಿಶೇಷವಾಗಿ ನಮ್ಮ ಮಕ್ಕಳೂ ಸೇರಿದಂತೆ ಭಾಗವಹಿಸಿದವರಿಗೆಲ್ಲಾ ಸಂತೋಷವಾಗಿತ್ತು.

**ಜೂನ್ ೧೨, ೧೯೭೭**

ಚುನಾವಣೆಯ ಜ್ವರ ಮುಂದುವರಿಯುತ್ತಿದೆ. ನಮ್ಮ ಜನತಾ ಪಕ್ಷದ ಸರಕಾರವು ಎಲ್ಲ ಪಕ್ಷಗಳಿಗೂ ತಾವು ಹೇಳಬೇಕೆಂದಿರುವುದನ್ನು ಹೇಳುವುದಕ್ಕೆ ರೇಡಿಯೋದಲ್ಲಿ ಮತ್ತು ವೃತ್ತಪತ್ರಿಕೆಗಳಲ್ಲಿ ಸಮಾನ ಅವಕಾಶ ಕೊಟ್ಟಿರುವುದು ಮತ್ತು ನಾಯಕರುಗಳು ತಮ್ಮ ಕ್ರಮವಾದ ಪ್ರಚಾರವನ್ನು ಮಾಡಲು ಸಾಕಷ್ಟು ಅವಕಾಶ ಕೊಟ್ಟಿರುವುದು ಒಳ್ಳೆಯದು. ಇದು ಪ್ರಜಾಪ್ರಭುತ್ವ. ನನಗೆ ಸಂತೋಷವಾಗಿದೆ. ಕಾಂಗ್ರೆಸ್ಸಿಗೆ ಈ ಸಲ ಸಂಪೂರ್ಣವಾಗಿ ಅವಕಾಶವೇ ಇಲ್ಲವೆಂದು ನನಗೆ ಗೊತ್ತು. ಅವರಿಗೆ ಅಲ್ಲಿ ಇಲ್ಲಿ ಕೆಲವು ಸ್ಥಾನಗಳು ಸಿಗಬಹುದು. ಒಂದೆರಡು ಅಥವಾ ಮೂರು ರಾಜ್ಯಗಳಲ್ಲಿ ಒಂದು ಸ್ಥಾನವೂ ಇಲ್ಲ. ಅವರಿಗೆ ಹಾಗಾಗಬೇಕು. ನಾನು ಹಣಕಾಸಿನ ಮುಗ್ಗಟ್ಟನ್ನು ಅನುಭವಿಸುತ್ತಿರುವುದರಿಂದ ತಕ್ಷಣವೇ ವಿಟಮಿನ್ ಮಾತ್ರೆಗಳು ಮುಂತಾದವುಗಳನ್ನು ಕೊಳ್ಳಲಾಗುತ್ತಿಲ್ಲ. ಆದರೆ ನನ್ನ ಲೆಕ್ಕದಲ್ಲಿ ಬ್ಯಾಂಕಿನಿಂದ ಕೂಡ ನಾನು ಸಾಲ ಪಡೆಯುವುದಿಲ್ಲ. ನಾನು ಯಾವತ್ತೂ ಸಾಲಗಾರನಾಗಿಲ್ಲ. ಮುಂದೆಯೂ ಆಗಲು ಇಚ್ಛಿಸುವುದಿಲ್ಲ. ಅನೇಕ ಜನರು ಬಂದು

ನನ್ನ ತಲೆಗೆ ರಾಷ್ಟ್ರಾಧ್ಯಕ್ಷರ ಅಭಿಪ್ರಾಯವನ್ನು ಹಾಕಿದ್ದಾರೆ. ನಾನೂ ಅದರ ಬಗ್ಗೆ ಯೋಚಿಸಿ ನನ್ನ ಆ ಚಿಂತನೆಗಳನ್ನು ಬೇಗನೆ ಹೊರಹಾಕಿದೆ.

**ಜೂನ್ ೧೬, ೧೯೭೭**

ರಾಮಕೃಷ್ಣ ಹೆಗಡೆಯವರಿಂದ ಒಂದು ತಂತಿ ಬಂದಿತು. ಅದರಲ್ಲಿ ಅಧ್ಯಕ್ಷರು ನನ್ನನ್ನು ತಮಿಳುನಾಡು ಮತ್ತು ಪಾಂಡಿಚೇರಿಯ ೧೯ನೇ ತಾರೀಕಿನ ಪಕ್ಷದ ಸಭೆಗಳ ವೀಕ್ಷಕನಾಗಿ ಹೋಗಲು ತಿಳಿಸಿದ್ದಾರೆಂದು ಹೇಳಿದರು. ನನಗೆ ಹೋಗಲು ಇಷ್ಟವಿರಲಿಲ್ಲ. ಆದರೆ ಅಭ್ಯರ್ಥಿಗಳ ಆಯ್ಕೆಯ ಕಾಲದಲ್ಲಿ ನಾನು ವೀಕ್ಷಕನಾಗಿ ಆಗಲೇ ಕೆಲಸ ಮಾಡಿರುವುದರಿಂದ ನಾನು ಒಪ್ಪಿಕೊಳ್ಳಲೇಬೇಕು.

ಜನತಾ ಪಕ್ಷವು ನಿರೀಕ್ಷಿಸಿದುದಕ್ಕಿಂತ ಹೆಚ್ಚಾಗಿ ಉತ್ತರ ಭಾರತದಲ್ಲಿ ಎಲ್ಲಾ ರಾಜ್ಯಗಳ ವಿಧಾನಸಭೆ ಚುನಾವಣೆಗಳಲ್ಲಿ ಗೆದ್ದಿದ್ದು, ಪಶ್ಚಿಮ ಬಂಗಾಳವು ನಿರೀಕ್ಷೆಯಂತೆ ಹೊರತಾಗಿತ್ತು. ಪೂರ್ಣವಾದ ಫಲಿತಾಂಶ ಇನ್ನೂ ಬರಬೇಕಾಗಿದ್ದರೂ ಸಿಪಿಎಂ ಗೆದ್ದು ಸರಕಾರವನ್ನು ರಚಿಸುತ್ತದೆಂಬುದು ಸ್ಪಷ್ಟವಾಗಿದೆ. ದಕ್ಷಿಣದಲ್ಲಿ ನಿರೀಕ್ಷಿಸಿದುದಕ್ಕಿಂತ ಹೆಚ್ಚಾಗಿ ಸೋತಿದ್ದೇವೆ. ಯಾವುದೇ ಪಾಲಿಸಿ ಇಲ್ಲದ ಯಾವುದೇ ಕಾರ್ಯಕ್ರಮ ಮತ್ತು ಆದರ್ಶಗಳಿಲ್ಲದ ಎಡಿಎಂಕೆಗೆ ಬಹಳ ಹೆಚ್ಚಿನ ಬಹುಮತ ಬಂದಿದ್ದು, ಅದಕ್ಕೆ ಕಾರಣ ಒಬ್ಬನೇ ವ್ಯಕ್ತಿಯ ವ್ಯಕ್ತಿತ್ವದ ಮೇಲೆ ಅವಲಂಬಿಸಿದ್ದು, ಅದು ಯಾರೆಂದರೆ ರಾಜಕೀಯದ ಹಿನ್ನೆಲೆಯೇ ಇಲ್ಲದ ಒಬ್ಬ ಸಿನಿಮಾತಾರೆ. ಆದರೆ ಪ್ರತಿಯೊಂದು ಕಡೆಯಲ್ಲೂ ಕಾಂಗ್ರೆಸ್ ತಿರಸ್ಕರಣೀಯವಾಗಿ ಸೋತಿರುವುದು ಬಹಳ ಗಣನೀಯವಾಗಿದೆ.

**ಜೂನ್ ೨೮, ೧೯೭೭** **ದೆಹಲಿ**

ತುಂಬಾ ಜನರು ನನ್ನನ್ನು ನೋಡಲು ಬಂದರು. ನಾಯಕತ್ವದ ಚುನಾವಣೆಯಲ್ಲಿ ಕರ್ಪೂರಿ ಠಾಕುರ್ ವಿರುದ್ಧ ಸೋತ ಸತ್ಯೇಂದ್ರ ನಾರಾಯಣಸಿಂಗ್ ಬಹಳ ಕಠೋರವಾಗಿದ್ದರು. ಕಲ್ಕತ್ತಾದಲ್ಲಿ ಜನಜೀವನರಾಂ ಅವರಿಗೆ ಹೇಳಿದ್ದೇನೆಂದರೆ ಜನಸಂಘ ಮತ್ತು ಬಿಜೆಡಿ ಒಟ್ಟಾಗಿ ಸೇರಿಕೊಂಡಿದ್ದು, ಕಾಂಗ್ರೆಸ್ (ಒ) ಸೋಷಿಯಲಿಸ್ಟರು ಬಿಎಲ್‌ಡಿ ಮತ್ತು ಸಿಎಫ್‌ಡಿಯನ್ನು ಉಚ್ಚಾಟಿಸಿ ಅಂತಿಮವಾಗಿ ಜನಸಂಘ ದೇಶವನ್ನು ಆಳುತ್ತದೆ. ಇದು ಉತ್ತರ ಪ್ರದೇಶ ಮತ್ತು ಇತರ ಸ್ಥಳಗಳಲ್ಲಿ ಆಗಿರುವಂತೆ ಕಾಣುತ್ತದೆ. ಆದರೆ ಜನಸಂಘದವರು ದಕ್ಷರು, ಕಷ್ಟಪಟ್ಟು ದುಡಿಯುವವರು ಮತ್ತು ನಿಸ್ವಾರ್ಥ ಕಾರ್ಯಕರ್ತರು ಎಂಬುದನ್ನು ಒಪ್ಪಿಕೊಳ್ಳಲೇಬೇಕು. ನಾವು ಈ ಅನಾರೋಗ್ಯಕರ ಮತ್ತು ಆತ್ಮಹತ್ಯೆಯ ಪ್ರವೃತ್ತಿಯನ್ನು ಮುಂದುವರಿಸಿಕೊಂಡು ಹೋಗುವುದನ್ನು ಯಾವುದೇ ದೃಷ್ಟಿಯಿಂದ ನೋಡಿದರೂ ಅನಪೇಕ್ಷಣೀಯ. ಆದರೂ ಪ್ರಾರಂಭದಲ್ಲಿ ಸ್ವಲ್ಪ ಕಾಲ ಹಾಗೇ ಇದ್ದರೂ ದೋಷವು ತುಂಬಾ ಹೆಚ್ಚಾಗಿದೆಯೆಂದು ಕಾಣುತ್ತದೆ. ದಿಗ್ವಿಜಯ್‌ಸಿಂಗ್ ಕೂಡ ಪುನರಾವರ್ತಿಸಿದರು.

ಸರಿದುಹೋದ ಡಿಸ್ಕ್ ಮತ್ತು ಬೆನ್ನು ಹುರಿಯಲ್ಲಿ ನೋವಿನಿಂದಾಗಿ ನರಳುತ್ತಿದ್ದ ಜನತಾ ಪಕ್ಷದ ಅಧ್ಯಕ್ಷ ಚಂದ್ರಶೇಖರ್‌ರನ್ನು ನೋಡಲು ಹೋದೆ. ನೋವಿದ್ದರೂ ಸಹ ನನಗೆ ಕಾಫಿ ತರಿಸುವುದರಲ್ಲಿ ತುಂಬಾ ಆಸಕ್ತರಾಗಿದ್ದರು. ನಾನು ಬಂದುಬಿಟ್ಟೆ. ತಮಿಳುನಾಡು ಮತ್ತು ಪಾಂಡಿಚೇರಿಯ ಬಗ್ಗೆ ಅವರಿಗೆ ವರದಿ ಮಾಡಬೇಕೆಂದಿದ್ದೆ. ಈ ದಿನ ಬೆಳಗಿನ ಉಪಾಹಾರಕ್ಕೆ ಕೆಲವು ಹಳೆಯ ಸ್ನೇಹಿತರು ಮತ್ತು ಭಾರತದ ಗೆಝೆಟಿಯರ್‌ನ ಪ್ರಧಾನ ಸಂಪಾದಕರಾದ ಡಾ. ಚೋಪ್ರ ಇದ್ದರು. ನಾಳೆ ರಾತ್ರಿ ಊಟಕ್ಕೆ ನಾನು ಅವರ ಮನೆಗೆ ಹೋಗಬೇಕೆಂದರು. ಅವರು ನನ್ನನ್ನು ಕಂಡರೆ ಅಷ್ಟೊಂದು ಪ್ರೀತಿ ಮತ್ತು ಗೌರವದಿಂದ ಏಕೆ ಇದ್ದಾರೆಂದು ನನಗೆ ತಿಳಿಯದು. ಡಾ. ಲಟ್ಕಾ ಕೂಡ ಬಂದರು ಮತ್ತು ಸಾಯಂಕಾಲ ಜಿ. ಸ್ವಾಮಿ ಮತ್ತು ರಾಜೇಶ್ವರಿ ಬಂದರು.

**ಜುಲೈ ೬, ೧೯೭೭**

ರಾಷ್ಟ್ರಾಧ್ಯಕ್ಷರನ್ನು ಒಮ್ಮತದಿಂದ ಚುನಾಯಿಸುವುದಕ್ಕೆ ಪ್ರಯತ್ನಗಳು ನಡೆಯುತ್ತಿರುವುದು ಒಳ್ಳೆಯದು. ಯಾರೋ ಕಾಂಗ್ರೆಸ್ ಸದಸ್ಯರೊಬ್ಬರು ಮರಕತಂ ಚಂದ್ರಶೇಖರ್ ಹೆಸರನ್ನು ಸೂಚಿಸಿರುವುದು ಕುಚೋದ್ಯವಷ್ಟೆ. ಈ ಹೆಂಗಸು ದಾಸ್ಯಪ್ರಿಯಳು. ಇಂದಿರಾ ಗಾಂಧಿಯ ಆಕ್ಷೇಪಾಣಾರ್ಹ ಅನುಯಾಯಿ. ಈ ಹೆಂಗಸು ಪ್ರಸಿದ್ಧಳೇನಲ್ಲ. ಒಂದು ವಾರದ ಹಿಂದೆ ರುಕ್ಮಿಣಿ ಅರುಂಡೇಲರ ಹೆಸರನ್ನು ಪ್ರಧಾನವಾಗಿ ಸೂಚಿಸಲಾಗಿತ್ತು. ವಿಜಯಲಕ್ಷ್ಮಿ ಪಂಡಿತ್‌ರ ಹೆಸರು ಕೂಡ. ನೆಹ್ರೂ ಹೆಸರಿರುವ ಯಾವ ಮಹಿಳೆಯನ್ನೇ ಆಗಲಿ ಜನರು ಪರಿಗಣಿಸುವ ಮನೋಸ್ಥಿತಿಯಲ್ಲಿಲ್ಲ. ನನ್ನಲ್ಲಿಗೆ ಬಂದ ಅನೇಕರು ಯಾವುದೇ ಹೆಂಗಸು ರಾಷ್ಟ್ರಾಧ್ಯಕ್ಷರಾಗುವುದಕ್ಕೆ ವಿರೋಧವಾಗಿದ್ದರು. ನನ್ನ ಮನಸ್ಸಿನಂತೆ ಇಂದಿರಾ ಗಾಂಧಿಯು ಸ್ತ್ರೀ ಪ್ರಂಪಚಕ್ಕೆ ಸ್ಪಷ್ಟವಾದ ಅಪಕಾರವೆಸಗಿದ್ದಾರೆ.

**ಜುಲೈ ೮, ೧೯೭೭**

ಸಂಜೀವರೆಡ್ಡಿಯವರು ಸ್ವಾಭಾವಿಕವಾಗಿ ತುಂಬಾ ಸಂತೋಷವಾಗಿದ್ದಾರೆ. ಅವರನ್ನು ಅಭಿನಂದಿಸುತ್ತಿರುವುದು ಒಳ್ಳೆಯದು. ೧೯೬೯ರಲ್ಲಿ ಇಂದಿರಾ ಗಾಂಧಿಯ ಕೈಯಲ್ಲಿ ಆಕೆಯ ದುರಹಂಕಾರದ ನಡೆತೆಯಿಂದ ಕೆಟ್ಟದ್ದನ್ನು ಅನುಭವಿಸಿದರು. ಅದಲ್ಲದೆ ಆಕೆಯ ಅಶಿಸ್ತು, ಅಸತ್ಯತೆ, ಭ್ರಷ್ಟಾಚಾರ, ನಿಷ್ಠೆಯಿಲ್ಲದಿರುವಿಕೆ ಮುಂತಾದವುಗಳಿಂದ ಅವರಿಗೆ ತೊಂದರೆಯಾಯಿತು.

ಆಕೆಯ ಭವಿಷ್ಯವೇನು ? ಅಗಾಧವಾದ ಹಣ ಸಂಪನ್ಮೂಲದಿಂದಾಗಿ ಆಕೆ ನಿರ್ಭೀತಳು. ವಾಪಸ್ಸು ಬರಲು ಆಕೆ ಪ್ರಯತ್ನಿಸಬಹುದು. ಆದರೆ ಅದು ದೂರದ ಆಸೆ ಎಂದು ಕಾಣುತ್ತದೆ. ಆಕೆಗಾಗಿ ಯಾರೂ ಒಂದು ತೊಟ್ಟು ಕಣ್ಣೀರು ಹಾಕುವರಲ್ಲ. ಸಂಜಯ್ ಕೂಡ ಕಣ್ಣೀರು ಹಾಕಿದ್ದಾನೆಂದು ನಾನು ನಂಬುವುದಿಲ್ಲ.

**ಅಕ್ಟೋಬರ್ ೩, ೧೯೭೭**

ಈ ದಿನ ಸಾಯಂಕಾಲ ಒಂದು ಒಳ್ಳೆಯ ಸುದ್ದಿ ಪ್ರಸಾರ. ಅದರಲ್ಲಿ ಇಂದಿರಾ ಗಾಂಧಿ ಅವರ ಅನುಯಾಯಿಗಳಾದ ಮಂತ್ರಿಮಂಡಲ ಸಹೋದ್ಯೋಗಗಳಾದ ಕೆ.ಡಿ. ಮಾಳವೀಯ, ಗೋಖಲೆ, ಚಟ್ಟೋಪಾಧ್ಯಾಯ, ಸೇಥಿ ಮತ್ತು ಇತರರಾದ ಯಶ್‌ಪಾಲ್ ಕಪೂರ್, ಕೈಗಾರಿಕೋದ್ಯಮಿಗಳಾದ ಆರ್.ಪಿ. ಗೊಯೆಂಕಾ, ಅರುಣಾಚಲಂ ಮತ್ತು ಕೆಲವು ಅಧಿಕಾರಿಗಳನ್ನು ಭ್ರಷ್ಟಾಚಾರಕ್ಕೆ ಬಂಧಿಸಲಾಯಿತೆಂಬುದು ಒಳ್ಳೆಯ ಸುದ್ದಿ. ಆಕೆಯ ಬಂಧನವು ಜನರಲ್ಲಿಗೆ ಆಕೆ ಹೋಗುವುದನ್ನು ತಪ್ಪಿಸಲು ಎಂಬ ಅಗ್ಗವಾದ ಮಾತು ಆಕೆಯಿಂದ ಮಾಮೂಲಿನಂತೆ ಬಂದಿದೆ. ಅಪ್ಪಟ ಸುಳ್ಳು. ಆಕೆಗೆ ಮಾತ್ರ ಜನರ ಬಗ್ಗೆ ಆಸಕ್ತಿ ಇದೆ, ಇತರರಿಗಿಲ್ಲ ಎಂದು ಸಾಮಾನ್ಯವಾಗಿ ಹೇಳುವ ಮಾತು ಬರೀ ಸುಳ್ಳು. ಆಕೆಯ ದಸ್ತಗಿರಿಯಾಗಿರುವುದು ಗಣನೀಯವಾದ ಮತ್ತು ನಿರ್ದಿಷ್ಟವಾದ ತೃಪ್ತಿಯನ್ನು ಜನರಲ್ಲಿ ತಂದಿದೆ. ಆಕೆಯಿಂದ ಅಷ್ಟೊಂದು ತೊಂದರೆಗೊಳಗಾಗಿರುವವರು ಇದನ್ನು ಕಾತುರರಾಗಿ ನಿರೀಕ್ಷಿಸುತ್ತಿದ್ದರು.

**ಜನವರಿ ೩೦, ೧೯೭೮**

ಇವತ್ತು ನನ್ನ ಜೀವನದಲ್ಲಿ ಇನ್ನೊಂದು ತಿರುವಿನ ದಿನ. ಈ ಬೆಳಿಗ್ಗೆ ಮತ್ತು ನೆನ್ನೆ ವಿಧಾನಸಭೆಗೆ ಜನತಾಅಭ್ಯರ್ಥಿಗಳು ಯಾರನ್ನು ನಿಲ್ಲಿಸಿದ್ದಾರೆ ಎಂದು ನೋಡಿದಾಗ ಹೆಚ್ಚಿನವರು ಪಕ್ಷಾಂತರಿಗಳು, ಅವರು ಲೋಕಸಭಾ ಚುನಾವಣೆಗಳಾದ ನಂತರ ಅಥವಾ ಕೆಲವು ದಿವಸಗಳ ಹಿಂದೆ ಪಕ್ಷಾಂತರಿಸಿದವರು. ನಾನು ವಿರೋಧಿಸಿದರೂ, ಪಕ್ಷಾಂತರಿಗಳ ವಿರುದ್ಧ ಪ್ರಾರ್ಥಿಸಿ ಮತ್ತು ಎಚ್ಚರಿಕೆ ಕೊಟ್ಟರೂ ಕೂಡ ಅವರನ್ನು ಭರವಸೆಗಳಿಂದ ಸ್ವಾಗತಿಸಲಾಯಿತು. ಸ್ಥಾನಗಳನ್ನು ನೀಡಲಾಯಿತು. ಕೇಂದ್ರದ ಮುಂದಾಳತ್ವವು ಈ ಪಕ್ಷಾಂತರಿಗಳನ್ನು ಒಪ್ಪಿಕೊಂಡಿದೆ. ಅವರಲ್ಲಿ ಕೆಲವರು ಸಂಪೂರ್ಣವಾಗಿ ಭ್ರಷ್ಟರು ಮತ್ತು ಮೊದಲು ಕಡುಬಡವರಾಗಿದ್ದವರು. ಈಗ ಅವರ ಕನಸಿನಲ್ಲಿಯೂ ಎಣಿಸಲಾಗದಷ್ಟು ಶ್ರೀಮಂತರಾಗಿದ್ದಾರೆ. ಪ್ರತಿಯೊಂದು ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯ ಪಕ್ಷಾಂತರಿ ಗಳಲ್ಲದವರಿಬ್ಬರಿಗೋಸ್ಕರ ಕೆಲಸ ಮಾಡಲಾಗುವುದಿಲ್ಲ. ಅಧ್ಯಕ್ಷ ಚಂದ್ರಶೇಖರ್‌ರವರಿಗೆ ಸುದೀರ್ಘವಾದ ಪತ್ರವೊಂದನ್ನು ಬರೆದು ಪಕ್ಷಕ್ಕೆ ರಾಜೀನಾಮೆ ನೀಡಿದೆ.

**ಫೆಬ್ರವರಿ ೨೩, ೧೯೭೮** **ಚಂದ್ರಶೇಖರ್ ಭೇಟಿ**

ಜ್ಞಾಪಿಸಿಕೊಳ್ಳಬಹುದಾದ ದಿನ. ಈ ಬೆಳಿಗ್ಗೆ ಜನತಾ ಪಕ್ಷದ ಅಧ್ಯಕ್ಷ ಚಂದ್ರಶೇಖರ್ ನಮ್ಮ ಮನೆಗೆ ಬಂದರು. ಪಕ್ಷದಿಂದ ನಾನು ನೀಡಿರುವ ರಾಜೀನಾಮೆಯನ್ನು ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ಮನವಿ ಮಾಡಿದರು. ಆದರೆ ನಾನು ಹೆಚ್ಚಾಗಿ ಇಷ್ಟಪಡಲಿಲ್ಲ. ಆದರೆ ಅವರ ಮನವಿಯಲ್ಲಿದ್ದ ಶ್ರದ್ಧೆ ಮತ್ತು ನನ್ನ ಜಿಲ್ಲೆಯ ಅನೇಕ ಕಾರ್ಯಕರ್ತರ

ಮುಖದಲ್ಲಿದ್ದ ನಿರೀಕ್ಷಿತ ಭಾವನೆ ನನ್ನ ಮನಸ್ಸನ್ನು ಬದಲಾಯಿಸಿ ನಾನು ಒಪ್ಪಿಕೊಂಡೆ. ಚಂದ್ರಶೇಖರ್‌ರವರು ಸಂತೋಷದಿಂದ ಹೋದರು. ಸಮಾಚಾರದ ಪ್ರತಿನಿಧಿಯನ್ನು ತಮ್ಮ ಜೊತೆಯಲ್ಲಿ ಕರೆತಂದಿದ್ದರು. ನಾನು ರಾಜೀನಾಮೆ ನೀಡಿದ್ದೆ ಅಥವಾ ನನ್ನ ರಾಜೀನಾಮೆಯನ್ನು ಹಿಂತೆಗೆದುಕೊಂಡೆ ಎಂದು ಹೇಳಬೇಕಾಯಿತು. ನನ್ನ ಕಾರ್ಯಕರ್ತರ ಮುಖದಲ್ಲಿ ಸಂತೋಷ ಮತ್ತು ಹೆಚ್ಚಿನ ಸಂಖ್ಯೆಯಲ್ಲಿ ನಂತರ ಬಂದ ಟೆಲಿಗ್ರಾಂಗಳು ನನ್ನ ಅಸಂತೋಷವನ್ನು ಕಮ್ಮಿ ಮಾಡಿದವು. ಈ ಸಾಯಂಕಾಲ ಸಭೆಯನ್ನುದ್ದೇಶಿಸಿ ಮಾತನಾಡಲು ನಿರಾಕರಿಸಿದೆ. ಸಭೆಗಳಿಗೆ ಇಂದು ಸಂಜೆ ೫ ಗಂಟೆಗೇ ಕೊನೆ. ನಾನು ಹಿಂತೆಗೆದುಕೊಂಡ ಕೂಡಲೆ ನಾನು ಹಾಗೆ ಮಾಡಲಾಗಲಿಲ್ಲ ಮತ್ತು ನನ್ನನ್ನು ಈ ಪರಿಸ್ಥಿತಿಗೆ ಹೊಂದಿಸಿಕೊಳ್ಳಲಾಗಲಿಲ್ಲ. ಇಡೀ ದಿವಸ ಮಿಶ್ರ ಭಾವನೆಗಳ ದಿವಸ. ಹೆಂಡತಿಯೂ ಯೋಚಿಸಿದಳಾದರೂ ಏನನ್ನೂ ಹೇಳಲಿಲ್ಲ. ಗೌರಿ ಮತ್ತು ಮೊಮ್ಮಕ್ಕಳಿಗೆ ಆಶ್ಚರ್ಯವಾದರೂ ನನಗೆ ಸಂತೋಷವಾಗಲಿಲ್ಲ. ಸಾಯಂಕಾಲದ ಹೊತ್ತಿಗೆ ನಾನು ಹೆಚ್ಚು ಶಾಂತಿಯುತವಾಗಿದ್ದೆ. ಈ ಹೆಜ್ಜೆಯನ್ನು ಇಟ್ಟಿದ್ದು ಸರಿಯಾಗಿದೆಯೆಂಬುದು ನನಗೆ ಇನ್ನೂ ಖಚಿತವಿಲ್ಲ.

**ಫೆಬ್ರವರಿ ೨೮, ೧೯೭೮**

ಅರಸು ಪ್ರಮಾಣವಚನ ಸ್ವೀಕರಿಸಿದರು. ಭ್ರಷ್ಟಾಚಾರದ ಕೆಸರಿನಲ್ಲಿ ಅವರ ಹೆಸರಿದ್ದರೂ ಪುನಃ ಅವರು ಮುಖ್ಯಮಂತ್ರಿಗಳಾದರು. ಆದರೆ ಸಾಮಾನ್ಯ ಮನುಷ್ಯನಿಗೆ ಈ ವಿಷಯಗಳ ಅರಿವಿಲ್ಲ. ಇವರ ಜಯಕ್ಕೆ ಹರಿಜನರು, ಹಿಂದುಳಿದವರು ಮತ್ತು ಮುಸ್ಲಿಮರು ಮುಖ್ಯವಾಗಿ ಜವಾಬ್ದಾರರು. ಅವರನ್ನು ತೃಪ್ತಿಯಲ್ಲಿಟ್ಟುಕೊಳ್ಳಲು ಅವರು ಪ್ರಯತ್ನಿಸಿದ್ದಾರೆ. ಮುಸ್ಲಿಮರು ತಮ್ಮ ವೈಯಕ್ತಿಕತೆಯನ್ನು ಕಾಪಾಡಿಕೊಳ್ಳಲು ಪ್ರಯತ್ನಿಸಿದ್ದಾರೆ. ಇನ್ನೊಂದು ಕಡೆಯಲ್ಲಿ ನಾವು ಅವರ ಮತ ಗಳಿಸಲು ಚಿಂತಾಕ್ರಾಂತರಾಗಿದ್ದೇವೆ. ಹಾಗೆಯೇ ಹರಿಜನರ ಬಗ್ಗೆಯೂ.

ಜನತಾ ಗುಂಪಿನ ಅಸತ್ಯಸಂಧತೆ ಬಗ್ಗೆ ದೂರು ಹೇಳಲು ನನ್ನ ಹತ್ತಿರ ನೂರಾರು ಜನರು ಬರುತ್ತಿದ್ದಾರೆ. ಒಂದು ಸಭೆಯಲ್ಲಿ ಈಗ ತಾನೇ ಚುನಾಯಿತರಾದ ಯುವ ಜನತಾ ಸದಸ್ಯರು ಜನತಾ ಕಚೇರಿಯ ಮುಂದೆ ಗುಂಪು ಕೂಡಿ ದೇವೇಗೌಡ ಕೆಳಗಿಳಿಯಬೇಕು ಎಂದು ಕೂಗುತ್ತಿದ್ದರಂತೆ. ಪಕ್ಷದ ಚಿತ್ರಣವನ್ನು ಕೆಲವು ಚುನಾಯಿತ ಸದಸ್ಯರೂ ಸೇರಿದಂತೆ ಅನೇಕ ಜನರ ಜೊತೆಯಲ್ಲಿ ಚರ್ಚಿಸುವುದರಲ್ಲಿ ನಾನು ನಿರತನಾದೆ.

**ಮಾರ್ಚಿ ೩, ೧೯೭೮** **ನವದೆಹಲಿ**

ಧರಮ್, ಯಶ್‌ದೇವ್ ಮತ್ತು ನಾಥ್ ಬೆಳಗಿನ ಉಪಾಹಾರಕ್ಕೆ ಬಂದರು. ಸಾಮಾನ್ಯ ಜನರು ಜನತಾ ಸರಕಾರದ ಬಗ್ಗೆ ಹೇಗೆ ನಿರಾಶರಾಗುತ್ತಿದ್ದಾರೆ ಭ್ರಮನಿರಸನರಾಗುತ್ತಿದ್ದಾರೆ. ಇಂದಿರಾಗಾಂಧಿಗೆ ಹೆಚ್ಚಿನ ಜನಾದರಣೆ ದೊರೆಯಬಹುದು ಮತ್ತು ಜನರ ಸಹಾನುಭೂತಿ

ಹೇಗೆ ದೊರೆಯುತ್ತದೆ ಎಂದು ಮೊದಲಿನವರು ತುಂಬಾ ಹೇಳುತ್ತಿದ್ದರು. ಚಂದ್ರಶೇಖರರನ್ನು ನೋಡಲು ಜನತಾ ಕಚೇರಿಗೆ ಕೇರಳದ ಸ್ನೇಹಿತರ ಜೊತೆಯಲ್ಲಿ ೧೦-೩೦ಕ್ಕೆ ಹೋದೆ. ಅವರು ದೊರೆಯಲಿಲ್ಲ ಮತ್ತು ಅವರು ನನ್ನಿಂದ ತಪ್ಪಿಸಿಕೊಳ್ಳುತ್ತಿದ್ದಾರೆಂದು ಕಾಣುತ್ತದೆ. ಆದರೆ ಹೆಗಡೆ ನನ್ನನ್ನು ನೋಡಿದರು. ನಾನು ಅವರಿಗೆ ಮನಸ್ಸಿನಲ್ಲಿದ್ದುದನ್ನು ಹೇಳಿ ಅಧ್ಯಕ್ಷರು ಎಷ್ಟು ಕೆಟ್ಟದಾಗಿ ನಡೆದುಕೊಂಡಿದ್ದಾರೆ ಎಂದು ಹೇಳಿದೆ. ಪಾಟಿಯಾಲದ ಮಹಾರಾಣಿ ನನ್ನನ್ನು ನೋಡಲು ಬಂದರು. ನಾವು ಎಸ್ಟೇಟ್ ರೋಸ್‌ಗಾರ್ಡನ್‌ಗೆ ಹೋಗಿ ಮಧ್ಯಾಹ್ನದ ಊಟ ಮಾಡಿದೆವು. ಅಶೋಕ್ ಮೆಹ್ತಾ ಕೂಡ ಜೊತೆಯಲ್ಲಿದ್ದರು. ವಿಶ್ರಾಮದ ನಂತರ ವಾಜಪೇಯಿಯವರನ್ನು ನೋಡಿ ಅವರ ಜೊತೆಯಲ್ಲಿ ಚೀನಾ, ರಷ್ಯಾ ಮತ್ತು ಸಂಬಂಧಿತ ಅಂತರರಾಷ್ಟ್ರೀಯ ಸಮಸ್ಯೆಗಳನ್ನು, ಮುಸ್ಲಿಮರ ಸಮಸ್ಯೆಯನ್ನು ಸಂಜೆ ೫-೩೦ರಲ್ಲಿ ಸಂಕ್ಷಿಪ್ತವಾಗಿ ಚರ್ಚಿಸಿದೆ. ೫-೪೫ರಲ್ಲಿ ಜಗಜೀವನರಾಂ ಭೇಟಿ ಮಾಡಿದಾಗ ಬಹುಗುಣ ಮತ್ತು ಕರ್ಪೂರಿ ಠಾಕುರ್ ಹಾಜರಿದ್ದರು. ಅವರು ಬಹಳ ಗೌರವಯುತವಾಗಿದ್ದರು. ವಾಜಪೇಯಿ, ರಾಂ ಮತ್ತು ಬಹುಗುಣ, ಚರಣ್‌ಸಿಂಗ್ ವಿರುದ್ಧ ಕಹಿಯಾಗಿದ್ದರು. ಇದೊಂದು ದುರಾದೃಷ್ಟ. ಸಂಜೆ ೬-೧೫ರಲ್ಲಿ ಮೋಹನ್ ಧಾರಿಯಾರನ್ನು ಭೇಟಿ ಮಾಡಿದೆ. ಮೂವರಲ್ಲಿ ಅಂದರೆ ಪ್ರಧಾನಿ, ಚರಣ್‌ಸಿಂಗ್ ಮತ್ತು ಜಗಜೀವನರಾಂರಲ್ಲಿ ಮನಸ್ಸಿನಲ್ಲಿ ಐಕ್ಯತೆ ಇಲ್ಲದಿರುವುದರಿಂದ ಜನತಾ ಮುಂದುವರಿಯಲು ಕಷ್ಟ ಎಂದು ಅವರು ತುಂಬಾ ಕಾತುರವಾಗಿದ್ದರು. ನಾನು ಅವರ ಅಭಿಪ್ರಾಯ ಒಪ್ಪಿದೆ. ನಂತರ ಬಿಜುಪಾಟ್ನಾಯಕ್‌ರ ಮನೆಗೆ ಹೋದೆ. ಅವರು ಅಲ್ಲಿರಲಿಲ್ಲ. ಅವರ ಹೆಂಡತಿಯ ಜೊತೆಯಲ್ಲಿ ಸ್ವಾರಸ್ಯಕರವಾಗಿ ಒಂದು ಗಂಟೆ ಕಳೆದೆ. ಅವಿಶ್ರಾಂತ ದಿನ. ಕಾರ್ಮಿಕ ಮಂತ್ರಿ ರವೀಂದ್ರವರ್ಮ ನಾಳೆ ನನ್ನನ್ನು ನೋಡುವ ಕಾರ್ಯಕ್ರಮವಿದೆ.

**ಮಾರ್ಚ್ ೪, ೧೯೭೮ ನವದೆಹಲಿ**

ಒಪ್ಪಿಕೊಂಡಂತೆ, ಲೋಕಸಭಾಧ್ಯಕ್ಷ ಕೆ.ಎಸ್. ಹೆಗಡೆಯವರ ಜೊತೆಯಲ್ಲಿ ಬೆಳಗಿನ ಉಪಾಹಾರ ಮಾಡಿದೆ. ಆಗ ಸುಂದರರಾಮಶೆಟ್ಟಿ ಮತ್ತು ಬಾಲಕೃಷ್ಣಶೆಟ್ಟಿ ಆಹ್ವಾನಿತರಾಗಿದ್ದರು. ಕುತೂಹಲಕರವಾದ ಚರ್ಚೆ. ದೀನ್‌ದಯಾಳ್ ಮಾರ್ಗದಲ್ಲಿನ ಗಾಂಧಿ ಪೀಸ್ ಫೌಂಡೇಷನ್ ಕಟ್ಟಡಕ್ಕೆ ಹೋಗಿ ಮುಂಚೆಯೇ ನಿಯೋಜಿಸಿದಂತೆ ಬದುಕಿರುವ ಕಾನ್‌ಸ್ಟಿಟ್ಯೂಯೆಂಟ್ ಅಸೆಂಬ್ಲಿ ಸದಸ್ಯರ ಸಭೆಯಲ್ಲಿ ಹಾಜರಿದ್ದೆ. ಸುಮಾರು ೧೫ ಅಥವಾ ೧೬ ಜನರು ಭಾಗವಹಿಸಿದರು. ಬಲದೇವ್ ಸ್ವರೂಪ್ ಈ ಸಭೆಗೆ ಮುಖ್ಯವಾಗಿ ಜವಾಬ್ದಾರರು. ದಿವಾಕರ್, ಹಿಮ್ಮತ್ ಸಿನ್ಹಾ, ಮುಕುಟ್ ಬೆಹಾರಿಲಾಲ್, ನಾನು ಮತ್ತು ಇನ್ನು ಕೆಲವರು. ಏನು ಮಾಡಬೇಕೆಂಬುದರ ಬಗ್ಗೆ ಸಲಹೆ ನೀಡಲು ನಾನು ಪ್ರಮುಖ ಪಾತ್ರವನ್ನು ವಹಿಸಿದೆ. "ಡ್ರೀಂ ಮತ್ತು ರಿಯಾಲಿಟೀಸ್" ಎಂಬ ಸಂಘವೊಂದನ್ನು ರಚಿಸಲು ನಾವು ತೀರ್ಮಾನಿಸಿದೆವು. ದಿವಾಕರ್ ಹೇಗೋ ಅಧ್ಯಕ್ಷ

ಸ್ಥಾನಕ್ಕೆ ನುಸುಳಿಕೊಂಡರು. ಒಂದು ಕಾರ್ಯಕಾರಿ ಸಮಿತಿಯನ್ನು ರಚಿಸಲಾಯಿತು. ಈ ತಿಂಗಳ ೧೯ರಂದು ನಾವು ಪುನಃ ಸೇರುವುದೆಂದಾಯಿತು. ಅಲ್ಲಿ ಆರ್. ಗೊಯೆಂಕಾರ ಜೊತೆಯಲ್ಲಿ ಮಾತ್ರ ಮಧ್ಯಾಹ್ನದ ಊಟ ಮಾಡಿದೆ. ಅಷ್ಟು ದೂರದಿಂದ ನನ್ನೊಟ್ಟಿಗೆ ಅಂಜನರೆಡ್ಡಿ ಬಂದಿದ್ದುದರಿಂದ ಎಲ್ಲಾ ಎಕ್ಸ್‌ಟ್ರೂಶನ್ ಪ್ಲಾಂಟ್ ಬಗ್ಗೆ ಬಿಜು ಪಟ್ನಾಯಿಕ್‌ರನ್ನು ಭೇಟಿ ಮಾಡಿದೆ. ಸಂಜೆ ೪ ಗಂಟೆಗೆ ಚರಣ್‌ಸಿಂಗರನ್ನು ಅರ್ಧ ಗಂಟೆ ಭೇಟಿ ಮಾಡಿದೆ. ಇವರಿನ್ನೂ ಬಹುಗುಣ ಮತ್ತು ಜಗಜೀವನರಾಮ್ ಬಗ್ಗೆ ಕಹಿಯಾಗಿದ್ದು, ಪ್ರಧಾನಿ ಮತ್ತು ಚಂದ್ರಶೇಖರ್ ಬಗ್ಗೆ ಅಸಂತುಷ್ಟರಾಗಿದ್ದಾರೆ. ದೂರದೃಷ್ಟಿಯಿಲ್ಲದ ಬಿಗಿಯಾದ ಮನುಷ್ಯ. ಆದರೆ ಉದ್ದೇಶಪೂರ್ವಕರಾದವರು. ಆಯೋಗದ ನಿಧಾನ ಮತ್ತು ನಿವೇದಿಸುವಾಗ ಸರಿಯಾಗಿ ನಡೆಸದಿರುವುದರ ಬಗ್ಗೆ ಕೆಲವು ಸದಸ್ಯರುಗಳ ಅಭಿಪ್ರಾಯವನ್ನು ಅವರಿಗೆ ಹೇಳಲೇಬೇಕಾಯಿತು. ನಾನು ಅಲ್ಲಿರುವಾಗಲೇ ವೀರೇಂದ್ರ ಪಾಟೀಲ್ ಮತ್ತು ಕಂಪೆನಿ ನನ್ನನ್ನು ಕಾಣಲು ಕಾಯುತ್ತಿದ್ದರು. ವರ್ಮಾ ಬಂದು ಸರ್ಕಾರ ಮತ್ತು ಸಂಸ್ಥೆಗೆ ಸಂಬಂಧಿಸಿದಂತೆ ವಿಷಯಗಳನ್ನು ಚರ್ಚೆ ಮಾಡುತ್ತಾ ಒಂದು ಗಂಟೆ ಕಳೆದರು. ನಾಳೆ ಮಧ್ಯಾಹ್ನ ೧ ಗಂಟೆಗೆ ಊಟಕ್ಕೆ ರಾಷ್ಟ್ರಾಧ್ಯಕ್ಷ ಸಂಜೀವರೆಡ್ಡಿಯವರಿಂದ ಆಹ್ವಾನ ಬಂತು.

**ಏಪ್ರಿಲ್ ೭, ೧೯೭೮** **ಚಿತ್ರದುರ್ಗ**

ಪಕ್ಷದ ಬಗ್ಗೆ ಅದರ ವಿಫಲತೆ ಮತ್ತು ಕೊರತೆಗಳ ಬಗ್ಗೆ ಮತ್ತು ಸಂಸ್ಥೆಯ ಅಂಗರಚನೆಯನ್ನು ಉತ್ತಮಗೊಳಿಸುವುದರಿಂದ ಅದು ತಾನೇ ಹೇಗೆ ಬೆಳೆಯಬಹುದು ಮತ್ತು ಭ್ರಷ್ಟ ಸದಸ್ಯರ, ಅಧಿಕಾರಿಗಳ ಮತ್ತು ಸಾರ್ವಜನಿಕರ ಶಿಕ್ಷಣದ ಬಗ್ಗೆ ಸರಕಾರವು ಸಕ್ರಿಯ ಕ್ರಮಗಳನ್ನು ತೆಗೆದುಕೊಳ್ಳುವುದರ ಬಗ್ಗೆ ನನ್ನ ಅಭಿಪ್ರಾಯ ಮತ್ತು ಭಾವನೆಗಳನ್ನು ವಿವರಿಸುತ್ತಾ ಜನತಾ ಅಧ್ಯಕ್ಷ ಚಂದ್ರಶೇಖರ್‌ರವರಿಗೆ ದೀರ್ಘವಾದ ಕಾಗದವನ್ನು ಬರೆಯುತ್ತಿದ್ದೇನೆ. ಅಭ್ಯರ್ಥಿಗಳನ್ನು ಆಯ್ಕೆ ಮಾಡುವುದರಲ್ಲಿ ಮತ್ತು ಪಕ್ಷಾಂತರಿ ಮತ್ತು ಅಸತ್ಯ ಸಂಧರನ್ನು ಪ್ರೋತ್ಸಾಹಿಸುವುದರಲ್ಲಿ ಪಕ್ಷದ ನಡತೆಯ ಬಗ್ಗೆ ನಾನು ತುಂಬಾ ತೀಕ್ಷ್ಣವಾಗಿ ಟೀಕೆ ಮಾಡಬೇಕೆಂದಿದ್ದೇನೆ. ಪ್ರಧಾನಮಂತ್ರಿ ಚರಣ್‌ಸಿಂಗ್, ಜಗಜೀವನರಾಂ ಮತ್ತು ವಾಜಪೇಯಿಗೆ ಈ ಪತ್ರದ ಪ್ರತಿಗಳನ್ನು ಕಳುಹಿಸಬೇಕು. ನನ್ನ ಅಭಿಪ್ರಾಯಗಳಿಗೆ ಅವರು ಪ್ರತಿಕ್ರಿಯಿಸಬೇಕೆಂದು ಹೇಳುತ್ತೇನೆ. ಚಂದ್ರಶೇಖರ್‌ರಿಂದ ನಾನು ಹೆಚ್ಚೇನೂ ನಿರೀಕ್ಷಿಸುವುದಿಲ್ಲ. ಏಕೆಂದರೆ ಈಗ ಮಾರ್ಗದರ್ಶನ ನೀಡುವಷ್ಟು ಸಂಸ್ಥೆಯನ್ನು ಕಟ್ಟಲು ಅಥವಾ ದೊಡ್ಡ ಸಂಸ್ಥೆಗೆ ದಾರಿ ತೋರಲು ಇನ್ನೂ ಅವರು ಪಕ್ವವಾಗಿಲ್ಲ. ಅವರಿಗೆ ಅನುಭವವಿಲ್ಲ ಮತ್ತು ದಕ್ಷತೆಯೂ ಇಲ್ಲವೆಂದು ಕಾಣುತ್ತದೆ. ನಾನು ಕೇಳಿದಂತೆ ಆತ ಇನ್ನೂ ಸೋಷಿಯಲಿಸ್ಟ್ ಪಕ್ಷದವರೆಂದು ಭಾವಿಸಿದಂತಿದೆ.

ರಾತ್ರಿ ೧೦ ಗಂಟೆಗೆ ರಾಜ ಬೆಂಗಳೂರಿಂದ ಬಂದು ಮುಖ್ಯಮಂತ್ರಿಯವರು ಸಂದರ್ಶನವನ್ನು ಕೊಟ್ಟಿದ್ದರು ಮತ್ತು ಬೇಗನೆ ಪರಿಗಣಿಸುವುದಾಗಿ ಭರವಸೆ ನೀಡಿದರೆಂದು ಹೇಳಿದನು. ಸಂಜಯ್‌ನನ್ನು ಜೊತೆಯಲ್ಲಿ ಕರೆತಂದನು. ಇಲ್ಲಿ ನಮ್ಮೊಡನಿರಲು ಅವನಿಗೆ ಸಂತೋಷ. ಅವನ ಸಹೋದರಿ ಸುಮನ್ ಆಗಲೇ ಇಲ್ಲಿದ್ದಾಳೆ.

**ಏಪ್ರಿಲ್ ೨೨, ೧೯೭೮ ನವದೆಹಲಿ, ಚರಣ್‌ಸಿಂಗ್ ಡಾ. ಮತ್ತು ಶ್ರೀಮತಿ ಚೋಪ್ರಾ ಮಧ್ಯಾಹ್ನದ ಊಟ ಕಮಲಾದೇವಿ ಬಲದೇವ್ ಸ್ವರೂಪ್**

ಬೆಳಿಗ್ಗೆ ಬೇಗನೆ ೭-೩೦ಕ್ಕೆ ಚರಣ್‌ಸಿಂಗ್‌ರ ಮನೆಗೆ ಹೋದೆ. ಅರ್ಧ ಗಂಟೆಗಿಂತ ಹೆಚ್ಚಾಗಿ ಮಾತನಾಡಿದೆವು. ಅವರ ದೂರುಗಳು ಮುಂದುವರಿಯುತ್ತಲೇ ಇವೆ. ಆದರೆ ನಾನೇ ಹೆಚ್ಚಾಗಿ ಮಾತನಾಡಿದೆ. ಈ ಸಲ ಅವರು ಅನುಮಾನಿತರಾಗಿರುವುದನ್ನು ನಾನು ಕಂಡೆ. ಅವರು ಜಗಜೀವನರಾಮ್ ವಿರುದ್ಧ ಕತ್ತಿ ಹಿಡಿದು ನಿಂತಿದ್ದಾರೆ. ಪ್ರಧಾನಿಯ ಬಗ್ಗೆ ಕೆಳಮಟ್ಟದಲ್ಲಿ ನೋಡುತ್ತಿದ್ದಾರೆ. ಡಾ. ಮತ್ತು ಶ್ರೀಮತಿ ಚೋಪ್ರಾ ಬೆಳಗಿನ ಉಪಾಹಾರಕ್ಕೆ ಬಂದರು. ಪ್ರಸಕ್ತ ಪರಿಸ್ಥಿತಿಯ ಬಗ್ಗೆ ಅವರಿಗೆ ತಮ್ಮ ಮಗ ಶಿವರಾಮ್ ಬಗ್ಗೆ ಪ್ರೀತಿ ಇರುವುದು ಸ್ಪಷ್ಟವಾಗಿತ್ತು. ಮಗ ಮತ್ತು ಸೊಸೆ ಬಗ್ಗೆ ಪ್ರೀತಿಯಿಂದಿರುವರೆಂದು ಕಾಣುತ್ತದೆ. ಸುಲಭವಾಗಿ ಮೋಸಕ್ಕೆ ಒಳಗಾಗುವ ಪ್ರೀತಿಯ ತಂದೆ. ಹಾಗೆಂದು ನಾನು ಅವರಿಗೆ ಹೇಳಲಿಲ್ಲ. ಇಂಟರ್‌ನ್ಯಾಷನಲ್ ಸೆಂಟರ್‌ನಲ್ಲಿ ಕಮಲಾದೇವಿ ಜೊತೆಯಲ್ಲಿ ಮಧ್ಯಾಹ್ನದ ಊಟ ಮಾಡಿದೆ. ಸಾಯಂಕಾಲ ಬಲದೇವ್ ಸ್ವರೂಪ ಸಫ್ದರ್‌ಜಂಗ್ ಆಸ್ಪತ್ರೆಯಲ್ಲಿರುವುದನ್ನು ತಿಳಿದು ಆರ್.ಎಸ್. ಗೊಯೆಂಕಾರವರನ್ನು ಬರಲು ಹೇಳಿದೆ. ನಂತರ ಅವರ ಜೊತೆಯಲ್ಲಿ ಆಸ್ಪತ್ರೆಗೆ ಹೋಗಿ ಅವರನ್ನು ಸಂದರ್ಶಿಸಿದೆ. ದುರ್ಬಲರಾಗಿ ಇಳಿದು ಹೋಗಿದ್ದರೂ ಈ ಮುದುಕರು ಮಾಜಿ ಕಾಂಗ್ರೆಸ್‌ನ ಸದಸ್ಯರು ಮತ್ತು ಡಾಕ್ಟರ ಬಗ್ಗೆ ಮಾತ್ರ ಪ್ರಶ್ನಿಸಿದರು. ಹೊಟ್ಟೆ ಸರಿಯಿಲ್ಲ. ಆದ್ದರಿಂದ ಒಂದು ಗ್ಲಾಸ್ ಲಸ್ಸಿ ಕುಡಿದೆ. ಸಾಯಂಕಾಲ ಜಗಜೀವನರಾಮ್‌ರಲ್ಲಿಗೆ ಹೋಗಿ ಅರ್ಧ ಗಂಟೆ ಕಳೆದೆ. ಅತ್ಯಂತ ಚಾಣಾಕ್ಷ ಮತ್ತು ಅತ್ಯಂತ ಸರಳವಾದ ಮನುಷ್ಯನಾದರೂ ಮೆಚ್ಚುವ ನಡತೆಯವರಲ್ಲ. ರಾಜಕೀಯ ಪರಿಸ್ಥಿತಿಯನ್ನು ಚರ್ಚಿಸಿದೆವು.

**ಮೇ ೧೪, ೧೯೭೮ ಚಿತ್ರದುರ್ಗ**

ದೆಹಲಿಯಲ್ಲಿ ಜನತಾ ನಾಯಕತ್ವದ ಬಗ್ಗೆ ಎರಡು ತಿಂಗಳಿಂದ ತುಂಬಾ ಪತ್ರಿಕೆ ಪ್ರಚಾರವಿದೆ. ಇಡೀ ವಿಷಯ ಕ್ಷುಲ್ಲಕವೆಂದು ಕಾಣಿಸುತ್ತದೆ. ಏಕೆಂದರೆ ಮೇಲಿನ ಮೂರು ಜನರಲ್ಲಿ ಮೊರಾರ್ಜಿ, ಜಗಜೀವನರಾಮ್ ಮತ್ತು ಚರಣಸಿಂಗರಲ್ಲಿ ತತ್ವ, ನೀತಿ ಮತ್ತು ಕಾರ್ಯಕ್ರಮಗಳ ಬಗ್ಗೆ ಅಂತಹ ವ್ಯತ್ಯಾಸವೇನೂ ಕಾಣುವುದಿಲ್ಲ. ಇಡೀ ವಿಷಯವು ವಿಶೇಷವಾಗಿ ರಾಂ ಮತ್ತು ಸಿಂಗರ ನಡುವೆ ವೈಯಕ್ತಿಕ ವ್ಯತ್ಯಾಸಗಳ ನಡುವೆ ಸುತ್ತಾಡುತ್ತಿದೆ. ಇಬ್ಬರಿಗೂ ಅವಶ್ಯಕವಾಗಿ ಪ್ರಧಾನಿಯಾಗಬೇಕೆಂಬುದಿದೆ. ಮೊರಾರ್ಜಿಗೆ ಅರ್ಹತೆಯಿತ್ತು.

ಅವರೇ ಪ್ರಧಾನಿಯಾಗಬೇಕೆಂದು ಕೃಪಲಾನಿ ಮತ್ತು ಜೆ.ಪಿ. ಸರಿಯಾಗಿ ನಿರ್ಧರಿಸಿದ್ದಾರೆ. ಇಬ್ಬರಲ್ಲಿ ಒಬ್ಬರ ಸತ್ಯಸಂಧತೆಯನ್ನು ಅವರ ಚೇಲ ಬಹುಗುಣರ ಜೊತೆಯಲ್ಲಿ ಪ್ರಶ್ನಿಸಲಾಗಿದೆ. ಇನ್ನೊಬ್ಬ, ಸಿಂಗರು ತುಂಬಾ ಜಾತಿವಾದಿ, ಮಹತ್ವಾಕಾಂಕ್ಷೆಯುಳ್ಳವರು ಮತ್ತು ಜಗಳಗಂಟ. ಉತ್ತಮವಾದುದೇನೆಂದರೆ ಅವರಿಬ್ಬರೂ ಆಚೆಗೆ ಹೋಗುವುದಾದರೆ ಹಳೆಯ ಪಕ್ಷದ ಸಂಯೋಜನೆಯು ಮುಂದುವರಿಯುತ್ತದೆ. ಶಾಸಕರ ಸಾಮಾನ್ಯ ನಡತೆಯು ಬಹಳ ಕೆಳಮಟ್ಟದ್ದು ಮತ್ತು ಸ್ವಯಂಕೇಂದ್ರಿತವಾದದ್ದು.

**ಜುಲೈ ೪, ೧೯೭೮ ಚಿತ್ರದುರ್ಗ**

ಬೆಳವಣಿಗೆಗಳ ಬಗ್ಗೆ ನನಗೆ ಸಂತೋಷವಿಲ್ಲ. ನಿರೀಕ್ಷಿಸಿದಂತೆ ಹರ್ಯಾನದ ಜನತಾ ಪಾರ್ಟಿಯಲ್ಲಿ ಬಿಸಿಯೇರುತ್ತಿದೆ. ಇದು ಕೆಟ್ಟದ್ದು. ಆದರೆ ದೇವಿಲಾಲ್ ಒರಟ ಯಾವುದಕ್ಕೂ ಸಿದ್ಧವಾಗಿರುವುದರಿಂದ ತೊಂದರೆ ಮಾಡಬಹುದು. ಇವತ್ತಿನ ರಾತ್ರಿ ರೇಡಿಯೋದಲ್ಲಿ ಪ್ರಕಟಿಸಿದುದೇನೆಂದರೆ ದೇವಿಲಾಲರನ್ನು ಮುಖ್ಯಮಂತ್ರಿ ಪದವಿಯಿಂದ ಕೆಳಗಿಳಿಯಲು ಹೇಳಲಾಗಿದೆ. ಏಕೆಂದರೆ ಅವರು ಮಾಡಿದ ಟೀಕೆಗಳನ್ನು ಹಿಂತೆಗೆದುಕೊಳ್ಳಲು ನಿರಾಕರಿಸಿದುದು. ಚರಣ್‌ಸಿಂಗ್ ಪರವಾಗಿದ್ದ ರ್‍ಯಾಲಿಯಿಂದ ದೂರವಿರಲು ನಿರಾಕರಿಸಿದುದು. ಈ ರ್‍ಯಾಲಿಯು ತುಂಬಾ ತಪ್ಪು ಮತ್ತು ಚರಣ್‌ಸಿಂಗ್ ಅದಕ್ಕೆ ಒಪ್ಪಿಗೆ ಕೊಡಬಾರದಾಗಿತ್ತು. ಅವರ ಬಗ್ಗೆ ಪ್ರತಿಯೊಬ್ಬರಿಗೂ ಗೊತ್ತಿರುವ ಹಾಗೆ ಅವರೇ ಅದನ್ನು ಪ್ರಚೋದಿಸಿ ಉತ್ತೇಜಿಸಿರಬೇಕು ಎಂಬುದು ನನ್ನ ಭಯ. ಪ್ರತಿಯೊಬ್ಬರಿಗೂ ಮತ್ತು ಪಕ್ಷಕ್ಕೂ ಇದೊಂದು ಪರೀಕ್ಷೆಯ ಕಾಲ. ಕಿರಿದಾದ ಸ್ವಾರ್ಥ, ನಿಷ್ಠೆ ಮತ್ತು ಹಿತಾಸಕ್ತಿಗಳಿಗೆ ಬದಲು ಪಕ್ಷದ ಗಣನೆಯಲ್ಲಿ ಸದಸ್ಯರ ಸಾಮಾನ್ಯ ಅಭಿಪ್ರಾಯ ಉಳಿಯುತ್ತದೆ ಎಂದು ನಾನು ಹಾರೈಸುತ್ತೇನೆ. ಅವರೇ ಪಕ್ಷ ಮತ್ತು ದೇಶವನ್ನು ಉಳಿಸಬಲ್ಲರು. ಈಗಿನ ನಾಯಕರು ಅಸಮರ್ಥರೆಂದು ಕಾಣುತ್ತದೆ. ಬಿಹಾರದ ಮುಖ್ಯಮಂತ್ರಿಗೆ ಕೃಪಲಾನಿ ಮತ್ತು ಜೆಪಿ ಮಧ್ಯೆ ಪ್ರವೇಶಿಸಿ ಮಧ್ಯಸ್ಥಿಕೆ ಮಾಡಲಿ ಎಂದಿದೆ. ಇದು ಒಂದು ಸಭ್ಯವಾದ ಸಲಹೆಯಲ್ಲ. ಏಕೆಂದರೆ ಇಬ್ಬರಿಗೂ ಎರಡೂ ಕಡೆಯಲ್ಲಿನ ನಾಯಕರ ವರ್ತನೆಯಿಂದ ಜುಗುಪ್ಸೆ ಬಂದಿರಬೇಕು.

**ಜುಲೈ ೨೪, ೧೯೭೮ ದೆಹಲಿ-ಬೆಂಗಳೂರು**

ಇತ್ತೀಚಿನ ಬೆಳವಣಿಗೆಗಳ ಬಗ್ಗೆ ಜಗಜೀವನ್‌ರಾಂ, ಫರ್ನಾಂಡಿಸ್, ವಾಜಪೇಯಿ ಮತ್ತು ಇತರರು ತುಂಬಾ ಕೆಲಸದಲ್ಲಿದ್ದುದರಿಂದ ಅವರು ಸಿಗಲಿಲ್ಲ. ಅವರು ಯಾರನ್ನೂ ಭೇಟಿ ಮಾಡಲು ಪ್ರಯತ್ನಿಸಲಿಲ್ಲ. ಶಾಂತವಾಗಿ ಬೆಳಿಗ್ಗೆಯನ್ನು ಕಳೆದೆ. ಆದರೆ ಪಂಜಾಬಿನ ಮಾಜಿ ಮುಖ್ಯಮಂತ್ರಿ ರಾಂಕಿಷನ್ ನನ್ನ ಜೊತೆಯಲ್ಲಿ ಒಂದು ಗಂಟೆ ಕಳೆದರು. ಆಗ ಜನತಾ ಮತ್ತು ಅದು ಹೇಗೆ ಸಾಮಾನ್ಯ ಮನುಷ್ಯರ ಹೆಚ್ಚಿನ ನಿರೀಕ್ಷೆಗಳನ್ನು ತೃಪ್ತಿಪಡಿಸುವುದರಲ್ಲಿ ವಿಫಲವಾಗಿದೆ ಎಂಬುದನ್ನು ಚರ್ಚಿಸಿದರು. ಅವರು ದೆಹಲಿಯ

ಸಮೀಪ ಒಬ್ಬ ರೈತರಾಗಿದ್ದಾರೆ. ನನಗೆ ತಿಳಿದ ಹಾಗೆ ಅತ್ಯಂತ ಸತ್ಯಸಂಧರೂ ಮತ್ತು ಶುದ್ಧ ಮುಖ್ಯಮಂತ್ರಿಗಳಲ್ಲೊಬ್ಬರಾದ ಡಾ. ರಾಂ ಸುಭಾಗ್‌ಸಿಂಗ್ ಬಂದರು. ಜನತಾ ಮತ್ತು ಇಂದಿರಾ ಆಳ್ವಿಕೆ ಬಗ್ಗೆ ಅಸಂತುಷ್ಟರಾಗಿದ್ದಾರೆ. ಅವರಿಗೆ ಇವರಿಬ್ಬರಲ್ಲೂ ಅಂತಹ ವ್ಯತ್ಯಾಸವೇನೂ ಕಾಣುತ್ತಿಲ್ಲ. ಖಂಡಿತವಾಗಿ ಯಾರೂ ಸಂತೋಷವಾಗಿಲ್ಲ. ಭಾರತದಲ್ಲಿ ಯಾರೂ ಸಂತೋಷವಾಗಿರಬಹುದು. ಏಕೆಂದರೆ ಜನತಾ ಪಕ್ಷದ ಬೆಳವಣಿಗೆಗಳಿಂದಾಗಿ ಅದು ಒಡೆದುಹೋಗುತ್ತದೆ ಮತ್ತು ಆಕೆ ಹಂಬಲಿಸುತ್ತಿರುವ ಅಧಿಕಾರಕ್ಕೆ ತಿರುಗಿಬರಬಹುದೆಂದು ಆಕೆ ಯೋಚಿಸುತ್ತಾರೆ. ದೇವರು ಹಾಗೆ ಮಾಡದಿರಲಿ. ಈ ಸರಕಾರವು ಯಾವುದೇ ಕಾರಣಗಳಿಗೆ ಒಡೆದುಹೋದರೆ ಗೊಂದಲವಿದ್ದು ದಂಗೆಯಾಗಬಹುದು ಎಂಬುದು ನನ್ನ ಭಾವನೆ. ಮೊರಾರ್ಜಿ ಮತ್ತು ಇತರರಿಗೆ ಇದರ ಬಗ್ಗೆ ಎಚ್ಚರಿಕೆ ನೀಡಿದ್ದೇನೆ.

ದೆಹಲಿ ವಿಮಾನ ನಿಲ್ದಾಣವನ್ನು ಮಧ್ಯಾಹ್ನ ೪ ಗಂಟೆಗೆ ಬಿಟ್ಟು ಬೆಂಗಳೂರನ್ನು ರಾತ್ರಿ ೭ ಗಂಟೆಗೆ ತಲುಪಿದೆ. ಎಂದಿನಂತೆ ನಾಥ್ ಹಾರಾಟವನ್ನು ಮತ್ತು ಭೇಟಿ ಮುಂತಾದವನ್ನು ವ್ಯವಸ್ಥೆಗೊಳಿಸುವುದರಲ್ಲಿ ಉಪಯುಕ್ತವಾಗಿದ್ದರು. ಸುಂದರರಾಮಶೆಟ್ಟಿ, ವರದನ್ ಅವರ ಹೆಂಡತಿ ಕೋಮಲ ಅವರ ಮಗನನ್ನು ಮಧ್ಯಾಹ್ನದ ಊಟದಲ್ಲಿ ಭೇಟಿ ಮಾಡಿದೆ. ಬೆಳಗಿನ ಉಪಾಹಾರಕ್ಕೆ ಡಾ. ಮತ್ತು ಶ್ರೀಮತಿ ಚೋಪ್ರಾರವರಿದ್ದರು. ಅವರಿಗೆ ಹೇಳುವುದು ಬೇಕಾದಷ್ಟಿದ್ದಿತು.

**ಸೆಪ್ಟೆಂಬರ್ ೧೫, ೧೯೭೮ ದೆಹಲಿ-ಮೊರಾರ್ಜಿಭಾಯಿ ಬೆಳಿಗ್ಗೆ ೭ ಗಂಟೆ**

ನಾನು ನೋಡಬೇಕೆಂದಿದ್ದ ಅನೇಕ ಮಂತ್ರಿಗಳು ದೆಹಲಿಯಿಂದ ಹೊರಗಿದ್ದಾರೆ, ನಾನು ಇತರರನ್ನು ನೋಡಲಿಚ್ಛಿಸುವುದಿಲ್ಲ. ಅವರ ಹತ್ತಿರ ರಾಜಕೀಯ ಪರಿಸ್ಥಿತಿಯನ್ನು ಚರ್ಚಿಸಲು ನಾನು ಇಷ್ಟಪಡಲಿಲ್ಲ. ನನಗೆ ತಿಳಿದಂತೆ ಅದು ಏನೂ ಪ್ರಯೋಜನವಿಲ್ಲ ಹಾಗೂ ಯಾವ ಉದ್ದೇಶವನ್ನೂ ಸಾಧಿಸುವುದಿಲ್ಲ. ಪರಿಸ್ಥಿತಿಯು ತನ್ನಷ್ಟಕ್ಕೆ ತಾನೆ ಸರಿಯಾಗಬೇಕು. ಮೊರಾರ್ಜಿಯವರನ್ನು ಕಾಣಲು ಬೆಳಿಗ್ಗೆ ಏಳು ಗಂಟೆಗೆ ಹೋಗಿ ಅರ್ಧ ಗಂಟೆ ಕಳೆದೆ. ವಿಜಯ ಮತ್ತು ಫೆಡರಲ್ ಬ್ಯಾಂಕುಗಳ ಚೇರ್ಮನ್‌ಗಿರಿಯ ಬಗ್ಗೆ ಅವರಲ್ಲಿ ಮಾತಾಡಿದೆ. ವಿಜಯಾ ಬ್ಯಾಂಕಿನ ಸುಂದರರಾಮ ಶೆಟ್ಟಿಯ ಬಗ್ಗೆ ಅವರು ತಣ್ಣಗಿದ್ದರು. ಪಂಜಾಬ್ ಮತ್ತು ಸಿಂಧ್ ಬ್ಯಾಂಕಿನ ಇಂದರ್‌ಜೀತ್‌ನ ಬಗ್ಗೆ ಅವರ ಅವಧಿಯನ್ನು ೬೮ ವರ್ಷಕ್ಕೆ ವಿಸ್ತರಿಸಿದುದನ್ನು ಹೇಳಿದಾಗ ಅವರು ತಬ್ಬಿಬ್ಬಾಗಿ ತಮಗೆ ಗೊತ್ತಿಲ್ಲವೆಂದರು. ಕಾಂತಿ ಇದನ್ನೆಲ್ಲಾ ಮಾಡಲು ಸಮರ್ಥರಾಗಿದ್ದಾರೆ. ಜೊತೆಗೆ ಮಗನ ಅಭಿಪ್ರಾಯವನ್ನು ನಿರ್ಲಕ್ಷಿಸುವಷ್ಟು ಸಾಮರ್ಥ್ಯ ತಂದೆಗಿಲ್ಲ. ಇದು ನನಗೆ ಯಾರೋ ಹೇಳಿದ್ದು. ಬಡ ಮತ್ತು ಸೀಮಾ ಅಂಚಿನ ರೈತರಿಗೆ ತುಂಬಾ ತಾಂತ್ರಿಕತೆಗಳಿಲ್ಲದೆ ತಡಮಾಡದೆ ಸಾಲ ದೊರೆಯುವುದರ ಬಗ್ಗೆ ಮೊರಾರ್ಜಿಯು ಅನುಕಂಪ ಹೊಂದಿರಲಿಲ್ಲ.

ಬೀದಿ ಹಾದೀಲಿ ಹೋಗುವವರಿಗೆಲ್ಲ ನಾವು ಸಾಲು ಕೊಡುವುದೇ ಎಂದು ತೀಕ್ಷ್ಣವಾಗಿ ಪ್ರತಿಕ್ರಿಯಿಸಿದರು. ನಾನೂ ಕಟುವಾಗಿಯೇ ಹೇಳಿದೆ. ಹಳ್ಳಿಯ ಆರೋಗ್ಯ ಮತ್ತು ಕಕ್ಕಸುಗಳ ಬಗ್ಗೆ ಹೇಳಿದಾಗ ದುಡ್ಡು ಎಲ್ಲಿಂದ ತರಲಿ ? ಎಂದು ವಾದಿಸಿದರು. ರಾಸಾಯನಿಕ ಗೊಬ್ಬರಗಳಿಗೆ ಎಲ್ಲಿಂದ ದುಡ್ಡು ತರುತ್ತೀರಿ ಎಂದು ಕೇಳಿದ್ದಕ್ಕೆ ಅವು ಲಾಭ ಕೊಡುತ್ತವೆ ಎಂದರು. ಇವೂ ಆರೋಗ್ಯ, ಸಂಸ್ಕೃತಿ ಮುಂತಾದವುಗಳಲ್ಲಿ ಉತ್ತಮ ಲಾಭವನ್ನು ಕೊಡುತ್ತವೆ ಎಂದು ನಾನು ಹೇಳಿದೆ. ಅವರ ಪ್ರತಿಕ್ರಿಯೆಯಿಂದ ನನಗೆ ಸಂತೋಷವಾಗಲಿಲ್ಲ. ಇವರು ಗಾಂಧಿ ತತ್ವ ಮಾತಾಡುತ್ತಾರೆ. ಎಂಥ ವಿಪರ್ಯಾಸ.

**ನವೆಂಬರ್ ೮, ೧೯೭೮ ಇಂದಿರಾಗಾಂಧಿ ಗೆದ್ದರು**

ನಿರೀಕ್ಷಿಸಿದಂತೆ ಚಿಕ್ಕಮಗಳೂರು ಲೋಕಸಭೆಯ ಉಪಚುನಾವಣೆಯ ಫಲಿತಾಂಶದಲ್ಲಿ ನೆನ್ನೆ ರಾತ್ರಿಯ ಭಾಗಶಃ ಎಣಿಕೆಯಲ್ಲಿ ಇಂದಿರಾ ಗಾಂಧಿ ಸುಮಾರು ೭೦,೦೦೦ ಮತಗಳಿಂದ ಮುಂದಿದ್ದಾರೆ ಎಂದು ಬೆಳಗಿನ ವೃತ್ತಪತ್ರಿಕೆಗಳು ಮತ್ತು ರೇಡಿಯೋ ಪ್ರಸಾರ ಮಾಡಿದವು. ಆಕೆಯು ಗೆದ್ದರು ಎಂಬುದು ಸ್ಪಷ್ಟವಾಗಿತ್ತು. ನಮ್ಮ ಅಭ್ಯರ್ಥಿಗೆ ಮಾಡಿದ ಕೆಲಸವನ್ನು ನೋಡಿದರೆ ಆಕೆ ಗೆಲ್ಲವುದು ಏನೂ ಆಶ್ಚರ್ಯವಿರಲಿಲ್ಲ. ಸ್ಪಷ್ಟವಾಗಿ ಹಣ ಮತ್ತು ಭ್ರಷ್ಟಾಚಾರ ತಮ್ಮ ಆಟವನ್ನು ಆಡಿದವು. ಮಧ್ಯಾಹ್ನ ೧ ಗಂಟೆಗೆ ಆಕೆಯು ೭೭ ಸಾವಿರಕ್ಕೂ ಹೆಚ್ಚು ಮತಗಳಿಂದ ಗೆದ್ದಿದ್ದಾರೆಂದು ತಿಳಿದುಬಂತು. ವೀರೇಂದ್ರ ಪಾಟೀಲರಿಗೆ ೧,೭೨,೦೦೦ ಮತಗಳು ಮಾತ್ರ ಬಂದಿದ್ದವು. ಇದು ಕೆಟ್ಟದು. ಖಂಡಿತವಾಗಿ ಹರಿಜನರು, ಮುಸ್ಲಿಮರು ಮತ್ತು ಹೆಚ್ಚಿನ ಸಂಖ್ಯೆಯ ಕುರುಬರು ನಮಗೆ ಮತ ಹಾಕಿಲ್ಲ. ಬಹಳ ನಿರಾಶಾದಾಯಕ. ಸಾಮಾನ್ಯ ಮತದಾರರನ್ನು ನಮ್ಮ ಸಂಸ್ಥೆಯು ಸಂಪರ್ಕಿಸಲು ನಾವು ಆತನಿಗೆ ಹೆಚ್ಚೇನೂ ಮಾಡಿಲ್ಲ ಎಂದು ಸಾಬೀತಾಗಿದೆ.

ಪತ್ರಿಕಾ ಹೇಳಿಕೆಯನ್ನು ನೀಡಿ ಅದರಲ್ಲಿ ಇಂದಿರಾರ ಜಯವು ಮುಖ್ಯವಾಗಿ ಹಣ ಮತ್ತು ಭ್ರಷ್ಟಾಚಾರದಿಂದ ಆಗಿದೆ. ಅದು ಯಾವುದೇ ಪಕ್ಷ ಅಥವಾ ಯಾರಿಗೇ ಆಗಲಿ ಯಾವ ವಿಧದಲ್ಲಿಯೂ ಪರಿಣಾಮ ಬೀರುವುದಿಲ್ಲ ಎಂದು ಹೇಳಿದೆ.

**ನವೆಂಬರ್ ೨೯, ೧೯೭೮ ಚಿತ್ರದುರ್ಗ**

ನೆನ್ನೆ ದಿನ ಬೆಳಿಗ್ಗೆಯ ಸಮಾಚಾರವೇನೂ ಕೆಟ್ಟದಲ್ಲ. ಸಮಸ್ತಿಪುರದ ಫಲಿತಾಂಶಗಳ ಬಗ್ಗೆ ನೆನ್ನೆ ಸಂಜೆ ತಾರಕೇಶ್ವರಿ ಸಿನ್ಹಾ ಕೆಲವು ನೂರು ಮತಗಳಿಂದ ಮುಂದಿದ್ದರೂ ಸಾಯಂಕಾಲದ ಹೊತ್ತಿಗೆ ಜನತಾ ಅಭ್ಯರ್ಥಿಯು ಗೆದ್ದಿರುವುದು ಖಚಿತವಾಯಿತು. ಆದರೆ ಅಂತರ ಕಡಿಮೆ, ೨೦,೦೦೦ ಮತಗಳು ಮಾತ್ರ. ಫಲಿತಾಂಶವು ಸ್ವಾಗತಾರ್ಹ. ಜನತಾವು ಸಾಕಷ್ಟು ನೆಲೆಯನ್ನು ಕಳೆದುಕೊಳ್ಳುತ್ತಿದೆಂಬುದಕ್ಕೆ ಇದು ಒಂದು ಎಚ್ಚರಿಕೆ. ಒಂದು ಕಾರಣವೇನೆಂದರೆ ಜನರ ನಿರೀಕ್ಷೆಗಳನ್ನು ಪೂರೈಸಲು ಜನತಾ ಸರಕಾರವು

ಸಾಮಾನ್ಯವಾಗಿ ವಿಫಲವಾಗಿದೆ. ಕರ್ಪೂರಿ ಠಾಕೂರ್ ಸರ್ಕಾರದ ಇತ್ತೀಚಿನ ತಿಳಿಗೇಡಿತನದ ಆದೇಶ ಕಾರಣವಾಗಿದೆ. ಅದರಲ್ಲಿ ಹಿಂದುಳಿದವರು, ಹರಿಜನರು ಮುಂತಾದವರಿಗೆ ಸರಕಾರಿ ನೇಮಕಾತಿಯಲ್ಲಿ ಮೀಸಲಿಡುವುದಾಗಿದ್ದಿತು. ಜಾತಿ ಅಥವಾ ಪಂಗಡ ಆಧಾರದ ಮೇಲೆ ಹಿಂದುಳಿದಿರುವಿಕೆಯನ್ನು ನಿರ್ಧರಿಸುವುದರ ಬದಲು ಶುದ್ಧವಾಗಿ ಆರ್ಥಿಕ ಆಧಾರದ ಮೇಲೆ ನಿರ್ಧರಿಸುವುದಕ್ಕೆ ಕಾಲ ಮೀರಿ ಹೋಗಿದೆ. ಮೊರಾರ್ಜಿ ಮತ್ತು ಚಂದ್ರಶೇಖರ್ ಒಪ್ಪಲಿ ಬಿಡಲಿ ಅವರಿಗೆ ನನ್ನ ಭಾವನೆಗಳನ್ನು ಬರೆಯುವುದಕ್ಕೆ ಯೋಚಿಸುತ್ತಿದ್ದೇನೆ.

ಪತ್ರಿಕೆಗಳು ಜನತಾದ ವಿಜಯದಿಂದ ತುಂಬಿಹೋಗಿರುವುದು ಸ್ವಾಭಾವಿಕ ಮತ್ತು ಹೇಳಿಕೆಗಳು ಅಸಂಖ್ಯಾತವಾಗಿದೆ.

**ನವೆಂಬರ್ ೩೦, ೧೯೮೦**

ನನ್ನ ಹೆಂಡತಿಗೆ ನನ್ನ ೭೯ನೇ ಹುಟ್ಟುಹಬ್ಬವನ್ನು ಡಿಸೆಂಬರ್ ೧೦ರಂದು ಆಚರಿಸಬೇಕೆಂದಿದೆ. ಆಕೆಗೆ ತನ್ನ ಮಕ್ಕಳು, ಮೊಮ್ಮಕ್ಕಳು ಮತ್ತು ಸಮೀಪದ ಬಂಧುಗಳನ್ನು ಕರೆಯಲೇಬೇಕೆಂಬ ಆಸೆ. ಬೆಂಗಳೂರು ಮತ್ತು ಹುಬ್ಬಳ್ಳಿಯಲ್ಲಿರುವ ಅವರಿಗೆಲ್ಲಾ ಕಾಗದ ಬರೆಯಲು ರಾಜನಿಗೆ ಹೇಳಿದಳು. ಬಹಳ ಸರಳವಾಗಿ ಆಚರಿಸಬೇಕೆ ಹೊರತು ದುಂದು ವೆಚ್ಚ ಬೇಡವೆಂದೆ, ಒಪ್ಪಿಕೊಂಡಳು. ಮೊಮ್ಮಗ ವಿನಯ ಅವತ್ತಿರಲೇಬೇಕೆಂದು ಅವನಿಗೆ ಇಷ್ಟವಾದ ಸಿಹಿಯೊಂದು ಇರಬೇಕೆಂದೂ ಹೇಳಿದಳು. ತನ್ನ ಹೆಣ್ಣು ಮಕ್ಕಳಿಂದ ಒಟ್ಟು ೨೦ ಮೊಮ್ಮಕ್ಕಳಿದ್ದಾರೆ. ಆದರೆ ೨೧ನೆಯವನು ಮಗನ ಮಗನಾದುದರಿಂದ ಅವಳಿಗೆ ಪ್ರಿಯ. ಏಕೆಂದರೆ ತನ್ನ ಗಂಡನ ಏಕೈಕ ಗಂಡು ವಂಶಜ ಅವನು. ನಗು ಬರಿಸುತ್ತದೆ. ಇದರಿಂದ ಏನಾಗುತ್ತದೆ ?

ನಾನು ಈಗ ತುಂಬಾ ಓದುತ್ತಿದ್ದೇನೆ. ಪತ್ರ ವ್ಯವಹಾರವನ್ನು ಕ್ರಮವಾಗಿ ಮಾಡುತ್ತಿದ್ದೇನೆ. ಯಾವುದೇ ಲೇಖನ ಅಥವಾ ಉದ್ದವಾದ ಹೇಳಿಕೆಗಳನ್ನು ಬರೆಯಲಾಗುವುದಿಲ್ಲ. ಸುಸ್ತಾಗಿಬಿಡುತ್ತೆ, ಅವನ್ನು ಅರ್ಧಕ್ಕೇ ಬಿಡುವುದು ಅಥವಾ ಪೂರ್ಣ ಮಾಡುವ ಇಚ್ಛೆಯಿರುವುದಿಲ್ಲ. ಸ್ವಲ್ಪ ತೀವ್ರವಾಗಿ ನನ್ನ ಆತ್ಮಚರಿತ್ರೆಯನ್ನು ಬರೆಯಬೇಕು. ಅಲ್ಲದೆ ಆರ್ಥಿಕ ರಚನೆ ಮತ್ತು ರಾಜಕೀಯ ಮತ್ತು ಸಾಮಾಜಿಕ ಪ್ರಗತಿಯ ಬಗ್ಗೆ ನನ್ನ ನಿಲುವುಗಳನ್ನು ಕುರಿತು ಪುಸ್ತಕವನ್ನು ಮುಗಿಸಬೇಕು. ಸಾಯಂಕಾಲ ಕರ್ನಾಟಕ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶ ಜಸ್ಟಿಸ್ ಚಂದ್ರಶೇಖರರು ತಾವು ಬಂದು ಭೇಟಿ ಮಾಡುವುದಾಗಿ ಸಮಾಚಾರ ಕಳುಹಿಸಿದರು. ಹತ್ತು ನಿಮಿಷಗಳೊಳಗೆ ತಮ್ಮ ಹೆಂಡತಿಯೊಡನೆ ಬಂದು ಸುಮ್ಮನೆ ಹಲೋ ಎಂದು ಹೇಳಲು ೧೦ ನಿಮಿಷಗಳ ಕಾಲ ಕಳೆದರು. ಅವರು ನ್ಯಾಯಾಲಯದ ಒಂದು ಕಟ್ಟಡವನ್ನು ಉದ್ಘಾಟಿಸಿದ ನಂತರ ಬಳ್ಳಾರಿಯ ಕೂಡ್ಲಿಗಿ(?)

ಯಿಂದ ಬೆಂಗಳೂರಿಗೆ ಹೋಗುವ ಮಾರ್ಗದಲ್ಲಿ ನನ್ನನ್ನೂ ಭೇಟಿಯಾದರು. ನಾನು ಬೆಂಗಳೂರಿನಲ್ಲಿರುವಾಗ ನನ್ನನ್ನು ಭೇಟಿ ಮಾಡುತ್ತಾರೆ. ಅವರಿಗೆ ಒಳ್ಳೆಯ ಮನಸ್ಸು. ಅವರು ಅಪರೂಪದ ಮನುಷ್ಯ ಮತ್ತು ಅಪರೂಪದ ನ್ಯಾಯಾಧೀಶ.

**ಡಿಸೆಂಬರ್ ೧, ೧೯೮೦**

ಈ ಬೆಳಿಗ್ಗೆ ೮-೩೦ ಗಂಟೆಗೆ ಕೆ. ಹನುಮಂತಯ್ಯನವರು ನಿಧನರಾದರೆಂದು ದಿಗ್ಭ್ರಮೆಯ ಸಮಾಚಾರ ಬಂತು. ಸರಕಾರದ ಪ್ರೆಸ್‌ನ ಪಬ್ಲಿಸಿಟಿ ಕಚೇರಿಯಿಂದ ಒಂದು ಪತ್ರಿಕಾ ಹೇಳಿಕೆಯನ್ನು ಕಳುಹಿಸಿದೆ. ಅವರಲ್ಲಿ ಅನೇಕ ದೋಷಗಳಿದ್ದರೂ, ಅಪ್ರಾಮಾಣಿಕರಲ್ಲ, ಗರ್ವಿ, ತುಂಬಾ ಆಕಾಂಕ್ಷೆಯವರು, ಸಾರ್ವಜನಿಕ ಸೇವೆಯ ಬಗ್ಗೆ ಹೆಚ್ಚಿನ ಅಭಿಪ್ರಾಯವಿರಲಿಲ್ಲ. ಅವರಲ್ಲಿ ಒಳ್ಳೆ ಗುಣಗಳಿದ್ದುವೆಂಬುದನ್ನು ಒಪ್ಪಿಕೊಳ್ಳಲೇಬೇಕು. ಹೆಚ್ಚಿನ ದಕ್ಷತೆ, ಮುನ್ನುಗ್ಗುವ ಮತ್ತು ಕೆಚ್ಚು ಸ್ವಭಾವ, ಸ್ವಾತಂತ್ರ್ಯಕ್ಕಾಗಿ ಕಾರಾಗೃಹವಾಸ ಅನುಭವಿಸಿದರು. ಅವರು ತುಂಬಾ ಪಕ್ಷಾಂತರಿಗಳಾಗಿದ್ದು ಹೊಂದಿಕೊಳ್ಳುವ ಮನೋಭಾವವುಳ್ಳವರಾಗಿದ್ದು, ಅಧಿಕಾರದಲ್ಲಿರುವವರನ್ನು ತೃಪ್ತಿಪಡಿಸಿ ಯಾವುದಾದರೂ ಹುದ್ದೆಯನ್ನು ಪಡೆಯಲು ವಿರೋಧವಾದ ಹೇಳಿಕೆಗಳನ್ನು ನೀಡುತ್ತಿದ್ದರು. ನಾನು ಯಾವಾಗಲೂ ಅವರನ್ನು ಶ್ಲಾಘಿಸುತ್ತಿರಲಿಲ್ಲ. ನಾವಿಬ್ಬರೂ ಒಟ್ಟಿಗೆ ಕೆಲಸ ಮಾಡಬೇಕೆಂದು ನಾನು ಮುಖ್ಯಮಂತ್ರಿಯಾಗಿದ್ದಾಗ ಮತ್ತು ನಂತರವೂ ಅವರು ಅನೇಕ ಸಲ ಪ್ರಯತ್ನಿಸಿದರು. ಅಂತಹ ಸಾಹಸಗಳನ್ನು ನಾನು ಯಾವತ್ತೂ ಪ್ರೋತ್ಸಾಹಿಸುತ್ತಿರಲಿಲ್ಲ. ಏನೂ ತಿಳಿಯದ ಅವರ ಹೆಂಡತಿ ಮತ್ತು ಅವರ ಒಳ್ಳೆಯ ಹೆಣ್ಣುಮಕ್ಕಳ ಬಗ್ಗೆ ನನಗೆ ಅನುಕಂಪ. ಅವರನ್ನು ತುಂಬಾ ಇಷ್ಟಪಡುತ್ತಿದ್ದೆ.

ವರ್ಷದ ಕೊನೆಯ ತಿಂಗಳು ಪ್ರಾರಂಭವಾಗಿದೆ. ಅದು ಹನುಮಂತಯ್ಯನವರನ್ನು ಕಳೆದುಕೊಂಡು ಪ್ರಾರಂಭವಾಗಿದೆ. ಆದರೆ ಲಕ್ಷಾಂತರ ಜನರು ಸತ್ತಿದ್ದಾರೆ. ಹಾಗೆಯೇ ಲಕ್ಷಾಂತರ ಜನರು ಜನಿಸಿದ್ದಾರೆ. ಜನರು ಬರಬಹುದು, ಹೋಗಬಹುದು, ಆದರೆ ಪ್ರಕೃತಿ ನಿರಂತರವಾಗಿ ಸಾಗುತ್ತದೆ. ಮನುಷ್ಯನು ಮುಂದೆ ಹೋಗುತ್ತಲೇ ಇರುತ್ತಾನೆ. ಹಾಗೆಯೇ ಯಾವಾಗಲೂ ಹೋಗುತ್ತಾನೆಯೇ ಎಂಬುದು ಸಂದೇಹ. ಪ್ರಕೃತಿಯ ಸಣ್ಣ ಭಾಗ ಅವನು.

**ಡಿಸೆಂಬರ್ ೨, ೧೯೮೦**

'ಮಾನವನ ಆಸೆಗಳ ಸ್ವಪ್ರತಿಷ್ಠೆ'. ನಾನು ಹನುಮಂತಯ್ಯನವರ ಬಗ್ಗೆ ಚಿಂತಿಸುತ್ತಿದ್ದೇನೆ. ಆ ಮನುಷ್ಯ ತುಂಬಾ ಆಕಾಂಕ್ಷಿ, ಗರ್ವಿ ಮತ್ತು ತುಂಬಾ ಹಠಮಾರಿ. ಸ್ಥಾನದಿಂದ ಸ್ಥಾನಕ್ಕೆ ಹೋಗುತ್ತಿದ್ದಂತೆ ಇವು ಹೆಚ್ಚುತ್ತಲೇ ಹೋದವು. ಅವರ ಹುಟ್ಟು ಮತ್ತು ಅವರನ್ನು ಬೆಳೆಸಿದ ರೀತಿ ತೃಪ್ತಿಕರವಾಗಿರಲಿಲ್ಲ. ದಿವಂಗತ ಹೆಚ್.ಕೆ. ವೀರಣ್ಣಗೌಡರಿಗೆ

ಹನುಮಂತಯ್ಯನವರ ಬಗ್ಗೆ ಹೇಳಲು ಅನೇಕ ಕತೆಗಳಿದ್ದವು. ಅವರು ವಿದ್ಯಾರ್ಥಿಯಾಗಿದ್ದಾಗ ಅವರನ್ನು ಕೀಳಾಗಿ ಕಾಣಲಾಗುತ್ತಿತ್ತು. ಅವರು ಅಧಿಕಾರಕ್ಕೆ ಬಂದಾಗ ಆ ಕೀಳಾಗಿ ಕಾಣುತ್ತಿದ್ದುದಕ್ಕೆ ಪ್ರತೀಕಾರವಾಗಿ ಉನ್ನತ ಸ್ಥಾನದಲ್ಲಿದ್ದವರ ಬಗೆ ಕೀಳಾಗಿ ಕಾಣಲು ಅಥವಾ ಅವಮಾನವಾದ ರೀತಿಯಲ್ಲಿ ನೋಡುವ ಯಾವ ಅವಕಾಶವನ್ನೂ ಅವರು ಕಳೆದುಕೊಳ್ಳುತ್ತಿರಲಿಲ್ಲ. ಅದನ್ನು ಕ್ಷಮಿಸಬಹುದು. ಅವರು ಬುದ್ಧಿವಂತರು, ದಕ್ಷರು ಮತ್ತು ಅವರಿಗೆ ಖ್ಯಾತಿಯಿದ್ದು ಮುಖ್ಯಮಂತ್ರಿಯಾಗಿ ಒಳ್ಳೆಯ ಅಭಿಪ್ರಾಯ ಮೂಡಿಸಿದ್ದರು. ಆದರೆ ಅವರಿಗೆ ಅನೇಕ ಸಮಸ್ಯೆಗಳಿಗೆ ರಚನಾತ್ಮಕ ದೃಷ್ಟಿಕೋನವಿರಲಿಲ್ಲ. ಅದಿದ್ದಿದ್ದರೆ ಅವರು ಹೆಚ್ಚು ಪರಿಣಾಮಕಾರಿಯಾಗಿರುತ್ತಿದ್ದರು. ಮನುಷ್ಯನು ತನ್ನ ಒಪ್ಪು ತಪ್ಪುಗಳ ಅನೇಕ ಕ್ರಿಯೆಗಳ ಬಗ್ಗೆ ಕುರುಡನಾಗಿರಲಾಗುವುದಿಲ್ಲ. ಅವರ ಬಗ್ಗೆ ಅನೇಕ ದೋಷಾರೋಪಗಳಿದ್ದವು. ಈ ಎಲ್ಲಾ ದೋಷಗಳಿದ್ದರೂ ಅವರು ಪ್ರೀತಿಗೆ ಯೋಗ್ಯರಾಗಿದ್ದರು. ಸ್ನೇಹಜೀವಿ ಮತ್ತು ಒಪ್ಪಿಕೊಳ್ಳಬಹುದಾದಂಥವರು. ನಾವಿಬ್ಬರೂ ಒಟ್ಟಾಗಿ ಸೇರಿ ಕೆಲಸ ಮಾಡಬೇಕೆಂದೂ ಆಗ ಯಾರೂ ವಿರೋಧಿಸುವವರಿರುವುದಿಲ್ಲವೆಂದು ನಾವು ಕರ್ನಾಟಕವನ್ನು ಆಳಿ ಅದನ್ನು ಕಟ್ಟಬಹುದು ಎಂದು ಒತ್ತಾಯಿಸುತ್ತಿದ್ದರು. ಅದು ಜನರು ಒಪ್ಪಬೇಕಾದ ವಿಷಯ ಮತ್ತು ಈ ರೀತಿ ವೈಯಕ್ತಿಕ ಆಕಾಂಕ್ಷೆ ಸರಿಯಲ್ಲ ಎಂದು ಹೇಳಿದೆ. ಈ ಮನುಷ್ಯ ಇನ್ನೂ ಕರ್ನಾಟಕದ ಮುಖ್ಯಮಂತ್ರಿ ಸ್ಥಾನದ ಬಗ್ಗೆ ಯೋಚಿಸುತ್ತಿದ್ದರು. ಅವರಿಗೆ ಅಧಿಕಾರದ ಯಾವುದಾದರೂ ಒಂದು ಸ್ಥಾನದಲ್ಲಿರಬೇಕೆಂದಿದ್ದಿತು. ಅದಕ್ಕಾಗಿಯೇ ಇಂದಿರಾಗಾಂಧಿ ತಮ್ಮ ಮಂತ್ರಿಮಂಡಲದಿಂದ ಅವರನ್ನು ಕೈಬಿಟ್ಟಾಗ ಆಕೆಯನ್ನು ವಿರೋಧಿಸುತ್ತಿದ್ದರು. ನಂತರ ಅವರ ಪರವಾಗಿ ಮಾತನಾಡುತ್ತಿದ್ದರು. ಅವರು ತಮ್ಮದೇ ಆದ ಪಕ್ಷವನ್ನೂ ಪ್ರಾರಂಭಿಸಿ ಅದರ ನಾಯಕರಾದರು.

ಅಂತಹ ಪ್ರಸಿದ್ಧ ದಿನಗಳಿಂದ ಎಂತಹ ಅಧಃಪತನ, ಆ ಕಾಲವಾದ ಮೇಲೆ ಎಂತಹ ನೈತಿಕ ಕುಬ್ಜಗಳು ಬಂದಿವೆ.

ಈ ತಿಂಗಳ ೨೮ ಮತ್ತು ೨೯ರಂದು ದೆಹಲಿಯಲ್ಲಿ ರಾಷ್ಟ್ರೀಯ ಕಾರ್ಯಕಾರಿಣಿಯು ಸಭೆ ಸೇರುತ್ತದೆಂದು ನನಗೆ ತಿಳಿಸಲಾಗಿದೆ. ಅದಕ್ಕೆ ನನಗೆ ಕಾಂಪ್ಲಿಮೆಂಟರಿ ಪಾಸ್ ಒಂದು ಸಿಕ್ಕರೆ ನಾನು ಸಭೆಗಳಲ್ಲಿ ಭಾಗವಹಿಸಬಹುದು. ಹಾಗಿಲ್ಲವೆಂದಿದ್ದರೆ ದೆಹಲಿಗೆ ಹೋಗಲಾಗುವುದಿಲ್ಲ. ಸುಮಾರು ೩೦೦೦ ರೂ.ಗಳನ್ನು ಖರ್ಚು ಮಾಡಲಾಗುವುದಿಲ್ಲ. ನನ್ನ ಎಸ್.ಬಿ. ಲೆಕ್ಕದಲ್ಲಿ ಇದು ಅರ್ಧ ಭಾಗ.

**ಡಿಸೆಂಬರ್ ೪, ೧೯೭೮**

ಮೊರಾರ್ಜಿ ಮತ್ತು ಚರಣ್‌ಸಿಂಗ್‌ರು ಮೊರಾರ್ಜಿಯ ಕಚೇರಿಯಲ್ಲಿ ಭೇಟಿ ಮಾಡಿದ್ದಾರೆ. ಅವರು ಏನು ಮಾತಾಡಿದರೆಂಬುದನ್ನು ಹೊರಗೆಡವಿಲ್ಲ. ಆದರೆ ಚರಣ್‌ಸಿಂಗರು ಇಂದು ಅಥವಾ ನಾಳೆ ಒಂದು ಹೇಳಿಕೆಯನ್ನು ನೀಡುವ ಸಂಭವವಿದೆ ಅಥವಾ ನಿರೀಕ್ಷೆಯಿದೆ. ಈ ಮುದಿ ಜನರು ತಮ್ಮ ಪ್ರತಿಷ್ಠೆಯಿಂದ ಪಕ್ಷಕ್ಕಿಂತ ತಾವೇ ಮುಖ್ಯ ಎಂದು ತಿಳಿದುಕೊಂಡಿದ್ದಾರೆ. ಅವರು ಮಂತ್ರಿಗಳಾಗಿಲ್ಲದಿದ್ದರೆ ಹಾಗೆ ಯೋಚಿಸುತ್ತಿದ್ದರೆ? ಅವರು ಸ್ಥಾನದಿಂದ ಹೊರ ಹೋಗುವುದಕ್ಕೆ ಇದು ಸಕಾಲ. ತಮ್ಮ ಸ್ಥಾನಕ್ಕೆ ಇತರರು ಅಂದರೆ ಯುವಕರು ಮತ್ತು ಹೆಚ್ಚು ಆದರ್ಶವಾದಿಗಳು ಬರಬೇಕು.

ಮೊರಾರ್ಜಿಯವರು ಪಕ್ಷದ ಸಭೆಯಲ್ಲಿ ಹೇಳಿದುದೇನೆಂದರೆ ಪಾರ್ಲಿಮೆಂಟಿನಿಂದ ಇಂದಿರಾಗೆ ತೀವ್ರ ಶಿಕ್ಷೆಯಾಗಬೇಕು ಮತ್ತು ಈಗಿನ ಪಾರ್ಲಿಮೆಂಟು, ಹಿಂದಿನ ಲೋಕಸಭೆಯ ಕಾಲದಲ್ಲಿ ಪ್ರಧಾನಮಂತ್ರಿಯಾಗಿ ಸಭೆಯ ವಿರುದ್ಧ ಎಸಗಿದ ದೋಷಗಳಿಗಾಗಿ ಈಗಿನ ಲೋಕಸಭೆಯು ಆಕೆಯನ್ನು ಶಿಕ್ಷಿಸುವ ಹಕ್ಕನ್ನು ಹೊಂದಿದೆ ಎಂದರು. ಲೋಕಸಭೆಯು ಆಕೆಗೆ ಸೆರೆಮನೆಯ ಶಿಕ್ಷೆಯನ್ನು ನೀಡುವುದು ಕುತೂಹಲಕಾರಿಯಾಗಿಲ್ಲವೆ ?

**ಡಿಸೆಂಬರ್ ೨೪, ೧೯೭೮** **ಬೆಂಗಳೂರು**

ನೆನ್ನೆ ದಿನದ ಕಿಸಾನ್ ಪ್ರದರ್ಶನವು ನಿಜವಾಗಿಯೂ ಒಂದು ದೊಡ್ಡ ಸಮಾರಂಭವಾಗಿದ್ದು ಸುಮಾರು ೫ ಲಕ್ಷ ಜನರು ಭಾಗವಹಿಸಿದ್ದು 'ಚರಣ್‌ಸಿಂಗ್‌ಕೀ ಜೈ' ಎಂದು ಕೂಗುತ್ತ ೭೭ ಲಕ್ಷ ರೂ.ಗಳ ನಿಧಿಯನ್ನು ಅರ್ಪಿಸಲಾಯಿತು. ಇಡೀ ಸಮಾರಂಭವು ಹೇಳಿ ಮಾಡಿಸಿದಂತೆ ಇತ್ತು. ಇದು ಇಂದಿರಾಗಾಂಧಿಗಾಗಿ ಮತ್ತು ಅವರ ಪರವಾಗಿ ವ್ಯವಸ್ಥೆಗೊಳಿಸುತ್ತಿದ್ದಂತೆ ಇತ್ತು. ಅದರಲ್ಲಿಯೂ ಆಕೆಯ ಸರ್ವಾಧಿಕಾರದ ಆಡಳಿತದ ಕಾಲದಲ್ಲಿದ್ದಂತಿತ್ತು. ಚರಣಸಿಂಗರ ವ್ಯಕ್ತಿತ್ವವನ್ನು ಹೆಚ್ಚಿಸುವ ಉದ್ದೇಶದಿಂದ ಮಾಡಿದ್ದುದಾಗಿತ್ತು. ಅವರು ಅದಕ್ಕೆ ಭಾಗಿಯಾಗಿರಬಹುದು ಅಥವಾ ಇಲ್ಲದಿರಬಹುದು. ಭಾರತದ ರಾಜಕೀಯದಲ್ಲಿ ಇದು ಒಂದು ಮುಖ್ಯ ವಿಷಯವಾಗಿ ಮುಂದುವರಿದರೆ ನಮ್ಮ ದೇಶದ ಪ್ರಜಾಪ್ರಭುತ್ವಕ್ಕೆ ದೇವರೇ ಗತಿ. ಈ ಹೇಳಿ ಮಾಡಿಸಿದ ಪ್ರದರ್ಶನದಲ್ಲಿ ಕೂಡ ಶ್ರೀಮಂತ ರೈತರೇ ಮುಖ್ಯವಾದ ಬೆಂಬಲ. ಬಡರೈತರು ಈ ಚಿತ್ರಣದಲ್ಲಿ ಎಲ್ಲಿಯೂ ಇಲ್ಲ. ಬಡವನಿಗಾಗಿ ಜನತಾ ಸರ್ಕಾರವು ಅದರಲ್ಲಿಯೂ ಮೂಲಭೂತ ವಿಷಯವಾದ ಉದ್ಯೋಗದ ಬಗ್ಗೆ ಏನೂ ಮಾಡಿಲ್ಲ. ಬಡವರಿಗಾಗಿ ಕನಿಕರ ಎಲ್ಲಿದೆ?

ವೀರೇಂದ್ರ ಪಾಟೀಲರು ನನ್ನ ಕಣ್ಣಿಗೆ ಏನೋ ತೊಂದರೆ ಇದೆಯೆಂದು ತಿಳಿದು ನನ್ನ ಆರೋಗ್ಯವನ್ನು ವಿಚಾರಿಸಲು ಈ ದಿನ ಬೆಳಿಗ್ಗೆ ಬಂದರು. ಅದು ಅವರ ದಯೆ. ನನ್ನ ಹುಟ್ಟಿದ ಹಬ್ಬದ ಸಭೆಯು ಜನವರಿ ೧ಕ್ಕೆ ನಿಗದಿತವಾಗಿದೆಯೆಂದು ತಿಳಿದುಬಂತು.

**ಡಿಸೆಂಬರ್ ೨೯, ೧೯೭೮** **ದೆಹಲಿ**

ಬೆಳಿಗ್ಗೆ ೧೧-೩೦ಕ್ಕೆ ಶಾಂತಿಭೂಷಣ್ ಮನೆಗೆ ಹೋದೆ. ಅದಕ್ಕೆ ಮುಂಚೆ ಅಗರ್‌ವಾಲ್ ಬಂದು ನನ್ನ ಜೊತೆಯಲ್ಲಿ ಉಪಾಹಾರ ಮಾಡಿದರು. ಅದೇ ಕತೆ. ಗುರುಪಾದಸ್ವಾಮಿ ಬಂದು ಸಮಾಜವಾದಿಗಳು ಮತ್ತು ಇತರರು ಎಲ್ಲಾ ಕಾಂಗ್ರೆಸ್ (ಒ) ಮಂತ್ರಿಗಳನ್ನು ಕಳುಹಿಸಿಬಿಡಬೇಕು ಮತ್ತು ಮೊರಾರ್ಜಿಯವರು ಚಂದ್ರಶೇಖರ್, ಆರ್.ಕೆ. ಹೆಗಡೆ ಮತ್ತು ಇತರರನ್ನು ಮಂತ್ರಿಗಳನ್ನಾಗಿ ತೆಗೆದುಕೊಳ್ಳಬೇಕೆಂದು ಒತ್ತಾಯಿಸುತ್ತಿದ್ದಾರೆಂದು ಹೇಳಿದರು. ಅಂತಹ ಕ್ರಮದ ವಿರುದ್ಧ ಪ್ರಧಾನಿಯ ಜೊತೆಯಲ್ಲಿ ನಾನು ಮಾತಾಡಬೇಕೆಂದು ಅವರು ಇಚ್ಛಿಸಿದರು. ಅಂತಹುದೆಲ್ಲ ಪ್ರಧಾನಿಯ ಹತ್ತಿರ ನಡೆಯುವುದಿಲ್ಲ ಎಂದು ನಾನು ಹೇಳಿದೆ. ಸ್ವಲ್ಪ ಕಿವಿಯ ತೊಂದರೆಯ ನಂತರ ಶಾಂತಿಭೂಷಣರು ಈಗ ಚೆನ್ನಾಗಿದ್ದಾರೆ. ಅವರು ಬಹಳ ಹರ್ಷವಾಗಿ ಸುಖದಿಂದಿದ್ದು ತಮ್ಮ ಹೆಂಡತಿ, ಅತ್ತಿಗೆ ಮತ್ತು ತಾಯಿಯನ್ನು ಪರಿಚಯಿಸಿದರು. ಸ್ವಲ್ಪ ಕಾಲ ಕಳೆದರು. ದೆಹಲಿಯಲ್ಲಿನ ಪ್ರಸಕ್ತ ಪರಿಸ್ಥಿತಿಯ ಬಗ್ಗೆ ಅಸಂತೋಷವಾಗಿದ್ದರೂ ಅವರು ಆಶಾದಾಯಕವಾಗಿದ್ದಾರೆ. ಇಂದಿರಾರ ವಿರುದ್ಧ ತೀರ್ಮಾನದ ಬಗ್ಗೆ ಅವರಿಗೆ ಅಷ್ಟು ಸಂತೋಷವಿಲ್ಲ ಏಕೆಂದರೆ ಇದು ಒಂದು ಕೆಟ್ಟ ಸಂಪ್ರದಾಯ. ಏಕೆಂದರೆ ಭವಿಷ್ಯದಲ್ಲಿ ಅಧಿಕಾರದಲ್ಲಿರುವ ಯಾವುದೇ ಪಕ್ಷವು ಇದೇ ರೀತಿಯಲ್ಲಿ ಪ್ರತಿಪಕ್ಷದ ಯಾರನ್ನಾದರೂ ಶಿಕ್ಷಿಸಬಹುದು. ಪಾರ್ಲಿಮೆಂಟಿನ ಸಮಿತಿಯ ತೀರ್ಮಾನವಾದರೂ ಒಮ್ಮತವಾಗಿರಬೇಕಾಗಿತ್ತೆಂಬುದು ಅವರ ಭಾವನೆ. ನಾನು ಒಪ್ಪಿಕೊಳ್ಳಲೇಬೇಕಾಯಿತು. ಇದು ಪರಿಗಣನೆಗೆ ಒಂದು ವಿಷಯ ಎಂದು ನನಗನಿಸಿತು. ಆದರೆ ನೆನ್ನೆ ದಿನ ಆ ಮಹಿಳೆಯನ್ನು ಹೊರಹಾಕಿ ಜೈಲಿಗೆ ಕಳುಹಿಸಿದುದು ನನಗೆ ಸಂತೋಷವಾಗಿದೆ ಎಂದು ಪ್ರಧಾನಿಗೆ ಹೇಳಿದ್ದೆ. ಜನತಾಪಕ್ಷ ರಾಷ್ಟ್ರೀಯ ಕಾರ್ಯಕಾರಿ ಸಮಿತಿ ಸಭೆಗೆ ಚರಣಸಿಂಗರು ಮತ್ತು ಅವರ ಚೇಲಾಗಳು ಬಂದಿದ್ದರು. ಅದು ಅಶೋಕ್ ಮೆಹ್ತಾರ ಪಂಚಾಯಿತಿ ವರದಿ ಮತ್ತು ಆರ್ಥಿಕ ಕಾರ್ಯಕ್ರಮಗಳನ್ನು ಪರಿಗಣಿಸಿತೆಂದು ಕಾಣುತ್ತದೆ. ಮುಂದಿನ ತಿಂಗಳು ೧೫, ೧೬ ಮತ್ತು ೧೭ರಂದು ಪುನಃ ಸಭೆ ಸೇರುವುದೆಂದು ಕಾಣುತ್ತದೆ. ಆಹ್ವಾನದಂತೆ ರಾತ್ರಿ ೮ ಗಂಟೆಗೆ ರಾಷ್ಟ್ರಾಧ್ಯಕ್ಷ ರೆಡ್ಡಿಯವರಲ್ಲಿಗೆ ಭೋಜನಕ್ಕೆ ಹೋದೆ.

**ಜನವರಿ ೨, ೧೯೮೧**

ಜನರು ಪ್ರಧಾನಿ ಇಂದಿರಾಗಾಂಧಿಗೆ ಸಹಕಾರ ನೀಡಬೇಕು ಮತ್ತು ಸಹಾಯ ಮಾಡಬೇಕು, ಏಕೆಂದರೆ ಆಕೆಗೆ ದೇಶದ ಪ್ರಗತಿಯ ಬಗ್ಗೆ ತುಂಬಾ ಆಸಕ್ತಿ ಇದೆ ಎಂದು ಭಾರತದ ರಾಷ್ಟ್ರಾಧ್ಯಕ್ಷ ಸಂಜೀವರೆಡ್ಡಿಯವರು ಮನವಿ ಮಾಡಿದರೆಂದು ಈ ದಿವಸ ರೇಡಿಯೋವು ಘೋಷಿಸಿತು. ಒಂದು ವಾರದ ಹಿಂದೆ ಆತನ ಧ್ವನಿ ಬೇರೆಯದೇ ಆಗಿದ್ದಿತು. ಆತ ರಾಷ್ಟ್ರಾಧ್ಯಕ್ಷರ ರೀತಿಯ ಸರಕಾರವನ್ನು ವಿರೋಧಿಸುತ್ತಿದ್ದವರು-ಹೀಗೆ ಹೇಳುತ್ತಿರುವುದು

ನನಗೆ ಆಶ್ಚರ್ಯವಾಗಿದೆ. ೧೯೬೭ರಲ್ಲಿ ಏನಾಯಿತೆಂಬುದನ್ನು ಜ್ಞಾಪಿಸಿಕೊಳ್ಳುತ್ತಿದ್ದೆ. ಚುನಾವಣೆಗಳಾದ ನಂತರ ಇಂದಿರಾ ಸಂಪುಟದಲ್ಲಿ ಮಂತ್ರಿಯಾಗಿದ್ದ ಸಂಜೀವರೆಡ್ಡಿಯವರನ್ನು ಕೈಬಿಡಲಾಯಿತು ಎಂಬುದು ಆಶ್ಚರ್ಯವಾಯಿತು. ಹಿಂದಿನ ರಾತ್ರಿ ಮಾಮೂಲಿನಂತೆ ರಾತ್ರಿ ಊಟಕ್ಕೆ ಅತುಲ್ಯಘೋಷರ ಮನೆಯಲ್ಲಿ ಸೇರಿದ್ದೆವು. ಏಕೆಂದರೆ ಕಾಮರಾಜರನ್ನು ಭೇಟಿ ಮಾಡಲು ಬಂದವರಿಗೆ ಬಹಳ ಒಳ್ಳೆಯ ಅಭ್ಯಾಗತರಾಗಿದ್ದರು. ಎಸ್.ಕೆ. ಪಾಟೀಲ್, ಘೋಷ್ ಸೋತಿದ್ದರು. ನಾನು ಮತ್ತು ಸಂಜೀವರೆಡ್ಡಿಯವರು ಗೆದ್ದಿದ್ದೆವು. ನಾವು ಒಬ್ಬರೊಬ್ಬರಿಗೆ ಹಾಸ್ಯ ಮಾಡಿದೆವು. ನಾನು ಮುಖ್ಯಮಂತ್ರಿಯಾಗಿ ಮುಂದುವರಿಯುತ್ತೇನೆ ಮತ್ತು ಸಂಜೀವರೆಡ್ಡಿಯವರು ಆಕೆಯ ಮಂತ್ರಿಮಂಡಲದಲ್ಲಿ ಮುಂದುವರಿಯುತ್ತಾರೆಂಬುದಾಗಿ ಮಾತನಾಡುತ್ತಿದ್ದೆವು. ಮಾರನೆ ಬೆಳಿಗೆ ಅಸಂತೋಷಕರವಾದ ಆಶ್ಚರ್ಯ ನಮಗೆ ಬಂದಿತು. ಸಂಜೀವರೆಡ್ಡಿಯವರನ್ನು ಕೈಬಿಡಲಾಗಿತ್ತು. ನನಗೆ ಆಘಾತವಾಗಿ ಕಾಮರಾಜರಲ್ಲಿಗೆ ಓಡಿದೆನು. ಅವರಿಗೆ ಇನ್ನೂ ಹೆಚ್ಚು ಆಘಾತವಾಗಿದ್ದಿತು. ನಾವಿಬ್ಬರೂ ಪ್ರಧಾನಿಯವರಲ್ಲಿಗೆ ಹೋಗೋಣವೆಂದು ನಾನು ಸಲಹೆ ಮಾಡಿದಾಗ ಅವರಿಗೆ ಎಷ್ಟು ಕೋಪ ಬಂದಿದ್ದಿತೆಂದರೆ, "ನಾನು ಆಕೆಯ ಮುಖ ನೋಡುವುದಿಲ್ಲ". "ಮೂಂಜಿ ಪಾಕರದಿಲ್ಲೆ, ನೀವು ಬೇಕಾದರೆ ಹೋಗಬಹುದು". ಎಂದು ಹೇಳಿದರು. ನಾನು ಆಕೆಯಲ್ಲಿಗೆ ಹೋಗಿ ನಮ್ಮ ಕೋಪ ಮತ್ತು ನಿರಾಸೆಯನ್ನು ತೋರಿಸಿಕೊಂಡು ಆತನಲ್ಲಿ ಏನು ತಪ್ಪಿದೆ ಎಂದು ಕೇಳಿದೆ. ಮಂತ್ರಿಯಾಗಿ, ಮುಖ್ಯಮಂತ್ರಿಯಾಗಿ ಮತ್ತು ಕೇಂದ್ರದ ಮಂತ್ರಿಯಾಗಿ ಆತನ ವೃತ್ತಿಯು ನಿಷ್ಕಳಂಕವಾಗಿದ್ದಿತು. ಅಂತಿಮವಾಗಿ ಅವರನ್ನು ಕಂಡರೆ ತನಗಾಗುವುದಿಲ್ಲ ಎಂದು ಆಕೆ ಹೇಳಿದರು. ಎಲ್ಲರೂ ಆಕೆಯನ್ನು ಇಷ್ಟಪಡುವುದಿಲ್ಲ ಎಂದು ನಾನು ಹೇಳಿದೆ. ಆಗಲೇ ರೆಡ್ಡಿಯವರು ಲಾನ್ ಮೇಲೆ ಬಂದರು. ನಾನು ಆತನನ್ನು ಕರೆದೆ. ಅವರು ತಕ್ಷಣ ಬಂದು, "ಮ್ಯಾಡಾಂ, ನಾನು ಏನು ಹೇಳಲು ಬಂದಿದ್ದೇನೆಂದರೆ ನನಗೆ ಸ್ವಲ್ಪವೂ ಬೇಜಾರಿಲ್ಲ. ನಾನು ಒಬ್ಬ ಕಾಂಗ್ರೆಸ್ಸಿಗ. ನಾನು ಹಾಗೆಯೇ ಉಳಿಯುತ್ತೇನೆ. ನಿಮ್ಮ ಮಂತ್ರಿಮಂಡಲದಲ್ಲಿ ನೀವು ನನ್ನನ್ನು ಇಟ್ಟುಕೊಳ್ಳುತ್ತೀರೊ ಇಲ್ಲವೊ ಅದರ ಚಿಂತೆ ನನಗಿಲ್ಲ" ಎಂದು ಹೇಳಿದರು. ಒಂದು ಯೋಚನೆ ಹೊಳೆಯಿತು, ರೆಡ್ಡಿಯವರನ್ನು ಲೋಕಸಭೆಯ ಸ್ಪೀಕರ್ ಮಾಡೋಣವೆಂದು ನಾನು ಸಲಹೆ ಮಾಡಿದೆ. ತಾನು ಒಬ್ಬ ಲಾಯರ್ ಅಲ್ಲವೆಂದು ಆತ ವಾದ ಮಾಡಿದರು. ಶಾಸಕಾಂಗದಲ್ಲಿ ಅನೇಕ ವರ್ಷಗಳ ಅನುಭವ ಅವರಿಗಿದೆಯೆಂದು ನಾನು ಹೇಳಿದೆ. ಹಿರಿಯರಿಗೆ ಬೇಕಾಗಿದ್ದರೆ ಮಾತ್ರ ಎಂದು ಆತನೂ ಒಪ್ಪಿಕೊಂಡ. ಪ್ರಧಾನಿ ಇಂದಿರಾ ಕೂಡ ಒಪ್ಪಿಕೊಂಡರು. ರೆಡ್ಡಿಯವರಿಗೆ ನಾಮಪತ್ರವನ್ನು ಸಲ್ಲಿಸುವಂತೆ ಹೇಳಿದರು. ಆದರೆ ಇಂದಿರಾ ಗೃಹಖಾತೆಯ ರಾಜ್ಯ ಸಚಿವರಿಗೆ ಹೇಳಿಕಳುಹಿಸಿದರು. ಅವರು ಬಂದಾಗ ನಿಮ್ಮ ನಾಮಪತ್ರವನ್ನು ಸಲ್ಲಿಸಿ ಎಂದು ತಮಾಷೆ

ಮಾಡಿದೆ. ರೆಡ್ಡಿಯವರಿಗೆ ಹೇಳಿಕಳುಹಿಸಿ ನಾಮಪತ್ರವನ್ನು ಹಿಂತೆಗೆದುಕೊಳ್ಳುವಂತೆ ಹೇಳಿದೆ, ಏಕೆಂದರೆ ಅವರು ಪ್ರಸಿದ್ಧರಲ್ಲವಾದುದರಿಂದ ಸೋಲುವಿರಿ ಎಂದು ಹೇಳಿದೆ. ಅವರು ಸಲಹೆ ಮಾಡಿದಂತೆ ನಿರಾಕರಿಸಿದರು. ಚುನಾವಣೆ ನಡೆಯಿತು ಮತ್ತು ರೆಡ್ಡಿಯವರು ಸಾಕಷ್ಟು ಬಹುಮತದಿಂದ ಗೆದ್ದರು. ಇದು ನನಗೆ ಆಕೆಯ ಬಗ್ಗೆ ಇನ್ನೊಂದು ಅಘಾತ.

**ಮಾರ್ಚ್ ೨, ೧೯೮೧**

ಸಿವಿಲ್ ಏವಿಯೇಷನ್ ಮಂತ್ರಿಯಾದ ಎ.ಪಿ. ಶರ್ಮಾರಿಗೆ ಒಂದು ಟೆಲಿಗ್ರಾಂ ಕಳುಹಿಸಿ ದೆಹಲಿಯಲ್ಲಿ ಈ ತಿಂಗಳ ೨೮ ಮತ್ತು ೨೯ರ ಸಂವಿಧಾನ ಅಸೆಂಬ್ಲಿಯ ಸಭೆಗೆ ಒಂದು ಗೌರವಪೂರ್ಣ ವಾಯುಯಾನದ ಪಾಸನ್ನು ಕಳುಹಿಸಲು ವ್ಯವಸ್ಥೆ ಮಾಡಬೇಕೆಂದು ಕೇಳಿದೆ. ಇದರ ಪ್ರತಿಯನ್ನು ಕಾಂಗ್ರೆಸಿನ ಕಾರ್ಯದರ್ಶಿ ದ್ವಿವೇದಿಯವರಿಗೆ ಕಳುಹಿಸಿದೆ. ಜನತಾಪಕ್ಷದ ಅಧ್ಯಕ್ಷರಿಂದ ರಾಷ್ಟ್ರೀಯ ಕಾರ್ಯಕಾರಿಣಿ ಸಮಿತಿಗೆ ಶಾಶ್ವತ ಆಮಂತ್ರಣಕಾರ ಎಂದು ನೇಮಕ ಮಾಡಿರುವ ಒಂದು ತಿಳುವಳಿಕೆಯನ್ನೂ ಪಡೆದೆ. ಇದಕ್ಕೆ ಕಾಂಗ್ರೆಸ್ಸಿನಲ್ಲಿ ಹಿಂದೆ ಅನೇಕ ವರ್ಷಗಳವರೆಗೆ ಕಾರ್ಯಕಾರಿ ಸಮಿತಿ ಎಂದು ಕರೆಯಲಾಗಿತ್ತು. ತಮ್ಮ ದೇಶಾಭಿಮಾನ, ತ್ಯಾಗ, ಹೋರಾಡುವ ಚೈತನ್ಯ, ಅದಮ್ಯವಾದ ಧೈರ್ಯ, ವಿಶಾಲ ದೃಷ್ಟಿ ಮತ್ತು ಟೀಕಿಸಲಾಗದಂಥ ಗುಣಗಳನ್ನೆಲ್ಲಾ ಹೊಂದಿರುವ ಎಂತಹ ಪ್ರಬಲವಾದ ಅಂಗ. ಅಂತಹ ದಿಗ್ಗಜಗಳ ಜೊತೆಯಲ್ಲಿ ಸುಮಾರು ೨೨ ವರ್ಷಗಳವರೆಗೆ, ಅಂದರೆ ಅದರಲ್ಲಿ ಪಂಡಿತ್ ನೆಹ್ರೂರವರು ಅಧ್ಯಕ್ಷರಾಗಿದ್ದಾಗ ನನ್ನನ್ನು ನಾಮಕರಣ ಮಾಡದಿದ್ದ ಎರಡು ವರ್ಷಗಳನ್ನು ಹೊರತುಪಡಿಸಿ ೧೯೬೮ರಲ್ಲಿ ನಾನು ಅಧ್ಯಕ್ಷನಾಗುವವರೆಗೆ ಮತ್ತು ಸುಮಾರು ವರ್ಷಗಳವರೆಗೆ ಕಾರ್ಯಕಾರಿಣಿ ಸಮಿತಿಯ ಚರ್ಚೆಗಳಲ್ಲಿ ಭಾಗವಹಿಸುವುದೇ ಒಂದು ಗೌರವವಾಗಿದ್ದಿತು. ಹೆಮ್ಮೆಪಡಬಹುದಾದ ಮತ್ತು ತೃಪ್ತಿಕರವಾದ ದಿನಗಳವು.

**ಮಾರ್ಚ್ ೨೭, ೧೯೮೧**

ಬೆಳಿಗ್ಗೆ ೫-೩೦ರಿಂದ ನಿದ್ದೆ ಬರದ್ದರಿಂದ ಬೇಗ ಎದ್ದೆ. ಭವನದ ಪ್ರದೇಶದಲ್ಲಿ ನನ್ನ ೧ ೧/೨ ಮೈಲಿಯ ಮಾಮೂಲು ನಡಿಗೆಯನ್ನು ಮಾಡಿದೆ. ನನ್ನ ಬೇಡಿಕೆಯ ಮೇರೆಗೆ ಡಾ. ಚೋಪ್ರ ಮತ್ತು ಅವರ ಆಕರ್ಷಕ ಹೆಂಡತಿಯು ಬೆಳಗಿನ ಉಪಾಹಾರಕ್ಕೆ ಬಂದರು. ಸ್ವಾತಂತ್ರ್ಯ ಹೋರಾಟದ ರಾಜಕೀಯ ಇತಿಹಾಸವನ್ನು ಬರೆಯುವುದಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ದೀರ್ಘವಾಗಿ ಮಾತಾಡಿದೆವು. ಬ್ರಿಟಿಷ್ ಸರಕಾರವು ಭಾರತದಲ್ಲಿದ್ದ ಕಾಲದಲ್ಲಿನ ಪತ್ರವ್ಯವಹಾರಗಳ ಕೆಲವು ಸಂಪುಟಗಳನ್ನು ಪ್ರಕಟಿಸಿದೆಯಂತೆ. ಅದು ಇನ್ನೂ ಪತ್ರವ್ಯವಹಾರವಾಗಿಯೇ ಇದ್ದು ಅದರಲ್ಲಿ ತಮ್ಮ ಅಭಿಪ್ರಾಯಗಳನ್ನು ಮಾತ್ರ ಬಿಂಬಿಸಿ ಅವರ ಸಬಲತೆ ಮತ್ತು ದುರ್ಬಲತೆಗಳನ್ನು ಬಹಿರಂಗಪಡಿಸುತ್ತ ಇಲ್ಲಿ ನಮ್ಮ ಸರಕಾರವು ನಮ್ಮ ದೃಷ್ಟಿಕೋನದಿಂದ ಪತ್ರವ್ಯವಹಾರಗಳನ್ನು ಪ್ರಕಟಿಸಬೇಕೆಂದಿದ್ದ

ಕಮಿಟಿಯ ನೇಮಕಾತಿಯಲ್ಲಿ ತುಂಬಾ ರಾಜಕೀಯವಿದೆಯೆಂದು ಕಾಣುತ್ತದೆ. ಜಾತಿಯ ಪರಿಗಣನೆಗಳೂ ಇರಬಹುದು ಮತ್ತು ಈ ದೃಷ್ಟಿಯಿಂದ ಕೆಲವು ಅಮೂಲ್ಯವಾದ ದಾಖಲೆಗಳನ್ನು ಅಡಗಿಸಿರಬಹುದು.

ಮಧ್ಯಾಹ್ನ ನೆಹರೂ ಸ್ಮಾರಕ ಮ್ಯೂಸಿಯಂ ಮತ್ತು ಗ್ರಂಥಾಲಯದ ಶ್ರೀ ನಹಲ್ ಬಂದು ನನ್ನನ್ನು ಆ ಸಂಸ್ಥೆಗೆ ಕರೆದುಕೊಂಡು ಹೋದರು. ಕೆಲವು ಕಾಲದ ಹಿಂದೆ ನಮ್ಮ ಮನೆಗೆ ಬಂದಿದ್ದ ಅಲ್ಲಿಯ ಉಪನಿರ್ದೇಶಕ ಪಾಣಿಗ್ರಾಹಿ ಮತ್ತು ಮಿಸೆಸ್ ಜಾಲಿ ನನ್ನನ್ನು ಮ್ಯೂಸಿಯಂ ಸುತ್ತಾ ಕರೆದುಕೊಂಡು ಹೋಗಿ ಭಾರತದ ಎಲ್ಲಾ ಸ್ಥಳಗಳ ಮತ್ತು ನಾಯಕರುಗಳ ಅನೇಕ ದಾಖಲೆಗಳು, ಪತ್ರಗಳು, ವೃತ್ತಪತ್ರಿಕೆಗಳು ಮುಂತಾದವುಗಳನ್ನು ಹೇಗೆ ಕಾಪಾಡುತ್ತಿದ್ದಾರೆಂಬುದನ್ನು ವಿವರಿಸಿದರು. ಕುತೂಹಲವಾದ ಕೆಲಸ. ನನ್ನ ಪತ್ರವ್ಯವಹಾರವನ್ನೂ ಹಾಗೆಯೇ ಕಾಪಾಡಲಾಗುತ್ತಿದೆ. ಅವನ್ನು ಕೆಲವು ಕಾಲದ ಹಿಂದೆ ಇವರು ಪಡೆದರು.

**ಏಪ್ರಿಲ್ ೧೮, ೧೯೮೬ ಅತುಲ್ಯಘೋಷ್ ನಿಧನ**

ದುಃಖದ ಸಮಚಾರ, ಅಂತ್ಯತ ದುಃಖದ್ದು. ನನ್ನ ಹಳೆಯ ಸ್ನೇಹಿತ ಮತ್ತು ಸಹಪಾಠಿ ಹಳೆಯ ಕಾಂಗ್ರೆಸಿನ ಅತುಲ್ಯ ಘೋಷ್‌ರವರು ಈ ದಿನ ರಾತ್ರಿ ರೇಡಿಯೋದಲ್ಲಿ ಪ್ರಚಾರಪಡಿಸಿದಂತೆ ಈ ಮಧ್ಯಾಹ್ನ ನಿಧನರಾದರು. ನಾವು ಬಹಳ ಕಾಲ ಅಂದರೆ ೨೦ ವರ್ಷಗಳ ಕಾಲ ಕಾಂಗ್ರೆಸ್ಸಿನ ಕಾರ್ಯಕಾರಿ ಸಮಿತಿಯಲ್ಲಿದ್ದೆವು. ನಾನು ಕಾಂಗ್ರೆಸ್ ಅಧ್ಯಕ್ಷನಾಗಿದ್ದಾಗ ನನ್ನ ಸಮಿತಿಯಲ್ಲಿದ್ದು ನನ್ನೊಟ್ಟಿಗೇ ಕಾಂಗ್ರೆಸ್ ಒಡೆದ ಮೇಲೆ ಹೊರಬಂದರು. ಇಂದಿರಾ ಗಾಂಧಿಯವರ ಕೆಟ್ಟ ನಡತೆಯಿಂದಾಗಿ ಕಾಂಗ್ರೆಸ್ ಒಡೆದುದರ ಬಗ್ಗೆ 'ದಿ ಸ್ಪ್ಲಿಟ್' ಎಂಬ ಮಾಹಿತಿಯುತ ಪುಸ್ತಕವನ್ನು ಬರೆದರು. ಅವರ ಹೆಂಡತಿಗೆ ಕಲ್ಕತ್ತಾಕ್ಕೆ ಸಂತಾಪ ಸಂದೇಶವೊಂದನ್ನು ಕಳುಹಿಸಿದೆ.

ನೆನ್ನೆ ರಾತ್ರಿ ೧೦-೩೦ಕ್ಕೆ ಸುಮಾರು ೨೦ ಮಿ.ಮೀ. ಮಳೆ ಬಂತು.

**ಜೂನ್ ೨೮, ೧೯೮೬**

ಇದು ಅತ್ಯಂತ ದುಃಖದ ದಿನ. ಎಸ್.ಕೆ. ಪಾಟೀಲ್ ಮೃತರಾದರು. ಅವರು ಕೆಲಕಾಲದಿಂದ ಅಸ್ವಸ್ಥರಾಗಿದ್ದು ಆಸ್ಪತ್ರೆಯಲ್ಲಿದ್ದರು. ಅತ್ಯಂತ ನಿಕಟ ಸ್ನೇಹಿತರಲ್ಲೊಬ್ಬರು. ಕಳೆದ ೨೦ ವರ್ಷಗಳಿಂದ ನಾವು ಬಹಳ ಸಮೀಪವಾಗಿಬಿಟ್ಟಿದ್ದೆವು. ಅವರು, ನಾನು, ಸಿ.ಬಿ. ಗುಪ್ತ ಮತ್ತು ಕಾಮರಾಜರು, ಅತುಲ್ಯಘೋಷ್ ಮತ್ತು ಸಂಜೀವರೆಡ್ಡಿ ಕೂಡ ಒಂದೇ ಮನಸ್ಸಿನವರಾಗಿದ್ದೆವು. ಇಂದಿರಾ ಬಂದ ಮೇಲೆ ಮತ್ತು ಪ್ರಧಾನಿಯಾಗಿ ಆಕೆಯ ಅಪವಿತ್ರ ಚಟುವಟಿಕೆಗಳು ಮತ್ತು ಇತರವುಗಳಾದ ಮೇಲೂ ನಾವು ಒಟ್ಟಿಗಿದ್ದೆವು. ನಂತರ ಅತುಲ್ಯರು ರಾಜಕೀಯ ಬಿಟ್ಟರು. ಕಾಮರಾಜರು ೧೯೭೫ರಲ್ಲಿ ತುರ್ತು

ಪರಿಸ್ಥಿತಿಯ ನಂತರ ಕಾರ್ಯತಃ ಒಂದು ಆಘಾತವನ್ನು ಅನುಭವಿಸಬೇಕಾಯಿತು. ಅವರು ಹೆಚ್ಚು ಕಾಲ ಬದುಕಲಿಲ್ಲ. ತುಂಬಾ ದುರ್ಬಲರಾಗಿದ್ದರು. ಸಂಜೀವರೆಡ್ಡಿಯವರು ತಮ್ಮದೇ ಆದ ಸ್ವಾರ್ಥ ಆಟ ಆಡುತ್ತಿದ್ದು ಯಾವುದೇ ತತ್ವಕ್ಕೆ ನಿಷ್ಠರಾಗಿರಲಿಲ್ಲ. ನಾವು ಮೂವರು ಗುಪ್ತ, ಪಾಟೀಲ್ ಮತ್ತು ನಾನು ಒಟ್ಟಿಗಿದ್ದು ಇಂದಿರಾ ವಿರುದ್ಧವಾಗಿದ್ದೆವು. ಆದರೆ ಇತ್ತೀಚೆಗೆ ಅನಿರೀಕ್ಷಿತವಾಗಿ ಪಾಟೀಲರು ಆಕೆಯನ್ನು ಸೇರಿಕೊಂಡರು. ಒಂದೂವರೆ ವರ್ಷದ ಹಿಂದೆ ನಾವಿಬ್ಬರೂ ದೆಹಲಿಯಲ್ಲಿ ಭೇಟಿ ಮಾಡಿದಾಗ ಅವರು ಆಕೆಯನ್ನು ಬೆಂಬಲಿಸಿ ಮಾತಾಡಿದಾಗ ನನಗೆ ಕೋಪ ಬಂದು ಚೆನ್ನಾಗಿ ಬೈದೆ.

ಅವರು ಅಂತಹವರಲ್ಲ. ನಾವು ಪತ್ರವ್ಯವಹಾರವನ್ನಿಟ್ಟುಕೊಂಡಿದ್ದೆವು. ಒಳ್ಳೆಯ ಸಂಬಂಧವನ್ನೇ ಇಟ್ಟುಕೊಂಡಿದ್ದೆವು. ಅವರು ನನಗಾಗಿ ಭೂಲಭಾಯಿ ಕಟ್ಟಡದಲ್ಲಿ ಈ ಎಲ್ಲಾ ವರ್ಷಗಳೂ ಒಂದು ಕೊಠಡಿಯನ್ನು ಮೀಸಲಾಗಿಟ್ಟಿದ್ದರು. ಪ್ರೀತಿಯ ಸ್ನೇಹಿತ ಇನ್ನಿಲ್ಲ. ಅವರ ಮತ್ತು ಅವರ ಸೇವೆಗಳನ್ನು ಚಿಂತಿಸುತ್ತಾ ನನಗೆ ನಿದ್ದೆ ಬರಲಿಲ್ಲ.

**ಆಗಸ್ಟ್ ೪, ೧೯೮೧ ಸಾಹುಕಾರ ವೀರಭದ್ರಪ್ಪ ರಾತ್ರಿ ೧-೧೫ಕ್ಕೆ ನಿಧನರಾದರು**

ಸಾಹುಕಾರ್ ವೀರಭದ್ರಪ್ಪನವರು ಆಸ್ಪತ್ರೆಯಲ್ಲಿ ರಾತ್ರಿ ೧-೧೫ಕ್ಕೆ ನಿಧನರಾದರೆಂದು ಮತ್ತು ಅವರ ಶರೀರವನ್ನು ಬೆಳಗಿನ ಜಾವ ಮನೆಗೆ ತಂದರೆಂದು ಬೆಳಿಗ್ಗೆ ೬-೩೦ಕ್ಕೆ ತಿಳಿಯಿತು. ಅವರ ಮನೆಗೆ ಹೋಗಿ ಹೂಮಾಲೆ ಅರ್ಪಿಸಿದೆ. ವೀರಶೈವರ ಪದ್ಧತಿಯಂತೆ ಅಲಂಕೃತ ಸಿದಿಗೆಯಲ್ಲಿ (ಬಿದಿರಿನ ಚೌಕಟ್ಟು) ಮನೆಯಿಂದ ಹೊರಕ್ಕೆ ತಂದು ದುಃಖದ ರಾಗಗಳನ್ನು ಹಾಡುವ ವಾದ್ಯ ಮೇಳದೊಂದಿಗೆ ನಗರದಲ್ಲಿ ಮೆರವಣಿಗೆಯಲ್ಲಿ ಒಯ್ದು ಅವರ ಜಮೀನಿನ ಒಳಭಾಗದಲ್ಲಿ ಶರೀರವನ್ನು ಹೂಳಲಾಯಿತು. ರಸ್ತೆಯು ಜಾರುತ್ತಿದ್ದರಿಂದ ನಮ್ಮಿಬ್ಬರಿಗೂ ಅಲ್ಲಿಗೆ ಹೋಗಬೇಕೆಂದಿದ್ದರೂ ರಾಜ ಅವಕಾಶ ಕೊಡದಿದ್ದರಿಂದ ಹೋಗಲಿಲ್ಲ. ಇಡೀ ದಿವಸ ಸಾಹುಕಾರರು ಮತ್ತು ಈ ಜಿಲ್ಲೆಯ ಒಂದೇ ಸ್ಕೂಲು ಸೇರಲು ನಾನು ೧೯೧೫ರಲ್ಲಿ ಬಂದಾಗಿನಿಂದ ಈ ಕುಟುಂಬದ ಜೊತೆಯಲ್ಲಿನ ಸಂಬಂಧವನ್ನು ಸ್ಮರಿಸಿಕೊಳ್ಳುತ್ತಿದ್ದೆ. ಅವರ ಜೊತೆಯಲ್ಲಿ ನನ್ನ ಸಂಬಂಧವು ಅವರು ಇಷ್ಟಪಡದ ರೀತಿಯಲ್ಲಿ ಪ್ರಾರಂಭವಾಗಿ ಮೂರು ವರ್ಷಗಳೊಳಗೆ ಪ್ರೀತಿ ಮತ್ತು ವಿಶ್ವಾಸವು ಎಷ್ಟರವರೆಗಿತ್ತೆಂದರೆ ಅವರ ಕಿರಿಯ ಮಗನಾಗಿಬಿಟ್ಟೆ. ಸಾಹುಕಾರರು ನನ್ನನ್ನು ವಿಶೇಷವಾಗಿ ಪೂನಾದಲ್ಲಿ ಕಾಲೇಜು ವಿದ್ಯಾಭ್ಯಾಸಕ್ಕೆ ಸೇರಿಸಿದರು. ನನ್ನ ವಕೀಲ ವೃತ್ತಿಯ ಕಾಲ, ನಂತರ ಸ್ವಾತಂತ್ರ್ಯ ಹೋರಾಟಗಾರನಾಗಿ ಕಾರಾಗೃಹಿಯಾಗಿ ನನ್ನ ಮಗಳು ಗೌರಿಯ ಮದುವೆ ಅವರ ಮಗ ಪರಮೇಶನ ಜೊತೆಯಲ್ಲಿ ನಡೆದು ನಂತರ ಅವನು ಕುಡುಕನಾಗಿ ಎರಡು ವರ್ಷಗಳ ಹಿಂದೆ ಮೃತನಾದುದು- ಮುಂತಾದುವು ಜ್ಞಾಪಕಕ್ಕೆ ಬಂದವು. ನನ್ನ ಪೋಷಕರನ್ನು ಕಳೆದುಕೊಂಡದ್ದು ದುಃಖಕರ, ಯಾರಿಗೂ ತೊಂದರೆ ಕೊಡದ ಒಳ್ಳೆಯ ಮನುಷ್ಯ, ಯಾರ ಬಗ್ಗೆಯೂ ಕೆಟ್ಟದನ್ನು ಯೋಚಿಸಲಿಲ್ಲ ಅಥವಾ

ಮಾತಾಡಲಿಲ್ಲ. ಆದರೆ ಗಂಡು ಮಕ್ಕಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದರು. ಈ ವಿಷಯದಲ್ಲಿ ಅವರನ್ನು ಅರ್ಥ ಮಾಡಿಕೊಳ್ಳಲಾಗಲಿಲ್ಲ. ಬೆಳಿಗ್ಗೆಯೇ ಅರುಣ್‌ಗೆ ಫೋನ್ ಮಾಡಿದೆ. ಅವನು ಬಂದು ಅಂತ್ಯಕ್ರಿಯೆಯಲ್ಲಿ ಭಾಗವಹಿಸಿದನು.

**ಡಿಸೆಂಬರ್ ೧೦, ೧೯೮೧** **ನನ್ನ ಹುಟ್ಟು ಹಬ್ಬ**

ಸಲಹೆ ಮಾಡಿದಂತೆ ಬೆಳಿಗೆ ೯ ಗಂಟೆಗೆ ಸಿದ್ಧನಾದೆ. ತುಂಬಾ ಹೊತ್ತು ಪುಸಲಾಯಿಸಿದ ಮೇಲೆ ನಾನು ಮತ್ತು ನನ್ನ ಹೆಂಡತಿ ಇಬ್ಬರೂ ಜಿಲ್ಲಾ ಆಸ್ಪತ್ರೆಗೆ ಹೋಗಿ ವಿವಿಧ ವಾರ್ಡುಗಳಲ್ಲಿದ್ದ ರೋಗಿಗಳಿಗೆ ಹಣ್ಣನ್ನು ಹಂಚಿದೆವು. ನಂತರ ಅನಾಥಾಶ್ರಮಕ್ಕೆ ಹೋಗಿ ನಿವಾಸಿಗಳಿಗೆ ಬಟ್ಟೆಯನ್ನು ಹಂಚಿದೆವು. ನಂತರ ಉರ್ದು ಮತ್ತು ಇನ್ನೊಂದು ಮಾಧ್ಯಮಿಕ ಶಾಲೆಗೆ ಬಂದು ಸಿಹಿ ಹಂಚಿದೆವು. ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳ ಒಟ್ಟು ಸಂಖ್ಯೆಯು ೧೪೦೦೦ ಎಂದು ತಿಳಿಯಿತು. ಮನೆಗೆ ಹಿಂತಿರುಗಿದ ಮೇಲೆ ೨೦೦ ರಿಂದ ೩೦೦ ಹಾರಗಳು, ಹಣ್ಣುಗಳನ್ನು ಸ್ವೀಕರಿಸಬೇಕಾಯಿತು.

ಜಿಲ್ಲೆಯ ಎಲ್ಲಾ ತಾಲ್ಲೂಕುಗಳಿಂದ ಮತ್ತು ತುಮಕೂರು, ಶಿವಮೊಗ್ಗ ಮತ್ತು ಬಳ್ಳಾರಿ ಜಿಲ್ಲೆಗಳಿಂದ ನೂರಾರು ಜನರು ಬಂದರು. ಇದು ಇಡೀ ದಿವಸ ಆಯಿತು. ಈ ಸಲ ಹೆಚ್ಚಿನ ಜನರು ನನ್ನ ಕಾಲು ಮುಟ್ಟಿ ನಮಸ್ಕರಿಸಿದರು. ಇದು ನನಗೆ ಇಷ್ಟವಿಲ್ಲದಿದ್ದರೂ ನಾನು ಸುಮ್ಮನಾಗಬೇಕಾಯಿತು. ಅವರುಗಳು, ನನ್ನ ಹೆಣ್ಣುಮಕ್ಕಳು, ಅಳಿಯಂದಿರು, ಮೊಮ್ಮಕ್ಕಳು ಮತ್ತು ನೆಂಟರಿಷ್ಟರು ಮತ್ತು ಆಹ್ವಾನಿತರಾದ ಸ್ನೇಹಿತರು ನನ್ನ ಮನೆಯಲ್ಲಿ ಊಟ ಮಾಡಿದರು. ೪-೩೦ಕ್ಕೆ ನೀಲಕಂಠೇಶ್ವರ ದೇವಸ್ಥಾನಕ್ಕೆ ಹೋದೆವು. ಪೂಜೆಯಾದ ಮೇಲೆ ಅಲಂಕೃತವಾದ ಜೀಪಿನಲ್ಲಿ ಸಂತೆಪೇಟೆಯ ಮೂಲಕ ಹಳೆ ಮಾಧ್ಯಮಿಕ ಶಾಲೆ ಮೈದಾನಕ್ಕೆ ಮೆರವಣಿಗೆಯಲ್ಲಿ ಕರೆದುಕೊಂಡು ಹೋದರು. ಸುಮಾರು ೧೦,೦೦೦ಕ್ಕೂ ಮೀರಿ ಜನರು ಅಲ್ಲಿ ಸೇರಿದ್ದರು. ಅತಿ ದೊಡ್ಡ ಸಭೆಯದೆಂದು ಕಾಣುತ್ತದೆ. ಚಿತ್ರದುರ್ಗ, ಸಿರಿಗೆರೆ, ಹುಂಚದ ಜೈನಮಠ, ಕೋಡಿಮಠದ ಸ್ವಾಮಿಗಳು, ಕ್ರಿಶ್ಚಿಯನ್ ಪಾದ್ರಿ, ಮುಸ್ಲಿಂ ಖಾಜಿ ಮತ್ತು ರಾಘವೇಂದ್ರ ಸ್ವಾಮಿ ನನಗೆ ಹರಸಿದರು. ಪ್ರಸಿದ್ಧ ನಟಿ ಶ್ರೀಮತಿ ಬಿ. ಜಯಮ್ಮ ಪ್ರಾರ್ಥನೆ ಹಾಡನ್ನು ಹಾಡಿದ ಮೇಲೆ ಅಧ್ಯಕ್ಷ ಖಾದರ್ ಭಾಷಾ ಸ್ವಾಗತಿಸಿದರು. ದೇವರಾಜ ಅರಸ್ ಒಂದು ಗಂಟೆವರೆಗೆ ಮಾತಾಡಿದರು. ಮಹಮ್ಮದ್ ಜೆ. ಇಮಾಂ, ಡಾ. ನಾಗಪ್ಪ ಆಳ್ವ ನನ್ನನ್ನು ಹೊಗಳಿ ಮಾತಾಡಿದರು. ಪೀರ್ ಸಾಬರು ನನಗೆ ಹಣ್ಣು, ಶಾಲನ್ನು ಅರ್ಪಿಸಿದರು. ಕಾರ್ಮಿಕ ನಾಯಕ ಪಂಪಾಪತಿಯು ದಾವಣಗೆರೆ ನಾಗರಿಕರ ಪರವಾಗಿ ೮೦,೦೦೦ ರೂ. ಗಳ ಚೆಕ್ಕನ್ನು ನೀಡಿದರು. ಸಂದೇಶ ಎನ್ನುವಂತೆ ಅರ್ಧ ಗಂಟೆ ಕಾಲ ಮಾತಾಡಿದೆ. ನಂತರ ಮಾಜಿ ಸ್ಪೀಕರ್ ಕೆ.ಎಸ್. ಹೆಗಡೆ, ಅವರಾದ ನಂತರ ಎಲ್ಲಾ ಧರ್ಮದ ಮುಖ್ಯಸ್ಥರು ಮಾತಾಡಿದರು. ವಂದನೆಯೊಂದಿಗೆ ಸಭೆ ಮುಕ್ತಾಯವಾಯಿತು. ತುಂಬಾ ಸುಸ್ತಾಗಿದೆ. ನನ್ನ ಕುಟುಂಬದವರ ಜೊತೆಯಲ್ಲಿ

ರಾತ್ರಿ ಊಟವಾಯಿತು. ಇವೆಲ್ಲವನ್ನೂ ಚಿತ್ರದುರ್ಗದ ನಾಗರಿಕರ ಸಮಿತಿ ವ್ಯವಸ್ಥೆ ಮಾಡಿತ್ತು.

**ಅಕ್ಟೋಬರ್ ೩೧, ೧೯೮೪**

ಇಂದಿರಾಗಾಂಧಿಯವರು ಗುಂಡೇಟಿಗೆ ಬಲಿಯಾದರು. ಅವರ ಸಿಖ್ ಅಂಗರಕ್ಷಕರೇ ಈ ಕೃತ್ಯಗೈದಿದ್ದಾರೆ ! ಇದೊಂದು ಆಘಾತದ ಸುದ್ದಿ ಮತ್ತು ಈ ಘಟನೆಯನ್ನು ನಾನು ಖಂಡಿಸಿದೆ. ಅಂಗರಕ್ಷಕರು ಒಬ್ಬ ಅಸಹಾಯಕ ಮಹಿಳೆಯನ್ನು ಕೊಂದಿರುವುದು ಅಮಾನವೀಯವಾದುದು. ಅವರ ಮಗ ರಾಜೀವಗಾಂಧಿ ಪ್ರಧಾನಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದರು.

**ನವೆಂಬರ್ ೧, ೧೯೮೪**

ಮಾಧ್ಯಮದವರು ಇಂದಿರಾ ಹತ್ಯೆಯ ಬಗ್ಗೆ ನನ್ನ ಅಭಿಪ್ರಾಯವನ್ನು ದಾಖಲಿಸಿಕೊಂಡರು. ಒಬ್ಬ ಅಸಹಾಯಕ ಮಹಿಳೆಯನ್ನು ಈ ರೀತಿಯಾಗಿ ಅಮಾನವೀಯವಾಗಿ ಹೇಡಿಗಳಂತೆ ಹತ್ಯೆಗೈದಿರುವುದರ ಬಗ್ಗೆ ನನ್ನ ನೋವನ್ನು ತಿಳಿಸಿದೆ. ನಾನು ಅವರನ್ನು ತಾಯಿಯಾಗಿ, ಮಗಳಾಗಿ, ಅಜ್ಜಿಯಾಗಿ ಬಹು ಹತ್ತಿರದಿಂದ ನೋಡಿದ್ದೆ. ಬಡವರು ಮತ್ತು ಮಕ್ಕಳ ಮೇಲಿದ್ದ ಅವರ ಕರುಣೆಗಾಗಿ, ಅವರ ದಕ್ಷತೆ, ಹೆಚ್ಚು ಉತ್ಸಾಹ, ಬಡತನ ಮತ್ತು ನಿರುದ್ಯೋಗ ನಿವಾರಣೆಗೆ ಇದ್ದ ಬದ್ಧತೆ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದೆ. ಅವರು ಬಾಲಬಡುಕರು ಮತ್ತು ಮುಖಸ್ತುತಿಗಾರರ ಮಾತಿಗೆ ಮರುಳಾಗುತ್ತಿದ್ದರು. ನಾನು ಅವರ ಆತ್ಮಕ್ಕೆ ಶಾಂತಿ ಕೋರಿದೆ.

**ಜನವರಿ ೧೧, ೧೯೮೫**

ಬೆಳಿಗ್ಗೆ ೬ ಗಂಟೆಗೆ ವಿವೇಕ್ ಮತ್ತು ಮನು ಜೊತೆಯಲ್ಲಿ ಚಿತ್ರದುರ್ಗಕ್ಕೆ ಹೊರಟು ಮಧ್ಯಾಹ್ನ ೧೨-೨ಕ್ಕೆ ಮನೆ ತಲುಪಿದೆ. ನನ್ನ ಹೆಂಡತಿ ಮತ್ತು ರಾಜಪ್ಪ ಸ್ವಾಗತಿಸಿದರು. ಪ್ರಭುವು ದಾವಣಗೆರೆ ಮೆಡಿಕಲ್ ಕಾಲೇಜಿನಿಂದ ಬೆಂಗಳೂರಿಗೆ ಹೋಗುವ ಹಾದಿಯಲ್ಲಿ ಇಲ್ಲಿದ್ದಾನೆ. ಆತನು ಸಾಧು ಹುಡುಗ. ನಿದ್ದೆ ತುಂಬಾ ಅವಶ್ಯವಾಗಿದ್ದು ಮಧ್ಯಾಹ್ನದ ಊಟವಾದ ಕೂಡಲೆ ಮಲಗಿದೆ. ೪-೩೦ರವರೆಗೆ ಗಾಢ ನಿದ್ರೆ.

ಈ ಅಸಹ್ಯಕರವಾದ ಮತ್ತು ದಣಿವುಂಟುಮಾಡುವ ಅಸೆಂಬ್ಲಿ ಅಭ್ಯರ್ಥಿಗಳು ಬಂದು ನನಗೆ ತೊಂದರೆ ಕೊಡುವುದು ನಿಂತಿರುವುದು ನನಗೆ ಸಂತೋಷವಾಗಿದೆ.

ವೃತ್ತಪತ್ರಿಕೆಗಳ ಮತ್ತು ಸಮ್ಮೇಳನಗಳನ್ನು ಸರಿಯಾಗಿ ಪರಿಗಣಿಸಿದ ಮೇಲೆ ಜನತಾ ಪಕ್ಷದ ಸದಸ್ಯತ್ವವನ್ನು ಬಿಟ್ಟುಬಿಡಬೇಕೆಂದೂ, ಬೇರೆ ಯಾವುದೇ ಪಕ್ಷಕ್ಕೆ ಸೇರದೆ ಯಾವುದೇ ನಿರ್ಬಂಧಗಳಿಲ್ಲದೆ ನಾನು ಮಾತಾಡುವಂತೆ ನನಗೆ ನಾನೇ ಆಗಿರಬೇಕು ಎಂದು ತೀರ್ಮಾನಿಸಿದೆ. ಇದು ಅನೇಕ ತಿಂಗಳುಗಳಿಂದ ನನ್ನ ಮನಸ್ಸಿನಲ್ಲಿತ್ತು. ಏಕೆಂದರೆ ಹೆಗಡೆಯು

ಪರಿಣಾಮಕಾರಿಯಾಗಿತ್ತು. ಚೆನ್ನಾಗಿ ನಿರ್ವಹಿಸುತ್ತಿದ್ದರೂ ಒಂದು ಸರ್ಕಾರಕ್ಕೆ ಅಗತ್ಯವಾದ ಸತ್ಯಸಂಧತೆ ಇದರಲ್ಲಿರಲಿಲ್ಲ ಮತ್ತು ಅನಪೇಕ್ಷಿಯರಿಂದ ದೊಡ್ಡ ಮೊತ್ತಗಳಲ್ಲಿ ಹಣವನ್ನು ಸಂಗ್ರಹಿಸಲಾಗುತ್ತಿದೆ. ಇದು ಕಾಂಗ್ರೆಗಿಂತ ಏನೂ ಉತ್ತಮವಲ್ಲ. ನಾಳೆ ಈ ಬಗ್ಗೆ ಹೆಗಡೆಗೆ ಬರೆಯುತ್ತೇನೆ. ಜಾತೀಯತೆ, ಗುಂಪುಗಾರಿಕೆ ಮತ್ತು ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ವಿಧಾನ ಇವುಗಳಿಂದ ನಾನು ಮುಂದುವರಿಯುವುದಕ್ಕೆ ಸಾಧ್ಯವೇ ಇಲ್ಲ. ಈ ಕೊಳಕು ವಾತಾವರಣದಿಂದ ಹೊರಬರುವುದೇ ಒಳ್ಳೆಯದು.

**ಫೆಬ್ರುವರಿ ೧೨, ೧೯೮೫ ಜನತಾಕ್ಕೆ ರಾಜೀನಾಮೆ ಪತ್ರ**

ಎಲ್ಲ ಕಡೆಯಲ್ಲೂ ನೈತಿಕ ಮಟ್ಟಗಳು ಕುಸಿಯುತ್ತಿರುವುದನ್ನು ಸಹಿಸಲಾಗುವುದಿಲ್ಲವೆಂದು ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರಿಗೆ ಜನತಾಕ್ಕೆ ರಾಜೀನಾಮೆಯ ಪತ್ರವನ್ನು ಬರೆದೆ. ಇದರಲ್ಲಿ ಜನತಾ ಏನೂ ಬೇರೆಯಲ್ಲ. ಅಲ್ಲದೆ ನಡತೆ, ಚರಿತ್ರೆ, ನಿಷ್ಠೆ, ಶಿಸ್ತು ಮುಂತಾದವುಗಳಿಗಿಂತ ಜಾತಿಯನ್ನೇ ಹೆಚ್ಚಾಗಿ ಪರಿಗಣಿಸಿ ಅಭ್ಯರ್ಥಿಗಳನ್ನು ನಿಲ್ಲಿಸಲಾಗುತ್ತಿದೆ. ಗುಂಪುಗಾರಿಕೆಯು ಹೇಗೆ ಸ್ಪಷ್ಟವಾಗಿದೆಯೆಂಬುದನ್ನು ನಂಬಲರ್ಹವಾದ ಮೂಲಗಳಿಂದ ತಿಳಿದ ಮೇಲೆ ನನಗೆ ಜುಗುಪ್ಸೆಯಾಗಿದೆ. ಹೆಗಡೆಯವರು ತಮ್ಮ ಅಧಿಕಾರವನ್ನು ಉಳಿಸಿಕೊಳ್ಳಲು ಗೊತ್ತಿದ್ದೇ ಇವನ್ನು ಸಹಿಸುತ್ತಿದ್ದಾರೆ ಮತ್ತು ಒಂದು ರೀತಿಯಲ್ಲಿ ಪ್ರೋತ್ಸಾಹಿಸುತ್ತಿದ್ದಾರೆ. ಅದನ್ನು ಅವರಿಗೆ ಅಂಚೆ ಮೂಲಕ ಕಳುಹಿಸಿದೆ. ಕಾಗದದ ಪ್ರತಿಗಳನ್ನು ಜನತಾ ಅಧ್ಯಕ್ಷ ಚಂದ್ರಶೇಖರ್ ಮತ್ತು ಕರ್ನಾಟಕದ ಪಕ್ಷದ ಅಧ್ಯಕ್ಷ ದೇವೇಗೌಡರಿಗೆ ಕಳುಹಿಸಿದೆ. ಅವರು ಸಹ ರಾಜಕೀಯವಾಗಿ ಅಪ್ರಾಮಾಣಿಕ ಮತ್ತು ಜಾತೀಯವಾದಿ. ಇವರು ಹೆಗಡೆಯವರನ್ನು ಮುಖ್ಯಮಂತ್ರಿಯನ್ನಾಗಿ ಮಾಡಲು ಸಹಕರಿಸಿದರು. ಆದರೆ ಅವರಿಗೇ ಅದು ಆಗುತ್ತಿರಲಿಲ್ಲ. ಬೊಮ್ಮಾಯಿ ಒಬ್ಬ ಲಿಂಗಾಯಿತರಾದ್ದರಿಂದ ಅವರನ್ನು ತಪ್ಪಿಸಬೇಕಾಗಿತ್ತು. ಈ ಗುಂಪುಗಾರಿಕೆಯಿಂದಾಗಿಯೇ ೧೯೭೮ರ ಚುನಾವಣೆಯಲ್ಲಿ ಜನತಾಪಕ್ಷವು ಸೋತಿತು. ಈ ಹೆಜ್ಜೆಯು ನನ್ನ ಉಳಿದಿರುವ ಚಿಕ್ಕ ಜೀವನಾವಧಿಯನ್ನು ಕಡಿಮೆ ಮಾಡಬಹುದು.

**ಫೆಬ್ರುವರಿ ೧೮, ೧೯೮೫ ಹೆಗಡೆ ಜವಾಬು ಕೊಟ್ಟಿದ್ದಾರೆ**

ಬೆಳಿಗ್ಗೆ ೭-೩೦ಕ್ಕೆ ಫೋನ್ ಮಾಡಿದೆ. ಬೆಂಗಳೂರಿಗೆ ರಾತ್ರಿ ೧೧ ಗಂಟೆಗೆ ಸುಖವಾಗಿ ಬಂದು ಸೇರಿದೆನೆಂದು ಕಿರಣ್ ಹೇಳಿದ ಮತ್ತು ರಾಜಾಜಿನಗರದಲ್ಲಿ ರಘುವನ್ನು ಸುಖವಾಗಿ ತಲುಪಿಸಲಾಯಿತು ಎಂದೂ ಹೇಳಿದ. ನಮಗೆ ಸಂತೋಷವಾಯಿತು.

ಹೆಗಡೆಯು ಜಾರಿಕೊಳ್ಳುವ ರೀತಿಯಲ್ಲಿ ಉತ್ತರ ಕೊಟ್ಟಿದ್ದಾರೆ. ಏಕೆಂದರೆ ಅರ್ಹತೆಗಿಂತ ಇತರ ಆಧಾರಗಳ ಮೇಲೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಬೇಕಾಯಿತು ಎಂಬುದರಿಂದ ನಿರಾಸೆಯಾಗಿದೆಯೆಂದು ಬರೆದರು. ವಿಷಯವನ್ನು ಹೇಳುವ ಚತುರ ರೀತಿಯಿದು.

ನನ್ನನ್ನು ತೃಪ್ತಿಪಡಿಸುವುದಕ್ಕೋಸ್ಕರ ಹೀಗೆ ಹೇಳಿದ್ದಾರೆ. ಅವರು ಸಂಪೂರ್ಣವಾಗಿ ಈ ಕೊಳಕು ಮತ್ತು ಅಸತ್ಯವಾದ ಆಟದಲ್ಲಿ ಭಾಗಿಯಾಗಿದ್ದಾರೆ. ನನಗೇನೂ ಸಂತೋಷವಾಗಿಲ್ಲ. ಈ ಅನೇಕ ಅಭ್ಯರ್ಥಿಗಳ ಆಯ್ಕೆಗೆ ಮುಂಚೆ ಜನತಾವು ಜಯಗಳಿಸುತ್ತಿತ್ತು ಎಂಬುದರ ಬಗ್ಗೆ ನನಗೆ ಖಚಿತವಿಲ್ಲ. ಕಾಂಗೈಗೂ ಮತ್ತು ಜನತಾಕ್ಕೂ ನಡುವೆ ನನಗೇನೂ ವ್ಯತ್ಯಾಸವು ಕಾಣದಿರುವುದರಿಂದ ನನಗೇನೂ ಬಾಧಕವಿಲ್ಲ. ಇತರ ಪಕ್ಷಗಳು ಲೆಕ್ಕಕ್ಕಿಲ್ಲ. ಆದರೆ ಒಟ್ಟಾರೆ ಜನತಾವು ದುರ್ಬಲವಾಗಿ ಹೋಗಿದೆ. ಅದ್ಯಕೇನೂ ಸಮಜಾಯಿಷಿ ಬೇಕಿಲ್ಲ. ಇದು ದುರ್ದೈವ. ನನಗೆ ಆಸೆಯಿತ್ತು. ನಾಯಕತ್ವವು ವಿಫಲವಾಗಿದೆ.

**ಮಾರ್ಚ್ ೬, ೧೯೮೫ ಜನತಾಪಕ್ಷವು ಸಂಪೂರ್ಣ ಬಹುಮತದಿಂದ ಗೆದ್ದಿತು. ಹೆಗಡೆಯು ಬಹಳ ದೊಡ್ಡ ವ್ಯತ್ಯಾಸದಿಂದ ಗೆದ್ದಿದ್ದಾರೆ**

ಬೆಳಗಿನ ಉಪಾಹಾರವಾದ ಮೇಲೆ ಎಲ್ಲರೂ ರೇಡಿಯೋಗೆ ಅಂಟಿಕೊಂಡಿದ್ದಾರೆ. ನಾನೂ ನಿರತಂರವಾಗಿ ಅದರಲ್ಲಿಯೇ ಇದ್ದೇನೆ. ಯಾವುದೇ ದೊಡ್ಡ ಬಹುಮತದಿಂದ ಜನತಾವು ಗೆಲ್ಲುತ್ತದೆಂದು ನಾನು ನಿರೀಕ್ಷಿಸಿರಲಿಲ್ಲ. ಆದರೆ ಜಯವು ನಿರೀಕ್ಷೆಗೆ ಮೀರಿದುದು, ಫಲಿತಾಂಶವು ಪಕ್ಷದ ಪ್ರಭಾವದಿಂದಾಗಿರದೆ ಹೆಗಡೆಯ ಪ್ರಸಿದ್ಧಿಯಿಂದಾದುದು. ಫಲಿಂತಾಶಗಳು ಪ್ರಕಟವಾಗಿರುವಂತೆ ಜನತಾಕ್ಕೆ ೧೩೫, ಕಾಂಗೈಗೆ ೮೦ ಮತ್ತು ಇತರವು ಕಡಿಮೆ ಸಂಖ್ಯೆ ಪಡೆದಿರುವುದು ಒಳ್ಳೆಯದು. ಸ್ವತಂತ್ರರು ಕೆಲವರೇ ಇರುವುದು ಒಳ್ಳೆಯದು. ಬಿಜೆಪಿಯೂ ೪ ಅಥವಾ ೫. ಎಂಇಎಸ್ ಮುಂತಾದುವೂ ಸಹ. ಗಂಟೆಗೊಮ್ಮೆ ಫಲಿತಾಂಶಗಳು ಬರುತ್ತಿದ್ದಂತೆ ಜನತಾವು ಗೆಲ್ಲುತ್ತದೆಂಬುದು ಹೆಚ್ಚು ಖಚಿತವಾಯಿತು. ರಾತ್ರಿ ೯ ಗಂಟೆಗೆ ೨೦೪ ಫಲಿತಾಂಶಗಳು ಬಂದಿದ್ದವು. ಉಳಿದವು ನಂತರ ಬರುತ್ತವೆ. ಹೆಗಡೆಯವರು ತಮ್ಮ ಭಯದ ವರ್ತನೆಯನ್ನು ಬಿಡಬೇಕು. ಇಲ್ಲದಿದ್ದರೆ ದೇವೇಗೌಡ ರಂತವರು ಅವರ ವಿರುದ್ಧ ತಿರುಗುತ್ತಾರೆ. ನನ್ನ ಸ್ವಂತ ಅಭಿಪ್ರಾಯವೆಂದರೆ ಕೆಲವರು ಪಕ್ಷದಲ್ಲಿ ಕೆಟ್ಟ ಮನಸ್ಸುಳ್ಳವರು, ಅವರ ಜಾತೀಯತೆ ಮತ್ತು ಕೋಮುವಾದದಿಂದ ಒಂದೆರಡು ವರ್ಷದಲ್ಲಿ ಸರಕಾರವನ್ನು ದುರ್ಬಲಗೊಳಿಸುತ್ತಾರೆ. ಕರ್ನಾಟಕ, ಆಂಧ್ರ ಮತ್ತು ಸಿಕ್ಕಿಂನಲ್ಲಿ ಮಾತ್ರ ಇತರ ಪಕ್ಷಗಳು ಗೆದ್ದಿದ್ದು ಕಾಂಗೈ ಹೀನಾಯವಾಗಿ ಸೋತಿದೆ. ಇತರ ರಾಜ್ಯಗಳಲ್ಲಿ ಕಾಂಗೈ ದೊಡ್ಡ ಬಹುಮತದಿಂದ ಗೆದ್ದಿದೆ. ಜನರಿಗೆ ಕಂಡದ್ದು ಕಾಂಗೈ ಮಾತ್ರ. ಚಿತ್ರದುರ್ಗದ ಗೆದ್ದಿರುವ ಅಭ್ಯರ್ಥಿ ಬಂದು ನನಗೆ ಹೂಹಾರ ಹಾಕಿದರು.

**ನವೆಂಬರ್ ೨೫, ೧೯೮೫ ಸಂವಿಧಾನ ಸಭೆಯ ಸದಸ್ಯರ ಸಭೆ ಉಪರಾಷ್ಟ್ರಾಧ್ಯಕ್ಷ ವೆಂಕಟರಾಮನ್ ಮನೆಯಲ್ಲಿ ಸಂಜೆ ೫-೨೦ಕ್ಕೆ ಟೀ**

ಆಮಂತ್ರಿಸಿದಂತೆ ಅಶೋಕ್ ಹಾಗೂ ಇತರರು ಮತ್ತು ಮುದ್ದಪ್ಪ ಬೆಳಗಿನ ಉಪಾಹಾರಕ್ಕೆ ಬಂದರು. ಕುಟುಂಬದವರು ಸೇರಿದ್ದು ಸಂತೋಷ. ೨೭ನೇ ಸಾಯಂಕಾಲ ಅವರಲ್ಲಿ ಊಟಕ್ಕೆ ಹೋಗಬೇಕು. ಮಧ್ಯಾಹ್ನ ೩-೩೦ಕ್ಕೆ ವಿಠ್ಠಲ್‌ಭಾಯಿ ಪಟೇಲ್ ಭವನಕ್ಕೆ

ಹೋದೆ. ಈ ಸಲ ತುಂಬಾ ಜನ ಸದಸ್ಯರು ಹಾಜರಿದ್ದರು. ಕಾರ್ಯದರ್ಶಿ ದ್ವಿವೇದಿಯು ಹೇಗೆ ಪಾರ್ಲಿಮೆಂಟಿನ ಸೆಂಟ್ರಲ್ ಹಾಲಿನಲ್ಲಿ ನವೆಂಬರ್ ೨೬ರಂದು ಸಂವಿಧಾನ ದಿನ ಆಚರಣೆಯ ಪ್ರಯತ್ನಗಳು ಫಲ ಕೊಟ್ಟಿವೆ ಎಂದು ವಿವರಿಸಿದರು. ಹಾಗೆಯೇ ಸಂವಿಧಾನ ಸಭೆಯ ಸದಸ್ಯರನ್ನು ಪಾರ್ಲಿಮೆಂಟು ಸೆಕ್ರೆಟೇರಿಯಟ್, ಅದರ ಅಧ್ಯಕ್ಷ ಮತ್ತು ಪ್ರಧಾನಿ ಹೇಗೆ ಅಸಡ್ಡೆ ಮತ್ತು ಅಗೌರವದಿಂದ ಕಂಡರೆಂಬುದನ್ನೂ ವಿವರಿಸಿದರು. ನಾಳೆ ದಿನ ಸಮಾರಂಭವನ್ನು ಭಾರತದ ಮುಖ್ಯ ನ್ಯಾಯಾಧೀಶರಿಂದ ವ್ಯವಸ್ಥೆಪಡಿಸಲ್ಪಟ್ಟ ಹಣದಿಂದ ಒಂದು ಹೋಟೆಲಿನಲ್ಲಿ ವ್ಯವಸ್ಥೆ ಮಾಡಿದೆ. ಮುಖ್ಯ ನ್ಯಾಯಾಧೀಶರು ಸರಕಾರದ ಬಗ್ಗೆ ಕಟುವಾಗಿ ಟೀಕಿಸಬಹುದಾದ್ದರಿಂದ ಉಪರಾಷ್ಟ್ರಾಧ್ಯಕ್ಷ ವೆಂಕಟರಾಮನ್ ರವರು ಸಭೆಗೆ ತಪ್ಪಿಸಿಕೊಳ್ಳಲು ಕಾತುರರಾಗಿದ್ದಾರೆ. ಹಾಗಾಗಿ ಸಂಜೆ ೫-೨೦ಕ್ಕೆ ಅವರ ಮನೆಗೆ ಟೀಗೆ ನಮ್ಮೆಲ್ಲರನ್ನೂ ಆಹ್ವಾನಿಸಿದರು. ನಾವು ಎಲ್ಲರೂ ಹೋದೆವು ಈ ಉದ್ದೇಶಕ್ಕಾಗಿ ಇರಿಸಿದ್ದ ಪುಸ್ತಕದಲ್ಲಿ ನಾವೆಲ್ಲ ಸಹಿ ಹಾಕಿದೆವು. ನನ್ನನ್ನು ಕಂಡಾಗ ಅವರು ಎಷ್ಟು ಉತ್ಸುಕರಾಗಿದ್ದರೆಂದರೆ ನನ್ನನ್ನು ಪ್ರೀತಿಯಿಂದ ತಬ್ಬಿಕೊಂಡರು. ಏಕೆಂದರೆ ನಾವು ಭೇಟಿ ಮಾಡಿ ಬಹಳ ದಿನಗಳಾಗಿದ್ದವು. ೩-೩೦ಕ್ಕೆ ಸಭೆಯಲ್ಲಿ ಸಂವಿಧಾನದ ನೀತಿಗಳ ನಿರ್ದೇಶಕ ತತ್ವಗಳನ್ನು ಅನುಷ್ಠಾನಗೊಳಿಸಲು ಸರಕಾರವು ಎಲ್ಲಿ ವಿಫಲವಾಗಿದೆ ಎಂದು ಸಲಹೆ ಮಾಡಬೇಕೆಂದು ನಾನೆಂದಾಗ ಪ್ರೊ. ರಂಗಾ ಒಪ್ಪಿಕೊಳ್ಳಲಿಲ್ಲ, ಹಾಸ್ಯಾಸ್ಪದ.

**ನವೆಂಬರ್ ೨೬, ೧೯೮೫**

ನೆನ್ನೆ ನನಗೆ ಸ್ವಲ್ಪ ಹೊಟ್ಟೆನೋವು ಇದ್ದದ್ದರಿಂದ ಬೆಳಗಿನ ಉಪಾಹಾರ ಸ್ವಲ್ಪವೇ ಮತ್ತು ಕಡಿಮೆ ಊಟ ಮಾಡಿದೆ. ಸಂವಿಧಾನ ಸಭೆಯ ಸದಸ್ಯರನ್ನು ಗೌರವಿಸಲು ಪಾರ್ಲಿಮೆಂಟ್ ಸದಸ್ಯರ ಸಮಿತಿಯೊಂದು ನಮ್ಮನ್ನು ಆಹ್ವಾನಿಸಿದುದರಿಂದ ಅಶೋಕ ಹೋಟೆಲ್‌ಗೆ ಹೋದೆ. ಭಾರತದ ಮುಖ್ಯನ್ಯಾಯಾಧೀಶ ಭಗವತಿಯವರು ಉದ್ಘಾಟಿಸಿ ಒಳ್ಳೆಯ ಭಾಷಣ ಮಾಡಿದರು. ಅದು ನಿಜವಾಗಿ ಒಂದು ರಾಜಕೀಯ ಭಾಷಣ. ಸಮಿತಿಯ ಅಧ್ಯಕ್ಷೆ ಸರೋಜಿನಿ ಮಹಿಷಿ ಸ್ವಾಗತಿಸಿದರು. ಸಭೆ ಸದಸ್ಯರ ಸಂಘದ ಪರವಾಗಿ ಅವರ ಕಾರ್ಯದರ್ಶಿ ದ್ವಿವೇದಿಯವರು ಚಿಕ್ಕ ಭಾಷಣ ಮಾಡಿದರು. ನಂತರ ರಂಗಾ, ರೇಣುಕಾ ರೇ ಮತ್ತು ನಾನು ಮತ್ತು ಮೋಟೂರಿ ಸತ್ಯನಾರಾಯಣ ಎಲ್ಲರೂ ಚಿಕ್ಕ ಭಾಷಣಗಳನ್ನು ಮಾಡಿದೆವು. ನಮಗೆ ಪ್ರತಿಯೊಬ್ಬರಿಗೂ ಒಂದು ಶಾಲು, ಸಂವಿಧಾನದ ಒಂದು ಪ್ರತಿ, ಗಂಧದ ಹಾರವನ್ನು ಕೊಟ್ಟರು. ಹಣ್ಣುಗಳು ಮತ್ತು ಹಾಲನ್ನು ತೆಗೆದುಕೊಂಡು ಮಲಗಿದೆ. ಗ್ರಾಮೀಣ ಸಮಸ್ಯೆಗಳು, ರಚನಾತ್ಮಕ ಕಾರ್ಯಕ್ರಮಗಳು ಮತ್ತು ಜಿಲ್ಲೆ ಸಮಸ್ಯೆಗಳು ಮತ್ತು ರಾಜ್ಯದ ನೀತಿಗಳ ಬಗ್ಗೆ ಮಾತಾಡಿದೆ.

**ಡಿಸೆಂಬರ್ ೨೧, ೧೯೮೫ ಬೆಂಗಳೂರು ಟೌನ್‌ಹಾಲ್ ಸಂಜೆ ೬ ಗಂಟೆ**

**ಪ್ರೊ. ದೇಜಗೌರವರಿಂದ ನನ್ನ ಜೀವನ ಚರಿತ್ರೆ ಪುಸ್ತಕ ಬಿಡುಗಡೆ**

ಬೆಳಿಗ್ಗೆ ೯ ಗಂಟೆಗೆ ಗಿರಿಜಾ, ವಿವೇಕ್‌ರೊಂದಿಗೆ ಹೊರಟೆ. ಮಂಜು ವಾಹನ ನಡೆಸುತ್ತಿದ್ದ. ಕೆ.ಕೆ.ಯನ್ನು ೧೨-೩೦ಕ್ಕೆ ತಲುಪಿದೆ. ಕಿರಣ್ ಮತ್ತು ಪಾರ್ವತಿ ಮತ್ತು ಮಕ್ಕಳು ಹಿಂದಿರುಗದಿದ್ದನ್ನು ತಿಳಿದು ಗೌರಿಯ ಜೊತೆಯಲ್ಲಿ ಊಟ ಮಾಡಿದೆ. ವಿಶ್ರಾಂತಿಯಾದ ಮೇಲೆ ನನ್ನನ್ನು ಕರೆದುಕೊಂಡು ಹೋಗುವುದಾಗಿ ಹೆಗಡೆ ಫೋನು ಮಾಡಿದರು. ಟೌನ್‌ಹಾಲ್ ಅನ್ನು ೬ ಗಂಟೆಗೆ ಸೇರಿದೆವು. ಕೆ.ಎಸ್. ಹೆಗಡೆಯವರು ಬರುವುದಕ್ಕೆ ೧೫ ನಿಮಿಷ ಕಾಯಬೇಕಾಯಿತು. ಸಭಾಂಗಣವು ಸುಮಾರಾಗಿ ತುಂಬಿತ್ತು. ಪ್ರೊ. ದೇ. ಜವರೇಗೌಡ ಬರೆದ ನನ್ನ ಜೀವನಚರಿತ್ರೆ ಪುಸ್ತಕ ಬಿಡುಗಡೆ ಸಮಾರಂಭ ಪ್ರಾರಂಭವಾಯಿತು ಮುಖ್ಯಮಂತ್ರಿ ಹೆಗಡೆಯವರು ಬೇರೆ ಎಲ್ಲೋ ಹೋಗಬೇಕಾಗಿದ್ದು ದರಿಂದ ಅವರು ಸಮಾರಂಭದ ಉದ್ಘಾಟನೆ ಮಾಡಿದರು. ಕೆ.ಎಸ್. ಹೆಗ್ಡೆಯವರು ಜೀವನ ಚರಿತ್ರೆಯನ್ನು ಬಿಡುಗಡೆ ಮಾಡಿದರು. ಕರ್ತೃ ಡಾ. ದೇಜಗೌ ಸ್ವಲ್ಪ ದೀರ್ಘವಾಗಿ ಮಾತನಾಡಿದರು. ಜತ್ತಿ, ಎಂಪಿಎಲ್ ಶಾಸ್ತ್ರಿ, ಚಂದ್ರಶೇಖರ್, ಕಡಿದಾಳು ಮಂಜಪ್ಪ ಮತ್ತು ಇನ್ನೊಂದಿಬ್ಬರು ನನ್ನನ್ನು ಹೊಗಳಿ ಮಾತನಾಡಿದರು. ನಾನು ಸ್ವಲ್ಪ ದೀರ್ಘವಾಗಿಯೇ ಉತ್ತರಿಸಿದೆ. ಅದನ್ನು ಮೆಚ್ಚಿದರೆಂದು ಆ ಮೇಲಿಂದ ಜನರು ಹೇಳಿದರು. ಅದರಲ್ಲಿಯೂ ವಿಶೇಷವಾಗಿ ನನ್ನ ಹೆಂಡತಿ ಮತ್ತು ನನ್ನ ಬಗ್ಗೆ ಮಾತಾಡಿದ್ದು ಚೆನ್ನಾಗಿತ್ತೆಂದು ಹೇಳಿದರು. ದುರದೃಷ್ಟವಶಾತ್ ಆಕೆ ಬರಲಾಗಲಿಲ್ಲ. ಏಕೆಂದರೆ ಹೆಚ್ಚಿನ ಸಂಖ್ಯೆಯ ಮೆಟ್ಟಿಲುಗಳನ್ನು ಹತ್ತಲಾಗುತ್ತಿರಲಿಲ್ಲ ಮತ್ತು ಕುರ್ಚಿಯಲ್ಲಿ ತೆಗೆದುಕೊಂಡು ಹೋಗುವುದು ಆಕೆಗೆ ಇಷ್ಟವಿರಲಿಲ್ಲ. ಅವಳಿಗೆ ಚೆನ್ನಾಗಿ ಕಣ್ಣೂ ಕಾಣುವುದಿಲ್ಲ. ಮಾಮೂಲಿನಂತೆ ನನಗೆ ಒಂದು ಶಾಲು ಮತ್ತು ವೃತ್ತಾಕಾರದ ತಟ್ಟೆ ಕೊಟ್ಟರು. ಹಾಗೆಯೇ ಕರ್ತೃ ದೇಜಗೌರಿಗೂ, ಒಟ್ಟಿನಲ್ಲಿ ಅದು ಒಳ್ಳೆಯ ಸಮಾರಂಭ. ಮೆಟ್ಟಿಲುಗಳು ಬಂದಾಗ ಮಾರ್ಗದರ್ಶನಕ್ಕೆ ವಿವೇಕ್ ಯಾವಾಗಲೂ ನನ್ನೊಟ್ಟಿಗಿದ್ದ. ಕಿರಣ್ ಮತ್ತು ಪಾರ್ವತಿ ಬಂದಿರಲಿಲ್ಲವೆಂದು ಕಾಣುತ್ತದೆ.

**ಫೆಬ್ರುವರಿ ೧೨, ೧೯೮೬**

ಬೆಳಿಗ್ಗೆ ನನಗೆ ತಿಳಿದ ಮೊದಲ ವಿಷಯವೆಂದರೆ ಹೆಗಡೆ ಮುಖ್ಯಮಂತ್ರಿ ಸ್ಥಾನಕ್ಕೆ ನೀಡಿದ ರಾಜೀನಾಮೆಯಿಂದ ಉದ್ಭವಿಸಿದ ಸಮಸ್ಯೆಯನ್ನು ಬಗೆಹರಿಸಲು ನಾನು ಬೆಂಗಳೂರಿಗೆ ತಕ್ಷಣ ಹೋಗಬೇಕೆಂದಿದ್ದಾರೆ ಎಂದು ಶಾಂತಮೂರ್ತಿಯು ದೂರವಾಣಿ ಮಾಡಿದುದು. ಅರ್ಧ ಗಂಟೆಯೊಳಗೆ ಡಾ. ಜೀವರಾಜ್ ಆಳ್ವರ ಜೊತೆಯಲ್ಲಿ ನನ್ನನ್ನು ಬೆಂಗಳೂರಿಗೆ ಕರೆತರಲು ಒಂದು ಕಾರನ್ನು ಕಳುಹಿಸಲಾಯಿತು. ವಿವೇಕ್ ಕೂಡ ಬಂದ. ತಕ್ಷಣ ಸಮಸ್ಯೆಯನ್ನು ಬಗೆಹರಿಸಲು ನನ್ನನ್ನು ಒತ್ತಾಯಿಸಲು ಲಕ್ಷ್ಮೀಸಾಗರ್ ಫೋನ್ ಮಾಡಿ

ನನ್ನನ್ನು ಕೇಳಿದರು. ಪತ್ರಿಕಾ ಜನರು ಬಂದು ನನ್ನನ್ನು ಕೇಳಿದರು. ಈಗ ರಾಜೀನಾಮೆ ನೀಡಿರುವುದು ಆಶ್ಚರ್ಯ, ಇದು ಕಾಲವಲ್ಲ ಎಂದು ಅವರಿಗೆ ಹೇಳಿದೆ. ಹೆಚ್ಚೇನೂ ಇಲ್ಲ. ಉಚ್ಚ ನ್ಯಾಯಾಲಯವು ತನ್ನ ತೀರ್ಮಾನವನ್ನು ಘೋಷಿಸಿದ ಕೂಡಲೆ ರಾಜೀನಾಮೆ ನೀಡಬೇಕಿತ್ತು ಎಂಬುದು ನನ್ನ ಭಾವನೆ. ಮುಂದುವರಿದುಕೊಂಡು ಬಂದು ಮತ್ತು ಲೋಕಾಯುಕ್ತ ವಿಚಾರಣೆ ಆದ ಮೇಲೆ ಈಗ ರಾಜೀನಾಮೆ ಕೊಡುವುದರಲ್ಲಿ ಅರ್ಥವಿಲ್ಲ. ನೆನ್ನೆ ದಿನದ ಪ್ರಯಾಣದಿಂದ ನನಗೆ ತುಂಬಾ ಸುಸ್ತಾಗಿದೆ. ವಿಶ್ರಾಂತಿ ಪಡೆದೆ. ಇಷ್ಟವಿಲ್ಲದಿದ್ದರೂ ಹೋಗಲು ತೀರ್ಮಾನಿಸಿ ೪ ಗಂಟೆಗೆ ಹೊರಟು ೭-೪೫ಕ್ಕೆ ತುಂಬಾ ನಿಧಾನವಾಗಿ ಕೆ.ಕೆ.ಯನ್ನು ತಲುಪಿದೆ. ಏಕೆಂದರೆ ನನಗೆ ಕಳುಹಿಸಿದ ಟ್ಯಾಕ್ಸಿಗೆ ಟೈರ್ ತೊಂದರೆಯಿತ್ತು. ಶಿವಪ್ಪನವರ ಕಾರಲ್ಲಿ ಬಂದೆ. ಹೊಸತಾದರೂ ತುಂಬಾ ನಿಧಾನವಾಗಿ ಬಂತು. ತುಂಬಾ ಸುಸ್ತಾಗಿದ್ದು ಸ್ವಲ್ಪ ಬ್ರೆಡ್‌ಅನ್ನು ತಿಂದು ಅಲ್ಲಿಯೇ ನಿದ್ದೆ ಮಾಡಿದೆ.

**ಫೆಬ್ರುವರಿ ೧೬, ೧೯೮೬**

ನಿಗದಿಪಡಿಸಿದಂತೆ ಮೊದಲು ಬೆಳಿಗ್ಗೆ ೧೦ ಗಂಟೆಗೆ ಪಕ್ಷದ ಮಂಡಳಿ ಮತ್ತು ನಂತರ ಸುಮಾರು ೧೦-೩೦ಕ್ಕೆ ಶಾಸಕಾಂಗ ಪಕ್ಷದ ಸಭೆ ನಡೆಯಿತು. ಕೆಲವೇ ನಿಮಿಷಗಳಲ್ಲಿ ಸರ್ವಾನುಮತದಿಂದ ಹೆಗಡೆಯನ್ನು ಪಕ್ಷದ ನಾಯಕರನ್ನಾಗಿ ಆರಿಸಿದ ಠರಾವನ್ನು ಅಂಗೀಕರಿಸಲಾಯಿತು. ಮಧ್ಯಾಹ್ನ ೧-೧೫ಕ್ಕೆ ಹೆಗಡೆಯವರು ರಾಜ್ಯಪಾಲರಿಗೆ ದೂರವಾಣಿ ಮಾಡಿ ತಮ್ಮ ಮತ್ತು ತಮ್ಮ ಮಂತ್ರಿಗಳ ಪ್ರಮಾಣವಚನ ಸಮಾರಂಭಕ್ಕೆ ವ್ಯವಸ್ಥೆ ಮಾಡಿದರೆಂದು ನನಗೆ ಹೇಳಲಾಯಿತು ಅವರು ಮತ್ತು ಈಗಿನ ಎಲ್ಲಾ ಸಂಪುಟ ಮಂತ್ರಿಗಳು, ರಾಜ್ಯ ಮತ್ತು ಉಪಮಂತ್ರಿಗಳು ಮಧ್ಯಾಹ್ನ ೩-೩೦ಕ್ಕೆ ಪ್ರಮಾಣವಚನ ಸ್ವೀಕರಿಸಿದರು. ಅದಾದ ಕೂಡಲೆ ಮಂತ್ರಿಮಂಡಲ ಸಭೆ ಸೇರಿ ಸುಮಾರು ೬ ಗಂಟೆಗೆ ಮುಕ್ತಾಯವಾಯಿತು.

**ಜುಲೈ ೨, ೧೯೮೬**

ತೋಟದ ಮಾಲಿ ಮಹಾಸ್ವಾಮಿಯ ಕೆಲಸದಲ್ಲಿ ನನ್ನ ಹೆಂಡತಿಯು ತಪ್ಪು ಕಂಡುಹಿಡಿದು ಬಯ್ಯುತ್ತಿದ್ದ ರೀತಿಯಿಂದ ಸ್ವಲ್ಪ ಬೇಜಾರಾಯಿತು. ಸಾಮಾನ್ಯವಾಗಿ ಆಕೆಗೆ ಆಳುಗಳು, ಮೆತ್ತಗಿರುವ ಅಡಿಗೆಯವರು, ಮಾಲಿ ಮತ್ತು ಹೆಣ್ಣಾಳುಗಳ ಬಗ್ಗೆ ಅಸಮಾಧಾನವಿರುತ್ತಿತ್ತು. ಆಕೆಗೆ ಆ ತಪ್ಪನ್ನು ಸರಿಪಡಿಸುವುದಕ್ಕಿಂತ ಕಂಡುಹಿಡಿಯುವುದರಲ್ಲೇ ಹೆಚ್ಚು ಆಸಕ್ತಿ. ಆಕೆಗೆ ಬುದ್ಧಿವಾದ ಹೇಳಿದರೂ ಆಕೆ ಏನೂ ಉತ್ತಮಗೊಂಡಿಲ್ಲ, ಅದು ನನಗೆ ಗೊಂದಲವುಂಟು ಮಾಡಿದೆ. "ಬಾಯಿ ಮುಚ್ಚು" ಎಂದು ಆಕೆಗೆ ಬೈದುದು ನನಗೆ ಬೇಸರವಾಗಿದೆ. ಸುಮ್ಮನಾದಳು. ಆದರೆ ಇಡೀ ದಿನ ನನಗೆ ಬೇಸರವಾಗಿತ್ತು. ಹೆಂಡತಿಯೂ ಕೂಡ ಅಸಾಧಾರಣವಾಗಿ ಮೌನವಾಗಿದ್ದಳು. ಆಕೆಯನ್ನು ಬೈದದ್ದು ಇದು ಎರಡನೆ ಸಲ. ಮೊದಲನೆ ಸಲ ಬಯ್ದದ್ದು ೫೫ ವರ್ಷಗಳ ಹಿಂದೆ, ನಾವು ಆಗತಾನೇ

ಮದುವೆಯಾಗಿದ್ದೆವು. ಆಗಲೂ ಅಷ್ಟೆ ಸೇವಕರನ್ನು ಗಡುಸಾಗಿ ನಡೆಸಿಕೊಂಡುದರಿಂದ "ರ್‍ಯಾಸ್ಕಲ್" ಎಂದು ಆಕೆಯನ್ನು ಬಯ್ದೆ. ರಾಜನು ಕೂಡ ಅವನ ತಾಯಿಯ ಹಾಗೇ! ಆಗಲೂ ನನಗೆ ಕೋಪಬರುತ್ತದೆ.

**ಆಗಸ್ಟ್ ೧೪, ೧೯೮೬**

ನನ್ನಷ್ಟಿಗೆ ನಾನೇ ಬೆಳಗಿನ ತಿಂಡಿ ಮತ್ತು ಊಟ ಮಾಡಿ ಮುಸ್ಲಿಂ ನಾಯಕರುಗಳಾದ ಸೈಯದ್ ಶಹಾಬುದ್ದೀನ್ ಮತ್ತು ಎಂ.ಜೆ. ಅಕ್ಬರ್‌ರವರ ಎರಡು ಹೇಳಿಕೆಗಳನ್ನು ಓದಿ ವಿಶ್ರಾಂತಿ ಪಡೆದೆ. ಒಂದು ಹೇಳಿಕೆ ತುಂಬಾ ಜಾತೀಯತೆಯಿಂದ ಕೂಡಿದ್ದು ಜನ ಉದ್ರೇಕಗೊಳ್ಳುವಂತಹುದು. ಮತ್ತು ಇನ್ನೊಂದು ಸಮಚಿತ್ತವಾಗಿತ್ತು. ಊಟ ಮತ್ತು ವಿಶ್ರಾಂತಿಯಾದ ಮೇಲೆ ಸಿ.ಎ.ಎಂ.ಗೆ ಹೋದೆ. ಬೆಳಿಗ್ಗೆ ನಾನು ಬರೆದು ಟೈಪು ಮಾಡಿಸಿದ್ದ ಠರಾವು ಅಂಗೀಕಾರವಾಯಿತು. ಸಂತೋಷ. ಈಗಿನ ಆರ್ಥಿಕ ಗೊಂದಲ, ನೀರಾವರಿ ಮತ್ತು ಗೃಹಕೈಗಾರಿಕೆಗಳ ಅಗತ್ಯಕ್ಕೆ ಸಂಬಂಧಪಟ್ಟಿತ್ತು. ರಾಷ್ಟ್ರಪತಿ ಭವನಕ್ಕೆ ಹೋದೆ. ಉಪರಾಷ್ಟ್ರಪತಿ ವೆಂಕಟರಾಮನ್ ಅಲ್ಲಿಗೆ ಕರೆತರಲು ತಮ್ಮ ಪಿ.ಎ.ಅನ್ನು ಕಳುಹಿಸಿದರು. ೧೬ನೇ ತಾರೀಕು ಬೆಳಿಗ್ಗೆ ನಾನು ಬರುವಂತೆ ಆಮಂತ್ರಿಸಿದರು. ನಂತರ ರಾಷ್ಟ್ರಪತಿ ಜೈಲ್‌ಸಿಂಗರು ನನ್ನನ್ನು ಅಪ್ಪಿಕೊಂಡು ಈ ದಿನ ತಾವು ಹೀಗಿರುವುದಕ್ಕೆ ನನ್ನ ಆಶೀರ್ವಾದವೇ ಕಾರಣ ಎಂದು ಪಿಸುನುಡಿದರು. ನನಗೆ ಗೊತ್ತಿಲ್ಲ. ಕೆಲವು ಹಳೆಯ ಸ್ನೇಹಿತರು, ವರದನ್ ಐಎಎಸ್ ಮತ್ತು ಅವರ ಕಾರ್ಯನಿರ್ವಾಹಕ ಅಧಿಕಾರಿ, ನಾನು ದೊಡ್ಡ ತಪ್ಪು ಮಾಡಿದ್ದೇನೆಂದು ಅವರು ಹೇಳಿದರು. (ಅಂದರೆ ಕಾಂಗ್ರೆಸ್‌ಅನ್ನು ಒಡೆದುದು). ಬೇಗಂ ಅಯಾಜ್ ರಸೂಲ್ ನನ್ನ ಜೊತೆಯಲ್ಲಿ ಕಾರಿನಲ್ಲಿದ್ದರು. ಹಳೆಯ ಕಾಲದ ವಿಷಯವನ್ನು ಜಂಬದಿಂದ ಮಾತಾಡಿದೆವು. ಸಾಯಂಕಾಲ ಸಂತೋಷವಾಗಿತ್ತು. ದೇಶದ ಸ್ವಾತಂತ್ರ್ಯಕ್ಕೆ ಕಷ್ಟ ಅನುಭವಿಸಿದ ಎಲ್ಲಾ ಹಳೆಯ ಮುಖಗಳು.

**ಸೆಪ್ಟೆಂಬರ್ ೩, ೧೯೮೬**

ಬೆಳಗಿನ ಉಪಾಹಾರವಾದಮೇಲೆ ೮-೩೦ಕ್ಕೆ ಬೆಳಗಾಂಗೆ ಹೊರಟೆ. ೧೧-೩೦ಕ್ಕೆ ಮೆಡಿಕಲ್ ಕಾಲೇಜನ್ನು ತಲುಪಿದೆವು. ಏಕೆಂದರೆ ಜೋಡಿಸುವ ರಸ್ತೆಯ ಮೂಲಕ ರಾಷ್ಟ್ರಪತಿಗಳು ಹಾದುಹೋಗುತ್ತಿದ್ದುದರಿಂದ "ಭದ್ರತಾ ಕಾರಣಗಳಿಗಾಗಿ" ನಗರದ ಹತ್ತಿರ ನಾವು ತಡೆ ಹಿಡಿಯಲ್ಪಟ್ಟೆವು. ಅತಿಥಿ ಕಂಟ್ರಾಕ್ಟರ್ ರಂಜಿತ್ ಮನೆಯಲ್ಲಿ ಊಟ ಮಾಡಿ ವಿಶ್ರಾಂತಿಸಿದೆ. ನಂತರ ಹೊಸ ಕಟ್ಟಡದ ಮುಂಭಾಗದ ಚಪ್ಪರಕ್ಕೆ ಹೋದೆ. ಸ್ವಲ್ಪ ಕಾಲ ಉಪಕುಲಪತಿ ಮತ್ತು ಇತರರ ಹತ್ತಿರ ಮಾತಾಡುತ್ತಿದ್ದೆ. ಬರುವಾಗಿನ ಸಾಂಪ್ರದಾಯಿಕತೆಗಳು ಮತ್ತು ರಾಷ್ಟ್ರಪತಿಯವರನ್ನು ಬರಮಾಡಿಕೊಳ್ಳುವುದು, ರಾಷ್ಟ್ರಗೀತೆ ಹಾಡುವುದು ಮುಂತಾದವು ಮುಗಿದ ಮೇಲೆ ಸಮಾರಂಭವು ಸಕಾಲಕ್ಕೆ ಪ್ರಾರಂಭ ವಾಯಿತು. ಜೈಲ್‌ಸಿಂಗ್‌ರಿಗೆ ನನ್ನನ್ನು ಪರಿಚಯಿಸಿಕೊಟ್ಟಾಗ ಅವರು ನನ್ನನ್ನು

ಅಪ್ಪಿಕೊಂಡಾಗ ಅವರಿಗೆ ರಕ್ಷಣೆಯ ಉಕ್ಕಿನ ಕವಚವಿರುವುದು ಭಾಸವಾಯಿತು. ರಾಷ್ಟ್ರಪತಿಗಳು ಆಸ್ಪತ್ರೆ ಕಟ್ಟಡದ ಅಸ್ತಿಭಾರವನ್ನು ಹಾಕಿ ಸಂಶೋಧನಾ ಆಸ್ಪತ್ರೆಯನ್ನು ಉದ್ಘಾಟಿಸಿದರು. ಕೆ.ಎಲ್.ಇ. ಸೊಸೈಟಿಯ ಅಧ್ಯಕ್ಷರಾದ ಪ್ರಭಾಕರ ಕೋರೆ ಸ್ವಾಗತಿಸಿದ ನಂತರ ಹೆಗಡೆ, ನಾನು ಮತ್ತು ರಾಜ್ಯಪಾಲರು ಮಾತಾಡಿದೆವು. ಕೆ.ಎಲ್.ಇ. ಸೊಸೈಟಿಯ ಪ್ರಾರಂಭದ ದಿನಗಳನ್ನು ಉಲ್ಲೇಖಿಸಿ ಒಳ್ಳೆಯದಾಗಲಿ ಎಂದು ಹಾರೈಸಿದೆ. ರಾಷ್ಟ್ರಪತಿಗಳು ತಮ್ಮ ಭಾಷಣ ಮಾಡಿದರು. ೧೭ ವರ್ಷಗಳ ಹಿಂದೆ, ಅವರು ಪಂಜಾಬ್ ಪಿಸಿಸಿ ಅಧ್ಯಕ್ಷರು ಮತ್ತು ಎಐಸಿಸಿಐನಲ್ಲಿದ್ದಾಗಿಗಿಂತ ಈಗ ಉತ್ತಮವಾಗಿದ್ದಾರೆ. ಸಮಾರಂಭವಾದ ಮೇಲೆ ಸಂಜೆ ೭ ಗಂಟೆಗೆ ಹುಬ್ಬಳ್ಳಿಗೆ ಹೊರಟು ಬೆಳಿಗೆ ೧೦ ಗಂಟೆಗೆ ತಲುಪಿದೆವು. ಉಮಾಕಾಂತನನ್ನು ನಾನು ನೋಡಬೇಕಿತ್ತು. ನಮ್ಮನ್ನು ನೋಡಿ ಅವರಿಗೆ ಸಂತೋಷ ವಾಯಿತು. ಮನೆಯಲ್ಲಿ ಅವನೊಬ್ಬನೆ ಕೆಲಸ ಮಾಡುತ್ತಿದ್ದುದನ್ನು ನೋಡಿ ನನಗೆ ದುಃಖ ವಾಯಿತು.

**ಸೆಪ್ಟೆಂಬರ್ ೧೬, ೧೯೮೬**

ನೆನ್ನೆ ರಾತ್ರಿ ಇಡಿ ಎರಡು ಅಂಗುಲಗಳಿಗಿಂತ ಹೆಚ್ಚಾಗಿ ಮಳೆ ಬಂತು. ಇದು ಬಹಳ ಜರೂರಾಗಿ ಬೇಕಾಗಿತ್ತು. ಅದು ವ್ಯಾಪಕವಾಗಿ ಹರಡಿದ್ದು ಒಣಗಿಹೋಗುತ್ತಿರುವ ಬೆಳೆಗಳ ರೈತರಿಗೆ ಸಹಾಯವಾಯಿತು. ಇವತ್ತು ಶೆಕೆ ಇದ್ದು ಈ ರಾತ್ರಿಯೂ ಮಳೆ ಬರುವ ನಿರೀಕ್ಷೆ.

ವೆಂಕಟಸ್ವಾಮಿ ವರದಿ ವಿರುದ್ಧ ಚಳುವಳಿಯು ಹಿಂಸೆಯ ರೂಪ ತಾಳುತ್ತಿದೆ. ಗೂಂಡಾಗಳ ಕೈಗೆ ಪರಿಸ್ಥಿತಿ ಹೋಗಿದೆಯೆಂದು ಕಾಣುತ್ತದೆ. ಅವರು ರೈಲು ಮತ್ತು ರಸ್ತೆ ಸಂಚಾರಕ್ಕೆ ಅಡ್ಡಿ ಮಾಡುತ್ತಿರುವರಲ್ಲದೆ ಬೆಂಗಳೂರು ನಗರದ ನೀರು ಸರಬರಾಜಿಗೂ ಅಡ್ಡಿ ಮಾಡಲು ಪ್ರಯತ್ನಿಸಿದ್ದಾರೆ. ಇದು ತುಂಬಾ ದೂರ ಹೋಗುತ್ತಿದೆ. ಸರಕಾರವು ತ್ವರಿತವಾಗಿ ಕ್ರಮ ಕೈಗೊಂಡು ಅಂತಹವರಿಗೆ ಶಿಕ್ಷೆಯಾಗುವಂತೆ ನೋಡಿಕೊಳ್ಳಬೇಕು. ಯಾವುದೇ ವಿಧವಾದ ನೇಮಕಾತಿ ಮುಂತಾದವುಗಳಿಗೆ ಶಿಫಾರಸು ಮಾಡುವುದಿಲ್ಲವೆಂದು ನಾನು ಗಟ್ಟಿ ಮನಸ್ಸು ಮಾಡಿದ್ದೇನೆ. ಆದರೆ ಅದು ನನ್ನ ಸಾರ್ವಜನಿಕ ವಿಷಯಗಳಿಗೆ ಮಾತ್ರ ಸೀಮಿತವಾಗಿರುತ್ತದೆ.

**ಸೆಪ್ಟೆಂಬರ್ ೩೦, ೧೯೮೬ — ಸರ್ದಾರ್ ಪಟೇಲ್ ಟ್ರಸ್ಟ್, ಮುಂಬಯಿ**

ಇವತ್ತು ಮೊಟ್ಟ ಮೊದಲಿಗೆ ಬಂದವರು ಶ್ರೀಮತಿ ಇಂದುಮತಿ ಆದ್ಯ ಮತ್ತು ಆಕೆಯ ಮಗ ಜೀವನ್. ಅವರನ್ನು ನೋಡಿ ಸಂತೋಷವಾಯಿತು, ಹಳೆಯ ವಿಷಯಗಳನ್ನು ಜ್ಞಾಪಿಸಿಕೊಂಡೆವು. ಆದ್ಯ ಅವರು ಘಟ್ಟಗಳಿಗೆ ಹೋಗಿರುವರೆಂದು ತಿಳಿಯಿತು. ಅವರೆಲ್ಲರೂ ಚೆನ್ನಾಗಿದ್ದಾರೆ. ನಂತರ ಹಳೆಯ ಸ್ನೇಹಿತ ಬೇಲ್‌ಪುರಿಶೆಟ್ಟಿ ಮತ್ತು ಅವರ ಮೊದಲ ಅಳಿಯ ಬಂದು ಒಂದು ಗಂಟೆ ಇದ್ದಾಗ ಹಳೆಯ ನೆನಪುಗಳು ಮರುಕಳಿಸಿದವು.

ಅವರಿಗೆ ಸ್ವಲ್ಪಮಟ್ಟಿನ ನಾಲಿಗೆಯ ಪಾರ್ಶ್ವವಾಯು ಇದ್ದು ಈಗ ಉತ್ತಮಗೊಳ್ಳುತ್ತಿದ್ದಾರೆ. ಅವರು ಹೋಗುವಾಗ ನನ್ನ ಜೇಬಿಗೆ ಒಂದು ಸಣ್ಣ ಪ್ಯಾಕೆಟನ್ನು ತುರುಕಿ ಬೇಗನೆ ಹೊರಟು ಹೋದರು. ನಂತರ ನೋಡಿದಾಗ ಆಶ್ಚರ್ಯವಾಗಿ ಅದರಲ್ಲಿ ೨೦೦೦ ರೂ.ಗಳಿದ್ದವು. ನಾನು ಹಿಂದಕ್ಕೆ ಹೋದ ತಕ್ಷಣವೇ ಅದನ್ನು ಹಿಂತಿರುಗಿಸಬೇಕು. ಏಕೆ ಹೀಗೆ ಮಾಡಿದರು ?

ಇಡೀ ದಿನ ನನ್ನ ವಿನಿಯೋಗದಲ್ಲಿದ್ದ ಟ್ಯಾಕ್ಸಿಯಲ್ಲಿ ಮರೈನ್ ಡ್ರೈವ್‌ನ 'ಓಷಿಯಾನಾ'ದಲ್ಲಿ ಮೊರಾರ್ಜಿಭಾಯಿಯವರಲ್ಲಿ ಮೀಟಿಂಗಿಗೆ ಹೋದೆ. ಸಾದಿಕ್ ಅಲಿ, ನಂದನ್ ಮಿಶ್ರಾ, ಮನುಭಾಯಿ ಪಟೇಲ್‌ರವರು ಕಚೇರಿ ಮ್ಯಾನೇಜರ್ ಜೊತೆಯಲ್ಲಿ ಹಾಜರಿದ್ದರು. ಸಭೆ ೩-೩೦ರಿಂದ ೬-೩೦ರವರೆಗೆ ನಡೆಯಿತು. ಕೆಲವು ಉಪಯುಕ್ತವಾದ ತೀರ್ಮಾನಗಳನ್ನು ಕೈಗೊಂಡೆವು. ನನ್ನ ಕೇಳಿಕೆಯ ಮೇರೆಗೆ ಮುಂದಿನ ಸಭೆಯನ್ನು ಬರೋಡಾದಲ್ಲಿ ಮಾಡುವುದೆಂದು ತೀರ್ಮಾನವಾಯಿತು, ಏಕೆಂದರೆ ಅಲ್ಲಿ ಒಂದು ಹಳ್ಳಿಯಲ್ಲಿ ಸ್ವಯಂ ಸಂಪೂರ್ಣತೆಯ ರಚನಾತ್ಮಕ ಕಾರ್ಯಗಳು ನಡೆಯುತ್ತಿವೆ ಎಂದು ಮೊರಾರ್ಜಿ ಹೇಳಿಕೊಳ್ಳುತ್ತಿದ್ದುದನ್ನು ನೋಡಬೇಕೆಂಬ ಆಸೆಯಿತ್ತು. ಮೊರಾರ್ಜಿಯವರು ತಾವೇ ಸ್ವತಃ ಅಲ್ಲಿಲ್ಲದಿರುವುದರಿಂದ ಅವರು ಹೇಳಿದ್ದು ಪೂರ್ಣವಾಗಿ ಸರಿ ಎಂಬುದರಲ್ಲಿ ಸಂದೇಹವಿದೆ. ಅವರು ಅದೇ ಹಳೆಯ ಸ್ವಂತ ಅಭಿಪ್ರಾಯದ ಮನುಷ್ಯರಾಗಿದ್ದಾರೆ. ಆದರೆ ಎಲ್ಲ ವಿಷಯದಲ್ಲಿ ತಮ್ಮದೇ ರೀತಿಯನ್ನು ಹೊಂದಲಾಗುತ್ತಿರಲಿಲ್ಲ. ಶ್ಯಾಮ್‌ನಂದನ್ ಮಿಶ್ರ (ಶ್ಯಾಂಬಾಬು) ಅದೇ ಹಳೆಯ ಖಂಡಿತ ಮಾತು, ಸ್ವಯಂ ಅಭಿಪ್ರಾಯವುಳ್ಳವರಾಗಿದ್ದು ವಿರುದ್ಧ ಅಭಿಪ್ರಾಯಗಳನ್ನು ಹೇಳಲು ಪ್ರಯತ್ನಿಸುತ್ತಿದ್ದರು. ಮ್ಯಾನೇಜಿಂಗ್ ಟ್ರಸ್ಟಿ ಮನುಭಾಯಿ ಪಟೇಲ್ ಕೂಡ ತಮ್ಮದೇ ರೀತಿ ಇರಬೇಕೆಂದು ಹೇಳುವವರು, ಶೀಘ್ರವಾಗಿ ಮಣಿಯುತ್ತಾರೆ.

ನಂತರ ದಿವಂಗತ ಹಫಿಜ್ನಾ ವಾಸಿಸುತ್ತಿದ್ದ 'ರಿಲೇ ಹೌಸ್'ಗೆ ಹೋದೆವು. ರಸ್ತೆಯ ಹೆಸರನ್ನು ಬದಲಾಯಿಸಲಾಗಿದೆಯಾದ್ದರಿಂದ ಕಂಡುಹಿಡಿಯಲು ಕಷ್ಟವಾಯಿತು. ಡ್ರೈವರ್ ಮಹದೇವ್ ಹುಡುಕಿ ಕುಮುದ್ ಹಫಿಜ್ನಾರನ್ನು ಕರೆತಂದನು. ಗಂಡನ ಮರಣಾನಂತರ ಆಕೆ ಕಷ್ಟಗಳನ್ನು ಎದುರಿಸುತ್ತಿರುವಂತೆ ಕಾಣುತ್ತದೆ. ತಮ್ಮ ದುಡ್ಡಿನ ಬಗ್ಗೆ ಕಾತುರರಾಗಿದ್ದು ಗಂಡನ ನಂಟರನ್ನು ಸಂದೇಹಿಸುತ್ತಾರೆ. ಅವರ ಸಹೋದರಿ ಮತ್ತು ಆಕೆಯ ಮಕ್ಕಳು ಇದ್ದ ಸಮಯ ಬಿಟ್ಟು ತಾನೊಬ್ಬಳೇ ಇದ್ದಾಗ ತನ್ನ ಕಷ್ಟಗಳನ್ನೆಲ್ಲಾ ತೋಡಿಕೊಂಡಳು. ಆಕೆ ಮುಸ್ಲಿಂ ಜಾತಿಗೆ ಮತಾಂತರ ಹೊಂದಿ ಕುಮು ಎಂದು ಕರೆಯಲ್ಪಡುತ್ತಿದ್ದಾಳೆ ಎಂದು ತಿಳಿಯಿತು. ಆಕೆಗೆ ನನ್ನ ಸಹಾನುಭೂತಿ ಮತ್ತು ಸಹಾಯ ಬೇಕಿತ್ತು. ನನ್ನ ಕೈಯಲಾಗುವುದನ್ನೆಲ್ಲ ಮಾಡುವೆನೆಂದು ಹೇಳಿದೆ. ಹೇಗೆ ಸಹಾಯ ಮಾಡುತ್ತೇನೆಂದು ನನಗೆ ತಿಳಿಯದು. ಅತಿಥಿಗೃಹವು ಸಾಕಷ್ಟು ಅನುಕೂಲವಾಗಿದೆ.

**ಅಕ್ಟೋಬರ್ ೯, ೧೯೮೬**

ಆಶ್ಚರ್ಯ. ಒಬ್ಬ ಪಂಜಾಬಿ ಉಗ್ರವಾದಿ ಎಂದು ಹೇಳಿಕೊಳ್ಳುವವನೊಬ್ಬನಿಂದ ನನಗೆ ಕನ್ನಡದಲ್ಲಿ ಒಂದು ಅನಾಮಧೇಯ ಪತ್ರ ಬಂದು ನನ್ನನ್ನು ಗುಂಡಿಕ್ಕಿ ಕೊಲ್ಲಲಾಗುವುದೆಂದು ಬರೆದಿದ್ದಾನೆ. ಕೈಬರಹವು ಬಹಳ ಕಷ್ಟಪಟ್ಟು ಬರೆದಂತಿದೆ. ಇದು ಕೇವಲ ಅರಿಯದೇ ಮಾಡಿರುವ ತುಂಟಾಟ ಎಂಬುದು ಖಂಡಿತ. ರಾಜಣ್ಣ ಮತ್ತು ನಾನು ಇಬ್ಬರೂ ಮನಸಾರೆ ನಕ್ಕೆವು. ಆದರೆ ರಾಜಣ್ಣನಿಗೆ ಇದನ್ನು ಎಸ್.ಪಿ.ಗೆ ಕಳುಹಿಸಬೇಕೆಂದಿದ್ದಾನೆ. ನಾನು ಕಳುಹಿಸಬಹುದು ಎಂದೆ.

**ಡಿಸೆಂಬರ್ ೭, ೧೯೮೬**

ಪಾರ್ಲಿಮೆಂಟ್ ಸದಸ್ಯರಾದ ಬಸವರಾಜೇಶ್ವರಿ, ಬಸವರಾಜು, ರಾಮೇಗೌಡ ಬಂದು ನೀರಾವರಿ ಮುಂತಾದ ವಿಷಯಗಳನ್ನು ಮಾತನಾಡಿದರು. ನಾನು ಪ್ರಧಾನಿಯನ್ನು ನೋಡಬೇಕೆಂದರು. ಜಾಫರ್ ಷರೀಫ್ ಮತ್ತು ಪತ್ರಿಕಾಕರ್ತ ಪಾಟೀಲ್ ಸೌಜನ್ಯ ಭೇಟಿಗಾಗಿ ಬಂದರು. ಹಾಗೆಯೇ ಶಾಮ್‌ಧರ್‌ಮಿಶ್ರ, ಮಾಜಿ ಕಾರ್ಯದರ್ಶಿ ಅಶೋಕ್ ೧ ಗಂಟೆಗೆ ಬಂದು ಇಬ್ಬರೂ ಊಟಕ್ಕೆ ಪ್ರೊ. ಸೋಂಧಿಯವರ ಮನೆಗೆ ಹೋದೆವು. ಅಲ್ಲಿ ಒಬ್ಬ ಬೌದ್ಧ ಪೂಜಾರಿ, ಪ್ರಸಿದ್ಧ ಗ್ರಂಥಕರ್ತ ಮತ್ತು ಪತ್ರಿಕಾಕರ್ತ ಮೆಲ್‌ವಿಲ್ಲೆ ಡಿಮೆಲ್ಲೊ ಮತ್ತು ಆತನ ಹೆಂಡತಿ (ಭಾರತೀಯ) ಯನ್ನು ಭೇಟಿ ಮಾಡಿದೆ. 'ಇಂಡಿಯಾ ಟುಡೇ'ಯ ದೆಹಲಿಯ ಬಾತ್ಮೀದಾರ ಮತ್ತು ಆತನ ಹೆಂಡತಿ, ಒಬ್ಬ ಪ್ರೊಫೆಸರ್ ಮತ್ತು ಆತನ ಹೆಂಡತಿ (ಕನ್ನಡಿಗರು) ಎಲ್ಲರೂ ಒಟ್ಟಿಗೆ ಸೇರಿ ೧-೩೦ ರಿಂದ ೪ ಗಂಟೆವರೆಗೆ ಕಳೆದೆವು. ನಾನು ವಿಶ್ವಶಾಂತಿ ನೇತೃತ್ವ ವಹಿಸಬೇಕೆಂಬುದು ಪ್ರೊ. ಸೋಂಧಿ ಇಚ್ಛೆ. ಅವರಿಗೆ ಬರೆಯುತ್ತೇನೆಂದು ವಾಗ್ದಾನ ಮಾಡಿದೆ. ಡಿಮೆಲ್ಲೊ ಮತ್ತು ಟಿಬೆಟ್‌ನ ಪಾದ್ರಿಯ ಜೊತೆಯಲ್ಲಿ ಅನೇಕ ವಿಷಯಗಳು ಅಂದರೆ ಹಳೆಯ ಮತ್ತು ಈಗಿನ ಭಾರತದ ಪ್ರಸಿದ್ಧ ವ್ಯಕ್ತಿಗಳ ಬಗ್ಗೆ ಮಾತನಾಡಿದೆವು. ಅವರೆಲ್ಲರನ್ನೂ ಬೀಳ್ಕೊಟ್ಟು ಅಶೋಕನನ್ನು ಮನೆಗೆ ೪-೩೦ಕ್ಕೆ ಕಳುಹಿಸಿದೆ. ಸ್ವಲ್ಪ ವಿಶ್ರಾಂತಿ. ನನ್ನ ಕೋರಿಕೆಯ ಮೇರೆಗೆ ಸ್ವಲ್ಪ ಸಮಯ ಮಾಡಿಕೊಂಡು ಪಿ.ವಿ. ನರಸಿಂಹರಾವ್ ಸಂಜೆ ೬ ಗಂಟೆಗೆ ಬಂದು ಒಂದು ಗಂಟೆ ಕಾಲ ಇದ್ದರು. ಈಗಿನ ಪರಿಸ್ಥಿತಿ ಮತ್ತು ವಿಶ್ವಶಾಂತಿಯ ಬಗ್ಗೆ ಚರ್ಚಿಸಿದೆವು. ಕರ್ನಾಟಕ ಸರಕಾರದಿಂದ ಸ್ವಲ್ಪ ಸಹಾಯಧನ (೬ ಲಕ್ಷ ರೂ.ಗಳು) ಬೇಕೆಂದರು. ಅದು ಸ್ವಾಮಿ ರಮಾನಂದ ತೀರ್ಥ ಮೆಮೋರಿಯಲ್‌ಗೆ. ಪ್ರಧಾನಿಯು ಬಹಳ ವಿವೇಚನೆಯುಳ್ಳವರು ಎಂದರು. ಕರ್ನಾಟಕ ಹಿಂದಿ ಪ್ರಚಾರ ಸಮಿತಿಗೆ ಸಹಾಯ ಮಾಡುವ ವಾಗ್ದಾನ ಮಾಡಿದರು.

**ಜನವರಿ ೧೧, ೧೯೮೭**

ನಿಗದಿಪಡಿಸಿದಂತೆ ಬೆಳಿಗ್ಗೆ ೯ ಗಂಟೆಗೆ ದಲಾಯಿಲಾಮಾರನ್ನು ಅಶೋಕ ಹೋಟೆಲ್‌ನ ಲನೆ ಮಹಡಿಯ ಸುಸಜ್ಜಿತ ಕೋಣೆಯಲ್ಲಿ ಭೇಟಿ ಮಾಡಿದೆ. ಅರ್ಧ ಗಂಟೆ ಕಾಲ ಚರ್ಚಿಸಿ ಭಾರತವು ಒಂದು ಸಮಿತಿಯನ್ನು ರಚಿಸಿ ಸಂಬಂಧಪಟ್ಟ ದೇಶಗಳ ನಾಯಕರ ಸಹಕಾರ ಪಡೆದು ಇಡೀ ವಿಶ್ವದಲ್ಲಿ ಪ್ರವಾಸ ಮಾಡಿ ವಿಶ್ವಶಾಂತಿಗೆ ಮನವಿ ಮಾಡಲು ಮುಂದಾಳತ್ವ ವಹಿಸುವ ಅಗತ್ಯತೆಯನ್ನು ಚರ್ಚಿಸಿದೆವು. ಅದು ನನ್ನ ಸಲಹೆ. ಅದನ್ನು ಪರಿಗಣಿಸುವುದಾಗಿಯೂ ಮತ್ತು ನಾನು ಮುಂದಿನ ಸಲ ದೆಹಲಿಗೆ ಹೋದಾಗ ಚರ್ಚಿಸುವುದಾಗಿ ವಾಗ್ದಾನ ಮಾಡಿದೆ. ಕರ್ನಾಟಕದಲ್ಲಿ ಅವರ ಕ್ಯಾಂಪುಗಳ ಬಗ್ಗೆ ಕೂಡ ಚರ್ಚಿಸಿದೆವು. ಅವರಿಗೆ ಸಂತೋಷವಾಗಿದೆ. ಅವರ ಸದಾಶಯಗಳನ್ನೊಳಗೊಂಡ ಅವರ ಪುಸ್ತಕ 'ಕೈಂಡ್‌ನೆಸ್, ಚಾರಿಟಿ ಅಂಡ್ ಇನ್‌ಸೈಟ್' ಎಂಬುದನ್ನು ನೀಡಿದರು.

ಸಿವಿಲ್ ಏರಿಯಾಕ್ಕೆ ಹೋಗಿ ಸತ್ಯಾಗ್ರಹಿ ಎಂ. ಪರಮನೇಮಗೆ ಸನ್ಮಾನ ಸಮಾರಂಭದ ಅಧ್ಯಕ್ಷತೆ ವಹಿಸಿದೆ. ಇದು (ಪೆರುಪಾಲು) ತಮಿಳ ಸಂಘ ಕಟ್ಟಡದಲ್ಲಿ ಬಹಳ ಒಳ್ಳೆಯ ಜನಸಂದಣಿ ಇತ್ತು. ಅಸೆಂಬ್ಲಿಯಲ್ಲಿ ಜನತಾಪಕ್ಷದ ಮುಖ್ಯ ಸಚೇತಕರೂ ಸೇರಿದಂತೆ ಅವರ ಪ್ರಶಂಸಕರಲ್ಲಿ ಹೆಚ್ಚಿನವರು ಭಾಷಣಗಳನ್ನು ಮಾಡಿದರು. ಎಂ.ಸಿ. ಪೆರುಮಾಳ್ ಸೂಕ್ತವಾದ ಚಿಕ್ಕ ಭಾಷಣ ಮಾಡಿದರು. ಸಾಯಂಕಾಲ ಡಾ. ಹೆಚ್.ಎಲ್. ತಿಮ್ಮೇಗೌಡ ನನ್ನೊಡನೆ ಒಂದು ಗಂಟೆ ಇದ್ದರು. ಅವರು ಇಲ್ಲಿದ್ದಾಗ ದಾವಣಗೆರೆಯ ಗುಡ್ಡಗಾಡು ಜನರೂ ಸೇರಿದಂತೆ ಅನೇಕರು ನನ್ನನ್ನು ಭೇಟಿ ಮಾಡಿದರು.

**ಏಪ್ರಿಲ್ ೧೩, ೧೯೮೭**

ನಿರೀಕ್ಷಿಸಿದಂತೆ ರಾಜ್ಯಸಭೆಯಲ್ಲಿ ಗೊಂದಲವಾಗಿ ಯಾವುದೇ ವಹಿವಾಟನ್ನು ನಡೆಸದೆ ಮುಂದೂಡಲಾಯಿತು. ಎಲ್ಲ ಪತ್ರಿಕೆಗಳ ತುಂಬಾ ವಿ.ಪಿ. ಸಿಂಗರ ರಾಜೀನಾಮೆ, ಅದನ್ನ ಪ್ರಧಾನಮಂತ್ರಿಯವರು ತಕ್ಷಣ ಒಪ್ಪಿಕೊಳ್ಳುವಂತೆ ರಾಷ್ಟ್ರಪತಿಗೆ ಕಳುಹಿಸಿದುದು ಇತ್ತು. ಸಿಂಗರ ನೇಮಕಾತಿ ಮತ್ತು ಒಬ್ಬ ಭಾರತೀಯನಿಗೆ ರಕ್ಷಣಾ ಆದೇಶಗಳನ್ನು ನೀಡಿ ೩೦ ಕೋಟಿ ರೂಪಾಯಿಗಳ ಕಮೀಷನ್ ನಿಶ್ಚಯವಾಗಿ ಕೇಂದ್ರ ಸರ್ಕಾರದ ಅಸತ್ಯತೆ ಮತ್ತು ರಾಜೀವ್‌ಗಾಂಧಿ 'ಶುದ್ಧ' ಎಂಬುದರ ಬಗ್ಗೆ ಸಂದೇಹವನ್ನು ಉಂಟು ಮಾಡುತ್ತದೆ. ಸಿಂಗ್‌ರನ್ನು ಹಣಕಾಸು ಸಚಿವ ಮಂಡಲದಿಂದ ಹೊರಕಳುಹಿಸಿದ ರೀತಿ, ಬಹಳ ಮುಖ್ಯವಾದ ವಾಣಿಜ್ಯ ಗೃಹಗಳ ವಿರುದ್ಧ ಅದರ ಹಿಂದಿನ ಕ್ರಮಗಳು ಮತ್ತು ಅವುಗಳಲ್ಲಿ ಕೆಲವರಿಗೆ ಶಿಕ್ಷೆ, ವಿದೇಶಿ (ಅಮೆರಿಕ) ಏಜೆನ್ಸಿಯು ಬ್ಯಾಂಕುಗಳಲ್ಲಿ ಇಂದಿರಾರ ಬ್ಯಾಂಕ್ ಲೆಕ್ಕಗಳನ್ನು ಕಂಡುಹಿಡಿಯಲು ನೇಮಕಾತಿ ಮತ್ತು ಈಗ ಈ ಕಮೀಷನ್ ಏಜೆನ್ಸಿಯ ದುರ್ನಡತೆ ಇವೆಲ್ಲವೂ ರಾಜೀವ್‌ಗಾಂಧಿ 'ಶುದ್ಧ' ಎಂಬುದರ ಬಗ್ಗೆ ಈಗ ತುಂಬಾ ಸಂದೇಹವಿದೆ. ಪ್ರತಿಪಕ್ಷಗಳು ಈ ಪರಿಸ್ಥಿತಿಯನ್ನು ಸರಿಯಾಗಿ ಸದುಪಯೋಗ ಮಾಡಿಕೊಳ್ಳಬೇಕು.

**ಮೇ ೧೨, ೧೯೮೭**

ಗೋವಾಕ್ಕೆ ರಾಜ್ಯದ ಸ್ಥಾನಮಾನವನ್ನು ನೀಡಲಾಗಿದೆ. ಅಂತಹ ಸಣ್ಣ ರಾಜ್ಯಗಳನ್ನು ಹೊಂದಿರಬೇಕಾಗಿರುವುದು ಅಗತ್ಯವೇ ಎಂಬುದು ಖಚಿತವಿಲ್ಲ. ಆದರೆ ಈ ೩೦೦-೪೦೦ ವರ್ಷಗಳ ಅದರ ಇತಿಹಾಸ ಮತ್ತು ಸಂಸ್ಕೃತಿಗೆ ಅಗತ್ಯವೆಂದು ಕಾಣುತ್ತದೆ. ನನಗೆ ಅನೇಕ ಸಲ ಬಂದಿರುವ ಭಾವನೆಯೆಂದರೆ ೪ ರಿಂದ ೫ ಕೋಟಿ ಜನಸಂಖ್ಯೆ ಇರುವ ೨೫ ಅನುಕೂಲವಾಗಿರುವ ರಾಜ್ಯಗಳು ಭಾರತದಲ್ಲಿರಬೇಕು. ಹಿಂದೀ ಪ್ರದೇಶವನ್ನು ೫-೬ ರಾಜ್ಯಗಳಾಗಿ ಪುನಃ ವಿಭಾಗಿಸಬಹುದು. ಇದು ಕಷ್ಟವಾದ ಮತ್ತು ತೊಡಕಾದ ಪ್ರಶ್ನೆ. ಅಗತ್ಯವೆಂದು ಕಂಡುಬಂದರೂ ಅಸಂತೋಷ ಪರಿಣಾಮಗಳನ್ನುಂಟುಮಾಡಿದರೂ ಪಂಜಾಬಿನ ಮೇಲೆ ರಾಷ್ಟ್ರಪತಿ ಆಳ್ವಿಕೆಯನ್ನು ಹೇರಲಾಗಿದೆ. ಕಾಯ್ದು ನೋಡಬೇಕು.

**ಜುಲೈ ೨೨, ೧೯೮೭**

ಆಹ್ವಾನದ ಮೇಲೆ ಪ್ರೊ. ಸೋಂಧಿ ಮತ್ತು ಅವರ ಪತ್ನಿ ಮಾಧುರಿ ಬೆಳಗಿನ ಉಪಾಹಾರಕ್ಕೆ ಬಂದು ಒಂದು ಗಂಟೆ ಕಾಲ ಇದ್ದರು. ಬೇಗನೆ ನನ್ನ ಆತ್ಮಚರಿತ್ರೆಯನ್ನು ಪ್ರಕಟಿಸಬೇಕು. ವಿಶ್ವಶಾಂತಿಗೆ ವಿಶ್ವ ಚಳವಳಿಯತ್ತ ನಾನು ಹೆಜ್ಜೆಯಿಡಬೇಕೆಂದು ಮತ್ತು ದಲಾಯಿಲಾಮಾ ಮತ್ತು ಭಾರತದ ನಾಯಕರುಗಳನ್ನು ಇದರಲ್ಲಿ ತೊಡಗಿಸಬೇಕೆಂದರು. ಏನೋ ಸ್ವಲ್ಪ ಗಲಿಬಿಲಿ. ಮೋಹನ್ ಒಂದು ಗಂಟೆ ಸಮಯವನ್ನು ಹಾಳು ಮಾಡಿದನು.

ಮಧ್ಯಾಹ್ನದ ಊಟ ಮತ್ತು ವಿಶ್ರಾಂತಿಯಾದ ಮೇಲೆ ಭಾರತ ಸ್ವಾತಂತ್ರ್ಯದ ೪೦ನೇ ವಾರ್ಷಿಕೋತ್ಸವದ ಮತ್ತು ನೆಹರೂ ಶತಮಾನೋತ್ಸವದ ರಾಷ್ಟ್ರೀಯ ಸಮಿತಿ ಸಮ್ಮೇಳನದ ಎರಡನೆ ಸಭೆಗೆ ಅವರಿಂದ ಕಳುಹಿಸಲ್ಪಟ್ಟ ಕಾರಿನಲ್ಲಿ ೫-೩೦ಕ್ಕೆ ಹೋದೆ. ೬ ಗಂಟೆಗೆ ತಲುಪಿ ಅಲ್ಲಿ ಚುನಾಯಿತ ರಾಷ್ಟ್ರಪತಿ ವೆಂಕಟರಾಮನ್ ಮತ್ತು ಪ್ರಧಾನಮಂತ್ರಿ ಬರಲು ೬-೩೦ ವರೆಗೆ ಕಾಯಬೇಕಾಯಿತು. ಅನವಶ್ಯಕವಾದ ಕಟ್ಟುನಿಟ್ಟಾದ ಭದ್ರತಾ ವ್ಯವಸ್ಥೆ. ಸುಮಾರು ೫೦ ಜನ ಭಾಗವಹಿಸಬಹುದೆಂದುಕೊಂಡಿದ್ದೆ. ಆದರೆ ೩೦೦ ರಿಂದ ೪೦೦ ಜನರಿದ್ದ ದೊಡ್ಡ ಸಮ್ಮೇಳನ. ಅಧ್ಯಕ್ಷರು ಮತ್ತು ಪ್ರಧಾನಿಯಿಂದ ಪ್ರಾಸ್ತಾವಿಕಗಳಾದ ಮೇಲೆ ಮತ್ತು ಶೀಲಾ ಕೌಲ್‌ರಿಂದ ವರದಿ ಓದಿಯಾದ ಮೇಲೆ ಚೀಟಿಗಳನ್ನು ಕಳುಹಿಸಿದ್ದ ಸದಸ್ಯರಿಗೆ ಸಲಹೆಗಳ ಮೇಲೆ ಮಾತಾಡಲು ಅವಕಾಶ ಕೊಡಲಾಯಿತು ಸುಮಾರು ೨೫ ರಿಂದ ೩೦ ಜನರು ಮಾತನಾಡಿದರು. ನಾನು ಮುಕ್ತ ಮತ್ತು ಕಡ್ಡಾಯ ಶಿಕ್ಷಣ ಮತ್ತು ಗುಡಿ ಕೈಗಾರಿಕೆಗಳ ಮೇಲೆ ಮಾತಾಡಿದೆ. ಅದರಿಂದ ಹೆಚ್ಚಿಗೆ ಏನೂ ಆಗುವುದಿಲ್ಲವೆಂದು ನನಗೆ ತಿಳಿದಿದೆ. ರಾತ್ರಿ ೯ಕ್ಕೆ ಮುಗಿಯಿತು. ಜತ್ತಿಯವರು ನನಗೆ ಹೊರಗೆ ಬರಲು ಸಹಾಯ ಮಾಡಿದರು.

**ಜುಲೈ ೨೩, ೧೯೮೭**

ನನ್ನ ಮೊಮ್ಮಗ ಅಶೋಕ್ ಬಂದು ಸ್ವಲ್ಪ ಸಮಯ ಕಳೆದ.

ಈ ದಿನ ಬೆಳಿಗ್ಗೆ ಡಾ. ಪಿ.ಎನ್. ಚೋಪ್ರಾ ಮತ್ತು ಆತನ ಹೆಂಡತಿಯನ್ನು ಬೆಳಗಿನ ಉಪಾಹಾರಕ್ಕೆ ಆಮಂತ್ರಿಸಿದೆ. ಸ್ವಾತಂತ್ರ್ಯ ಚಳವಳಿಯ ಇತಿಹಾಸದ ಪ್ರಧಾನ ಸಂಪಾದಕ ಅವರು. ಅವರು ನನಗೆ ಎರಡು ಸಂಪುಟಗಳನ್ನು ನೀಡಿದರು. ಒಂದು ತುಂಬಾ ಗಾತ್ರದ್ದು. ನಾವು ಎರಡು ಗಂಟೆಗಳ ಕಾಲ ಅಂದರೆ ೧೦-೩೦ರವರೆಗೆ ಒಟ್ಟಿಗಿದ್ದೆವು. ಪ್ರಸಕ್ತ ರಾಜಕೀಯ ಪರಿಸ್ಥಿತಿಯನ್ನು ಚರ್ಚಿಸಿ ಅತೃಪ್ತಿಯನ್ನು ವ್ಯಕ್ತಪಡಿಸಿದೆವು. ಅನೇಕ ವಿಷಯಗಳ ಬಗ್ಗೆ ಒಪ್ಪಿದೆವು.

ಕಾನ್‌ಸ್ಟಿಟ್ಯುಟೆಂಟ್ ಅಸೆಂಬ್ಲಿ ಸದಸ್ಯರ ಸಂಘದ ಸೆಕ್ರೆಟರಿ ಎಂ.ಎನ್. ದ್ವಿವೇದಿಯವರ ನಂ. ೧೩ ಕಾಲೇಜ್ ರಸ್ತೆಯಲ್ಲಿರುವ ನಿವಾಸಕ್ಕೆ ಹೋಗಿ ಅವರ ಜೊತೆಯಲ್ಲಿ ಒಂದು ಗಂಟೆ ಕಳೆದೆವು. ಸಂಘದ ಸಭೆಯು ೧೪ನೇ ತಾರೀಕು ನಡೆಯುತ್ತದೆಂದು ಹೇಳಿದರು. ಹೊಸ ಅಧ್ಯಕ್ಷರನ್ನು ಭೇಟಿ ಮಾಡಿ ಸ್ವಾತಂತ್ರ್ಯ ದಿನಾಚರಣೆಯ ಸಮಾರಂಭದಲ್ಲಿ ಭಾಗವಹಿಸುವಂತೆಯೂ ಮತ್ತು ಪ್ರೊ. ಸೋಂಧಿ ಸಲಹೆ ಮಾಡಿದಂತೆ ನೆಹ್ರೂ ವಿಶ್ವವಿದ್ಯಾನಿಲಯದಲ್ಲಿ ಮಾತಾಡಬೇಕೆಂದಾಯಿತು. ನಾನು ೧೩ನೇ ತಾರೀಕು ಹುಡುಗರ ಜೊತೆಯಲ್ಲಿ ನನ್ನನ್ನು ಮಧ್ಯಾಹ್ನದೂಟಕ್ಕೆ ತನ್ನ ಮನೆಗೆ ಕರೆದೊಯ್ದನು. ಮಧ್ಯಾಹ್ನ ೪ ಗಂಟೆಗೆ, ನೀರಾವರಿ ಮಂತ್ರಿ ಶಂಕರಾನಂದ್ ನನ್ನನ್ನು ಭೇಟಿ ಮಾಡಿ ರಾಜಕೀಯ ಸ್ಥಿತಿಯನ್ನು ಚರ್ಚಿಸುತ್ತಾ ೧ ೧/೨ ಗಂಟೆ ಕಳೆದರು. ರಾಜೀವ್ ಸುತ್ತ ಒಳ್ಳೆಯ ಸಲಹೆಗಾರರಿರಬೇಕೆಂದೂ ಮತ್ತು ವಯಸ್ಸಾದ ನಮ್ಮಂತಹವರು ಅವರಿಗೆ ಸಲಹೆ ಕೊಡಬೇಕೆಂದು ಅವರು ಹೇಳಿದರು. ವರಾಂಡಾದಲ್ಲಿ ನೆನ್ನೆ ಮತ್ತು ಇಂದು ಅರ್ಧಗಂಟೆ ನಡೆದೆ.

**ಜುಲೈ ೨೫, ೧೯೮೭**

ನೆನ್ನೆ ನನ್ನ ಮೊಮ್ಮಗ ಅಶೋಕ್ ಸ್ವಲ್ಪ ಕಾಲ ಬಂದಿದ್ದ. ಅವನ ಮನಸ್ಸಿನಲ್ಲಿ ಇನ್ನೂ ರಾಜಕೀಯ ದುಂಬಿ ಗುಯ್‌ಗುಡುತ್ತಿದೆ. ಆದರೆ ಅವನು ಯಾವ ಪಕ್ಷವನ್ನು ಸೇರಬೇಕು. ಸರಕಾರಿ ಪ್ರಕಟಣೆಗಳ ಇತರೆ ೫ ಸಂಪುಟಗಳನ್ನು ಡಾ. ಚೋಪ್ರ ಬಂದು ನನಗೆ ನೀಡಿದರು. ಅದನ್ನು ಚೆನ್ನಾಗಿ ಪ್ಯಾಕ್ ಮಾಡಲಾಗಿತ್ತು. ೧೦-೧೫ಕ್ಕೆ ದೆಹಲಿ ಬಿಟ್ಟು ಕೆಲವು ನಿಮಿಷಗಳ ಮುಂಚೆಯೇ ಬೆಂಗಳೂರನ್ನು ತಲುಪಿದೆ. ವಿಮಾನದಲ್ಲಿ ಜತ್ತಿ ನನ್ನ ಬದಿಯೇ ಕುಳಿತಿದ್ದರು. ನಾನು ಹೇಳಿದ್ದಕ್ಕೆಲ್ಲಾ ಬಹಳ ಸುಲಭವಾಗಿ ಒಪ್ಪಿದರು. ಬೆಂಗಳೂರಿನ ಸಮೀಪವಿರುವ ೪೦ ಎಕರೆ ಜಮೀನನ್ನು ಬಸವ ಸಮಿತಿಗೆ ನೀಡಬೇಕೆಂದು ಅದರ ಅಧ್ಯಕ್ಷರು ಅವರೇ ಆಗಿರುವುದರಿಂದ ಬಸವಣ್ಣನವರ ತತ್ವಗಳ ಆಧಾರದ ಮೇಲೆ

ಒಂದು ಮಾದರಿ ಹಳ್ಳಿಯನ್ನು ರಚಿಸಿ ಅದು ಗಾಂಧಿಯವರ ಮಾರ್ಗದಲ್ಲಿ ಮತ್ತು ಸ್ವಯಮಾಧರಿತ ರೀತಿಯಲ್ಲಿರಬೇಕೆಂದು ಹೇಳಿದೆ. ಅವರು ದಿವಾಕರ್ ಜೊತೆಯಲ್ಲಿ ಮಾತನಾಡಿದರು.

**ಜುಲೈ ೨೮, ೧೯೮೭**

ಮುಖ್ಯಮಂತ್ರಿಯ ಬೇರೆ ಕಚೇರಿಯಾದ ಕೃಷ್ಣ ಕಟ್ಟಡದಲ್ಲಿ ಬೆಳಿಗೆ ೧೦ ಗಂಟೆಗೆ ಸಭೆಯಲ್ಲಿ ಭಾಗವಹಿಸಿದೆ. ಈ ಸಮಿತಿಯ ಅಧ್ಯಕ್ಷರಾದ ಮುಖ್ಯಮಂತ್ರಿಯವರು ನನ್ನನ್ನು ಪರಿಚಯಿಸಿದರು. ಮಂತ್ರಿ ಪರಿಷತ್ತಿನ ೧೦ ಸದಸ್ಯರು ಬೊಮ್ಮಾಯಿ, ಆಳ್ವ ಮತ್ತು ಸೆಕ್ರೆಟರಿಗಳು ಮತ್ತು ಇಲಾಖಾ ಮುಖ್ಯಸ್ಥರೂ ಸೇರಿದಂತೆ ೨೫ ಜನರು ಭಾಗವಹಿಸಿದರು. ಅಕ್ಷರತೆಯನ್ನು ನಿರ್ಲಕ್ಷಿಸಿರುವುದರ ಬಗ್ಗೆ ನಿರ್ದೇಶಕ ತತ್ವಗಳಿದ್ದರೂ ನೀರಾವರಿ, ಗೃಹಕೈಗಾರಿಕೆ, ಕೈಗಾರಿಕೆಯ ಸ್ಥಳದ ವಿಕೇಂದ್ರೀಕರಣದ ನಿರ್ಲಕ್ಷ್ಯತೆ ಮುಖ್ಯವಾಗಿ ಜನಸಂಖ್ಯೆ ನಿಯಂತ್ರಣ ಮತ್ತು ನಗರಗಳ ಬೆಳವಣಿಗೆ ನಿಯಂತ್ರಣ ಮುಂತಾದವುಗಳನ್ನು ನನ್ನ ಅತುಲ್ಯ ಘೋಷ್ ಸ್ಮಾರಕ ಭಾಷಣಗಳ ಮಾದರಿ ಮಾತಾಡಿದೆ. ಸಮಿತಿಯ ಉಪಾಧ್ಯಕ್ಷ ಜಿ.ವಿ.ಕೆ. ರಾವ್ ಮತ್ತು ದೆಹಲಿಯಿಂದ ಬಂದಿದ್ದ ಇನ್ನೊಬ್ಬ ಸದಸ್ಯರು ಮಾತಾಡಿದರು. ಉಪಾಧ್ಯಕ್ಷರೂ ತಮ್ಮ ಮಾಮೂಲು ಅಧಿಕಾರಶಾಹಿ ಸ್ವಯಂ ರಕ್ಷಣೆಯ ರೀತಿಯಲ್ಲಿ ಮಾತಾಡಿದರೂ ನನ್ನನ್ನು ಹೊಗಳಿದರು. ನನ್ನ ಭಾಷಣದ ಮೇಲೆ ಒಂದು ಗಂಟೆಯ ಈ ಚರ್ಚೆಯ ನಂತರ ಇತರ ವಿಷಯಗಳನ್ನು ತೆಗೆದುಕೊಂಡರು. ಇನ್ನೊಂದು ೪೫ ನಿಮಿಷಗಳ ಕಾಲ ಕುಳಿತಿದ್ದು ೧೨ ಗಂಟೆಗೆ ಆ ಸ್ಥಳದಿಂದ ಹೊರಟೆ. ಸದಸ್ಯರು ಗೌರವಯುತವಾಗಿದ್ದರು.

**ಆಗಸ್ಟ್ ೯, ೧೯೮೭**

೧೯೪೨ರ ಚಳುವಳಿಯ ವಾರ್ಷಿಕೋತ್ಸವ.

ಇದನ್ನು ಅನೇಕ ಕಡೆಗಳಲ್ಲಿ ಆಚರಿಸಲಾಗುತ್ತಿದೆ. ೧೯೪೨ರ ಇದೇ ದಿನ ಮುಂಜಾನೆ ಠರಾವನ್ನು ಮಂಜೂರು ಮಾಡಿ ಎಲ್ಲಾ ನಾಯಕರೂ ದಸ್ತಗಿರಿಯಾದ ಮುಂಬೈಯಲ್ಲಿ ಗ್ವಾಲಿಯಾಕೆರೆ ಮೈದಾನದಲ್ಲಿ ವಿಶೇಷವಾಗಿ ಆಚರಿಸುತ್ತಿರುವುದು ಸಂತೋಷ ತಂದಿದೆ. ಹಿಂದಿನ ದಿನ ಇದೇ ಮೈದಾನದಲ್ಲಿ 'ಭಾರತ ಬಿಟ್ಟು ತೊಲಗಿ' ಎಂಬ ಠರಾವು ಅಂಗೀಕೃತವಾಯಿತು. ಈ ಠರಾವಿನ ಬಗ್ಗೆ ಗಾಂಧೀಜಿ ಮಾತಾಡುತ್ತಿರುವ ಚಿತ್ರ ಮತ್ತು ತಮ್ಮದೇ ಆದ ಶಾಂತವಾದ ಪ್ರತಿಭಟಿಸಲಾಗದ ಧ್ವನಿಯಲ್ಲಿ ಮಾತಾಡುತ್ತಿರುವುದು ನನ್ನ ಜ್ಞಾಪಕದಲ್ಲಿ ಇನ್ನೂ ಹಸಿರಾಗಿಯೇ ಉಳಿದಿದೆ. ಬೆಂಗಳೂರಲ್ಲಿ ಕೂಡ ಇದನ್ನು ಆಚರಿಸಲಾಯಿತು. ನೆನ್ನೆ ದಿವಸ ಒಂದು ಆಹ್ವಾನಪತ್ರಿಕೆ ಬಂತು. ನನಗೆ ಹಾಜರಿರಲಾಗಲಿಲ್ಲ.

**ಆಗಸ್ಟ್ ೧೮, ೧೯೮೭**

ಅಶೋಕ್ ಬೆಂಗಳೂರಿನಿಂದ ಫೋನ್ ಮಾಡಿ, ಆಲ್ಜೀರಿಯಾದಿಂದ ಹಿಂದಿರುಗಿದನೆಂದು ಮತ್ತು ಚೆನ್ನಾಗಿರುವನೆಂದೂ ಹೇಳಿದ. ಅವನ ಮಗ ಹರ್ಷ ಮೀರತ್‌ನಲ್ಲಿ ಚೆನ್ನಾಗಿದ್ದು ಕೆಲವು ಸಲ ಮನೆ ಗೀಳು ಹಿಡಿಯುತ್ತದೆ. ಅವನ ಕುಟುಂಬ ಈಗ ಹುಬ್ಬಳ್ಳಿಯಲ್ಲಿದೆ. ಅವನ ಆರೋಗ್ಯ ಸುಧಾರಿಸಿದೆ.

ಸಾಯಂಕಾಲ ಸ್ವಲ್ಪ ತುಂತುರು ಮಳೆ. ಈಗ ಮಹಾರಾಷ್ಟ್ರದ ರಾಜ್ಯಪಾಲರಾಗಿರುವ ಡಾ. ಶಂಕರ್ ದಯಾಳ್‌ಶರ್ಮ ಉಪರಾಷ್ಟ್ರಪತಿ ಸ್ಥಾನಕ್ಕೆ ಉಮೇದುವಾರಿಕೆ ಸಲ್ಲಿಸಿದ್ದಾರೆಂದು ರೇಡಿಯೋ ಪ್ರಸಾರ ಮಾಡಿದೆ. ಕಾಂಗ್ರೆ ಪಕ್ಷ ಮತ್ತು ಇತರರಿಗೆ ಒಪ್ಪಿಗೆಯಾದ ಅಭ್ಯರ್ಥಿ ಇವರೊಬ್ಬರೇ ಎಂದು ಕಾಣುತ್ತದೆ. ಇದೊಂದು ವ್ಯಸನವಾದ ವಿಷಯ. ನಂಬಲರ್ಹವಾದವರಲ್ಲ. ಅವರು ನನ್ನ ಜನರಲ್ ಸೆಕ್ರೆಟರಿಗಳಲ್ಲಿ ಒಬ್ಬರಾಗಿದ್ದು, ಸಾದಿಕ್ ಅಲಿ ಮತ್ತು ವೆಂಕಟಸುಬ್ಬಯ್ಯ ಇನ್ನಿಬ್ಬರು. ಮೂರು ಜನ ಕಾರ್ಯದರ್ಶಿಗಳೂ ರಾಜ್ಯಪಾಲರುಗಳಾಗಿರುವುದು ಕುತೂಹಲದ ವಿಷಯ.

**ಆಗಸ್ಟ್ ೨೯, ೧೯೮೭ ಮಳೆಯಿಲ್ಲ-ನಿಸ್ಸಾರವಾದ ಮೋಡಗಳು**

ಡಾ. ಚೋಪ್ರರವರು ಕೆಲವು ಕಾಗದಗಳಿಗೆ ಸಹಿ ಹಾಕಲು ಪತ್ರಗಳನ್ನು ಕಳುಹಿಸಿದ್ದು ಅದರಲ್ಲಿ ಸರ್ದಾರ್ ಪಟೇಲರ ಜೀವನ ಚರಿತ್ರೆಯನ್ನು ಪ್ರಕಟಿಸಲು ಮತ್ತು ಅವರಿಗೆ ಸಂಬಂಧಿಸಿದ ಇತರ ಪತ್ರಗಳನ್ನು ಪ್ರಕಟಿಸಲು ಒಂದು ಸಂಘವನ್ನು ರಚಿಸುವುದೂ ಸೇರಿತ್ತು. ಏಕೆಂದರೆ ಈಗಿರುವ ಸರ್ಕಾರವು ಅಂತಹ ಪ್ರಯತ್ನವನ್ನೇನೂ ಮಾಡಿಲ್ಲವಾದರೂ ಮೋತಿಲಾಲ್ ನೆಹ್ರೂ, ಜವಹರಲಾಲ್ ನೆಹ್ರೂ ಮತ್ತು ಇಂದಿರಾಗಾಂಧಿಯವರ ದವುಗಳನ್ನು ಪ್ರಕಟಿಸುತ್ತಾರೆ. ಇದಕ್ಕೆ ಮುಖ್ಯ ಕಾರಣವೇನೆಂದರೆ ಅವರು ರಾಜೀವ್‌ಗಾಂಧಿಯವರ ಅಜ್ಜಂದಿರು ಮತ್ತು ತಾಯಿ. ಇನ್ನೂ ಹೆಚ್ಚಿನ ಗಮನ ಮತ್ತು ಗೌರವ ಕೊಡಬೇಕಾದ ಇತರ ನಾಯಕರುಗಳಾದ ರಾಜೇಂದ್ರ ಪ್ರಸಾದ್, ಮೌಲಾನ್ ಅಜಾದ್ ಮುಂತಾದವರನ್ನು ಲೆಕ್ಕದಿಂದ ತೆಗೆದುಹಾಕಲಾಗಿದೆ. ದೇಶವನ್ನು ಒಂದೇ ಅಸ್ತಿತ್ವಕ್ಕೆ ಸಮಗ್ರಗೊಳಿಸಲು ಇವರ್‍ಯಾರೂ ಪಟೇಲರ ಕೊಡುಗೆಯ ಮಟ್ಟಕ್ಕೆ ಏರಲಾರರು. ಸಾವಿರ ಪಂಡಿತ ನೆಹ್ರೂರವರು ಇದನ್ನು ಸಾಧಿಸಿರಲಾರರು. ಈಗ ಅಧ್ಯಕ್ಷನಾಗಿರಲು ನಾನು ಒಪ್ಪಿಕೊಂಡಿದ್ದು ಇತರ ಮುಖ್ಯಸ್ಥರು ಉಪಾಧ್ಯಕ್ಷ ಮತ್ತು ಸದಸ್ಯರಾಗಲು ಒಪ್ಪಿದ್ದಾರೆ. ಡಾ. ಚೋಪ್ರಾ ಇದರಲ್ಲಿ ಮುಖ್ಯ ಮನುಷ್ಯ.

**ಮಾರ್ಚ್ ೩, ೧೯೮೮**

ಸಾಯಂಕಾಲ ಮುಂಚೆಯೇ ಫೋನ್ ಮಾಡಿದ ಮೇಲೆ ಹೊಸ ರಾಜ್ಯಪಾಲ ವೆಂಕಟಸುಬ್ಬಯ್ಯ ಸಂಜೆ ೭-೩೦ಕ್ಕೆ ತಮ್ಮ ಹೆಂಡತಿಯೊಂದಿಗೆ ಬಂದು ರೇಷ್ಮೆಗೂಡಿನ

ದೊಡ್ಡ ಹಾರ ಮತ್ತು ಹಣ್ಣುಗಳನ್ನು ತಂದಿದ್ದರು. ಈ ಕೊಡುಗೆಗಳನ್ನು ನಾನು ನಿರೀಕ್ಷಿಸಿರಲಿಲ್ಲ. ಇದಕ್ಕೆ ಕಾರಣವೇನಿರಬಹುದೆಂದರೆ ೧೯೬೮ ಮತ್ತು ೧೯೬೯ರಲ್ಲಿ ನಾನು ಕಾಂಗ್ರೆಸ್ ಅಧ್ಯಕ್ಷನಾಗಿದ್ದಾಗ ಸುಮಾರು ಎರಡು ವರ್ಷಗಳು ಇವರು ಸಾದಿಕ್ ಆಲಿ ಮತ್ತು ಶಂಕರ್‌ದಯಾಳ್‌ಶರ್ಮಾರ (ಈಗ ಉಪರಾಷ್ಟ್ರಪತಿ) ಜೊತೆಯಲ್ಲಿ ಇವನು ಕಾರ್ಯದರ್ಶಿಯಾಗಿದ್ದರಿಂದಿರಬಹುದು. ಫೋನಿನಲ್ಲಿ ನಾನೇ ಬಂದು ಭೇಟಿ ಮಾಡುತ್ತೇನೆಂದು ಹೇಳಿದ್ದರೂ ಅವರೇ ನನ್ನನ್ನು ಭೇಟಿ ಮಾಡಬೇಕೆಂದರು. ಇದು ಅವರ ಮತ್ತು ಅವರ ಹೆಂಡತಿಯ ಸಜ್ಜನಿಕೆ. ಏಕೆಂದರೆ ಹಳೆಯ ಸಂಬಂಧಗಳಿಂದಾಗಿ ಗೌರವವನ್ನು ತೋರಿದ್ದರು.

**ಮಾರ್ಚ್ ೧೯, ೧೯೮೮**

ಕೆಲವು ಮುಖ್ಯಮಂತ್ರಿಗಳು ತಮ್ಮ ವಂತಿಗೆಯನ್ನು ಕಳಿಸಲು ಕಾಗದ ಬರೆಯುವ ಅಗತ್ಯತೆ ಬಗ್ಗೆ ನನಗೆ ಹೇಳಲು ಡಾ. ಚೋಪ್ರಾ ನವದೆಹಲಿಯಿಂದ ಫೋನು ಮಾಡಿದರು. ಸರ್ದಾರ್ ವಲ್ಲಭಭಾಯಿಯವರ ಪ್ರಕಟನೆಗಳನ್ನು ಪ್ರಕಾಶಗೊಳಿಸಲು ಸಂಘಕ್ಕೆ ದೇಣಿಗೆಗಳಿಗಾಗಿ ನಾನು ಬರೆಯಬೇಕಾಗಿದ್ದ ಕೆಲವು ಖಾಸಗಿ ವ್ಯಾಪಾರಗಾರರು ಮತ್ತು ಶ್ರೀಮಂತರ ಹೆಸರನ್ನು ಕೂಡ ಬರೆದಿದ್ದರು. ಸಂಘವು ನೋಂದಾಯಿಸಲ್ಪಟ್ಟಿದೆಯೆಂದು ಕೂಡ ತಿಳಿಸಿದ್ದರು. ತಕ್ಷಣ ದೇಣಿಗೆಗಳಿಗೆ ಬರೆಯಬೇಕು. ಹೆಗಡೆಯವರು ತಮ್ಮ ವಾಗ್ದಾನವನ್ನು ಪೂರೈಸಬೇಕೆಂದು ಬರೆದೆ. ಹಾಗೆಯೇ ಒಂದು ವಾರದ ಹಿಂದೆ ದೇವಿಲಾಲರು ೧ ೧/೨ ಲಕ್ಷ ರೂ. ಗಳನ್ನು ಕೊಡುವುದಾಗಿ ಫೋನಿನಲ್ಲಿ ಹೇಳಿದ್ದುದರಿಂದ ಅವರಿಗೂ ಬರೆದೆ. ಅವರಿಗೆ ಮತ್ತು ಇತರರಿಗೆ ಪುನಃ ಬರೆಯುತ್ತೇನೆ.

**ಮಾರ್ಚ್ ೨೨, ೧೯೮೮**

ಕೆಲಸ ಮಾಡುವ ಮನಸ್ಸಿಲ್ಲದೆ ಮತ್ತು ಜವಾಬು ಕೊಡಬೇಕಾದ ಕಾಗದಗಳು ಯಾವುದೂ ಬರದ್ದರಿಂದ ಇಡೀ ದಿನ ಸೋಮಾರಿಯಾಗಿ ಕಳೆದೆ. ಪ್ರಾಮುಖ್ಯತೆಯಾದ ಪತ್ರವೆಂದರೆ ಪ್ರಧಾನಿ ರಾಜೀವ್‌ಗಾಂಧಿಯವರಿಂದ ಹೈದ್ರಾಬಾದಿನ ಸೆಂಟ್ರಲ್ ವಿಶ್ವವಿದ್ಯಾಲಯವನ್ನು ಸ್ವಾಮಿ ರಮಾನಂದ ತೀರ್ಥ ವಿಶ್ವವಿದ್ಯಾಲಯ ಎಂದು ಹೆಸರಿಸುವ ನನ್ನ ಕೋರಿಕೆಯನ್ನು ಮಾನವ ಸಂಪನ್ಮೂಲ ಮಂತ್ರಿಗಳಿಗೆ ಕಳುಹಿಸಿರುವೆನೆಂದು ಬರೆದ ಪತ್ರ. ಈ ವಿಷಯವನ್ನು ಸಹಾನುಭೂತಿಯಿಂದ ಪರಿಗಣಿಸುವೆನೆಂದು ಕೂಡ ಅವರು ನನಗೆ ಬರೆದಿದ್ದಾರೆ. ಮಾನವ ಸಂಪನ್ಮೂಲ ಮಂತ್ರಿಗಳು ಸ್ವಾಮಿಯವರ ಅನುಯಾಯಿ ಆದ್ದರಿಂದ ಅವರು ಅಗತ್ಯವಾದುದನ್ನು ಮಾಡುತ್ತಾರೆಂದು ಕಾಣುತ್ತದೆ.

**ಮಾರ್ಚ್ ೨೩, ೧೯೮೮**

ಕುಳಿತು ಬರೆಯಲು ನನಗಿಷ್ಟವಿಲ್ಲದಿದ್ದರೂ, "ಸಾಮಾಜಿಕ ದ್ವಂದ್ವ ಮತ್ತು ಭಯೋತ್ಪಾದಕತೆಯ ಪ್ರಶ್ನೆ" ಎಂಬುದರ ಬಗ್ಗೆ ಒಂದು ದಿನದ ಸೆಮಿನಾರಿನಲ್ಲಿ ನಾನು ಭಾಗವಹಿಸಬೇಕೆಂದ ನವದೆಹಲಿಯ ಪ್ರೊ. ಸೋಂದಿಯವರಿಗೆ ತುರ್ತು ಕಾಗದವನ್ನು ಬರೆಯಲೇಬೇಕಾಯಿತು. ಈ ಬೆಳಿಗ್ಗೆ ಆತುರಾತುರವಾಗಿ ಜವಾಬು ಬರೆದೆ. ರಾಜಣ್ಣನಿಂದ ಟೈಪು ಮಾಡಿಸಿ ಪೋಸ್ಟ್ ಮಾಡಿದೆ. ನೆನ್ನೆ ತಾನೆ ಅವರ ಕಾಗದ ಬಂದಿತ್ತು. ಬೊಂಬಾಯಿಯ ನನ್ನ ಹಳೆಯ ಸ್ನೇಹಿತ ವರದರಾಜ ಆದ್ಯ ಅವರ ಕುಟುಂಬಕ್ಕೆ ಬರೆಯಲೇಬೇಕಾಗಿತ್ತು. ಬೊಂಬಾಯಿಯಲ್ಲಿ ಅವರಲ್ಲಿ ಅನೇಕ ಸಲ ಉಳಿದುಕೊಳ್ಳುತ್ತಿದ್ದೆ. ಅವರ ಹೆಂಡತಿ ಮತ್ತು ಮಕ್ಕಳು ನನಗೆ ಬಹಳ ನಿಕಟವಾಗಿದ್ದರು. ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯಲ್ಲಿ ಅವರು ಕೆಲವು ದಿನಗಳ ಹಿಂದೆ ಮೃತರಾದುದನ್ನು ಓದಿ ನನಗೆ ಆಘಾತವಾಯಿತು. ನನ್ನ ಮತ್ತು ನನ್ನ ಹೆಂಡತಿಯ ಸಂತಾಪವನ್ನು ಸೂಚಿಸಿ ನಷ್ಟವನ್ನು ಭರಿಸುವುದಕ್ಕೆ ದೇವರು ಶಕ್ತಿ ಕೊಡಲಿ ಎಂದು ಅವರ ಹೆಂಡತಿಗೆ ಬರೆದೆ.

ಸಾಯಂಕಾಲ ಸುಮಾರು ೭-೩೦ರ ಹೊತ್ತಿಗೆ ಡಾ. ಚೋಪ್ರಾರವರಿಂದ ಸರ್ದಾರ್ ಪಟೇಲ್ ಸೊಸೈಟಿ ಬಗ್ಗೆ ಫೋನು ಬಂತು. ಆ ಸೊಸೈಟಿಯನ್ನು ನಾವೇ ರಚಿಸಿದ್ದು ಅದನ್ನು ನೋಂದಾಯಿಸಿದೆ ಮತ್ತು ಅದರ ಅಧ್ಯಕ್ಷ ನಾನೇ. ನೋಂದಣಿ ದಾಖಲೆಯನ್ನು ನನಗೆ ಕಳುಹಿಸುತ್ತಿದ್ದಾರೆ. ಕಾಯುತ್ತಿದ್ದೇನೆ. ವಾಗ್ದಾನ ಮಾಡಿರುವಂತೆ ಹೆಗಡೆಯವರಿಂದ ೩ ಲಕ್ಷ ರೂ.ಗಳನ್ನು ತಕ್ಷಣ ಪಡೆಯಬೇಕು. ಅವರಿಗೆ ಬರೆದಿದ್ದೇನೆ.

**ಏಪ್ರಿಲ್ ೨೭, ೧೯೮೮**

ನಾನು ಫೋನು ಮಾಡಿದಂತೆ ಡಾ. ಚೋಪ್ರಾ ಮತ್ತು ಅವರ ಹೆಂಡತಿ ೮-೧೫ಕ್ಕೆ ಬೆಳಗಿನ ಉಪಾಹಾರಕ್ಕೆ ಬಂದು ಎರಡು ಗಂಟೆವರೆಗೆ ಸರ್ದಾರ್ ಪಟೇಲ್ ಸೊಸೈಟಿಗೆ ವಂತಿಗೆ, ಹಣಕಾಸು ಮತ್ತು ಇತರ ಅನೇಕ ವಿಷಯಗಳನ್ನು ಚರ್ಚಿಸಿದೆವು. ಭಾರತ ಸರಕಾರದ ಮೇಲೆ ರಷ್ಯಾದ ಪ್ರಭಾವ, ನೆಹ್ರೂರವರ ಹಾಗೂ ಇಂದಿರಾ ಮತ್ತು ರಾಜೀವರ ವಿಫಲತೆಗಳು, ನನ್ನ ಆತ್ಮಚರಿತ್ರೆ, ಡೈರಿಗಳು ಮುಂತಾದವುಗಳ ಬಗ್ಗೆ ಮಾತನಾಡಿದೆವು. ಶಿಕ್ಷಣ ಮತ್ತು ಸಂಸ್ಕೃತಿ ಸಚಿವರಿಗೆ ಪಟೇಲ್‌ರ ಪ್ರಕಟಣೆ, ಸೊಸೈಟಿಗೆ ವಂತಿಗೆ ಬಗ್ಗೆ ಫೋನು ಮಾಡಿದಾಗ ಬಹಳ ವಿನಯದಿಂದ ಮಾತನಾಡಿ ೪೦ನೇ ವರ್ಷದ ಸ್ವಾತಂತ್ರ್ಯ ಸಮಾರಂಭದ ಸಮಿತಿಯ ಕಾರ್ಯದರ್ಶಿ ಶ್ರೀಮತಿ ಶೀಲಾದೀಕ್ಷಿತ್‌ರವರಲ್ಲಿ ಮಾತಾಡಲು ಹೇಳಿದರು. ಕಮ್ಯೂನಿಸ್ಟ್ ಕಾರ್ಡ್ ಪಡೆದಿರುವವನೊಬ್ಬನನ್ನು ಸ್ವಾತಂತ್ರ್ಯ ಹೋರಾಟದ ಪ್ರಕಟಣೆಯ ಅಧ್ಯಕ್ಷನನ್ನಾಗಿ ಮಾಡಿದ್ದು, ಮುಖ್ಯ ಸಂಪಾದಕರಾದ ಚೋಪ್ರಾರವರಿಗೆ ಭಾರತದ ಕಮ್ಯೂನಿಸ್ಟರ ಬಗ್ಗೆ

ಅವರ ಮಾರ್ಗದರ್ಶನದಂತೆ ನಡೆಯುವುದಿಲ್ಲವೆಂಬುದಕ್ಕೆ ತೊಂದರೆಯನ್ನುಂಟು ಮಾಡುತ್ತಿದ್ದಾರೆ. ಈ ಅಧ್ಯಕ್ಷನ ಪರವಾಗಿ ರಷ್ಯಾವು ಪ್ರಭಾವ ಬೀರುತ್ತಿದೆಯೆಂದು ಕಾಣುತ್ತದೆ.

**ಏಪ್ರಿಲ್ ೨೯, ೧೯೮೮**

ನೆನ್ನೆ ಮಾಡಿದ ಕೋರಿಕೆಯಂತೆ ಪ್ರೊ. ಸೋಂಧಿ, ಅವರ ಹೆಂಡತಿ, ಮಗ ವಿವೇಕ್ ಬೆಳಗಿನ ಉಪಾಹಾರಕ್ಕೆ ಬಂದು, ೧ ೧/೨ ಗಂಟೆಗಳ ಕಾಲ ಇದ್ದು ವಿಶೇಷವಾಗಿ ನೆರೆ ರಾಷ್ಟ್ರಗಳ ಸಂಬಂಧಗಳೂ ಸೇರಿದಂತೆ ಅನೇಕ ಸಮಸ್ಯೆಗಳನ್ನು ಚರ್ಚಿಸಿದೆವು. ಶಾಂತಿ ಮತ್ತು ತಿಳುವಳಿಕೆಯನ್ನು ಮೂಡಿಸಲು ನಾನು ಪಾಕಿಸ್ತಾನ, ಬಾಂಗ್ಲಾದೇಶ, ಚೀನಾ ಮುಂತಾದಲ್ಲಿ ಪ್ರವಾಸ ಮಾಡಬೇಕೆಂದರು. ಇದು ಸಾಧ್ಯ ಎಂದು ಅವರ ಅಭಿಪ್ರಾಯ. ಆದರೆ ನನಗೆ ನಂಬಿಕೆಯಿಲ್ಲ, ಭಾರತದ ೪೦ನೇ ವರ್ಷ ಮತ್ತು ಜವಹರಲಾಲರ ಶತಮಾನೋತ್ಸವ ಸಮಿತಿಯು ನಿಗದಿಪಡಿಸಿದಂತೆ ವಿಜ್ಞಾನಭವನದಲ್ಲಿ ಪ್ರಾರಂಭ ವಾಯಿತು. ರಾಷ್ಟ್ರಪತಿ ವೆಂಕಟರಾಮನ್ ಸ್ವಾಗತಿಸಿದರು, ಪ್ರಧಾನಿ ಮಾತನಾಡಿದರು. ಸಂತಾಪ ಸೂಚನೆಗಳಾದ ಮೇಲೆ ಸದಸ್ಯರು ತಮಗನಿಸಿದುದನ್ನು ಹೊರಗೆಡವಿದರು. ನಾನು ಎರಡನೆಯವನು. ನೀರಾವರಿ, ಈ ವರ್ಷಗಳಲ್ಲಿ ಅದರ ನಿರ್ಲಕ್ಷ್ಯ, ಅಗತ್ಯ ಮತ್ತು ಪ್ರಯೋಜನಗಳು, ಖಾದಿ, ಚರ್ಮ ಕೈಗಾರಿಕೆ ಮುಂತಾದವುಗಳ ಅನೇಕ ಅಂಶಗಳು ಮತ್ತು ಮೀಸಲಾತಿ ಅಗತ್ಯ ಎಂಬುದರ ಬಗ್ಗೆ ಮಾತನಾಡಿದೆ. ನನಗೆ ಹೆಚ್ಚು ಸಮಯ ಕೊಡಲಾಗಿತ್ತು. ಆದರೆ ರಾಷ್ಟ್ರಪತಿಗೆ ನಾನು ಹೆಚ್ಚು ಸಮಯ ತೆಗೆದುಕೊಳ್ಳುತ್ತಿದ್ದೇನೆನಿಸಿತು. ಪ್ರಧಾನಿ ಅಥವಾ ಹೆಚ್ಚಿನ ಸದಸ್ಯರನ್ನು ನೋಡಿದಾಗ ನನ್ನ ಉಲ್ಲೇಖಗಳಿಗೆ ಹೆಚ್ಚಿನ ಪ್ರತಿಕ್ರಿಯೆಯೇನೂ ವ್ಯಕ್ತವಾಗಲಿಲ್ಲ. ಅವರಿಗೆ ಈ ವಿಷಯಗಳು ಅರ್ಥವಾಗದವೆಂದು ಕಾಣುತ್ತದೆ. ೨೫೦ ಜನರಲ್ಲಿ ಸುಮಾರು ೩೦ ಜನರು ಮಾತನಾಡಿದರು. ಹೆಚ್ಚಿನವರು ನೆಹ್ರೂರವರನ್ನು ಹೊಗಳಿ ಹೊಗಳಿ ಮಾತನಾಡುತ್ತಿದ್ದರು. ಕೆಲವರು ಕುಡಿಯುವ ನೀರು, ಕಲೆ ಮುಂತಾದವುಗಳ ಬಗ್ಗೆ ಮಾತನಾಡಿದರು. ಒಬ್ಬನೇ ಒಬ್ಬ ವ್ಯಕ್ತಿ ಭ್ರಷ್ಟಾಚಾರದ ಬಗ್ಗೆ ಕಟುವಾಗಿ ಮಾತನಾಡಿದರು. ಸಂಜೆ ೭ಕ್ಕೆ ಮುಕ್ತಾಯವಾಯಿತು. ಕರ್ನಾಟಕದ ರಾಜ್ಯಪಾಲ ವೆಂಕಟಸುಬ್ಬಯ್ಯನವರು ಸಭಾಂಗಣಕ್ಕೆ ಮತ್ತು ಅಲ್ಲಿಂದ ನನ್ನನ್ನು ಕರೆದುಕೊಂಡು ಹೋದರು. ನನ್ನ ಪಕ್ಕದಲ್ಲಿಯೇ ಇದ್ದು ಮೆಟ್ಟಲು ಸಮೀಪ ನನ್ನನ್ನು ಜಾಗರೂಕತೆಯಾಗಿ ನೋಡಿಕೊಂಡರು. ಇನ್ನೊಂದು ಕಡೆಯಲ್ಲಿ ಈಗ ಮಹಾರಾಷ್ಟ್ರದ ರಾಜ್ಯಪಾಲರಾಗಿರುವ ಬ್ರಹ್ಮಾನಂದರೆಡ್ಡಿಯವರು ಕುಳಿತಿದ್ದರು. ರಕ್ಷಣಾಮಂತ್ರಿ ಕೆ.ಸಿ. ಪಂತ್ ಸ್ವಲ್ಪ ಸಮಯ ಕುಳಿತಿದ್ದು, ಆಗ ಪಂಡಿತ್‌ಜೀ ದಿನಗಳ ಹಳೇ ಕಾಲದ ಬಗ್ಗೆ ಮಾತನಾಡಿದೆವು.

**ಜೂನ್ ೧, ೧೯೮೮**

ಪತ್ರವ್ಯವಹಾರಗಳನ್ನು ಮಾಡಿದೆ. ಗುಜರಾತಿನ ಮುಖ್ಯಮಂತ್ರಿ ಶ್ರೀ ಚೌಧರಿಯವರಿಗೆ ಸರ್ದಾರ್ ಪಟೇಲರ ಪ್ರಕಟಣೆಗಳಿಗೆ ದೇಣಿಗೆ ಹಣ ಕೊಡುವಂತೆ ಬರೆದೆ. ಮೂರು ಲಕ್ಷ ರೂ.ಗಳ ವಿನಾ ಬೇರೆ ಮುಖ್ಯಮಂತ್ರಿಗಳಿಂದ ಯಾವುದೇ ಸಹಾಯ ಬಂದಿಲ್ಲ.

**ಜೂನ್ ೨೪, ೧೯೮೮**

ಸ್ನಾನ ಮಾಡಿದ ಮೇಲೆ ಬೆಳಿಗ್ಗೆ ಮದರಾಸಿನಲ್ಲಿ ಭಾರತದ ಮಾಜಿ ರಾಷ್ಟ್ರಪತಿ ವಿ.ವಿ. ಗಿರಿಯವರು ತಮ್ಮ ಮನೆಯಲ್ಲಿ ನಿಧನರಾದರೆಂದು ಬೆಳಿಗ್ಗೆ ೧೧ ಗಂಟೆಗೆ ನನಗೆ ತಿಳಿದುಬಂದಿತು. ಇದು ಸ್ವಾಭಾವಿಕವಾದ ತೊಂದರೆ ಇಲ್ಲದ ಸಾವು. ಅವರಿಗೆ ೮೬ ವರ್ಷ. ಸಂಪೂರ್ಣವಾಗಿ ಎಲ್ಲಾ ಕಾಲದಲ್ಲೂ ದೇಶದ ಸ್ವಾತಂತ್ರ್ಯಕ್ಕೆ ಹೋರಾಡಿದ ಒಳ್ಳೆಯ ಹೋರಾಟಗಾರ, ಕಾರ್ಮಿಕ ನಾಯಕ, ಕಾರ್ಮಿಕರ ಪರ ನಿಂತ ಚೈತನ್ಯಯುಕ್ತ ಮನುಷ್ಯ. ಮದರಾಸು ಸರಕಾರದಲ್ಲಿ ರಾಜಾಜಿ ಜೊತೆಯಲ್ಲಿ ಭಿನ್ನಾಭಿಪ್ರಾಯ ಬಂದಾಗ ಮದರಾಸು ಸರಕಾರದ ಮಂತ್ರಿ ಮಂಡಲಕ್ಕೆ ಮತ್ತು ಕಾರ್ಮಿಕ ಸಮಸ್ಯೆಗಳ ಬಗ್ಗೆ ನೆಹ್ರೂರವರ ಜೊತೆಯಲ್ಲಿ ಭಿನ್ನಾಭಿಪ್ರಾಯಗಳುಂಟಾದಾಗ ಕೇಂದ್ರ ಮಂತ್ರಿಮಂಡಲಕ್ಕೆ ರಾಜೀನಾಮೆ ನೀಡಿದ್ದರು. ಅವರು ಕಾಂಗ್ರೆಸ್ಸಿಗರಾಗಿದ್ದರೂ ರಾಷ್ಟ್ರಪತಿ ಸ್ಥಾನಕ್ಕೆ ಏಕೆ ನಿಂತರು ಎಂಬುದೇ ಒಂದು ರಹಸ್ಯ. ಅದರ ಸದಸ್ಯತ್ವಕ್ಕೆ ರಾಜೀನಾಮೆ ಕೊಡಲಿಲ್ಲ. ಆಗ ನಾನು ಅಧ್ಯಕ್ಷನಾಗಿದ್ದೆ. ಅವರು ಮತ್ತು ಇಂದಿರಾ ಕೈಗೂಡಿಸಿದರು. ಇಂದಿರಾಗೆ ತನ್ನ ಅಭ್ಯರ್ಥಿ ಮಾತ್ರ ಗೆಲ್ಲಬೇಕೆಂದಿತ್ತು. ಶ್ರೀ ಸಂಜೀವರೆಡ್ಡಿ ಆಕೆಯ ಅಭ್ಯರ್ಥಿಯಲ್ಲ. ಗಿರಿಯು ಕರ್ನಾಟಕದ ರಾಜ್ಯಪಾಲರಾಗಬೇಕೆಂದಿದ್ದು ನಾನು ಮುಖ್ಯಮಂತ್ರಿಯಾಗಿ ಅವರ ನೇಮಕಾತಿಗೆ ಸಹಾಯ ಮಾಡಿದೆ. ಡಾ. ಜಾಕಿರ್ ಹುಸೇನರು ರಾಷ್ಟ್ರಪತಿಯಾದಾಗ ಅವರು ಉಪರಾಷ್ಟ್ರಪತಿಯಾಗಬೇಕೆಂದಿದ್ದರು. ಅವರಿಗೆ ಉಪರಾಷ್ಟ್ರಪತಿಯಾಗಲು ತುಂಬಾ ಆಸಕ್ತಿಯಿದ್ದುದರಿಂದ ಅವರನ್ನು ಬಲವಾಗಿ ಶಿಫಾರಸು ಮಾಡಿದೆ. ಒಳ್ಳೆಯ ಸಾವು. ಹಿಂದೆ ಇಂದಿರಾ ಪ್ರಧಾನಿಯಾಗಿರುವ ರಾಷ್ಟ್ರೀಯ ಸರಕಾರಕ್ಕೆ ಅವರು ಸಲಹೆ ಮಾಡಿದ್ದರು.

**ಆಗಸ್ಟ್ ೧೫, ೧೯೮೮** **ಸ್ವಾತಂತ್ರ್ಯ ದಿನ**

ಸಾಮಾನ್ಯ ಮನುಷ್ಯನಿಗೆ ಸಂಬಂಧಪಟ್ಟಂತೆ ಇದು ಯಾರ ಸ್ವಾತಂತ್ರ್ಯ ? ಅದರಲ್ಲಿಯೂ ವಿಶೇಷವಾಗಿ ಬಡರೈತ ಮತ್ತು ಕೃಷಿ ಕಾರ್ಮಿಕನಿಗೆ ಎಂತಾ ಸ್ವಾತಂತ್ರ್ಯ ? ಕಳೆದ ೩೩ ವರ್ಷಗಳಿಂದ ಅವರ ಜೀವನದಲ್ಲಿ ಯಾವುದೇ ಬದಲಾವಣೆಯಿಲ್ಲ. ಅದಕ್ಕೆ ಪ್ರತಿಯಾಗಿ ಇನ್ನೂ ಹಾಳಾಗಿದೆ. ಈ ಸ್ವಾತಂತ್ರ್ಯ ಅಧಿಕಾರದಲ್ಲಿರುವವರಿಗೆ, ಸಚಿವರಿಗೆ, ಪಕ್ಷದ ಸದಸ್ಯರಿಗೆ ಕೆಲವರನ್ನು ಬಿಟ್ಟು ಮೇಲಿಂದ ಕೆಳಗಿನವರೆಗೆ ಅಧಿಕಾರಶಾಹಿಗಳಿಗೆ ಸಂಪತ್ತು,

ಸುಖ, ಉತ್ತಮ ದರ್ಜೆಯ ಜೀವನ ಮಟ್ಟವನ್ನು ತಂದುಕೊಟ್ಟಿದೆ. ಅವರ ಜೊತೆಯಲ್ಲಿ ಶ್ರೀಮಂತ ಕೈಗಾರಿಕೋದ್ಯಮಿ ಸಂಖ್ಯೆ ಹೆಚ್ಚುತ್ತಿದೆ. ಈಗ ಕಳೆದ ೧೫ ವರ್ಷಗಳಿಂದ ಶ್ರೀಮಂತ ರೈತರು ಬಹಳ ಪ್ರಭಾವವನ್ನು ಹೊಂದಿದ್ದಾರೆ. ಖಾಸಗಿ ಮತ್ತು ಸಾರ್ವಜನಿಕ ಉದ್ಯಮಗಳ ಕೈಗಾರಿಕಾ ಕಾರ್ಮಿಕರೂ ಕೂಡ ಉತ್ತಮವಾಗಿದ್ದಾರೆ. ಸುಮಾರು ಶೇ. ೩೦ ರಿಂದ ೩೫ರಷ್ಟು ಜನರು ಈ ವರ್ಗಕ್ಕೆ ಸೇರಿದವರು. ಉಳಿದ ಶೇ. ೬೦ ರಿಂದ ೬೫ರಷ್ಟು ಬಹುಮತವು ಆರ್ಥಿಕವಾಗಿ ಇಳಿಮುಖವಾಗುತ್ತಿದ್ದಾರೆ ಮತ್ತು ತುಂಬಾ ಶೋಚನೀಯವಾಗಿದ್ದಾರೆ. ಇಂದಿರಾ ಅಧಿಕಾರಕ್ಕೆ ಬಂದಾಗಿನಿಂದ ಅಥವಾ ಕಳೆದ ೧೫ ವರ್ಷಗಳಲ್ಲಿ ಪರಿಸ್ಥಿತಿಯು ಹೆಚ್ಚು ಹೆಚ್ಚಾಗಿ ಹದಗೆಡುತ್ತಿದೆ. ಜೀವನದ ಎಲ್ಲಾ ವಿಷಯಗಳಲ್ಲಿ ಭ್ರಷ್ಟವಾಗಿರುವ ಆಕೆಯಿಂದಲೇ ಭ್ರಷ್ಟಾಚಾರವು ಬಹಳ ವ್ಯಾಪಕವಾಯಿತು. ಮಾತಾಡಲಾಗದೇ ಇರುವ ಕೆಟ್ಟ ಪರಿಸ್ಥಿತಿಯು ಅಂತ್ಯಗೊಳ್ಳಬೇಕು. ಯಾವ ಕಡೆ ತಿರುಗಿದರೂ ಭ್ರಷ್ಟಾಚಾರ, ಏರುತ್ತಿರುವ ಬೆಲೆಗಳು, ಎಲ್ಲಾ ಕಡೆ ದುಃಖ ಇದೆ. ಪ್ರಧಾನಿ ಇಂದಿರಾಗಾಂಧಿ ನಿಧನರಾದರು. ಅವರ ಹೆಸರನ್ನು ಹೇಳಿಕೊಂಡು ಈಗ ಮತ್ತು ಮುಂದೆಯೂ ಅವರೇ ನಮ್ಮ ಮಾರ್ಗದರ್ಶಿ ಎಂದು ಕಾಂಗ್ರೆಸ್‌ನವರು ಹೇಳುತ್ತಿದ್ದಾರೆ. ಎಂತಹ ಮೋಸ! ಹಿಂದೆ ಆಕೆ ಕೆಂಪುಕೋಟೆಯಿಂದ ಮಾಡಿದ ಭಾಷಣದಲ್ಲಿ ಜಾತೀಯತೆ, ಕೋಮುವಾದ, ಭ್ರಷ್ಟಾಚಾರ ಮುಂತಾದವುಗಳು ರೋಗಗಳಾಗಿದ್ದು ಅವನ್ನು ನಾವು ಎದುರಿಸಬೇಕು ಎಂದು ಹೇಳಿದ್ದರು. ಬಡತನ ಮತ್ತು ನಿರುದ್ಯೋಗದ ನಿವಾರಣೆಯ ಬಗ್ಗೆ ಒಂದೇ ಒಂದು ಪದವಿರಲಿಲ್ಲ. ತಮ್ಮ ವಿಫಲತೆ ಕಾರಣಗಳನ್ನು ಹುಡುಕಿ ಅದನ್ನು ವಿರೋಧ ಪಕ್ಷಗಳ ಮೇಲೆ ಹಾಕಿ ಅವು ತೊಂದರೆ ಮಾಡುವ ಸಮಾಜ ವಿರೋಧಿ ಶಕ್ತಿಗಳು, ವಿದೇಶಿ ಕೈವಾಡ ಮುಂತಾದವುಗಳನ್ನು ಹೇಳುತ್ತಿದ್ದರು. ಹಣದುಬ್ಬರ, ಕುಸಿಯುತ್ತಿರುವ ಕಾನೂನು ಮತ್ತು ಶಿಸ್ತು ಪರಿಸ್ಥಿತಿ, ರಾಜ್ಯಗಳಲ್ಲಿ ಅಸ್ಥಿರ ಸರ್ಕಾರಗಳು-ಇವುಗಳ ಸಂಪೂರ್ಣ ಜವಾಬ್ದಾರಿಯನ್ನು ಆಕೆಯೇ ಹೊರಬೇಕು. ಅದಕ್ಷ, ಅನೀತಿ, ಅಧಿಕಾರದ ಹುಚ್ಚಿರುವ ಅನಾರೋಗ್ಯ ನಾಯಕರ ಸುತ್ತ ಇದ್ದ ಹೊಗಳುಭಟರ ಮೇಲೂ ಈ ಜವಾಬ್ದಾರಿಯಿದೆ.

**ಸೆಪ್ಟಂಬರ್ ೧೮, ೧೯೮೮**

ಪ್ರಭು ಒಬ್ಬನೆ ೧೧ ಗಂಟೆಗೆ ಬಂದು ಊಟ ಮಾಡಿ ಬೆಂಗಳೂರಿಗೆ ಹೋದನು.

ನೆನ್ನೆ ದಿನದಿಂದ ಹೆಂಡತಿಗೆ ಹುಶಾರಿಲ್ಲ. ಎದೆಯ ಎಡಭಾಗದಲ್ಲಿ ನೋವು ಎಂದು ದೂರಿದ್ದಾಳೆ. ನನಗೆ ವ್ಯಾಕುಲವಾಗಿದ್ದು ಡಾಕ್ಟರಿಗೆ ಹೇಳಿ ಕಳುಹಿಸಬೇಕೆಂದಿದ್ದೆ. ಆದರೆ ನಾಳೆವರೆಗೆ ಕಾಯೋಣವೆಂದು ಹೇಳಿದಳು.

**ಸೆಪ್ಟೆಂಬರ್ ೧೯, ೧೯೮೮**

ತಮಿಳು ಸಂಗಂ ಕಾರ್ಯದರ್ಶಿಯ ಹತ್ತಿರ ಮಾತನಾಡಿದೆ. ಅವರು ಬುಧವಾರ ಬರುತ್ತೇವೆಂದು ಹೇಳಿದರು. ನಾನು ಆಗಲಿ ಎಂದೆ. ಹೆಂಡತಿಯ ಸ್ಥಿತಿ ಸ್ವಲ್ಪ ಉತ್ತಮ. ಆಕೆಗೆ ದುರ್ಬಲತೆ ಇದ್ದು ಕೂತುಕೊಳ್ಳಲು ಅಥವಾ ಮಲಗಲು ಆಗದೆ ತಳಮಳಿಸುತ್ತಿದ್ದು ಆಕೆ ಅಸಂತೋಷವಾಗಿದ್ದಾಳೆ. ಡಾ. ಹನುಮಂತಪ್ಪನವರಿಗೆ ಮತ್ತು ನಮ್ಮವರೇ ಆದ ಡಾ. ಪ್ರಸಾದಿಗೆ (ಶಿವಪ್ರಸಾದ್) ಹೇಳಿಕಳುಹಿಸಿದೆ. ಅವರಿಬ್ಬರೂ ಬಂದು ಪರೀಕ್ಷಿಸಿದರು. ಆಕೆಯ ಬಿ.ಪಿ. ಸರಿಯಾಗಿದೆ ಮತ್ತು ಹೃದಯವೂ ಕೂಡ ಸರಿಯಾಗಿದೆ ಎಂದರು. ಅನಿಲ ತುಂಬಿರಬಹುದೆಂದು ಕೆಲವು ಔಷಧಿಗಳನ್ನು ಸೂಚಿಸಿದರು. ಆಕೆಗೆ ಸುಖವಿಲ್ಲ ಮತ್ತು ಸರಿಯಾಗಿ ವಿಶ್ರಾಂತಿ ತೆಗೆದುಕೊಳ್ಳಲಾಗುತ್ತಿಲ್ಲ. ರಾತ್ರಿ ಒಂದು ರಗ್ಗು ಮತ್ತು ಮಗ್ಗುಲಾಸಿಗೆ ಇಟ್ಟುಕೊಂಡಳು. ಆದರೂ ಆಕೆಗೆ ಚಳಿ ಎನಿಸಿ ಒಂದು ಕಂಬಳಿ ಮತ್ತು ಒಂದು ಶಾಲನ್ನು ಹೊದ್ದಳು. ಸ್ವಲ್ಪ ನಿದ್ದೆ ಬಂತು.

**ಸೆಪ್ಟೆಂಬರ್ ೨೦, ೧೯೮೮**

ಹೆಂಡತಿಯ ಪರಿಸ್ಥಿತಿ ಸುಧಾರಿಸಿಲ್ಲ. ಇ.ಸಿ.ಜಿ. ತೆಗೆಯಬೇಕೆಂದು ನನಗನಿಸಿದೆ. ಡಾ. ಹನುಮಂತಪ್ಪನವರೂ ಸೇರಿ ಇಬ್ಬರು ಡಾಕ್ಟರು ಬಂದು ಇ.ಸಿ.ಜಿ. ಮಾಡಿದಾಗ ಗಂಭೀರವಾದದ್ದು ಏನನ್ನೂ ತೋರಿಸಲಿಲ್ಲ. ಹೃದಯವು ಮಾಮೂಲಿನಂತಿದೆ. ಸಂಪೂರ್ಣವಾಗಿ ವಿಶ್ರಾಂತಿ ಬೇಕೆಂದರು. ಅದು ಇದೆ. ಆದರೆ ಎಲ್ಲವೂ ಸರಿಯಾಗಿದೆ ಎಂಬ ಭಾವನೆ ಆಕೆಗೆ ಇಲ್ಲ. ಆಕೆ ಆಹಾರ ತೆಗೆದುಕೊಂಡರೂ ಮಾಮೂಲಿನಂತಲ್ಲ. ಆಕೆಯ ಆರೋಗ್ಯವನ್ನು ಗಮನಿಸುತ್ತಿರಬೇಕು. ನೆನ್ನೆ ಮತ್ತು ಈ ದಿನ ಸುಮಾರು ನಾಲ್ಕು ಗಂಟೆಗೆ ಸ್ವಲ್ಪ ಮಳೆ ಬಂತು.

**ಸೆಪ್ಟೆಂಬರ್ ೨೧, ೧೯೮೮**

ಹೆಂಡತಿಯ ಸ್ಥಿತಿಯು ತುಂಬಾ ವ್ಯಾಕುಲವುಂಟು ಮಾಡಿದೆ. ಆಕೆ ತಾನೇ ಅಡಿಗೆ ಮನೆಗೆ ಊಟಕ್ಕೆ ನಡೆದುಕೊಂಡು ಹೋಗಿ ಮಲಗಲು ಹಿಂತಿರುಗುತ್ತಿದ್ದಾಗ ತುಂಬಾ ಸುಸ್ತಾದಂತಾಗಿ ರಾಜಣ್ಣ ಮಧ್ಯದಲ್ಲಿ ವಿಶ್ರಮಿಸುವಂತೆ ಮಾಡಿ ನಂತರ ಮಲಗುವ ಕೋಣೆಗೆ ಕರೆದುಕೊಂಡು ಹೋದ. ತೋಳಿನಲ್ಲಿ ನೋವು ಎಂದು ಹೇಳುತ್ತಾಳೆ. ಡಾ. ಹನುಮಂತಪ್ಪನವರಿಗೆ ಫೋನ್ ಮಾಡಿದೆ. ಅವರು ೬ ಗಂಟೆಗೆ ಬಂದು ಇಸಿಜಿ ಮಾಡಿದರು. ಇದು ಹೃದಯದ ತೊಂದರೆ ಎಂದು ಹೇಳಿದರು. ಇದೇ ನನಗೆ ಆಗಿರುವ ನೋವು, ಏನು ಮಾಡುವುದು ಎಂದು ತೋಚುತ್ತಿಲ್ಲ. ವಿವೇಕ್ ಡಾಕ್ಟರನ್ನು ತನ್ನ ಕಾರಿನಲ್ಲಿ ಕರೆದುಕೊಂಡು ಇಸಿಜಿ ಯಂತ್ರವನ್ನೂ ತಂದ. ಡಾ. ಹನುಮಂತಪ್ಪ ಬೆಂಗಳೂರಿನಲ್ಲಿ ಡಾ. ಜಿ.ಎನ್. ರೆಡ್ಡಿಗೆ ಫೋನ್ ಮಾಡಿ ಸ್ಥಿತಿಯನ್ನು ಅವರಿಗೆ ವಿವರಿಸಿ ಅವರ ಅಭಿಪ್ರಾಯವನ್ನು ಕೇಳಿದರು.

ಅವಳಿಗೆ ಸಂಪೂರ್ಣ ವಿಶ್ರಾಂತಿ ಹೇಳಿ ಅಲುಗಾಡಬಾರದೆಂದು ಹೇಳಿದ್ದಾರೆ. ಅವಳನ್ನು ನೋಡಿಕೊಳ್ಳಲು ನಾನು ಮತ್ತು ರಾಜ ಬಿಟ್ಟು ಬೇರೆ ಯಾರೂ ಇಲ್ಲ. ಹುಬ್ಬಳ್ಳಿಗೆ ಪಾರಕ್ಕನಿಗೆ ಫೋನ್ ಮಾಡಿ ಸ್ಥಿತಿಯನ್ನು ವಿವರಿಸಿದೆ. ಗೌರಿಯೊಂದಿಗೆ ನಾಳೆ ಬರುತ್ತೇನೆಂದು ಹೇಳಿದಳು. ಅದು ಸ್ವಲ್ಪ ತೃಪ್ತಿ ಕೊಟ್ಟಿದೆ. ಅವಳ ಜೊತೆಯಲ್ಲಿನ ಈ ಎಲ್ಲಾ ೬೧ ವರ್ಷಗಳ ಬಗ್ಗೆ ಯೋಚಿಸುತ್ತಾ ಈ ಪೀಡೆಯಿಂದ ಹೊರಬರುತ್ತಾಳೆಂದು ನನಗನಿಸುತ್ತದೆ. ಸುಮಾರು ೭-೮ ವರ್ಷಗಳ ಹಿಂದೆ ಇಂತಹುದೇ ತೊಂದರೆಯಾಗಿದ್ದು ನನ್ನ ಹಾಗೆಯೇ ಅದರಿಂದ ಸರಿಹೋದಳು.

**ಸೆಪ್ಟೆಂಬರ್ ೨೨, ೧೯೮೮**

ಪಾರಕ್ಕ ಬೆಳಿಗ್ಗೆ ೧೦ ಗಂಟೆಗೆ ಫೋನು ಮಾಡಿ, ಅವಳು, ಗೌರಿ, ಪ್ರಕಾಶ್ ಮತ್ತು ಉಮ್ಮಣ್ಣ ಮಧ್ಯಾಹ್ನ ೩ ರಿಂದ ೪ ಗಂಟೆ ಒಳಗೆ ತಲುಪುತ್ತಾರೆಂದು ಕಾರಿನಲ್ಲಿ ಹೊರಟಿದ್ದು ತಡವಾಯಿತೆಂದೂ ಹೇಳಿದಳು. ಅವರು ೪ಕ್ಕೆ ಬಂದರು. ೪ ಗಂಟೆಗೆ ಕೆ. ರಂಗಪ್ಪನ ಮೊಮ್ಮಗನ ಮದುವೆಗೆ ಹೋದೆ. ಇನ್ನೊಬ್ಬ ಡಾಕ್ಟರ್ ನಿಸ್ಸಾರ್ ಅಹ್ಮದ್ ವಿವೇಕನ ಕರೆಯ ಮೇರೆಗೆ ೧೨ ಗಂಟೆಗೆ ಬಂದು ಹೆಂಡತಿಯನ್ನು ಪರೀಕ್ಷೆ ಮಾಡಿ ಡಾ. ಹನುಮಂತಪ್ಪ ಸಲಹೆ ನೀಡಿದಂತೆ ದ್ರವ ಆಹಾರ ಮತ್ತು ವಿಶ್ರಾಂತಿ ಅಗತ್ಯವೆಂದು ಹೇಳಿದರು. ಪಾರಕ್ಕ ಮತ್ತು ಇತರರು ಬಂದಾಗ ಸ್ವಾಗತಿಸಲಾಯಿತು ಮತ್ತು ನಮಗೆಲ್ಲಾ ತುಂಬಾ ಸಂತೋಷವಾಯಿತು. ಹೆಂಡತಿಗಂತೂ ಅತೀವ ಸಂತೋಷವಾಗಿದ್ದು ಅವರೆಲ್ಲಾ ಇರುವುದು ಮಾಮೂಲಿಗೆ ಬರುವಿಕೆಯನ್ನು ಶೀಘ್ರಗೊಳಿಸುತ್ತದೆಯೆಂದು ಕಾಣುತ್ತದೆ.

ಡಾ॥ ಎನ್. ಅಹ್ಮದ್ ರಾತ್ರಿ ೯-೩೦ಕ್ಕೆ ಬಂದರು. ಇಸಿಜಿ ತೆಗೆದ ಮೇಲೆ ನೆನ್ನೆಗಿಂತ ಉತ್ತಮವಾಗಿದೆಯೆಂದು ಹೇಳಿ ಸಂಪೂರ್ಣ ಹಾಸಿಗೆ ವಿಶ್ರಾಂತಿಗೆ ಸಲಹೆ ಮಾಡಿ ಆತಂಕಪಡುವಂಥದ್ದೇನೂ ಇಲ್ಲ ಎಂದು ಹೇಳಿದರು. ಅವರು ಪ್ರಕಾಶನ ಸಹಪಾಠಿ. ಪ್ರಕಾಶನು ರಾತ್ರಿ ೧೦-೧೫ಕ್ಕೆ ಕಾರಿನಲ್ಲಿ ಹುಬ್ಬಳ್ಳಿಗೆ ಹೊರಟನು.

**ಸೆಪ್ಟೆಂಬರ್ ೨೩, ೧೯೮೮**

ಹೆಂಡತಿಯ ಸ್ಥಿತಿಯು ಮುಂಚಿನಂತೆಯೇ ಇದೆ. ಆದರೆ ಎಲ್ಲವೂ ಸರಿಯಲ್ಲ ಎಂಬ ಭಾವನೆ ನನಗಿದೆ. ರಾತ್ರಿಯ ಹೊತ್ತಿಗೆ ಆಕೆಗೆ ಅಶಾಂತಿಯುಂಟಾಯಿತು. ಎಡತೋಳು ಬೆನ್ನು ಮತ್ತು ಮುಂಭಾಗದಲ್ಲಿ ನೋವು ಕಾಣಿಸಿಕೊಂಡಿತು. ಹೆಂಡತಿಯು ಒಂದು ಕಾಂಪೋಸ್ ಮಾತ್ರೆಯನ್ನು ತೆಗೆದುಕೊಂಡಳು.

**ಸೆಪ್ಟೆಂಬರ್ ೨೪, ೧೯೮೮ ಬೆಂಗಳೂರಿಗೆ ಹೆಂಡತಿಯನ್ನು ಕರೆದೊಯ್ದು ಲೇಕ್‌ವ್ಯೂ ಆಸ್ಪತ್ರೆಯ ಇಂಟೆನ್ಸೀವ್‌ಕೇರ್ ವಾರ್ಡಿನಲ್ಲಿ ಸೇರಿಸಲಾಯಿತು.**

ನೆನ್ನೆ ರಾತ್ರಿ ಹೆಂಡತಿಯ ಸ್ಥಿತಿ ತುಂಬಾ ಮಟ್ಟಿಗೆ ಹಾಳಾಯಿತು. ನಿದ್ದೆ ಮಾಡಲಿಲ್ಲ. ಬೆಳಿಗ್ಗೆ ೪ ಗಂಟೆಗೆ ಕಾಂಪೋಸಿನ ಒಂದು ಇಂಜೆಕ್ಷನ್ ಕೂಡ ನಿದ್ದೆಯನ್ನು ಕೊಡಲಿಲ್ಲ. ನನಗೆ ಗಾಬರಿಯಾಗಿದೆ. ಅವಳು ಕುಳಿತೇ ಇದ್ದು ಎಡಗೈ ಮತ್ತು ಬೆನ್ನನ್ನು ಮಸಾಜು ಮಾಡಿಸಿಕೊಳ್ಳುತ್ತಿದ್ದಳು. ಆದರೆ ಏನೂ ಪರಿಣಾಮವಿಲ್ಲ. ೯ ಗಂಟೆಗೆ ಡಾ. ಹನುಮಂತಪ್ಪ ಮತ್ತು ಸೀನಿಯರ್ ಸರ್ಜನ್ ರೆಡ್ಡಿ ಬಂದು ಇಸಿಜಿ ತೆಗೆದು ನೋಡಿದಾಗ ಅವರ ಸ್ಥಿತಿ ಬಹಳ ಕೆಟ್ಟಿದೆಯೆಂದೂ, ಆಕೆಯನ್ನು ದಾವಣಗೆರೆ ಅಥವಾ ಬೆಂಗಳೂರಿಗೆ ತೆಗೆದುಕೊಂಡು ಹೋಗಬೇಕೆಂದೂ ಹೇಳಿದರು. ಆದರೆ ಆ ಪ್ರಯಾಣವನ್ನು ಆಕೆ ತಡೆಯಲಾರಳು ಮತ್ತು ಏನಾದರೂ ಕೇಡಾಗಬಹುದೆಂದು ಹೆದರಿದರು. ಗಾಬರಿಯಾಗಿ ಬೆಂಗಳೂರಿಗೆ ಡಾ. ಜಿ.ಎನ್. ರೆಡ್ಡಿಯವರಿಗೆ ಫೋನ್ ಮಾಡಿದರು. ಅವರು ಡಾಕ್ಟರ್ ಹನುಮಂತಪ್ಪನವರಿಂದ ಆಕೆಯ ಸ್ಥಿತಿಯನ್ನು ಕೇಳಿದ ಮೇಲೆ ತಕ್ಷಣ ಒಳ್ಳೆಯ ಕಾರಿನಲ್ಲಿ ಬೆಂಗಳೂರಿಗೆ ತಂದು ಲೇಕ್‌ವ್ಯೂ ಆಸ್ಪತ್ರೆಗೆ ಬರಬೇಕೆಂದರು. ಕೋರಿಕೆಯ ಮೇರೆಗೆ ಮಿಲ್ ಮಾಲೀಕ ತಿಪ್ಪಾರೆಡ್ಡಿ ತಮ್ಮ ಸ್ಟಾಂಡರ್ಡ್ ೨೦೦೦ಅನ್ನು ಕಳುಹಿಸಿದರು. ಒಂದೂವರೆ ಗಂಟೆಯೊಳಗೆ ನಾವೆಲ್ಲ ಸಿದ್ಧವಾದೆವು. ಆಕೆಯ ಜೊತೆಯಲ್ಲಿ ಉಮ್ಮಣ್ಣ, ಪಾರಕ್ಕ ಮತ್ತು ನಾನು ಹೋಗುವುದೆಂದು ನಿರ್ಧರಿಸಲಾಯಿತು. ಆದರೆ ವಿವೇಕ್, ಡಾ. ಪ್ರಸಾದ್ ಕೂಡ ಹೊರಡಲು ಸಿದ್ಧರಾದರು. ಹಾಗಾಗಿ ತಮ್ಮಣ್ಣ ತನ್ನ ಕಾರನ್ನು ಮತ್ತು ಪ್ರಕಾಶ್ ತನ್ನ ಹೊಸ ಫಿಯಟ್ ಕಾರನ್ನು ತಂದರು. ಹೆಂಡತಿ, ಉಮ್ಮಣ್ಣ, ಒಬ್ಬ ಗಂಡಸು ನರ್ಸ್, ಪ್ರಸಾದಿ ದೊಡ್ಡ ಕಾರಿನಲ್ಲಿ ಹೊರಟರು, ನಾನು ಪಾರಕ್ಕ ತಮ್ಮಣ್ಣನ ಕಾರಿನಲ್ಲಿ, ಅವನೇ ನಡೆಸಿದ. ಡಾ. ಹನುಮಂತಪ್ಪ, ವಿವೇಕ್, ಮಂಜು ಫಿಯಟ್‌ನಲ್ಲಿ ದಾರಿಯಲ್ಲಿ ದೊಡ್ಡ ಕಾರು ನಿಂತಾಗ ಮೂರು ಸಲ ನನ್ನ ಹೃದಯದ ಬಡಿತ ನಿಂತಿತು. ಕೆಟ್ಟದು ನಡೆದಿದೆ ಎಂಬ ಹೆದರಿಕೆ. ಅದು ನಿಂತುದು ಆಕೆಗೆ ನೀರು ಕುಡಿಸಲು ಮಾತ್ರ. ಸಾಯಂಕಾಲ ೪-೩೦ಕ್ಕೆ ನಾವು ಡಾ. ರೆಡ್ಡಿಯವರ ಆಸ್ಪತ್ರೆ ತಲುಪಿದೆವು. ಡಾ. ರೆಡ್ಡಿ ಕಾಯುತ್ತಿದ್ದರು. ತಕ್ಷಣವೇ ದಾಖಲು ಮಾಡಿ ಪೂರ್ವಭಾವಿ ಪರೀಕ್ಷೆಗಳನ್ನು ಮಾಡಲಾಯಿತು. ಸ್ವಲ್ಪ ಅಂತರಿಕ ರಕ್ತ ಸ್ರಾವವು ಕಂಡುಬಂದಿತು. ಅರ್ಧ ಗಂಟೆಯೊಳಗೆ ಕಿರಣ್ ಮತ್ತು ಕುಟುಂಬ, ಪ್ರತಿಭಾ ಮತ್ತು ಕುಟುಂಬ, ಅನಸೂಯ ಮತ್ತು ಕುಟುಂಬ, ಗಿರಿಜಾ ಮತ್ತು ಕುಟುಂಬ ಬರತೊಡಗಿದರು. ರಾತ್ರಿ ೯ ಗಂಟೆವರೆಗೆ ಅಲ್ಲೇ ಉಳಿದರು.

ಅವರೆಲ್ಲರಿಂದಲೂ ರಕ್ತ ತೆಗೆದುಕೊಳ್ಳಲಾಯಿತು, ಅಗತ್ಯ ಬಿದ್ದರೆ ಹೆಂಡತಿಗೆ ರಕ್ತ ಕೊಡಬೇಕಾಗುತ್ತದೆ. ಉಮ್ಮಣ್ಣನ ರಕ್ತ ಹೊಂದಿಕೊಂಡಿತು. ಅವನು ಒಂದು ಲೀಟರ್ ರಕ್ತ ಕೊಟ್ಟನು. ಒಂದೂವರೆ ಗಂಟೆಯ ನಂತರ ಉತ್ತಮಗೊಂಡಿದೆಯೆಂದು ಡಾಕ್ಟರ್

ಭರವಸೆ ನೀಡಿ ನಾನು ಹೋಗಬಹುದು ಎಂದರು. ನನಗೂ ತುಂಬಾ ಸಾಕಾಗಿತ್ತು. ಆಶೆಗಳು ಬಹಳ ಎತ್ತರದವು, ಆಕೆ ಗುಣಮುಖಳಾಗುತ್ತಾಳೆ. ೭-೩೦ಕ್ಕೆ ಹೊರಟು ೧೦ ಗಂಟೆಗೆ ದಣಿದು ಚಿಂತಿಸಿ ಹಾಸಿಗೆಯಲ್ಲಿ ಉರುಳಿದೆ.

**ಅಕ್ಟೋಬರ್ ೮, ೧೯೮೮**

ಬೆಳಿಗ್ಗೆ ಆಕೆ ಚೆನ್ನಾಗಿದ್ದಳು. ಮಧ್ಯಾಹ್ನ ನಾನು ಅವಳನ್ನು ಭೇಟಿ ಮಾಡಿದಾಗ ಕೆಮ್ಮು ಕಮ್ಮಿಯಾಗಿದ್ದರೂ ಕೆಲವು ಸಲ ಭೇದಿಯಾಗಿ ದುರ್ಬಲತೆ ಕಂಡುಬಂದು ಯಾವುದರಲ್ಲಿಯೂ ಆಸಕ್ತಿ ತೋರಿಸುತ್ತಿರಲಿಲ್ಲ. ಡಾಕ್ಟರು ಇಂತಹ ಸಣ್ಣ ತೊಡಕುಗಳು ಬರುತ್ತದೆ ಎಂದರು. ಪುನಃ ನಾನು ತಳಮಳಗೊಂಡೆ. ನನ್ನ ಮನಸ್ಸು ತುಂಬಾ ಗೊಂದಲವಾಗಿದ್ದು ಎಲ್ಲ ರೀತಿಯ ಪರಿಣಾಮಗಳನ್ನು ಊಹಿಸುತ್ತಿದ್ದೆ. ಸಾಯಂಕಾಲದ ಹೊತ್ತಿಗೆ ಅವಳ ಸ್ಥಿತಿ ಸುಧಾರಿಸಿತು. ನನಗೆ ಸಂತೋಷವಾಯಿತು. ಇಲ್ಲಿಯವರಿಗೆ ನಾನು ಉದ್ವೇಗದಲ್ಲಿದ್ದೆ. ಶಾರೀರಿಕವಾಗಿ ಕೂಡ ನಾನು ತುಂಬಾ ಬಳಲಿದ್ದೆ.

ವಿಶೇಷವಾಗಿ ಚಂದ್ರಶೇಖರ್ ಸೇರಿದಂತೆ ಕೆಲವು ನಾಯಕರ ಬಗ್ಗೆ ನನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದೆನೆಂಬ ಕಾರಣದಿಂದ ಒಂದು ಪತ್ರಿಕಾಗೋಷ್ಠಿಯನ್ನು ಜಗದೀಶ್ ವ್ಯವಸ್ಥೆಗೊಳಿಸಿದ್ದ. ನನ್ನ ಮನಸ್ಸು ತುಂಬಾ ಒತ್ತಡದಲ್ಲಿದ್ದರೂ ಅವರನ್ನು ಭೇಟಿ ಮಾಡಲು ನಾನು ಒಪ್ಪಿಕೊಂಡೆ.

**ಅಕ್ಟೋಬರ್ ೧೦, ೧೯೮೮** **ಆಕೆ ಬೆಳಿಗ್ಗೆ ೧೦ ಗಂಟೆಗೆ ನಿಧನಳಾದಳು**

**ಲೇಕ್‌ವ್ಯೂ ಆಸ್ಪತ್ರೆ**

ಪಾರಕ್ಕನಿಗೆ ಆಕೆ ತುಂಬಾ ದುರ್ಬಲಳಾಗಿದ್ದಾಳೆಂಬ ಭಾವನೆ ಬಂದರೂ ಆಕೆ ಸರಿಯಾಗಿರುವಂತೆ ಕಂಡಳು. ಯಾವಾಗಿನಂತೆ ನಾನು ಅವಳನ್ನು ಭೇಟಿ ಮಾಡಿದಾಗ ನನ್ನ ಕೈ ಹಿಡಿದುಕೊಂಡಳು. ನಾವು ಭೇಟಿಯಾದಾಗ ಸ್ವಾಭಾವಿಕವಾಗಿ ಹಾಗೆ ಮಾಡುತ್ತಿದ್ದೆವು. ಪಾರಕ್ಕ ಫೋನ್ ಮಾಡಿದಾಗ ಆತುರದಲ್ಲಿ ಅಲ್ಲಿಗೆ ಹೋದೆ. ಸ್ವಲ್ಪ ಹಿನ್ನಡೆ ಕಂಡುಬಂದಿತು. ಆಮ್ಲಜನಕದ ಮುಖವಾಡ ಹಾಕಿದ್ದರು. ಆಕೆಯೇ ಹಾಲು ಕುಡಿದಳೆಂದೂ ಒಂದು ಲವಂಗವನ್ನು ಬಾಯಲ್ಲಿ ಹಾಕಿಕೊಂಡಳೆಂದೂ ಹೇಳಿದರು. ಅವಳು ಎಚ್ಚರವಾಗಿದ್ದು ಮಾತಾಡಿದಳು. ಆಕೆಯನ್ನು ನೋಡಿದ ಮೇಲೆ ನನ್ನನ್ನು ಹೋಗಲು ಹೇಳಿದರು. ಆಕೆ ಚೆನ್ನಾಗಿದ್ದಳು. ನಾನು ಹೊರಗೆ ಬಂದು ಕಾರಿನಲ್ಲಿ ಕುಳಿತುಕೊಳ್ಳುತ್ತಿರುವಾಗ ಒಂದು ನಿಮಿಷ ಬರಲು ಹೇಳಿದರು. ಒಂದು ನಿಮಿಷದಲ್ಲೆ ನಾನು ಒಳಗೆ ಹೋದಾಗ ಆಕೆ ನನ್ನನ್ನು ಬಿಟ್ಟುಹೋದಳೆಂಬುದು ಖಚಿತವಾಯಿತು. ಆದರೂ ಡಾಕ್ಟರುಗಳು ಸತ್ತ ಹೃದಯವನ್ನು ಹಿಂದಕ್ಕೆ ತರಲು ಒತ್ತಡವನ್ನು ಹಾಕುತ್ತಿದ್ದರು. ೧೦ ನಿಮಿಷ ಅಲ್ಲಿ ಕುಳಿತೆ. ಡಾ. ರೆಡ್ಡಿಯವರು ಶೋಕತಪ್ತರಾಗಿ ಹೃದಯವು ನಿಂತುಹೋಗಿದೆ ಎಂದು

ಹೇಳಿದರು. ಆ ಪ್ರೀತಿಪಾತ್ರವಾದ ಮುಖವನ್ನು ನೋಡಲು ನಾನು ಒಳಗೆ ಹೋದೆ. ತಡೆದುಕೊಳ್ಳಲಾಗಲಿಲ್ಲ. ಗಟ್ಟಿಯಾಗಿ ದೀರ್ಘವಾಗಿ ಅತ್ತುಬಿಟ್ಟೆ. ಡಾಕ್ಟರು ನಮ್ಮನ್ನು ಸಂತೈಸಿದರು. ಪಾರಕ್ಕಗೆ ಕೂಡ ಪ್ರಪಂಚವೇ ಶೂನ್ಯವಾದಂತಾಯಿತು. ನನಗೆ ಮಾತ್ರೆ ಕೊಟ್ಟು ಮಲಗಲು ಹೇಳಿದರು. ಕೆಲವೇ ನಿಮಿಷಗಳಲ್ಲಿ ಬೊಮ್ಮಾಯಿ ಬಂದರು. ಆಗಲೂ ಗಟ್ಟಿಯಾಗಿ ಅತ್ತೆ. ಅರ್ಧ ಗಂಟೆಯಲ್ಲಿ ಹೆಗಡೆ ಬಂದಾಗ ನನಗೆ ತಡೆದುಕೊಳ್ಳಲಾಗಲಿಲ್ಲ. ಆಕೆಯ ಶರೀರವನ್ನು ಮಧ್ಯಾಹ್ನ ತೆಗೆದುಕೊಂಡು ಹೋಗಬೇಕೆಂದು ನಿರ್ಣಯಿಸಿದೆವು. ಪ್ರತಿಯೊಬ್ಬರೂ ತಯಾರಾದರು. ಖಾಸಗಿ ಆಸ್ಪತ್ರೆ ವ್ಯಾನ್ ಒಂದಕ್ಕೆ ಮುದ್ದಪ್ಪ ವ್ಯವಸ್ಥೆ ಮಾಡಿದರು. ಅದರಲ್ಲಿ ಶರೀರವನ್ನು ಉದ್ದವಾಗಿ ಇಡಲಾಯಿತು. ರಾಜ, ಎಲ್.ಎಸ್. ಚಂದ್ರಶೇಖರ್ ಮತ್ತು ಇನ್ನಿಬ್ಬರು ಶವದ ಜೊತೆಯಲ್ಲಿ ಹೋದರು. ನಾನು, ವಿವೇಕ್ ಮತ್ತು ಇತರರು ಒಂದು ಕಾರಿನಲ್ಲಿ ಮತ್ತು ಇತರರು ಇನ್ನೆರಡು ಕಾರುಗಳಲ್ಲಿ ಹೊರಟೆವು. ನಾವು ೩-೩೦ಕ್ಕೆ ಬಿಟ್ಟರೂ ಸ್ವಲ್ಪ ಬೇಗನೆ ಚಿತ್ರದುರ್ಗವನ್ನು ತಲುಪಿದೆವು. ವ್ಯಾನು ೩-೧೫ಕ್ಕೆ ಬಿಟ್ಟು ೭-೩೦ಕ್ಕೆ ತಲುಪಿತು.

**ಅಕ್ಟೋಬರ್ ೧೧, ೧೯೮೮**

ರೇಡಿಯೋವು ಸುದ್ದಿ ಬಿತ್ತರಿಸಿದ್ದರಿಂದ ಜನರು ಆಗಲೇ ಬಂದಿದ್ದರು. ಹಾಲಿನಲ್ಲಿ ಒಂದು ಮಂಚದ ಮೇಲೆ ಶರೀರವನ್ನು ಇರಿಸಲಾಯಿತು. ದೀಪ ಹಚ್ಚಲಾಯಿತು. ಜನರು ಕಾಯುತ್ತಿದ್ದರು. ಕೆಲವರು ಮಲಗಿದರು. ನನಗೆ ಒಂದು ಬಲವಾದ ಡೋಸ್ ಕಾಂಪೋಸ್ ಕೊಡಲಾಯಿತು. ನಾನು ಅನೇಕ ಸಲ ಏಳುತ್ತಿದ್ದೆ. ಮೃತ ಮುಖದ ಕಡೆಗೆ ನೋಡುತ್ತಿದ್ದೆ. ಶರೀರವನ್ನು ಹೂವುಗಳಿಂದ ಮುಚ್ಚಲಾಗಿತ್ತು. ಪೂರ್ಣಿಮಾ ಒಬ್ಬಳನ್ನು ಬಿಟ್ಟು ಎಲ್ಲಾ ಹೆಣ್ಣುಮಕ್ಕಳು ಮೂರು ಜನ ಗಂಡು ಮಕ್ಕಳು ಮತ್ತು ಮೊಮ್ಮಕ್ಕಳು ಎಲ್ಲರೂ ಬಂದರು. ಮಾರನೆ ಬೆಳಿಗ್ಗೆ ೧೧ನೇ ತಾರೀಕು ನಿದ್ದೆಯಿಲ್ಲದಿದ್ದರೂ ಏಳಲು ಪ್ರಯತ್ನ ಮಾಡಿದೆ. ಹಲ್ಲುಜ್ಜಿ ಮುಖ ತೊಳೆದುಕೊಂಡೆ. ಸ್ನಾನವಿಲ್ಲ. ಪಟ್ಟಣದಿಂದ, ದಾವಣಗೆರೆ, ಚಳ್ಳಕೆರೆ, ಬೆಂಗಳೂರು, ಶಿವಮೊಗ್ಗ ಮುಂತಾದ ಸ್ಥಳಗಳಿಂದ ಜನ ಬಂದು ಸೇರಲು ತೊಡಗಿದರು. ಪಟ್ಟಣದ ಹೆಂಗಸರು ಹೆಚ್ಚಿನ ಸಂಖ್ಯೆಯಲ್ಲಿದ್ದರು. ಮಧ್ಯಾಹ್ನ ೧ ಗಂಟೆಗೆ ಪೂರಿ ಕೆನಡಾದಿಂದ ಬಂದಳು. ಇಡೀ ಕುಟುಂಬವು ಅತ್ತಿತು. ನಾನು ಮತ್ತು ಕೊನೆಯ ಮಗು ಪೂರಿ ಒಬ್ಬರನ್ನೊಬ್ಬರು ಅಪ್ಪಿಕೊಂಡು ಅಡೆತಡೆಯಿಲ್ಲದೆ ಐದು ನಿಮಿಷಗಳಿಗೂ ಹೆಚ್ಚಾಗಿ ಅತ್ತೆವು. ಆಗ ನಮ್ಮನ್ನು ಬೇರ್ಪಡಿಸಿದರು. ಎಲ್ಲವನ್ನೂ ವ್ಯವಸ್ಥೆಗೊಳಿಸುವುದರಲ್ಲಿ ಮುಖ್ಯಸ್ಥನಾಗಿದ್ದವನು ವಿವೇಕ್. ಶರೀರವನ್ನು ದೊಡ್ಡ ಸಿದ್ದವನಹಳ್ಳಿಗೆ ಒಯ್ಯಲು ನಾಲ್ಕು ಬಸ್ಸುಗಳನ್ನು ಸಿದ್ಧಗೊಳಿಸಿದನು. ಅನೇಕ ಕಾರುಗಳು ಬಸ್ಸನ್ನು ಅನುಸರಿಸಿದವು. ಶರೀರವನ್ನು ಮನೆಯಿಂದ ಹೊರಕ್ಕೆ ತರುವುದಕ್ಕೆ ಮುಂಚೆ ನಾನು ಅದಕ್ಕೆ ಪೂಜೆ ಮಾಡಬೇಕಿತ್ತು.

ಪುನಃ ನಾನು ಅತ್ತೆ, ಸಮಾಧಾನಪಡಿಸಬೇಕಾಯಿತು. ವಿಭೂತಿ, ಕುಂಕುಮ ಮುಂತಾದವುಗಳನ್ನಿರಿಸಿ ಪೂಜಿಸಿದೆ. ಆಕೆಯ ಕಾಲನ್ನೂ ಪೂಜಿಸಿದೆ. ಅದಕ್ಕೆ ಆಕೆ ಅರ್ಹಳಲ್ಲವೆ ? ಮೆರವಣಿಗೆಯು ಹೊರಪೇಟೆ, ಸಂತೆಪೇಟೆ ಮತ್ತು ನಂತರ ದೊಡ್ಡಸಿದ್ದವನಹಳ್ಳಿ ಹತ್ತಿರದ ಜಾಗಕ್ಕೆ (ಸುಮಾರು ೪ ಮೈಲಿಗಳು) ಒಯ್ಯಲಾಯಿತು. ನಿಶ್ಶಬ್ದವಾದ ಜಾಗವನ್ನು ಸರಿಪಡಿಸಲಾಗಿತ್ತು. ವಿವೇಕನು ರಚಿಸಿರುವ ನನ್ನ ಹೆಸರಿನ ಟ್ರಸ್ಟಿನ ಆಸ್ತಿ ಇದು. ೧೦೦ ಮಹಿಳೆಯರು ಸೇರಿದಂತೆ ಸುಮಾರು ೨೦೦ ಜನರು ಮತ್ತು ನನ್ನ ಎಲ್ಲಾ ಹೆಣ್ಣುಮಕ್ಕಳು ಮತ್ತು ಗಂಡು ಮಕ್ಕಳು ಹೂಳುವ ಸಂಪ್ರದಾಯಗಳನ್ನು ಮಾಡಿದರು. ನಾನೂ ಕೂಡ ಮೊದಲ ಮಣ್ಣನ್ನು ೩ ಸಲ ಹಾಕಿದೆ. ಇತರರು ಹಾಗೇ ಮಾಡಿದರು. ನಾವು ಶುದ್ಧಿಗಾಗಿ ಕೈ ಮತ್ತು ಕಾಲುಗಳನ್ನು ತೊಳೆದುಕೊಂಡು ಮನೆಗೆ ಹಿಂತಿರುಗಿದೆವು. ಬೋರ್‌ವೆಲ್ ನೀರು ಶುದ್ಧವೆಂದು ಅದನ್ನು ಉಪಯೋಗಿಸಲಾಯಿತು. ಮನೆಗೆ ಹಿಂತಿರುಗಿದ ಮೇಲೆ ಅಕ್ಕಿ ಮತ್ತು ಉರಿಯುತ್ತಿದ್ದ ದೀಪವನ್ನು ಬಿಸಾಕಿದ ಮೇಲೆ ಕುಟುಂಬದವರನ್ನು ಬಿಟ್ಟು ಬಾಕಿಯವರೆಲ್ಲ ಹೋದರು. ಅವಳಿಲ್ಲದಿರುವುದು ದುಃಖದ ವಿಷಯ. ಎಲ್ಲರಿಗೂ ದುಃಖವಾಗಿತ್ತು ಈ ಎಲ್ಲಾ ೬೨ ವರ್ಷಗಳು ನನ್ನನ್ನು, ನನ್ನ ಮಕ್ಕಳನ್ನು ಮತ್ತು ಮೊಮ್ಮಕ್ಕಳನ್ನು ಆಶೀರ್ವದಿಸಿದ ಒಳ್ಳೆಯ ಹೆಂಗಸನ್ನು ಈಗ ನಾವು ಕಳೆದುಕೊಂಡಿದ್ದೇವೆ. ಇದನ್ನು ಸಹಿಸುವುದು ಕಷ್ಟ. ಊಟವಾದ ಮೇಲೆ ಮಲಗಿದೆವು.

**ಅಕ್ಟೋಬರ್ ೧೨, ೧೯೮೮**

ದಿನವನ್ನು ಹೇಗೋ ಕಳೆಯಲಾಯಿತು. ತಂತಿಗಳು, ಕಾಗದಗಳು ಮತ್ತು ಎಲ್ಲ ಜನರು ವೈಯಕ್ತಿಕವಾಗಿ ಬಂದು ಸಂತಾಪವನ್ನು ಸೂಚಿಸಿ ಆಕೆಗೆ ಶ್ರದ್ಧಾಂಜಲಿ ಅರ್ಪಿಸುತ್ತಿದ್ದರು. ಅವಳನ್ನು ಹಿಂದಕ್ಕೆ ಪಡೆಯಲು ಸಾಧ್ಯವೆ ? ಆಕೆಯನ್ನು ಪುನಃ ನೋಡುತ್ತೇನೆಯೇ ? 'ಪುಟ್ಟವಳೆ' ಎಂದು ಪ್ರೀತಿ ಮತ್ತು ಪ್ರೇಮದಿಂದ ಕರೆಯುತ್ತಿದ್ದ ನನಗೆ ಯಾರಾದರೂ ಇದ್ದಾರೆಯೆ ? ನಾನು ಒಂಟಿಯಾಗಿಬಿಟ್ಟಿದ್ದೇನೆ. ಅವಳು ಹೋದ ಮೇಲೆ ಬಹಳ ಕಾಲ ನಾನು ಉಳಿದುಬಿಡುತ್ತೇನೆಯೆ ? ಗೊತ್ತಿಲ್ಲ. ಆದಷ್ಟು ಬೇಗನೆ ಅವಳನ್ನು ಅನುಸರಿಸಬೇಕು. ನಾನು ಅನುಸರಿಸಬಲ್ಲೆನೆ ? ನನಗೆ ಗೊತ್ತಿಲ್ಲ.

ಎಲ್ಲಾ ಮಕ್ಕಳೂ ಬಂದಿದ್ದಾರೆ, ಅದೇ ಒಂದು ತೃಪ್ತಿ. ಒಂದೇ ಗುಂಪಿನಲ್ಲಿ ಎಲ್ಲರನ್ನೂ ನೋಡಿದ್ದರೆ ಅವಳಿಗೆ ತುಂಬಾ ಸಂತೋಷವಾಗುತ್ತಿತ್ತು ಆಕೆಯೇ ಇಲ್ಲಿಲ್ಲ. ಆಗಲೇ ಮಣ್ಣಿನಲ್ಲಿ ಹೋಗಿ ಒಂದು ದಿನ ಕಳೆಯಿತು.

**ಫೆಬ್ರವರಿ ೨೮, ೧೯೮೯**

ಬಡ್ಜೆಟ್‌ಅನ್ನು ಕೇಂದ್ರ ಹಣಕಾಸು ಮಂತ್ರಿಯು ಪ್ರಕಟಿಸಿದ್ದಾರೆ. ಬಡವರು ಮತ್ತು ನಿರುದ್ಯೋಗಿಗಳ ಬಗ್ಗೆ ಅದೇ ಹಳಸಲು ಮಾತು, ಹಳಸಲು ಮಾತು. ಶ್ರೀಮಂತರಿಗೆ

ತೆರಿಗೆ ಹಾಕಿದಂತೆ ಒಂದು ಪ್ರದರ್ಶನ, ಆದರೆ ಬಹು ಜನರಿಗೆ ಅದರಲ್ಲಿ ಬಡತನ ರೇಖೆಯ ಕೆಳಗಿರುವವರಿಗೆ ಪರಿಹಾರವು ನಿಜವಲ್ಲ ಬರಿ ತೋರಿಕೆ ಮಾತ್ರ. ಇದನ್ನು ಉದ್ದಕ್ಕೂ ಮಾಡಿಕೊಂಡು ಬರಲಾಗುತ್ತಿದೆ ಮತ್ತು ಪುನಃ ಪುನಃ ಅದನ್ನೇ ಪುನರಾವರ್ತಿಸಲಾಗುತ್ತಿದೆ.

**ಮಾರ್ಚ ೧೦, ೧೯೮೯**

ಕೆ.ಕೆ ಇಂದ ಕಬ್ಬನ್‌ಪಾರ್ಕ್‌ಗೆ ಹೋದೆ. ಅಲ್ಲಿ ಟಿಬೆಟನ್ನರು ನಗರದಲ್ಲಿ ಉದ್ದವಾದ ಮೆರವಣಿಗೆ ಮಾಡಿದ ಮೇಲೆ ಚೀನಾದ ಆಕ್ರಮಣದ ವಿರುದ್ಧ ಅವರ ದಂಗೆಯ ೩೦ನೇ ವಾರ್ಷಿಕೋತ್ಸವವನ್ನು ಆಚರಿಸಲು ಬೆಂಗಳೂರಿನ ಸಾವಿರಾರು ಸಹಾನುಭೂತಿ ವ್ಯಕ್ತಪಡಿಸುವವರು ಜೊತೆಯಲ್ಲಿ ದೊಡ್ಡ ಸಂಖ್ಯೆಯಲ್ಲಿ ಬಂದರು. ನಾನು ಮುಖ್ಯ ಅತಿಥಿ. ಮುಂದಾಳುವು ಹೆಚ್. ಹೆಚ್. ದಲಾಯಿಲಾಮಾರ ಸಂದೇಶ ಅಥವಾ ಹೇಳಿಕೆಯನ್ನು ಪುಟ್ಟ ಭಾಷಣದ ನಂತರ ಓದಿದನು. ಟಿಬೆಟಿನ ನಾಗರಿಕರನ್ನು ಚೀನಿ ಸೈನಿಕರು ಹೇಗೆ ಸಾಯಿಸುತ್ತಿದ್ದಾರೆ ಮತ್ತು ನಿರ್ದಯವಾಗಿ ಹೊಡೆಯುತ್ತಿದ್ದಾರೆ ಎಂಬುದರ ಬಗ್ಗೆ ಒಂದು ಸಣ್ಣ ಶಾರೀರಿಕ ಪ್ರದರ್ಶನವನ್ನು ಆಡಿದರು. ಅದು ನನಗೆ ಬಹಳ ಪ್ರಭಾವ ಬೀರಿತು. ನನಗೆ ದುಃಖ ಉಂಟು ಮಾಡಿ ಕೋಪ ಬರಿಸಿತು. ೨೦ ನಿಮಿಷಗಳ ಭಾಷಣ ಮಾಡಿದೆ. ನನ್ನ ಭಾಷಣದ ಸಾರಾಂಶವೆಂದರೆ ಚೀನಿಯರಿಗೆ ಆಕ್ರಮಣಕಾರರಂತೆ ಟಿಬೆಟ್‌ನಲ್ಲಿ ಇರುವ ಹಕ್ಕು ಇಲ್ಲ, ಟಿಬೆಟ್‌ನ ಮೇಲೆ ಚೀನಾದ ಸಾರ್ವಭೌಮತ್ವವನ್ನು ಒಪ್ಪಿಕೊಂಡು ನೆಹ್ರೂ ತಪ್ಪು ಮಾಡಿದರು. ಚೈನಾವು ಟಿಬೆಟ್ಟನ್ನು ಬಿಡುವಂತೆ ಇಡೀ ವಿಶ್ವ ಒತ್ತಾಯಿಸಬೇಕು. ೪೦ ವರ್ಷಗಳ ಹಿಂದೆ ತಮ್ಮದೇ ದುಃಖ ಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಚೀನಿ ನಾಯಕರು ಈಗ ಮಾನವೀಯವಾಗಿ ವರ್ತಿಸಬೇಕು ಎಂದು ಮನವಿ ಮಾಡಿದೆ. ಮಧ್ಯಾಹ್ನ ೧-೧೫ಕ್ಕೆ ಮುಗಿಯಿತು.

**ಮಾರ್ಚ ೨೦, ೧೯೮೯**

ಏಪ್ರಿಲ್ ೬ರಂದು ಬಸವೇಶ್ವರ ಸಮಾರಂಭದಲ್ಲಿ ಹಾಜರಿದ್ದ ಮೇಲೆ ೮ರಂದು ದೆಹಲಿಗೆ ಹೋಗಲು ನಿರ್ಧರಿಸಿದೆ. ೧೦ ಮತ್ತು ೧೧ ರಂದು ದೆಹಲಿಯಲ್ಲಿದ್ದು ಸರ್ದಾರ್ ವಲ್ಲಭಭಾಯಿ ಸಂಘದ ಕೆಲಸವನ್ನು ನೋಡಿಕೊಂಡು ಕೆಲವು ಎಂಪಿಗಳನ್ನು ಭೇಟಿ ಮಾಡಿ ಸರ್ದಾರರ ಹೆಸರಿನ ಸ್ಮಾರಕವಾಗಿ ದೆಹಲಿಯಲ್ಲಿ ಒಂದು ಕಟ್ಟಡವನ್ನು ನಿರ್ಮಿಸಲು, ಒಂದು ಕಟ್ಟಡವನ್ನು ಪಡೆಯಲು ಸಹಾಯ ಮಾಡಬೇಕೆಂದು ಸಾಧ್ಯವಾದರೆ ಪ್ರೊ. ಎಂ.ಎಲ್. ಸೋಂದಿಯವರ ಕೋರಿಕೆಯಂತೆ ಗೋರ್ಬಚೇವ್ ಮೇಲಿನ ಅವರ ಪುಸ್ತಕವನ್ನು ಬಿಡುಗಡೆ ಮಾಡುವುದು. ಅದೇ ಪ್ರಕಾರ ಡಾ. ಚೋಪ್ರಾಗೆ ಬರೆದೆ.

ಅವುಗಳ ಪ್ರಕಟಣೆಯ ಬಗ್ಗೆ ದೊಡ್ಡ ಜವಾಬ್ದಾರಿಯನ್ನು ಹೊತ್ತುಕೊಂಡಿದ್ದೇನೆ. ಡಾ. ಚೋಪ್ರಾರವರು ಉಪಕ್ರಮಿಸುತ್ತಾರೆಂದು ಭಾವಿಸುತ್ತೇನೆ. ನನಗೆ ಅವರು ಬಹಳ ಸಮರ್ಥವಾಗಿ ಸಹಾಯ ಮಾಡುತ್ತಿದ್ದಾರೆ. ಸಮಿತಿಯಲ್ಲಿ ಇನ್ನೂ ಇತರರಿದ್ದು ಅವರೆಲ್ಲಾ ಹೆಚ್ಚಾಗಿ ವಿಶ್ವವಿದ್ಯಾಲಯಗಳ ಉಪಕುಲಪತಿಗಳು ಮತ್ತು ಒಬ್ಬ ಎಂಪಿ ಉಪಾಧ್ಯಕ್ಷ ಮತ್ತು ಇನ್ನೊಬ್ಬರು ಖಜಾಂಚಿ. ಅವರೆಲ್ಲಾ ನನಗೆ ತಿಳಿಯದು. ದೊಡ್ಡ ಕೆಲಸವೆಂದರೆ ಹಣವನ್ನು ಸಂಗ್ರಹಿಸುವುದು. ನಾನು ಅದನ್ನು ಮಾಡುತ್ತೇನೆಂದು ಕಾಣುತ್ತದೆ. ಇಲ್ಲಿಯವರೆಗೆ ಕರ್ನಾಟಕ ಮತ್ತು ಆಂಧ್ರದ ಮುಖ್ಯಮಂತ್ರಿಗಳು ಪ್ರತಿಯೊಬ್ಬರೂ ೩ ಲಕ್ಷ ರೂ.ಗಳನ್ನು ದೇಣಿಗೆ ನೀಡಿದ್ದಾರೆ. ಇನ್ನೂ ಇತರ ವಾಗ್ದಾನಗಳಿವೆ.

**ಮಾರ್ಚ್ ೨೮, ೧೯೮೯**

ಈ ವರ್ಷ ಮೊದಲ ಬಾರಿಗೆ ಕೋಗಿಲೆ ಹಾಡಿದ್ದು ಕೇಳಿ ನನಗೆ ಸಂತೋಷವಾಯಿತು. ನನ್ನ ಮನೆಯ ಹತ್ತಿರ ಗೂಡು ಮಾಡಿಕೊಂಡಿದೆಯೆಂದು ಕಾಣುತ್ತದೆ. ಅಲ್ಲಿ ಒಂದು ಚೆರ್ರಿ ಮರ ಇದ್ದು ಅದರಲ್ಲಿ ತುಂಬಾ ಹಣ್ಣುಗಳಿದ್ದು, ಅದು ಆ ಕೋಗಿಲೆಗಳನ್ನು ಆಕರ್ಷಿಸಬಹುದು.

**ಮಾರ್ಚ್ ೩೦, ೧೯೮೯**

ಮತದಾರರ ವಯಸ್ಸನ್ನು ಇಳಿಸುವುದು, ಈ ದಿನ ಕೇಂದ್ರದ ಒಂದು ಶಾಸನವಾಗಿ ವಯೋಮಿತಿಯನ್ನು ೨೧ ರಿಂದ ೧೮ಕ್ಕೆ ಇಳಿಸಲಾಯಿತು. ಹೆಚ್ಚಿನ ಚರ್ಚೆಯಿಲ್ಲದೆ ಮತ್ತು ಸಂವಿಧಾನದಂತೆ ಅಗತ್ಯವಾಗಿರುವಂತೆ ಅಗತ್ಯವಾದ ರಾಜ್ಯಗಳು ಒಪ್ಪಿಗೆ ನೀಡಿ ಇದು ಈಗ ಶಾಸನವಾಗಿದೆ. ೧೯೬೮ರ ಏಪ್ರಿಲ್ ಅಥವಾ ಮೇಯಲ್ಲಿ ನಾನು ಅಧ್ಯಕ್ಷನಾದ ಮೇಲೆ ಮೊದಲ ಎಐಸಿಸಿ ಸಭೆಯಲ್ಲಿ ಮತ ಹಾಕುವ ವಯಸ್ಸನ್ನು ೧೮ ವರ್ಷಗಳಿಗೆ ಇಳಿಸಬೇಕೆಂದು ತೀವ್ರವಾಗಿ ಸಲಹೆ ಮಾಡಿದ್ದು ಅದಕ್ಕೆ ಅಗತ್ಯ ಕಾರಣಗಳನ್ನು ನೀಡಿದ್ದೆ ಎಂಬುದು ಇನ್ನೂ ಜ್ಞಾಪಕವಿದೆ. ೨೧ ವರ್ಷಗಳ ನಂತರ ಅದು ಒಂದು ಕಾನೂನಾಗಿರುವುದು ಒಳ್ಳೆಯದು.

**ಏಪ್ರಿಲ್ ೬, ೧೯೮೯**

ದಿನದ ಹೆಚ್ಚು ಭಾಗವು ಸರ್ದಾರರ ಸಂಗ್ರಹಿತ ಪುಸ್ತಕಗಳಿಗೆ ದೇಣಿಗೆ ನೀಡಲು ಉಳಿದ ಎಂಟು ಮುಖ್ಯಮಂತ್ರಿಗಳಿಗೆ ಕಾಗದ ಬರೆಯುವುದರಲ್ಲಿಯೇ ಕಳೆಯಿತು.

**ಏಪ್ರಿಲ್ ೨೧, ೧೯೮೯**

ಈ ದಿನದ ರಾತ್ರಿ ರೇಡಿಯೋ ಸಮಾಚಾರದಲ್ಲಿ ಕರ್ನಾಟಕದಲ್ಲಿ ರಾಷ್ಟ್ರಪತಿ ಆಳ್ವಿಕೆಯನ್ನು ಜಾರಿಗೊಳಿಸಲಾಗಿದ್ದು ಅಸೆಂಬ್ಲಿಯನ್ನು ವಿಸರ್ಜಿಸಿ ಹೊರಡಿಸಿದ ಆದೇಶದಿಂದ ಬೊಮ್ಮಾಯಿ ಸರ್ಕಾರವು ಅಂತಿಮವಾಯಿತು. ಈ ಸರಕಾರಕ್ಕೆ ಕಣ್ಣೀರು ಸುರಿಸಬೇಕಿಲ್ಲ.

ಒಂದು ಪಕ್ಷವಾಗಿ ಶಿಸ್ತಿಲ್ಲ, ದಕ್ಷತೆಯಿಲ್ಲ, ವ್ಯವಸ್ಥೆಯಿಲ್ಲ ಮತ್ತು ಅನೈತಿಕತೆ ಮತ್ತು ಭ್ರಷ್ಟಾಚಾರವು ಈ ಸರ್ಕಾರದ ಲಕ್ಷಣಗಳಾಗಿದ್ದವು. ಆದರೆ ಇವೆಲ್ಲವನ್ನೂ ಕೇಂದ್ರವು ಅಳತೆ ಮಾಡಿರುವ ರೀತಿ ಸರಿಯಿಲ್ಲ. ಅದು ಆತುರದ್ದಾಗಿದ್ದು ಪೂರ್ವಭಾವಿ ವ್ಯವಸ್ಥೆಯುಳ್ಳದ್ದಾಗಿದೆ. ರಾಜ್ಯ ಸರ್ಕಾರದ ಅಂತ್ಯಕ್ಕೆ ನನಗೆ ವಿಷಾದವಿಲ್ಲದಿದ್ದರೂ ಕೇಂದ್ರ ಸರ್ಕಾರದ ರೀತಿ ತೀರ ತುಚ್ಛವಾದುದು ಎಂದೇ ಹೇಳಲೇಬೇಕಾಗುತ್ತದೆ. ಎರಡೂ ಸರ್ಕಾರವನ್ನು ತುಚ್ಛೀಕರಿಸಬೇಕು. ಮುಂಬರುವ ಚುನಾವಣೆಗಳಲ್ಲಿ ಕಾಂಗ್ರೆ ಮತ್ತು ದಳ (ಕರ್ನಾಟಕ), ವಾಸ್ತವವಾಗಿ ಭಾರತದ ಪ್ರತಿಯೊಂದು ರಾಜಕೀಯ ಪಕ್ಷಗಳು ಸೋತು ನಿಸ್ಪೃಹ ಸ್ವತಂತ್ರರು ಎಲ್ಲಾ ರಾಜ್ಯಗಳಲ್ಲಿ ಮತ್ತು ಕೇಂದ್ರದಲ್ಲಿ ಆರಿಸಿ ಬರಬೇಕೆಂಬುದು ನನ್ನ ಹಾರೈಕೆ. ಪಕ್ಷಾತೀತ ಸರ್ಕಾರವನ್ನು ಹೊಂದುವುದು ಒಂದು ಒಳ್ಳೆಯ ಪ್ರಯೋಗವೆಂದು ಕಾಣುತ್ತದೆ. ಹೇಗೆ ವಿಷಯಗಳು ರೂಪುಗೊಳ್ಳುತ್ತವೆ ಎಂದು ಕಾದು ನೋಡೋಣ.

**ಏಪ್ರಿಲ್ ೨೨, ೧೯೮೯**

ನಮ್ಮ ರಾಜ್ಯದಲ್ಲಿ ರಾಷ್ಟ್ರಪತಿಗಳ ಆಳ್ವಿಕೆಯ ಬಗ್ಗೆ ಬಹಳ ತೀವ್ರವಾಗಿ ಖಂಡಿಸಿದೆ, ಆದರೂ ಅನೈತಿಕ ಅಶಿಸ್ತಿನ ಪಕ್ಷದ ಸರಕಾರವನ್ನು ವಜಾ ಮಾಡಿದುದಕ್ಕೆ ನನಗೇನೂ ದುಃಖವಿಲ್ಲ ಎಂದು ಚಿತ್ರದುರ್ಗದಲ್ಲಿ ಪತ್ರಿಕಾ ಪ್ರತಿನಿಧಿಗಳಿಗೆ ಹೇಳಿದೆ. ಆದರೆ ಇಡೀ ಸಂಗತಿಯನ್ನು ನಿರ್ವಹಿಸಿರುವ ರೀತಿಗೆ ಕೇಂದ್ರ ಸರ್ಕಾರದ ಬಗ್ಗೆ ತುಚ್ಛ ಭಾವನೆ. ಮುಂದಿನ ಲೋಕಸಭೆ ಮತ್ತು ಅಸೆಂಬ್ಲಿ ಚುನಾವಣೆಗಳ ಬಗ್ಗೆ ಜನರು ಗಂಭೀರವಾಗಿ ಪರಿಗಣಿಸಬೇಕು ಎಂದು ಮನವಿ ಮಾಡಿದೆ. ಏಕೆಂದರೆ ಭಾರತದಲ್ಲಿ ಯಾವ ಪಕ್ಷವೂ ಒಳ್ಳೆಯದಲ್ಲ, ಎಲ್ಲವೂ ಕೆಟ್ಟವು ಮತ್ತು ಭ್ರಷ್ಟ.

ನನ್ನ ಹೇಳಿಕೆಗಳು ಪ್ರಕಟವಾಗುತ್ತವೆಯೆ ? ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡನ್ನೂ ಕಟುವಾಗಿ ಬೈಯ್ದಿರುವುದರಿಂದ-ನನಗೆ ಖಚಿತವಿಲ್ಲ.

**ಏಪ್ರಿಲ್ ೨೫, ೧೯೮೯**

ಸಾಯಂಕಾಲ ೫-೩೦ರಲ್ಲಿ ೫-೬ ಜನರು ತಮ್ಮ ಕ್ಯಾಮರಾಗಳು ದಾಖಲು ಮಾಡುವ ವಸ್ತುಗಳೊಂದಿಗೆ ಬಂದು ಕರ್ನಾಟಕದಲ್ಲಿ ರಾಷ್ಟ್ರಪತಿ ಆಳ್ವಿಕೆ, ಅದರಲ್ಲಿ ಕೇಂದ್ರದ ಕೈವಾಡಗಳ ಬಗ್ಗೆ ನನ್ನ ಹೇಳಿಕೆಯನ್ನು ದಾಖಲು ಮಾಡಿಕೊಂಡರು. ಅಶಿಸ್ತು, ಭ್ರಷ್ಟಾಚಾರ, ಅದಕ್ಷತೆ ಮುಂತಾದವುಗಳಿಂದಾಗಿ ಬೊಮ್ಮಾಯಿ ಸರಕಾರವು ಮುಂದುವರಿಯಲು ಯೋಗ್ಯವಲ್ಲ, ಆದರೂ ಕೇಂದ್ರವೂ ಅನುಚಿತವಾಗಿ ವರ್ತಿಸಿದೆ. ಅವರ ಬಗೆಗೂ ನನ್ನ ಸಂಪೂರ್ಣ ತುಚ್ಛ ಭಾವನೆ ಇದೆ ಎಂದು ನಾನು ಆಗಲೇ ಹೇಳಿದ್ದುದನ್ನು ಪುನರಾವರ್ತಿಸಿದೆ. ಭಾರತದಲ್ಲಿ ಯಾವುದೇ ಸರಕಾರವು ಇರಲು ಯೋಗ್ಯತೆಯಿಲ್ಲ ಎಂದು ಹೇಳಿದೆ. ಎಲ್ಲರೂ ಅಸತ್ಯಸಂಧರು ಎಲ್ಲಾ ಪಕ್ಷಗಳ ಪ್ರತಿಯೊಬ್ಬ ಮಂತ್ರಿ-ಸದಸ್ಯನು ತನಗಾಗಿಯೇ

ಇದ್ದಾನೆಯೆ ಹೊರತು ಯಾರೊಬ್ಬರೂ ದೇಶಕ್ಕೆ ಅಥವಾ ಜನರಿಗೆ ಅಥವಾ ಪಕ್ಷಕ್ಕೆ ಕೂಡ ಕೆಲಸ ಮಾಡುವುದಿಲ್ಲ. ಕೋಮುವಾದದ ವಿಷಯ ಮಾತನಾಡಿ ಅದನ್ನು ಬಹಳವಾಗಿ ಅವಹೇಳನ ಮಾಡಿದೆ. ಅವರು ³/೪ ಗಂಟೆ ಇದ್ದರು.

**ಏಪ್ರಿಲ್ ೩೦, ೧೯೮೯**

ನಾನು ಒಂದು ಗಂಟೆ ನಡೆದೆ. ಇಂದು ರಾಜಣ್ಣ, ನಾನು, ಪ್ರಭಾ ಮೂವರೂ ವರಾಂಡಾದಲ್ಲಿ ಕುಳಿತು ಎಲ್ಲ ವಿಷಯಗಳನ್ನು ಮಾತನಾಡುತ್ತಿದ್ದೆವು. ನಾವೆಲ್ಲ ಪುನರ್ಜನ್ಮದ ಬಗ್ಗೆ ಚರ್ಚಿಸಿ ಪುನರ್ಜನ್ಮವಿಲ್ಲ ಮತ್ತು ನಾವು ಪುನಃ ಹುಟ್ಟುವುದಿಲ್ಲ ಎಂಬ ತೀರ್ಮಾನಕ್ಕೆ ಬಂದೆವು.

**ಮೇ ೨, ೧೯೮೯**

ನೆನ್ನೆ ದಿನ ತಿಳಿಸಿದಂತೆ 'ಇಂಡಿಯಾ ಟುಡೆ'ಯ ರಾಜವಂಶಿ ತನ್ನ ಕ್ಯಾಮರಾಮನ್ ರಿಕಾರ್ಡರ್ ಮುಂತಾದವುಗಳ ಜೊತೆಯಲ್ಲಿ ಬಂದು ನನ್ನನ್ನು ೧ ೧/೨ ಗಂಟೆ ಕಾಲ ಸಂದರ್ಶಿಸಿದರು. ಕಳೆದ ೨೨ರಂದು ನಾನು ಪತ್ರಿಕೆಗೆ ನೀಡಿದ ಹೇಳಿಕೆ ಬಗ್ಗೆ ಅಂದರೆ ಬೊಮ್ಮಾಯಿ ಸರಕಾರದ ವಜಾ ಮತ್ತು ಅಸೆಂಬ್ಲಿಯ ವಿಸರ್ಜನೆಯ ಬಗ್ಗೆ ಅವರಿಗೆ ಹೆಚ್ಚಾಗಿ ಆಸಕ್ತಿಯಿತ್ತು. ನಾನು ಹೇಳಿದುದನ್ನ ಪುನರಾವರ್ತಿಸಿದೆ. ೧) ಭ್ರಷ್ಟ ಮತ್ತು ಸ್ವಾರ್ಥ ಸದಸ್ಯರುಳ್ಳ ಅಶಿಸ್ತಿನ ಪಕ್ಷದ ಸರಕಾರಕ್ಕೆ ಯಾರೂ ಕಣ್ಣೀರಿಡುವುದಿಲ್ಲ, ೨) ರಾಷ್ಟ್ರಪತಿ ಆಳ್ವಿಕೆಯನ್ನು ವ್ಯವಸ್ಥೆಗೊಳಿಸಿ ಜಾರಿಗೆ ತಂದ ಕೇಂದ್ರ ಸರಕಾರಕ್ಕೆ ಹಿಂದೆ ಮುಂದೆ ನೋಡದೆ ಧಿಕ್ಕಾರ ಹೇಳಬೇಕು. ೩) ಭಾರತದಲ್ಲಿ ಯಾವುದೇ ರಾಜಕೀಯ ಪಕ್ಷವು, ಎಲ್ಲವೂ ಭ್ರಷ್ಟ ಮುಂತಾದ ಕಾರಣಗಳಿಂದ, ಚುನಾವಣೆಯಲ್ಲಿ ಗೆಲ್ಲಲು ಅರ್ಹವಲ್ಲ, ೪) ಯಾವುದೇ ಪಕ್ಷವು ಜನರ ಮತಗಳಿಗೆ ಅರ್ಹವಾಗಿಲ್ಲದಿರುವುದರಿಂದ ಮತಹಾಕುವುದಕ್ಕೆ ಮುಂಚೆ ಜನರು ಯೋಚಿಸಬೇಕು. ನೆಹ್ರೂ, ಗಾಂಧಿ, ಪಟೇಲ್‌ರ ಬಗ್ಗೆ ಅನೇಕ ಪ್ರಶ್ನೆಗಳನ್ನು ಕೇಳಿ ನನ್ನ ಉತ್ತರಗಳನ್ನು ಪಡೆದುಕೊಂಡರು. ನಾನು ಬಿಚ್ಚು ಮನಸ್ಸಿನವನಾಗಿದ್ದರೂ ಇಂದಿರಾ ಬಗ್ಗೆ ತುಚ್ಛ ಭಾವನೆಯಿಲ್ಲ. ನೆಹ್ರೂ ಬಗ್ಗೆ ಭಾಗಶಃ ಪ್ರಶಂಸೆಯಿದ್ದು ಈಗಿನ ಪ್ರಧಾನಿ ಇನ್ನೂ ಹೊಸಬ ಮತ್ತು ಅನನುಭವಿ ಮತ್ತು ಸುತ್ತಮುತ್ತ ಇರುವ ಕೆಟ್ಟ ಜನರಿಂದ ಪ್ರಭಾವಿತರಾಗಿದ್ದಾರೆ ಎಂದು ಹೇಳಿದೆ.

**ಮೇ ೧೪, ೧೯೮೯**

ಈ ಮನೆ ೫೫ ವರ್ಷಗಳ ಹಿಂದೆ ಕಟ್ಟಿದ್ದು, ತುಂಬಾ ದೊಡ್ಡದು ಮತ್ತು ಒಂಟಿ ಮತ್ತು ಪಾಳು ಬಿದ್ದಿದೆ ಎಂದು ಹೆಚ್ಚು ಹೆಚ್ಚಾಗಿ ಅನಿಸತೊಡಗಿದೆ. ಹೆಂಡತಿ ಬದುಕಿರುವವರೆಗೆ ಹಾಗೆ ನನಗನಿಸಲಿಲ್ಲ. ಈಗ ಈ ಭಾವನೆ ನುಸುಳುತ್ತಿದೆ.

ಮೂವತ್ತು ವರ್ಷಗಳ ತಪ್ಪು ತಿಳುವಳಿಕೆಯ ನಂತರ ಯುಎಸ್‌ಎಸ್‌ಆರ್ ಅಧ್ಯಕ್ಷ ಗೊರ್ಬಚೇವ್ ಚೀನಾಕ್ಕೆ ಭೇಟಿ ನೀಡುತ್ತಿರುವುದು ಒಂದು ದೊಡ್ಡ ಹೆಜ್ಜೆ. ನೆನ್ನೆ ಚೀನಾದಲ್ಲಿ ಅವರ ಸಮಾನವಾದ ವ್ಯಕ್ತಿಯು ಹಾರ್ದಿಕವಾಗಿ ಸ್ವಾಗತಿಸಿದರು. ಅವರು ಅಲ್ಲಿ ಮೂರು ದಿನ ಇರುತ್ತಾರೆ. ವಿಶ್ವ ಸಮಸ್ಯೆಗಳಿಗೆ ಅವರ ವರ್ತನೆ ಮತ್ತು ವಿಶ್ವಶಾಂತಿಗೆ ಹಾರೈಸುತ್ತಿರುವುದನ್ನು ನೋಡಿದರೆ ಮುಖ್ಯವಾದುದೇನಾದರೂ ಹೊರಬರುತ್ತದೆ. ಬೀಜಿಂಗ್‌ನಲ್ಲಿ ಚೀನೀ ವಿದ್ಯಾರ್ಥಿಗಳಿಂದ ಈಗ ಭಯಂಕರ ಹೋರಾಟ ನಡೆಯುತ್ತಿದ್ದು ಚೀಣಾವನ್ನು ಆಳುವವರ ಮೇಲೆ ಗಣನೀಯವಾದ ಪರಿಣಾಮವುಂಟು ಮಾಡಿದೆ. ನನಗೆ ಇದು ಸ್ವಾಗತಾರ್ಹ.

**ಜೂನ್ ೧, ೧೯೮೯**

ನೆನ್ನೆಯಿಂದ ಪ್ರಧಾನಿ ರಾಜೀವ್‌ಗಾಂಧಿಗೆ ಪತ್ರ ಬರೆಯುತ್ತಲೇ ಇದ್ದೇನೆ. ಪಂಚಾಯಿತಿರಾಜ್, ಜವಹರ್ ರೋಜಗಾರ್ ಯೋಜನೆ ಬಗ್ಗೆ ಗಟ್ಟಿಯಾಗಿ ಘೋಷಣೆಗಳು ಬರೀ ಬೊಗಳೆ ಎಂದು ನನ್ನ ಅಭಿಪ್ರಾಯವೆಂದು ಬರೆಯುತ್ತಿದ್ದೇನೆ.

**ಜೂನ್ ೫, ೧೯೮೯**

ಪಾರಕ್ಕ ನಮ್ಮ ಮೊದಲನೆ ಮಗು. ಈಗ ಅವಳಿಗೆ ೬೧ ವರ್ಷ, ೯ ಮಕ್ಕಳ ತಾಯಿ, ೧೫ ಮೊಮ್ಮಕ್ಕಳ ಅಜ್ಜಿಯಾಗಿದ್ದರೂ ಅವಳು ಮೊದಲನೆ ಮಗುವಾದ್ದರಿಂದ ಅವಳ ಕಡೆಗೆ ತುಂಬಾ ಸೆಳೆಯಲ್ಪಟ್ಟಿದ್ದೇನೆ. ನನ್ನ ಹೆಂಡತಿಯು ಹಾಗೇ ಭಾವಿಸಿದ್ದಳು. ಇವತ್ತು ಮನೆಯನ್ನು ಬಿಡಲು ಚಿಂತಿಸುತ್ತಾ ಅವಳ ದೃಷ್ಟಿ ಕಳೆದುಹೋಗಿದ್ದರೂ ಮನೆಯಲ್ಲಿ ನಡೆಯುವುದೆಲ್ಲಾ ಗೊತ್ತಾಗುತ್ತಿತ್ತು. ಎಲ್ಲವೂ ಸ್ವಚ್ಛವಾಗಿದ್ದು ಸರಾಗವಾಗಿ ನಡೆದುಹೋಗುತ್ತಿತ್ತು. ತನಗೆ ರಾಜಕೀಯ ಚೆನ್ನಾಗಿ ಗೊತ್ತು. ನನಗಿಂತ ಚೆನ್ನಾಗಿ ಜನರನ್ನು ಆಳಿಯಬಲ್ಲೆ ಎಂದು ಪಾರಕ್ಕ ಹೇಳಿದಳು, ಅದು ನಿಜ.

**ಜೂನ್ ೬, ೧೯೮೯**

ರಾಜೀವ್‌ಗಾಂಧಿಗೆ ಪತ್ರ ಕಳುಹಿಸಿ, ಅದರಲ್ಲಿ ಅವರ ಜವಹರ್ ರೋಜ್‌ಗಾರ್ ಮತ್ತು ಗ್ರಾಮ ಪಂಚಾಯಿತಿ ಮಸೂದೆ ಬಗ್ಗೆ ಅವುಗಳಲ್ಲಿರುವ ಲೋಪದೋಷಗಳನ್ನು ತೋರಿಸಿ ಹಳ್ಳಿಗಳಲ್ಲಿ ನಿರುದ್ಯೋಗಿ ಬಡವರಿಗೆ ಲಾಭದಾಯಕವಾದ ಉದ್ಯೋಗವನ್ನು ಕಂಡುಹಿಡಿಯಲು ಏನು ಮಾಡಬೇಕು ಎಂದು ಸೂಚಿಸಿದೆ. ಮೊದಲನೆಯದಾಗಿ ಆತ ಇದರ ಬಗ್ಗೆ ತೀವ್ರವಾಗಿಲ್ಲವೆಂದೆನಿಸುತ್ತದೆ. ಅವುಗಳೆಲ್ಲಾ ಚುನಾವಣಾ ಪೂರ್ವ ಪ್ರದರ್ಶನ.

**ಜೂನ್ ೮, ೧೯೮೯**

ಒಂದು ವಾರಕ್ಕಿಂತ ಹೆಚ್ಚಾಗಿ ತಿಂಗಳುಗಳಿಗೆ ಮುಂಚೆಯೇ ಪ್ರಜಾಪ್ರಭುತ್ವಕ್ಕೆ ಮತ್ತು ಭ್ರಷ್ಟಾಚಾರದ ನಿವಾರಣೆಗೆ ವಿದ್ಯಾರ್ಥಿಗಳ ಚಳವಳಿಯು ನಡೆಯುತ್ತಲೇ ಇದೆ. ಒಂದು

ವಾರದಿಂದ ಹೊಲಸು ತಿರುವನ್ನು ಪಡೆದಿದೆ. ಬೀಜಿಂಗ್‌ನಲ್ಲಿ ವಿದ್ಯಾರ್ಥಿ ಮತ್ತು ಅವರ ಜೊತೆಯಲ್ಲಿ ಸಹಾನುಭೂತಿ ಪ್ರಾಧ್ಯಾಪಕರುಗಳನ್ನು ಟಿನಾಮನ್ ಚೌಕದಲ್ಲಿ ಕೊಲ್ಲಲಾಗಿದೆ. ಇತರ ಮುಖ್ಯವಾದ ಪಟ್ಟಣಗಳಲ್ಲಿ ಚಳವಳಿ ನಡೆಯುತ್ತಿದ್ದು ಅದನ್ನು ದಯಾದಾಕ್ಷಿಣ್ಯವಿಲ್ಲದೆ ಹತ್ತಿಕ್ಕಲಾಗುತ್ತಿದೆ. ಸತ್ತವರು ಸಾವಿರಗಟ್ಟಲೆ ಇರಬಹುದು ಮತ್ತು ವಿದೇಶೀಯರು ರಾಜಧಾನಿಯನ್ನು ಬಿಡುತ್ತಿದ್ದಾರೆ. ಚಳವಳಿಯು ನಡೆಯಬೇಕಾಗಿತ್ತೆಂದು ನನ್ನ ಅನಿಸಿಕೆ. ಕಮ್ಯೂನಿಸ್ಟ್ ಪಕ್ಷ ಆಳುವ ಪ್ರಪಂಚದಲ್ಲಿ ವಿರೋಧವಿದೆ. ಗೋರ್‌ಬಚೇವ್ ಜಾಣ ಮತ್ತು ಬದಲಾವಣೆಯನ್ನು ತರಲು ಧೈರ್ಯವಾಗಿ ಕ್ರಮಗಳನ್ನು ಕೈಗೊಂಡಿದ್ದಾನೆ. ಪೋಲೆಂಡ್ ಕೂಡ ಬದಲಾಯಿಸಿದೆ.

**ಜೂನ್ ೧೬, ೧೯೮೯**

ಈ ದಿನದ ಪತ್ರಿಕಾ ಸಮ್ಮೇಳನಕ್ಕೆ ತುಂಬಾ ಜನ ಹಾಜರಿದ್ದರು. ಸುಮಾರು ೨೦ ಪತ್ರಕರ್ತರು ಮತ್ತು ಸುದ್ದಿ ಏಜೆನ್ಸಿಗಳು ಹಾಜರಾಗಿದ್ದವು. ಮೊದಲು ಪ್ರಧಾನಿ ರಾಜೀವ್‌ಗಾಂಧಿಗೆ ನಾನು ಬರೆದ ಜೂನ್ ೩ರ ಪತ್ರವನ್ನು ಹಂಚಿದೆ. ಅದರಲ್ಲಿ ಪಂಚಾಯತಿರಾಜ್ ಸಂಸ್ಥೆ, ಜವಹರ್ ರೋಜ್‌ಗಾರ್ ಯೋಜನೆ ಮತ್ತು ಪ್ರಮುಖ ವಿಷಯಗಳು ಅಂದರೆ ಸಾಮಾನ್ಯವಾಗಿ ಹಳ್ಳಿಯ ಪ್ರಗತಿಗೆ ಪ್ರಮುಖವಾದವುಗಳು ಮತ್ತು ಬಯೊ-ಗ್ಯಾಸ್ ಮುಂತಾದವುಗಳನ್ನು ಹೇಳಿದ್ದೆ. ಎಲ್ಲರೂ ಅದನ್ನು ಆಸಕ್ತಿಯಿಂದ ಓದಿದ ಮೇಲೆ ಒಂದು ಗಂಟೆಯವರೆಗೆ ಪ್ರಶ್ನೆ ಮತ್ತು ಉತ್ತರಗಳು ನಡೆದವು. ಅದು ೧೨-೩೦ಕ್ಕೆ ಮುಗಿಯಿತು. ಕಾಂಗ್ರೆಸ್ಸಿಗೆ ಪರ್ಯಾಯವಾಗಿ ಒಂದು ಪಕ್ಷದ ಬಗ್ಗೆ ನನ್ನ ಉತ್ತರಗಳನ್ನು ಪಡೆಯಲು ಬಹಳ ಆಸಕ್ತಿಯಿಂದಿದ್ದರು. ಅದು ಸಾಧ್ಯ ಮತ್ತು ಸಫಲವಾಗಲೂ ಬಹುದು, ಹೇಗೆಂದರೆ ಎಲ್ಲಾ ನಾಯಕರು ಜನರ ಮುಂದೆ ಪ್ರಮಾಣವಚನ ಸ್ವೀಕರಿಸಿ ಯಾರೂ ಹುದ್ದೆಗಳನ್ನು ಸ್ವೀಕರಿಸದೆ ಗಾಂಧಿಯ ಯೋಜನೆಯ ಮೇಲೆ ಒತ್ತು ಕೊಟ್ಟು ತಮ್ಮ ಕಾರ್ಯಕ್ರಮಗಳನ್ನು ಮುಂದಿಟ್ಟಾಗ ಅದು ಆಗುತ್ತದೆ ಎಂದೆ. ಅದು ಜನರ ಚಿಂತನೆಗಳ ವಿಷಯವಾಗಿದ್ದರೆ ಮಾತ್ರ ಪಕ್ಷರಹಿತ ಸರಕಾರವು ಸಾಧ್ಯ ಎಂದೂ ಕೂಡ ಹೇಳಿದೆ. ಇದು ಒಂದು ಪ್ರಯೋಗ ಇದನ್ನು ಪ್ರಯತ್ನಿಸಬಹುದು, ಏಕೆಂದರೆ ಭಾರತದಲ್ಲಿ ಯಾವುದೇ ರಾಜಕೀಯ ಪಕ್ಷವು ಪರಿಗಣಿಸಲು ಯೋಗ್ಯವಲ್ಲ. ಪ್ರತಿಯೊಂದು ಪಕ್ಷದ ನಾಯಕರು, ಶಾಸಕಾಂಗದ ಸದಸ್ಯರು ಹಾಗೂ ಆಡಳಿತ ಯಂತ್ರ ದಾರಿ ತಪ್ಪಿವೆ. ಇವುಗಳೆಲ್ಲದರ ಜೊತೆ ಭ್ರಷ್ಟ ಚೀನಾದ ವಿಷಯವೂ ಬಂತು. ಒಟ್ಟಿನಲ್ಲಿ ನನಗೆ ಪತ್ರಿಕಾ ಸಮ್ಮೇಳನ ತೃಪ್ತಿಯಾಯಿತು. ನನ್ನ ಅಭಿಪ್ರಾಯಗಳಿಗೆ ವೃತ್ತಪತ್ರಿಕೆ ಮತ್ತು ಸಾರ್ವಜನಿಕರು ಹೇಗೆ ಪ್ರತಿಕ್ರಿಯಿಸುತ್ತಾರೆಯೋ ಅಥವಾ ಪೂರ್ಣವಾಗಿ ತಿರಸ್ಕರಿಸುತ್ತಾರೆಯೋ ತಿಳಿಯದು.

**ಜೂನ್ ೨೧, ೧೯೮೯**

ರಾಜೀವ್ ಗಾಂಧೀಯು ನಾಳೆ ಹುಬ್ಬಳ್ಳಿಗೆ ಹೋಗುತ್ತಾರೆಂದು ಕಾಣುತ್ತದೆ. ಈತ ದೇಶದಾದ್ಯಂತ ಅದರಲ್ಲಿಯೂ ಕರ್ನಾಟಕಕ್ಕೆ ಅನೇಕ ಸಲ ಬಂದು ಹೋಗುತ್ತಿರುತ್ತಾರೆ. ಈತ ಈಗಿನಿಂದಲೇ ಚುನಾವಣಾ ಪ್ರಚಾರವನ್ನು ತುಂಬಾ ಆಸಕ್ತಿಯಿಂದ ಪ್ರಾರಂಭಿಸಿರುವಂತೆ ಕಾಣುತ್ತದೆ. ಅವರು ಬಹಳ ಹಗುರವಾದ ವಾಗ್ದಾನಗಳು ಮತ್ತು ಭರವಸೆಗಳಾದ ಪಂಚಾಯಿತ್‌ರಾಜ್, ಜವಹರ ರೋಜ್‌ಗಾರ್ ಯೋಜನೆಗಳ ಭರವಸೆ ನೀಡಿ ವೈಯಕ್ತಿಕ ಅವಹೇಳನಗಳಂತಹ ಕೆಳಮಟ್ಟಕ್ಕೆ ಹೋಗಿ ಜನರನ್ನು ತಪ್ಪು ದಾರಿಗೆ ಎಳೆಯುತ್ತಿರುವುದು ದುಃಖಕರ. ಈ ಕೆಟ್ಟ ಮತ್ತು ಕೆಳಮಟ್ಟದ ಕುತಂತ್ರಗಳಿಂದ ಸಾಮಾನ್ಯ ಮನುಷ್ಯನು ಒಲಿಯುತ್ತಾನೆ ಎಂದು ಯೋಚಿಸಿರಬಹುದು. ಅಂತಹ ಉನ್ನತ ಹುದ್ದೆಯ ಗೌರವವನ್ನು ಇಳಿಸಿಬಿಟ್ಟಿದ್ದಾರೆ. ಅವರ ತಾಯಿ ಹೇಳಿಕೊಳ್ಳುವಂತಹ ರಾಜಕೀಯ ನಡತೆಯುಳ್ಳವರಾಗಿರಲಿಲ್ಲ. ಅವರೂ ಕೂಡ ಗರೀಬಿ ಹಟಾವೊ ಮತ್ತು ಬೇರೋಜ್‌ಗಾರಿ ಹಟಾವೋ ಅಂದರೆ ಬಡತನ ಮತ್ತು ನಿರುದ್ಯೋಗ ನಿರ್ಮೂಲನದಂತಹ ಸುಳ್ಳು ಆಶ್ವಾಸನೆ ಮತ್ತು ಭರವಸೆಗಳನ್ನು ನೀಡಿ ಅವುಗಳನ್ನು ಅನುಷ್ಠಾನ ಮಾಡಲು ಏನೂ ಮಾಡಲಿಲ್ಲ. ಅವರ ತಾತ ಮಾತ್ರ ಅಂತಹ ಕೀಳು ಮಟ್ಟದ ನಡತೆಯನ್ನು ಯೋಚಿಸುತ್ತಲೂ ಇರಲಿಲ್ಲ.

**ಜೂನ್ ೨೬, ೧೯೮೯**

ಲಂಡನ್ನಿನಲ್ಲಿ ಸ್ವಲ್ಪ ವಿಷಯ ಸಂಗ್ರಹಿಸಿದ ಮೇಲೆ ಹಿಂತಿರುಗಿರುವೆನೆಂದು ಡಾ. ಚೋಪ್ರಾ ಬರೆದಿದ್ದಾರೆ. ದೆಹಲಿಯಲ್ಲಿ ಭೇಟಿ ಮಾಡಲು ಒಂದು ತಾರೀಕು ಕೊಡಲು ಕೇಳಿದ್ದಾರೆ. ಮುಂದಿನ ತಿಂಗಳ ಮಧ್ಯದ ನಂತರ ಒಂದು ತಾರೀಕನ್ನು ಕೊಡುತ್ತೇನೆ.

**ಜೂನ್ ೨೮, ೧೯೮೯**

ಕಿರಣ್‌ಗೆ ಫೋನು ಮಾಡಿದಾಗ ಮನೆಯ ಅಸ್ತಿಭಾರವನ್ನು ಪ್ರಾರಂಭಿಸಿದ್ದೇನೆಂದೂ ಹೇಳಿದನು. ಈ ಸಂತೋಷ ಸಮಾಚಾರವನ್ನು ಯಾರಿಗೆ ಹೇಳಲಿ. ಅವಳಿಗೆ ಹೇಳಿದ್ದರೆ ತುಂಬಾ ಸಂತೋಷವಾಗುತ್ತಿತ್ತು. ಪ್ರತಿಯೊಂದು ದಿನವೂ ಪ್ರತಿಯೊಂದು ಹೆಜ್ಜೆಯಲ್ಲೂ ಅವಳನ್ನು ನಾನು ಹೇಗೆ ಕಳೆದುಕೊಂಡಿದ್ದೇನೆಂದು ಯೋಚಿಸುತ್ತೇನೆ.

**ಜುಲೈ ೮, ೧೯೮೯**

ಸಮರ್‌ಗುಹಾನ ಆಸೆಯಂತೆ ಮತ್ತು ಕೋರಿಕೆಯಂತೆ ಯು.ಎಸ್.ಎಸ್.ಆರ್. ಅಧ್ಯಕ್ಷ ಗೊರ್ಬಚೇವ್‌ಗೆ ಪತ್ರ ಬರೆಯುತ್ತೇನೆ, ಏಕೆಂದರೆ ಸುಭಾಷ್‌ಚಂದ್ರ ಬೋಸರು ವಿಮಾನ ಅಪಘಾತದಲ್ಲಿ ಸತ್ತಿರುವ ಬದಲು ಎರಡನೆಯ ವಿಶ್ವಯುದ್ಧವಾದ ಮೇಲೆ ರಷ್ಯಾವನ್ನು ತಲುಪಿದ್ದಾರೆಯೆ ಎಂದು ತಿಳಿಸಬೇಕೆಂದು. ಪ್ರೊ. ಗುಹಾ ಒಂದು ಪುಸ್ತಕವನ್ನು ಈ

ವಿಷಯದ ಮೇಲೆ ಪ್ರಕಟಿಸಿ ಅವರು ವಿಮಾನ ಅಪಘಾತದಲ್ಲಿ ಸಾಯಲಿಲ್ಲ ಎಂಬುದಕ್ಕೆ ಒಪ್ಪಿಕೊಳ್ಳುವಂತಹ ಅಂಶಗಳನ್ನು ಕೊಟ್ಟಿದ್ದಾರೆ. ನೆಹ್ರೂ ಮತ್ತು ಇಂದಿರಾರವರ ಕಾಲದಲ್ಲಿ ಭಾರತ ಸರಕಾರ ನಡೆದ ವಿಚಾರಣೆಗಳ ನಿರ್ಣಯಗಳು ಸರಿಯಲ್ಲವೆಂದು ಹೇಳಿದರು. ಅವುಗಳ ಸತ್ಯಾಸತ್ಯತೆಯನ್ನು ಕೂಡ ಸಂದೇಹಿಸುತ್ತಾರೆ. ನಾನು ಗುಹಾರವರನ್ನು ನಂಬಬೇಕೆನಿಸುತ್ತದೆ. ಹಾಗಾಗಿ ಗೊರ್ಬಚೇವ್‌ಗೆ ಬರೆದೆ. ಅವರು ಜವಾಬು ಕೊಡುತ್ತಾರೆಂದು ನಾನು ನಂಬುವುದಿಲ್ಲ ಅಥವಾ ಇವರೇ ತಪ್ಪಿರಬಹುದು.

**ಜುಲೈ ೧೬, ೧೯೮೯**

ಬೆಳಗಿನ ಜಾವದಿಂದ ಮಳೆ ಹನಿಯುತ್ತಿದ್ದು ಸಂಜೆ ೪ ಗಂಟೆವರೆಗೆ ಮುಂದುವರಿಯಿತು. ಗುಜರಾತ್, ಮಹಾರಾಷ್ಟ್ರ, ಮಧ್ಯಪ್ರದೇಶ, ಹರಿಯಾಣದ ಮುಖ್ಯಮಂತ್ರಿಗಳಿಗೆ ಪತ್ರ ಬರೆಯಲು ನಿಶ್ಚಯಿಸಿ ಸರ್ದಾರ್ ಪಟೇಲರ ಜೀವನ ಪ್ರಕಟಣೆಗಳ ಬಗ್ಗೆ ದೇಣಿಗೆ ನೀಡಬೇಕೆಂದು ಕೋರುತ್ತೇನೆ. ಅವರನ್ನು ಸಂಪರ್ಕಿಸಲಾಯಿತು. ಗುಜರಾತಿನ ಮುಖ್ಯಮಂತ್ರಿ ಚೌಧುರಿಯು ದೆಹಲಿಯಲ್ಲಿ ಆಗಲೇ ವಾಗ್ದಾನ ಮಾಡಿದಂತೆ ೩ ಲಕ್ಷ ರೂ.ಗಳನ್ನು ಕಳಿಸುವುದಾಗಿ ಹೇಳಿದರು. ಮಹಾರಾಷ್ಟ್ರದ ಮುಖ್ಯಮಂತ್ರಿ ಶರದ್ ಪವಾರ್‌ರವರು ೩ ಲಕ್ಷ ರೂ.ಗಳ ದೇಣಿಗೆ ನೀಡಲು ವಾಗ್ದಾನ ಮಾಡಿದರು. "ನನ್ನಿಂದ ಹಿಂದೆ ಕಳುಹಿಸಲ್ಪಟ್ಟ ಕೋರಿಕೆಗಳ ಅರಿವಿಲ್ಲ" ಎಂದು ಹೇಳಿದರು. ಮಧ್ಯಪ್ರದೇಶದ ಮೋತಿಲಾಲ್ ವೋರಾ ತಕ್ಷಣ ಸಿಗಲಿಲ್ಲ. ಆದರೆ ಅವನ ಕಾರ್ಯದರ್ಶಿ ಅವರಿಗೆ ಹೇಳಿದ್ದಾರೆ. ಅವರಿಗೆ ನಾಳೆ ಬೆಳಿಗ್ಗೆ ೯-೩೦ಕ್ಕೆ ಫೋನ್ ಮಾಡುತ್ತೇನೆ. ಹರಿಯಾಣದ ದೇವಿಲಾಲರು ಊರಲ್ಲಿರಲಿಲ್ಲ. ೧೮ನೇ ತಾರೀಕು ಸಾಯಂಕಾಲ ದೊರೆಯುತ್ತಾರೆ. ಒಟ್ಟಾರೆ ಸಫಲವಾದ ರಾತ್ರಿ. ಪವಾರ್ ಮತ್ತು ಚೌಧುರಿಯಿಂದ ವಂತಿಗೆಗಳು ಬರುವುದು ಖಂಡಿತ. ಇತರರಿಂದ ಪ್ರಯತ್ನಿಸುತ್ತೇನೆ.

**ಜುಲೈ ೧೭, ೧೯೮೯**

ತುಂಬಾ ಪತ್ರಗಳನ್ನು ಬರೆದು ಸುಸ್ತಾಗಿದೆ. ತುಂಬಾ ಬರೆದರೆ ಬಲ ತೋಳು ನೋಯುತ್ತದೆ. ವಯಸ್ಸು.

**ಜುಲೈ ೨೨, ೧೯೮೯**

ಮೂರು ದಿನಗಳ ಹಿಂದೆ ಪಾರ್ಲಿಮೆಂಟು ಪ್ರಾರಂಭವಾದಾಗಿನಿಂದ ವಿರೋಧ ಪಕ್ಷಗಳು ಬೋಫೋರ್ಸ್ ಮೇಲೆ ಕಂಟ್ರೋಲರ್ ಮತ್ತು ಆಡಿಟರ್ ಜನರಲ್‌ರ ವರದಿಯನ್ನು ಉಪಯೋಗಿಸಿಕೊಂಡು ಕಾರ್ಯಕಲಾಪಗಳನ್ನು ತಡೆಗಟ್ಟಿ ಪ್ರಧಾನಿಯು ರಾಜೀನಾಮೆ ನೀಡಬೇಕೆಂದು ಒತ್ತಾಯಿಸುತ್ತಿವೆ. ಇಂತಹ ಇನ್ನೂ ಸಣ್ಣ ಕಾರಣಗಳಿಗೆ ಲಾಲ್ ಬಹದ್ದೂರ್ ಶಾಸ್ತ್ರಿಯವರು ರೈಲ್ವೆ ದುರಂತದಿಂದ ಸಾವುಗಳುಂಟಾದಾಗ ಮತ್ತು ಸಂಜೀವರೆಡ್ಡಿಯವರ

ವಿರುದ್ಧ ಆಂಧ್ರ ಪ್ರದೇಶದ ಉಚ್ಚ ನ್ಯಾಯಾಲಯದಲ್ಲಿ ಆರೋಪದ ಉಲ್ಲೇಖವಾದಾಗ ಇಬ್ಬರೂ ರಾಜೀನಾಮೆ ನೀಡಿದರು. ಈಗ ಆಳುವ ಪಕ್ಷದಲ್ಲಿರುವ ವ್ಯಕ್ತಿಗಳು ಮಂತ್ರಿಗಳಾಗಿ ಅವರಿಗೆ ಅವಮಾನವಿಲ್ಲ ಮತ್ತು ಸಂಪೂರ್ಣವಾಗಿ ನಿರ್ಲಕ್ಷ್ಯದಿಂದಿದ್ದಾರೆ. ಅವರು ರಾಜೀನಾಮೆ ಕೊಡುವುದೇ ಇಲ್ಲ. ಅವರು ತಮಗಾಗಿಯೇ ಇದ್ದಾರೆಯೇ ಹೊರತು ದೇಶ ಅಥವಾ ಜನಕ್ಕಾಗಿಯಲ್ಲ. ಕೆಲವರನ್ನು ಬಿಟ್ಟರೆ ಹೆಚ್ಚಿನ ಮಂತ್ರಿಗಳು ಹಾಗೆಯೇ ಇದ್ದಾರೆ. ಪಕ್ಷದ ಸದಸ್ಯರು ಇವರಿಗಿಂತ ಏನೂ ಉತ್ತಮವಿಲ್ಲ.

**ಆಗಸ್ಟ್ ೧೩, ೧೯೮೯**

ರಾತ್ರಿ ಊಟದ ಸಮಯದಲ್ಲಿ ಡಾ. ಚೋಪ್ರಾ ಮತ್ತು ಅವರ ಹೆಂಡತಿ ಬಂದು ಅನೇಕ ವಿಷಯಗಳನ್ನು ಚರ್ಚಿಸುತ್ತ ಒಂದು ಗಂಟೆಗೂ ಹೆಚ್ಚಾಗಿ ಇದ್ದರು. ಈತ ಹಳೆಯ ಮತ್ತು ಪ್ರಸಕ್ತ ಇತಿಹಾಸಗಳೆರಡನ್ನೂ ಬಹಳ ಚೆನ್ನಾಗಿ ತಿಳಿದಿರುವ ಮನುಷ್ಯ. ಆತನ ಹೆಂಡತಿಯೂ ಬುದ್ಧಿವಂತೆ. ಅವರಿಗೆ ಮಕ್ಕಳಿಲ್ಲ. ಅವರನ್ನು ನೋಡಿದಾಗೆಲ್ಲ 'ಪ್ರೀತಿ ಹಕ್ಕಿಗಳ ಜೋಡಿ' ಎಂಬ ಭಾವನೆ ಬರುತ್ತದೆ.

**ಆಗಸ್ಟ್ ೧೭, ೧೯೮೧**

ಇದ್ದಕ್ಕಿದ್ದಂತೆ ಕಿರಣ್ ಬಂದಿದ್ದಾನೆ. ನಾನು ಮಧ್ಯಾಹ್ನದ ನಿದ್ದೆಯಿಂದ ಎದ್ದಾಗ ಅವನು ಖಾದಿಯ ಪೈಜಾಮ ಮತ್ತು ಜುಬ್ಬಾ ಹಾಕಿಕೊಂಡಿರುವುದನ್ನು ನೋಡಿದೆ. ಚೆನ್ನಾಗಿ ಕಾಣಿಸುತ್ತಾನೆ. ಅವನು ಬಂದಿರುವುದೇಕೆಂದರೆ ಅವನ ಸುಪ್ರೀಂ ನಾಯಕ ಪ್ರಧಾನಮಂತ್ರಿ ನಾಳೆ ಚಿತ್ರದುರ್ಗಕ್ಕೆ ಬರುವುದರಿಂದ ತಾನು ಬಂದಿದ್ದೇನೆಂದು ಹೇಳಿದ. ನನಗೆ ಆಶ್ಚರ್ಯವೇನೂ ಇಲ್ಲ. ನಾಳೆ ರಾಜೀವ್‌ಗಾಂಧಿ ಬರುತ್ತಿರುವುದರಿಂದ ಧ್ವನಿವರ್ಧಕಗಳು ಇಡೀ ದಿನ ಕೂಗುತ್ತಿವೆ. ಜನರು ಸಾವಿರಾರುಗಟ್ಟಲೆಯಲ್ಲಿ ಬರಬೇಕೆಂದು ಹೇಳುತ್ತಿವೆ. ಖಾಲಿ ಟ್ರಕ್ಕುಗಳು ಮತ್ತು ಪೊಲೀಸರು ನೂರಾರು ಮತ್ತು ಸಾವಿರಾರುಗಟ್ಟಲೆಯಲ್ಲಿ ಸೇರುತ್ತಿದ್ದಾರೆ. ಸಂಖ್ಯೆಗಳನ್ನು ಹೆಚ್ಚಿಸುವುದಕ್ಕೆ ಹಳ್ಳಿಗಳಿಂದ ಜನರನ್ನು ಪುಕ್ಕಟೆ ಕರೆದುಕೊಂಡು ಬರುವುದಕ್ಕೆ ಒಂದು ಮತ್ತು ಇನ್ನೊಂದು ಭದ್ರತಾ ಕಾರಣಗಳಿಗಾಗಿ. ಇದು ಇಂದಿರಾಗಾಂಧಿಯ ಕಾಲದಿಂದ ಭಾರತದ ರಾಜಕೀಯದಲ್ಲಿ ಬೆಳೆದ ಹೊಸ ಪ್ರವೃತ್ತಿ. ಧ್ವನಿವರ್ಧಕಗಳು ರಾಜೀವ್‌ಗಾಂಧಿಯನ್ನು.......ಎಂದು ವಿವರಿಸುತ್ತಿವೆ. ತಾಯಿಗೆ ತಕ್ಕ ಮಗ. ಈ ಮಗ ತಾಯಿಯನ್ನು ಅನುಕರಿಸುತ್ತಿದ್ದಾನೆ ಎಂಬುದು ನಿಜ. ಇವುಗಳನ್ನೇ ಒಳ್ಳೆಯ ಗುಣ ಎಂದು ಪರಿಗಣಿಸಲಾಗುತ್ತಿವೆ.

**ಆಗಸ್ಟ್ ೧೮, ೧೯೮೯**

ಅವರು ಬಂದರು, ಹೋದರು. ಪ್ರಧಾನಿಯು ಭಾಷಣದುದ್ದಕ್ಕೂ ವಿರೋಧ ಪಕ್ಷಗಳನ್ನು ಬೈಯ್ಯುವುದರಲ್ಲಿಯೇ ತೊಡಗಿದ್ದರೆಂದು ನನಗೆ ಹೇಳಿದರು. ಅವರು ಹೇಳುವುದು

ನಿಜವಾಗಿರಬೇಕು. ರಾಷ್ಟ್ರ ನಿರ್ಮಾಣದಲ್ಲಿ ರಚನಾತ್ಮಕವಾಗಿರುವುದು ಅವರ ಭಾಗಕ್ಕೆ ಯಾವುದೂ ಇಲ್ಲ. ಅವರಿಗೆ ಇರುವ ಒಂದೇ ಮಾರ್ಗವೆಂದರೆ ಇವರಿಗಿಂತ ಉತ್ತಮವಲ್ಲದ ವಿರೋಧ ಪಕ್ಷಗಳನ್ನು ಬಯ್ಯುವುದು. ಅದೇ ರೀತಿಯಲ್ಲಿ ಅವರುಗಳು ಇವರನ್ನು ಹಿಂತಿರುಗಿಸಿ ಬಯ್ಯುತ್ತಾರೆ. ಏಕೆಂದರೆ ಜನರ ಮುಂದೆ ಇಡುವುದಕ್ಕೆ ಯಾರಿಗೂ ಯಾವುದೇ ರಚನಾತ್ಮಕ ಕಾರ್ಯ ಇಲ್ಲದಿರುವುದರಿಂದ ಅದೇ ರೀತಿ ತೊಡಗಿರುತ್ತಾರೆ. ಭಾರತದ ದುರದೃಷ್ಟ .

**ಆಗಸ್ಟ್ ೨೪, ೧೯೮೯**

ಇವತ್ತು ರಾಜಣ್ಣ ಒಂದು ಟಿವಿ ಸೆಟ್ ತಂದು ಸಾಯಂಕಾಲ ಹಾಲಿನಲ್ಲಿ ಇಟ್ಟ. ನಾನೇನೂ ಉತ್ಸುಕನಾಗಿರಲಿಲ್ಲ. ಪಾರಕ್ಕ ಈಗ ಇಲ್ಲಿದ್ದಾಳೆ, ಅವಳೇ ಇಟ್ಟುಕೊಳ್ಳಲಿ ಎಂದನು. ಅದರ ಬೆಲೆ ೧೨೦೦೦ ರೂ. ದೊಡ್ಡ ಮೊಬಲಗು.

**ಸೆಪ್ಟೆಂಬರ್ ೧, ೧೯೮೯**

ಜವಹರಲಾಲ್ ನೆಹ್ರೂ ಬಗ್ಗೆ ಒಂದು ಲೇಖನವನ್ನು ನಾನು ಕಳುಹಿಸಬೇಕು. ಇದನ್ನು ಕೋರಿ ಬಂದಿರುವ ಪತ್ರದಲ್ಲಿ ಅವರನ್ನು ತುಂಬಾ ಹೊಗಳಿ ಬರೆಯಬೇಕೆಂದು ನಿರೀಕ್ಷಿಸಲಾಗಿದೆ. ಅವರು ಚಿಂತಿಸಿದ ಮತ್ತು ಮಾಡಿದ ಅನೇಕ ವಿಷಯಗಳಲ್ಲಿ ಅವರು ಹೊಗಳಿಕೆಗೆ ಅರ್ಹರು ಎಂಬುದರಲ್ಲಿ ಸಂದೇಹವಿಲ್ಲ. ಅವರಿಗೆ ಅನೇಕ ಕೊರತೆಗಳು, ದುರ್ಬಲತೆಗಳು, ಸ್ವಾರ್ಥ ಮತ್ತು ಸಾಮಾನ್ಯ ಜನರ ಸಮಸ್ಯೆಗಳ ಅರಿವಿಲ್ಲದಿರುವುದು ಮುಂತಾದವು ಇದ್ದವು. ಮೌಲ್ಯಾಧಾರಿತ ಈ ಲೇಖನವನ್ನು ಕಳುಹಿಸಬೇಕೆ ಅಥವಾ ಬೇಡವೆ ಎಂದು ಯೋಚಿಸುತ್ತಿದ್ದೇನೆ.

**ಅಕ್ಟೋಬರ್ ೨೨, ೧೯೮೯**

ವ್ಯವಸ್ಥೆಗೊಳಿಸಿದಂತೆ ಬೆಳಿಗ್ಗೆ ೧೧ ಗಂಟೆಗೆ ಪತ್ರಿಕಾ ಸಮ್ಮೇಳನವಿತ್ತು. ೧೨-೧೫ರವರೆಗೆ ಮುಂದುವರಿಯಿತು. ನನ್ನ ಮುಖ್ಯ ಉದ್ದೇಶವೆಂದರೆ ಸಂಬಂಧಪಟ್ಟವರಿಗೆಲ್ಲಾ ಬಾಬ್ರಿ ಮಸೀದಿ ಮತ್ತು ರಾಮಜನ್ಮಭೂಮಿ ವಿಷಯ ಹೆದರಿಕೆಯಾಗುವ ರೀತಿಯಲ್ಲಿ ಬೆಳೆಯುತ್ತಿದ್ದು ಹಿಂಸಾಚಾರದಲ್ಲಿ ಅಂತ್ಯಗೊಳ್ಳಬಹುದೆಂಬ ಕಾರಣದಿಂದ ಎಲ್ಲರೂ ಸಂಯಮ ವಹಿಸಬೇಕೆಂದು ನಾನು ಮನವಿ ಮಾಡುತ್ತಿದ್ದೇನೆ ಎಂದು ಹೇಳಿದೆ. ಅವರು ಭಾಗಶಃ ಜಾತೀಯ ಮತ್ತು ಮೂಲಭೂತವಾದ ಹಿನ್ನೆಲೆಯಲ್ಲಿ ದೇಶದ ಐಕಮತ್ಯ ಮತ್ತು ಸಮಗ್ರತೆ ಕಾಪಾಡಲು ಮರೆಯಬಾರದು. ಮತ್ತು ಆ ವಿವಾದಿತ ಜಾಗದಲ್ಲಿ ಒಂದು ರಾಮನ ದೇವಸ್ಥಾನ, ಒಂದು ಮಸೀದಿ, ಒಂದು ಚರ್ಚು, ಒಂದು ಗುರುದ್ವಾರ, ಒಂದು ಪಾರ್ಸಿ ದೇವಸ್ಥಾನ, ಒಂದು ಬುದ್ಧ ಮತ್ತು ಒಂದು ಜೈನ ದೇವಾಲಯವನ್ನು ಹೊಂದಿರಬೇಕು. ತೀವ್ರವಾದ ಜಾತಿಯ ಭ್ರಮೆಯಿಂದಿರುವ ಜನರು ಇದಕ್ಕೆ ಒಪ್ಪುತ್ತಾರೆಯೆ ಎಂಬುದು

ನನಗೆ ಗೊತ್ತಿಲ್ಲ. ನಾನು ಮಾತಾಡಿದ ನಂತರ ಮತ್ತು ರಾಷ್ಟ್ರಕ್ಕೆ ಮನವಿ ಮಾಡಿದ ನಂತರ ಸ್ವಾಭಾವಿಕವಾಗಿ ಪತ್ರಕರ್ತರು ಪ್ರಸಕ್ತ ರಾಜಕೀಯ ಪಕ್ಷಗಳ ಬಗ್ಗೆ ಅಭಿಪ್ರಾಯವನ್ನು ಕೇಳಿದರು. ನಾನು ನನ್ನ ಅಭಿಪ್ರಾಯವನ್ನು ಹೇಳುತ್ತಾ ಯಾವ ರಾಜಕೀಯ ಪಕ್ಷಕ್ಕೂ ಮತಗಳನ್ನು ಕೇಳುವ ನೈತಿಕ ಹಕ್ಕುಗಳಿಲ್ಲ. ಆದರೆ ವಿಶೇಷವಾಗಿ ನಾಯಕರುಗಳು ಒಬ್ಬರ ಮೇಲೊಬ್ಬರು ಕೆಸರನ್ನು ಎರಚಾಡುತ್ತಿರುತ್ತಾರೆ. ಅವರಲ್ಲಿ ರಚನಾತ್ಮಕವಾದುದೇನೂ ಇಲ್ಲ. ಎಲ್ಲಾ ಪಕ್ಷಗಳೂ ಪ್ರಜಾಪ್ರಭುತ್ವವಾದಿಯೆಂಬಂತೆ ಮತ್ತು ಸತ್ಯಸಂಧರೆಂದು ಕರೆದುಕೊಳ್ಳುವ ನಾಟಕವಾಡುತ್ತಿದ್ದಾರೆಂಬ ಭಾವವನ್ನು ವ್ಯಕ್ತಪಡಿಸಿದೆ. ಮಸೀದಿ ಮತ್ತು ರಾಮಜನ್ಮಭೂಮಿ ಜಗಳದಲ್ಲಿ ರಾಜಕೀಯ ಅಭಿಪ್ರಾಯಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಡುತ್ತಾರೆಯೇ ಹೊರತು ನನ್ನ ಮನವಿಗಲ್ಲ ಎಂಬುದು ನನಗೆ ತಿಳಿದ ವಿಚಾರ.

**ನವೆಂಬರ್ ೨೫, ೧೯೮೯**

ಕರ್ನಾಟಕ ಮತ್ತು ಅನೇಕ ರಾಜ್ಯಗಳಲ್ಲಿ ಚುನಾವಣೆ ನಿನ್ನೆ ದಿವಸ ಮುಗಿಯಿತು. ಇವತ್ತು ಮತ್ತು ನಾಳೆಯೂ ಇರುತ್ತದೆ. ನಾಳೆ ಸಾಯಂಕಾಲ ಎಲ್ಲವೂ ಮುಗಿಯುತ್ತದೆ. ನಾಳೆ ಸಂಜೆ ಹೊತ್ತಿಗೆ ಕೆಲವು ಫಲಿತಾಂಶಗಳು ದೊರೆಯುತ್ತದೆ. ಹಾಗಿಲ್ಲದಿದ್ದರೆ ಯಾವ ಪಕ್ಷವು ಮುಂದೆ ಇರಬಹುದು ಎಂಬ ಪ್ರವೃತ್ತಿಯಾದರೂ ದೊರಕಬಹುದು. ರಾಜ್ಯ ಮತ್ತು ಕೇಂದ್ರ ಸರಕಾರಗಳು ನಡೆದುಕೊಂಡಿರುವ ರೀತಿ, ಪ್ರಧಾನಿಯಿಂದ ಹಿಡಿದು ಪಾರ್ಲಿಮೆಂಟು ಮತ್ತು ರಾಜ್ಯ ಅಸೆಂಬ್ಲಿಗಳ ಸದಸ್ಯರು ಮತ್ತು ಹೆಚ್ಚಿನ ಮಂತ್ರಿಗಳ ಭ್ರಷ್ಟಾಚಾರದ ಮೊತ್ತ ಹೇಳಲಾಗದು. ಭ್ರಷ್ಟಾಚಾರ, ನಿಧಾನ, ಅದಕ್ಷತೆ, ನಿರ್ಲಕ್ಷತೆ, ತಾಮಸ ಮುಂತಾದವುಗಳು ಎಲ್ಲ ಕಡೆಯಲ್ಲೂ ಆಡಳಿತವನ್ನು ದಬ್ಬಿಕೊಂಡಿದೆ. ಯಾವುದೇ ಪಕ್ಷವು ಎಲ್ಲಿಯೂ ಜನರ ಪ್ರೀತಿಯಿಂದ ಅಧಿಕಾರಕ್ಕೆ ಬರಲಾಗುವುದಿಲ್ಲ. ಪಶ್ಚಿಮ ಬಂಗಾಳವು ಇದಕ್ಕೆ ಒಂದು ವಿನಾಯಿತಿ ಇರಬಹುದು. ಅದು ನನಗೆ ಖಚಿತವಿಲ್ಲ. ಸಿಕ್ಕಿಂ ಬಗ್ಗೆ ನನಗೆ ಗೊತ್ತಿಲ್ಲ. ಹಾಗಾದರೆ ಇದು ಒಳ್ಳೆಯದು. ಜನರು ಅಂದರೆ ಮತದಾರರಿಗೆ ಇದೊಂದು ಶ್ಲಾಘನೆ.

**ನವೆಂಬರ್ ೨೬, ೧೯೮೯**

ಸಾಯಂಕಾಲದ ಹೊತ್ತಿಗೆ ಸ್ವಲ್ಪ ರೇಡಿಯೋ ಸಮಾಚಾರ ಬರಲಾರಂಭವಾಯಿತು. ಕರ್ನಾಟಕದಲ್ಲಿರುವ ಪ್ರವೃತ್ತಿಯೆಂದರೆ ರಾಮಕೃಷ್ಣ ಹೆಗಡೆಯ ಜನತಾದಳವು ಬಹಳ ಹಿಂದೆ ಬಿದ್ದಿದ್ದು ಕಾಂಗ್ರೆಸ್ (ಐ) ಖಂಡಿತವಾಗಿ ಹೆಚ್ಚಿನ ಅಸೆಂಬ್ಲಿ ಮತಕ್ಷೇತ್ರಗಳಲ್ಲಿ ಮುಂದಿದೆ. ಅದೇ ಪರಿಸ್ಥಿತಿ ಲೋಕಸಭಾ ಮತಕ್ಷೇತ್ರಗಳಿಗೂ ಇದೆ. ಅದೇನು ಅಷ್ಟು ಕೆಟ್ಟದಲ್ಲ. ಆದರೆ ಯಾವುದೇ ಪಕ್ಷವು ಸಂಪೂರ್ಣ ಬಹುಮತ ಪಡೆಯಲಾರದು.

ಉತ್ತರದಲ್ಲಿ ಫಲಿತಾಂಶಗಳು ಇದಕ್ಕೆ ಪ್ರತಿಯಾಗಿರುವ ಹಾಗಿದೆ. ಕಾಂಗ್ರೆಯು ಹಿಂದೆ ಬಿದ್ದಿದ್ದು ಬಿಜೆಪಿ ಮತ್ತು ದಳವು ಹೆಚ್ಚು ಹೆಚ್ಚು ಬಲಗೊಳ್ಳುತ್ತಿದೆ. ಕಾಂಗ್ರೆಗೆ ಕಾರ್ಯರೂಪ ಬಹುಮತ ಸಿಗುವುದಿಲ್ಲವೆಂಬುದು ಖಚಿತವಾಗಿದೆ. ಹತ್ತಿರದಿಂದ ಕಾಂಗ್ರೆನ ಅನರ್ಹತೆ ಅಥವಾ ದೋಷಗಳನ್ನು ಉತ್ತರದ ಜನರು ನೋಡುತ್ತಿರುವುದರಿಂದ ಹೀಗಾಗಿರಬಹುದು. ದಕ್ಷಿಣದಲ್ಲಿ ಇದಕ್ಕೆ ತದ್ವಿರುದ್ಧ. ನನ್ನ ಆಸೆಯೆಂದರೆ ಅಧಿಕಾರದಲ್ಲಿರುವ ಎಲ್ಲಾ ಪಕ್ಷಗಳೂ ಸೋಲಬೇಕು. ಈ ನಂಬಲನರ್ಹವಾದ ಭ್ರಷ್ಟ, ಕೊಳಕು ಸರಕಾರ ಮತ್ತು ಸ್ವಾರ್ಥ ಮಂತ್ರಿಗಳ ಗುಂಪನ್ನು ಒದ್ದೋಡಿಸಿ ಬಿಡಬೇಕು. ನಾನು ಬಹಳ ಕಟುವಾದ ಭಾಷೆಯನ್ನು ಉಪಯೋಗಿಸುತ್ತಿದ್ದೇನೆ. ನಾನು ಪ್ರತ್ಯಕ್ಷವಾಗಿ ಅನೇಕ ಘಟನೆಗಳನ್ನು ನೋಡುವುದರಿಂದ ಭಾವನೆಗಳು ತೀವ್ರವಾಗಿದೆ.

**ಡಿಸೆಂಬರ್ ೧, ೧೯೮೯**

ದೊಡ್ಡ ಪಕ್ಷ ಜನತಾದಳ, ನಂತರದ ದೊಡ್ಡ ಪಕ್ಷ ಬಿಜೆಪಿ, ಎರಡು ಕಮ್ಯೂನಿಸ್ಟ್ ಪಕ್ಷಗಳು. ಪ್ರತಿಯೊಂದರಲ್ಲಿ ೩, ೪, ೨, ೧ ಸದಸ್ಯರಿರುವ ಇತರ ಪಕ್ಷಗಳನ್ನೊಳಗೊಂಡ ನ್ಯಾಷನಲ್ ಫ್ರಂಟ್‌ನ ವಿ.ಪಿ. ಸಿಂಗ್‌ರನ್ನು ಸರ್ವಾನುಮತದಿಂದ ನಾಯಕನನ್ನಾಗಿ ಆರಿಸಲಾಗಿದೆ. ಸುಮಾರು ೨೫ ಸ್ವತಂತ್ರರು ಇದ್ದಾರೆ. ಅವರ ಇಂಗಿತಗಳೇನು ಎಂಬುದು ಯಾರಿಗೂ ತಿಳಿಯದು. ಅವರೇ ಒಂದು ಗುಂಪು ಮಾಡಿಕೊಂಡು ಒಂದೇ ಒಂದು ಸಾಮಾನ್ಯ ಉದ್ದೇಶ ಹೊಂದಿ ಪರಿಣಾಮಕಾರಿಯಾಗಿ ಕೆಲಸ ಮಾಡಬೇಕೆಂಬುದು ನನ್ನ ಆಶೆ. ಕಾಂಗ್ರೆ ದೊಡ್ಡ ಪಕ್ಷ, ಆದರೆ ಅದರ ನಾಯಕ ಜನರ ಅಭಿಮತವನ್ನು ಒಪ್ಪಿಕೊಂಡು ಸೋಲನ್ನೂ ಒಪ್ಪಿಕೊಂಡಿದ್ದಾರೆ. ೧೯೬೯ರಲ್ಲಿ ಇದು ಹುಟ್ಟಿದಂದಿನಿಂದ ಅಶಿಸ್ತು, ಅಸತ್ಯಸಂಧತೆ, ಮೋಸ ಮಾಡುವುದು ಮತ್ತು ಎಲ್ಲ ರಾಜಕೀಯ ತಪ್ಪುಗಳು ಮುಂತಾದ ದೋಷಗಳನ್ನು ಹೊಂದಿದೆ. ನಾಗರಿಕರ, ನಿರುದ್ಯೋಗಿಗಳ, ಅಂದರೆ ಬಡವರ, ಅನಕ್ಷರಸ್ಥರ ಮತ್ತು ಅದರಿಂದಾಗಿ ತಿಳುವಳಿಕೆಯಿಲ್ಲದವರ ಹಿತಾಸಕ್ತಿಯ ಬಗ್ಗೆ ಆಸಕ್ತಿ ಇಲ್ಲ.

**ಡಿಸೆಂಬರ್ ೨, ೧೯೮೯**

ಹೊಸ ಪ್ರಧಾನಿ ವಿ.ಪಿ. ಸಿಂಗ್ ಮೊದಲ ಪ್ರಸಾರ ಭಾಷಣವನ್ನು ರೇಡಿಯೋದಲ್ಲಿ ರಾತ್ರಿ ೮-೧೫ಕ್ಕೆ ಮೊದಲು ಹಿಂದಿಯಲ್ಲಿ, ನಂತರ ಇಂಗ್ಲಿಷಿನಲ್ಲಿ ಮಾಡಿದರು. ಅದು ಚೆನ್ನಾಗಿತ್ತು. ಅವರಿಗೆ ಆಹ್ವಾನಿಸುವ ಧ್ವನಿಯಿಲ್ಲ. ಆದರೆ ಅವರು ಆಸಕ್ತಿಯುಳ್ಳವರು ಮತ್ತು ನಿಷ್ಠರು. ಗ್ರಾಮೀಣ ಸಮಸ್ಯೆಗಳಿಗೆ ಗಮನ ಕೊಡಲಾಗುವುದು ಮತ್ತು ಅರ್ಧ ಬಡ್ಜೆಟ್ಟನ್ನು ಹಳ್ಳಿಗಳಗೆ ಮೀಸಲಾಗಿಡಲಾಗುವುದು ಎಂದು ಹೇಳಿದ್ದಾರೆ. ಉಳಿದುದನ್ನು ಭ್ರಷ್ಟಾಚಾರ ನಿರ್ಮೂಲನೆ, ವಿದೇಶಿ ನೀತಿ, ಬೆಲೆಗಳನ್ನು ಇಳಿಸುವುದು, ಯುವಕರಿಗೆ ಮನವಿ ಮಾಡುವುದು, ಮಹಿಳೆ ಮತ್ತು ಹಿಂದುಳಿದ ಸಮುದಾಯದ ಸಮಸ್ಯೆಗಳು,

ಮುಂತಾದವು ಮತ್ತು ಇತರ ಸಾಮಾಜಿಕ ಸಮಸ್ಯೆಗಳಾದ ಪಂಚಾಯಿತ್ ರಾಜ್ಯ ಇವುಗಳಿಗೆ ಮೀಸಲಿಡುವುದು ಸರಿ. ಆದರೆ ಅವರಿಗೆ ಇತರ ಪಕ್ಷಗಳಿಂದ ಸಂಪೂರ್ಣ ಸಹಕಾರ ಸಿಗಬೇಕು ಮತ್ತು ತಮ್ಮ ಪಕ್ಷದವರಿಂದಲೂ ಸಹಕಾರ ಸಿಗಬೇಕು. ಅವರು ಜಯಗೊಳಿಸುತ್ತಾರೆಂಬುದು ನನ್ನ ಆಶಯ. ಕೆಟ್ಟ ಸರಕಾರವೊಂದು ಅಂತ್ಯಗೊಂಡಿದೆ ಯೆಂಬುದನ್ನು ಸ್ವಾಗತಿಸಬೇಕು.

**ಡಿಸೆಂಬರ್ ೪, ೧೯೮೯**

ನೆನ್ನೆ ದಿವಸ ವಿ.ಪಿ. ಸಿಂಗರನ್ನು ಸ್ವಾಗತಿಸಲು ಮತ್ತು ಅಭಿನಂದಿಸಲು ಒಂದು ಟೆಲಿಗ್ರಾಂ ಕಳುಹಿಸಿದ್ದೆ. ದೀರ್ಘವಾಗಿ ಸಂಗ್ರಹಿತವಾದ ಕೊಳಕನ್ನು ತೆಗೆಯುವುದು, ಗಾಂಧೀ ರೀತಿಯ ರಚನಾತ್ಮಕ ಕಾರ್ಯಕ್ರಮವು ಅಗತ್ಯ ಎಂದು ಹೇಳಿದೆ. ಈ ದಿನ ಅದನ್ನು ದೃಢೀಕರಿಸುವ ಪತ್ರವನ್ನು ಬರೆದೆ. ಒಂದು ತಿಂಗಳವರೆಗೆ ಅವರು ತುಂಬಾ ಕೆಲಸದಲ್ಲಿರುವುದರಿಂದ ಆ ನಂತರ ಏನು ಅನಿಸುತ್ತದೆ ಅದನ್ನು ಬರೆಯುತ್ತೇನೆ ಎಂದು ತಿಳಿಸಿದೆ. ತಮ್ಮ ಮಂತ್ರಿಮಂಡಳವನ್ನು ಹೊರಗೆಡವಿ ಪ್ರಾಯಶಃ ಅವರು ಇತರ ಪಕ್ಷಗಳನ್ನು ಸೆಳೆದುಕೊಳ್ಳುವ ಪ್ರಯತ್ನದಲ್ಲಿದ್ದಾರೆ. ಬಿಜೆಪಿ ಸರ್ಕಾರದಲ್ಲಿ ಸೇರಿದರೆ ಒಳ್ಳೆಯದು. ಅವರು ಆಟವಾಡುತ್ತಿರಬಹುದು. ಅಲ್ಲದೆ ಅವರು ಮಂತ್ರಿಮಂಡಲವನ್ನು ಬೆಂಬಲಿಸಲೇಬೇಕು, ಏಕೆಂದರೆ ಯಾವುದೇ ಕಾರಣದಿಂದ ಅಥವಾ ಅವರ ವಿರೋಧದಿಂದ ಈಗಿನ ಮುಂಬರುವ ಮಂತ್ರಿಮಂಡಲವು ಹೋದರೆ ಅವರು ಈಗಿರುವ ಸ್ಥಾನಗಳನ್ನು ಗೆಲ್ಲಲಾರರು. ನನ್ನ ಭಾವನೆಯೆಂದರೆ ಎರಡು ವರ್ಷಗಳವರೆಗಾದರೂ ಅದು ಅಧಿಕಾರದಲ್ಲಿದ್ದು ಅದನ್ನು ಉರುಳಿಸುವ ಕಾಂಗ್ರೆಸ್‌ನ ಪ್ರಯತ್ನವನ್ನು ನಿರರ್ಥಕಗೊಳಿಸಬೇಕು. ಅವರು ತಮ್ಮ ಕೈಲಾದಷ್ಟು ಕೆಟ್ಟದನ್ನು ಮಾಡುತ್ತಾರೆ.

**ಡಿಸೆಂಬರ್ ೫, ೧೯೮೯**

ವೀರೇಂದ್ರ ಪಾಟೀಲ್ ೧೦ ಸದಸ್ಯರು ಮತ್ತು ಒಬ್ಬ ರಾಜ್ಯಮಂತ್ರಿಯ ಮಂತ್ರಿಮಂಡಲವನ್ನು ಪ್ರಕಟಿಸಿದ್ದಾರೆ. ಅವರು ತಮ್ಮ ಪ್ರಮಾಣವಚನವನ್ನು ಸ್ವೀಕರಿಸಿದ್ದಾರೆ. ಅವರಲ್ಲಿ ಹೆಚ್ಚಿನವರು ಒಳ್ಳೆಯ ಪ್ರಸಿದ್ಧಿ ಹೊಂದಿದವರಲ್ಲ. ಅವರು ತಮ್ಮ ಹಳೆಯ ಸ್ನೇಹಿತ ರಾಜಶೇಖರಮೂರ್ತಿಯನ್ನು ತೆಗೆದುಕೊಂಡಿದ್ದಾರೆ. ಅಜೀಜ್‌ಸೇಠ್, ಮೊಯಿಲಿ, ಶ್ರೀಮತಿ ಮಧ್ವರಾಜ್ ಮತ್ತು ಇತರರನ್ನು ಸೇರಿಸಿಕೊಂಡಿದ್ದಾರೆ. ಈಗ ಅವರು ಉತ್ತಮವಾಗಿ ವರ್ತಿಸಬಹುದು. ಜನರು ಭ್ರಷ್ಟಾಚಾರವನ್ನು ಸಹಿಸುವುದಿಲ್ಲ ಮತ್ತು ಕೇಂದ್ರದಲ್ಲಿ ವಿರೋಧ ಪಕ್ಷವಿದೆ ಎಂಬುದನ್ನು ಅವರು ಅರಿತುಕೊಳ್ಳಬೇಕು. ಕಾಯೋಣ.

ಸಂಯುಕ್ತ ಕರ್ನಾಟಕದ ಸ್ಥಳೀಯ ಬಾತ್ಮೀದಾರ ಬಸವರಾಜು ನನ್ನಲ್ಲಿಗೆ ಬಂದು ಹೊಸ ಸರಕಾರದ ಬಗ್ಗೆ 'ದಿ ಹಿಂದೂ' ಪತ್ರಿಕೆಗೆ ಒಂದು ಹೇಳಿಕೆಬೇಕೆಂದರು. ಅವರಿಗೆ

ಸುದೀರ್ಘವಾದ ಹೇಳಿಕೆ ಕೊಟ್ಟೆ. ಅದರಲ್ಲಿ ಭಾರತದ ಜನರನ್ನು ಅಭಿನಂದಿಸಿ, ಹೊಸ ಸರಕಾರವನ್ನು ಸ್ವಾಗತಿಸಿ, ಹೊರಹೋದವರನ್ನು ತುಚ್ಛೀಕರಿಸಿ ಮತ್ತು ಉತ್ತರದಲ್ಲಿ ಕಾಂಗ್ರೆ ಸೋತಿದ್ದು ಮತ್ತು ದಕ್ಷಿಣದಲ್ಲಿ ಇತರ ಪಕ್ಷಗಳು ಸೋತಿದ್ದು ಜನರು ಅವರ ಕೈಯಲ್ಲಿ ಅನುಭವಿಸಿದ ಭ್ರಷ್ಟಾಚಾರದಿಂದ ಬೇಸತ್ತಿರುವುದರಿಂದ ಉತ್ತಮ ಮತ್ತು ಸತ್ಯಸಂಧ ಸರಕಾರವು ಭ್ರಷ್ಟಾಚಾರವನ್ನು ನಿರ್ಮೂಲನ ಮಾಡುತ್ತದೆ ; ಕೃಷಿ, ನೀರಾವರಿ, ಗೃಹ ಕೈಗಾರಿಕೆ ಮತ್ತು ಸಾರ್ವಜನಿಕ ಉದ್ಯಮಗಳ ಪರಾಮರ್ಶೆಗೆ ಆದ್ಯತೆ ಕೊಡಬಹುದೆಂಬ ಆಶಯವನ್ನು ವ್ಯಕ್ತಪಡಿಸಿದೆ.

**ಡಿಸೆಂಬರ್ ೧೭, ೧೯೮೯**

ಹೊಸ ಪಾರ್ಲಿಮೆಂಟು ನಾಳೆ ಸೇರಲಿದ್ದು ಸೆಂಟ್ರಲ್ ಹಾಲಿನಲ್ಲಿ ಜಂಟಿಸದನವನ್ನು ರಾಷ್ಟ್ರಪತಿಗಳು ಉದ್ದೇಶಿಸಿ ಭಾಷಣ ಮಾಡುತ್ತಾರೆ. ಇದೊಂದು ಸ್ವಾಗತಾರ್ಹ ಬದಲಾವಣೆ. ವಿ.ಪಿ. ಸಿಂಗರು ತಮ್ಮ ಸರ್ಕಾರವನ್ನು ನಡೆಸಿಕೊಂಡು ಹೋಗಲು ಒಂದು ಅವಕಾಶವನ್ನು ಕೊಡಬೇಕೆಂಬುದೇ ನನ್ನ ಆಶಯ. ಅವರು ಚೆನ್ನಾಗಿ ಪ್ರಾರಂಭಿಸಿರುವರೆಂದು ಕಾಣುತ್ತದೆ. ರೇಡಿಯೋ ಮತ್ತು ಟಿವಿಯನ್ನು ಸ್ವಾಯತ್ತ ಮಾಡುವುದು, ಬೆಲೆಗಳನ್ನು ನಿಯಂತ್ರಿಸಲು ಕ್ರಮಗಳನ್ನು ಕೈಗೊಳ್ಳುವುದು ಮುಂತಾದ ಮಸೂದೆಗಳನ್ನು ಮಂಡಿಸುತ್ತಿದ್ದಾರೆ. ಇದು ಒಂದು ಆಹ್ಲಾದಕರವಾದ ಬದಲಾವಣೆ.

**ಡಿಸೆಂಬರ್ ೨೮, ೧೯೮೯**

ಹೊಸ ನ್ಯಾಷನಲ್ ಫ್ರಂಟ್ ಸರಕಾರದ ವಿ.ಪಿ. ಸಿಂಗ್ ಚುನಾವಣೆಯ ಭರವಸೆಗಳಿಗೆ ಅಂಟಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಟಿ.ವಿ. ಮತ್ತು ರೇಡಿಯೋ ಮಸೂದೆ ಮತ್ತು ಮಾಹಿತಿಗೆ ಮೂಲಭೂತ ಹಕ್ಕು ಮತ್ತು ಇತರ ಮಸೂದೆಗಳನ್ನು ವಾಗ್ದಾನ ಮಾಡಿದಂತೆ ಪಾರ್ಲಿಮೆಂಟಿನಲ್ಲಿ ಮಂಡಿಸುತ್ತಿದ್ದಾರೆ. ಅಗತ್ಯ ವಸ್ತುಗಳ ಬೆಲೆಗಳನ್ನು ಇಳಿಸಲು ಕೂಡ ಅವರು ಪ್ರಯತ್ನಿಸುತ್ತಿದ್ದಾರೆ. ಅವರು ಸಫಲರಾಗಬಹುದೆಂದು ಕಾಣುತ್ತದೆ. ವಾಣಿಜ್ಯ ಸಮುದಾಯದ ಸಹಕಾರದ ಬಗ್ಗೆ ನಾನು ಅಷ್ಟೇನೂ ಉತ್ಸಾಹವಾಗಿಲ್ಲ. ರಾಜಕೀಯ ಹಿತಾಸಕ್ತಿ ಬಡವರ ಸೇವೆಯ ಬಗ್ಗೆ ವಾಣಿಜ್ಯೋದ್ಯಮಿಗಳಿಗೆ ಅನುಕಂಪದಿಂದಿದ್ದರೂ ಇಲ್ಲಿಯವರೆಗೆ ಅವರಿಗೆ ಇರುವುದು ಸ್ವಹಿತಾಸಕ್ತಿ ಮಾತ್ರ. ಅವರ ಹಣ ಬೇಕಾಗಿರುವುದರಿಂದ ಸರಕಾರವು ಒಂದು ರೀತಿಯಲ್ಲಿ ಅವರ ಜೊತೆ ಇದೆ.

**ಡಿಸೆಂಬರ್ ೩೧, ೧೯೮೯**

ವರ್ಷ ಮುಗಿಯುತ್ತಿದೆ. ಈ ವರ್ಷ ಭಾರತ ತೋರಿಸಿದಂತೆ ಶೇ. ೬೦ಕ್ಕೂ ಹೆಚ್ಚು ಅನಕ್ಷರತೆ ಇದ್ದರೂ ಪ್ರಜಾಪ್ರಭುತ್ವವನ್ನು ಸುಖಿಸಿರುವ ಅಥವಾ ಅನುಭವಿಸಿರುವ ಜನರು ಕೆಟ್ಟ ಸರಕಾರವನ್ನು ಒದ್ದೋಡಿಸುವುದು ಹೇಗೆ ಎಂಬುದನ್ನು ತಿಳಿದಿದ್ದಾರೆ.

ಉತ್ತರ ಭಾರತದಲ್ಲಿ ಕಾಂಗ್ರೆ ಸರಕಾರವು ಹೆಚ್ಚಿನ ರಾಜ್ಯಗಳಲ್ಲಿ ಆಳುತ್ತಿತ್ತು ಮತ್ತು ಹಾಗೆಯೇ ಕೇಂದ್ರದಲ್ಲಿಯೂ ಅಧಿಕಾರದಲ್ಲಿದ್ದರು. ಈಗ ಒಪ್ಪಿಕೊಳ್ಳುವಂತಹ ರೀತಿಯಲ್ಲಿ ಸೋತಿದೆ. ಕರ್ನಾಟಕದಲ್ಲಿ ಜನತಾದಳದಂತಹ ಇತರ ಪಕ್ಷಗಳು ಆಳುತ್ತಿದ್ದ ದಕ್ಷಿಣ ಭಾರತದಲ್ಲಿ ಅದೇ ಆಗಿದೆ. ಆಂಧ್ರದಲ್ಲಿ ತೆಲುಗು ದೇಶಂ, ಕೇರಳ ಮತ್ತು ತಮಿಳು ನಾಡಿನಲ್ಲಿಯೂ ಹಾಗೆಯೇ. ಅವುಗಳು ಸೋಲಿಸಲ್ಪಟ್ಟಿವೆ ಮತ್ತು ಕಾಂಗ್ರೆ ಗೆದ್ದಿದೆ. ಗೆದ್ದಿರುವ ಪಕ್ಷಗಳನ್ನು ಬೆಂಬಲಿಸಿ ಭ್ರಷ್ಟ ಅದಕ್ಷ ಸರ್ಕಾರವನ್ನು ತೆಗೆದುಹಾಕುವುದರಿಂದ ನನಗೆ ಸಂತೋಷ ಆಗಿದೆ. ಕೆಟ್ಟ ಪಕ್ಷಗಳನ್ನು ಸಾಮಾನ್ಯ ಮತದಾರನು ಶಿಕ್ಷಿಸಿದ್ದಾನೆ. ಈ ಸಲ ೧೮ ರಿಂದ ೨೧ರವರೆಗಿನ ಯುವಕರು ಮತದಾರರಾಗಿದ್ದಾರೆ. ಅದು ಕೂಡ ಪ್ರಾಮುಖ್ಯವಾದುದು. ೧೯೬೮ರಷ್ಟು ಹಿಂದೆಯೇ ನಾನು ಕಾಂಗ್ರೆಸ್ ಅಧ್ಯಕ್ಷನಾಗಿದ್ದಾಗ ಅವರಿಗೆ ಮತದಾನದ ಹಕ್ಕನ್ನು ಕೊಡಬೇಕೆಂದು ವಾದ ಮಾಡಿದ್ದೆ. ಈ ಪರಿಶುದ್ಧಗೊಳಿಸಿದ ಪಕ್ಷಗಳು ಮತ್ತು ಅವುಗಳ ಸರಕಾರವು ಹೇಗೆ ವರ್ತಿಸುತ್ತವೆ ಎಂಬುದನ್ನು ನೋಡೋಣ. ನಾನು ಅದನ್ನು ನೋಡಲು ಬದುಕಿರುತ್ತೇನೆ ಎನಿಸುತ್ತದೆ. ಹಾಗಾದರೆ ನನಗೆ ಸಂತೋಷ. ಏಕೆಂದರೆ ನಾನು ಬಡವರು ಮತ್ತು ನಿರುದ್ಯೋಗಿಗಳ ಸೇವೆಯನ್ನು ಮುಂದುವರಿಸಬಹುದು.

**ಜನವರಿ ೧, ೧೯೯೦**

ಗಣನೀಯವಾದ ದಿನ, ಕೇಂದ್ರ ಸರ್ಕಾರದಲ್ಲಿ ಬದಲಾವಣೆಯಿಂದಾಗಿ ಭಾರತದಲ್ಲಿ ಅಪೇಕ್ಷೀಯ ಬದಲಾವಣೆಗಳನ್ನು ನಾನು ನಿರೀಕ್ಷಿಸುತ್ತೇನೆ. ಅವರು ಚೆನ್ನಾಗಿ ಪ್ರಾರಂಭಿಸಿದ್ದಾರೆ. ಅವರು ಅಧಿಕಾರಕ್ಕೆ ಬಂದಿರುವ ಪರಿಸ್ಥಿತಿ ಮತ್ತು ಸಂದರ್ಭಗಳನ್ನು ಅರ್ಥ ಮಾಡಿಕೊಂಡಿದ್ದಾರೆ. ಭ್ರಷ್ಟ ಕಾಂಗ್ರೆ  ಸರಕಾರಕ್ಕೆ ಹೋಲಿಸಿದರೆ ಉತ್ತಮ ಬದಲಾವಣೆಯನ್ನು ಜನರು ನಿರೀಕ್ಷಿಸುತ್ತಿದ್ದು ಅವರ ಆಶೋತ್ತರಗಳನ್ನು ಅರ್ಥ ಮಾಡಿಕೊಂಡಿದ್ದಾರೆ. ಕಾಂಗ್ರೆಸ್ಸೇತರ ಸರಕಾರಗಳು ತಮ್ಮದೇ ಹಿತದೃಷ್ಟಿಯಿಂದ ಉತ್ತಮವಾಗಿ ವರ್ತಿಸಬೇಕು ಎಂದು ನಾನು ನಿರೀಕ್ಷಿಸುತ್ತೇನೆ. ವಿಶ್ವದ ಪರಿಸ್ಥಿತಿ ಅಷ್ಟೇನೂ ಚೆನ್ನಾಗಿಲ್ಲ. ಇದರಲ್ಲಿರುವ ಒಂದೇ ಬೆಳ್ಳಿಗೆರೆ ರಷ್ಯಾದ ಅಧ್ಯಕ್ಷ ಗೋರ್ಬಚೇವ್. ೨೦ನೇ ಶತಮಾನದ ಕೊನೆಯು ಮತ್ತು ೨ನೇ ಸಹಸ್ರಮಾನದ ಕೊನೆಯೂ ಕೂಡ ಗಣನೀಯವಾದುದು ಮತ್ತು ನಿರೀಕ್ಷೆಗಳಿಂದ ತುಂಬಿದೆ. ೨೦೦೦ ವರ್ಷದ ೧ನೇ ತಾರೀಕನ್ನು ಕಾಣಲು ನಾನು ಬದುಕಿರುತ್ತೇನೋ ಇಲ್ಲವೋ ತಿಳಿಯದು, ಬದುಕಿರಲು ಇಷ್ಟ.

**ಮಾರ್ಚ ೧, ೧೯೯೦**

ಬೆಳಿಗ್ಗೆಯಿಂದ ಪ್ರತಿ ಗಂಟೆಗೊಮ್ಮೆ ಚುನಾವಣಾ ಫಲಿತಾಂಶಗಳು ಬರುತ್ತಾ ಇವೆ. ಸಾಯಂಕಾಲದ ಹೊತ್ತಿಗೆ ಮಹಾರಾಷ್ಟ್ರದ ಫಲಿತಾಂಶಗಳು ಸಂಪೂರ್ಣವಾಗಿ ನಾಳೆ ಪ್ರಕಟಪಡಿಸಲ್ಪಡಬಹುದು. ಬಿಜೆಪಿ ದಳದ ಜೊತೆಗೆ ಪ್ರತಿಯೊಂದು ಅರ್ಧ ರಾಜ್ಯಗಳಲ್ಲಿ

ಗೆಲ್ಲುತ್ತದೆ ಎಂಬುದು ಸ್ಪಷ್ಟ. ಬಿಜೆಪಿ ಜಯಗಳಿಸುವುದು ಅಪೇಕ್ಷಣೀಯವಲ್ಲ. ಆದರೆ ಕಾಂಗ್ರೆಸ್‌ನ ವರ್ತನೆ ಅದರ ದೋಷಗಳು ಮತ್ತು ಬೆಳೆಯುತ್ತಿರುವ ಜಾತಿ ಭಾವನೆಗಳಿಂದಾಗಿ ಮಹಾರಾಷ್ಟ್ರದ ವಿನಾ ಯಾವುದೇ ರಾಜ್ಯದಲ್ಲಿ ಅದಕ್ಕೆ ಸ್ವಲ್ಪವೂ ಅವಕಾಶವಿಲ್ಲ. ಆ ಪಕ್ಷ ಅದರ ಸ್ಥಾಪಕಿ ಇಂದಿರಾಗಾಂಧಿಯ ಕಾಲದಿಂದ ಸ್ವಕೇಂದ್ರೀಕೃತವಾದುದು. ಅಸತ್ಯಸಂಧ, ಅಶಿಸ್ತು, ಭ್ರಷ್ಟವಾಗಿರುವುದರಿಂದ ಅದು ಮುಂದುವರಿಯಲು ಅರ್ಹವಲ್ಲ, ಇದನ್ನು ಅರ್ಥ ಮಾಡಿಕೊಳ್ಳಲು ಜನರಿಗೆ ಇಷ್ಟೆಲ್ಲ ವರ್ಷಗಳು ಬೇಕಾದವು. ಪ್ರಾರಂಭದಲ್ಲಿ ಆಶಾದಾಯಕವಾಗಿದ್ದರೂ ದೇಶದ ಪ್ರಮುಖ ಸಮಸ್ಯೆಗಳನ್ನು ಬಗೆಹರಿಸುವುದರಲ್ಲಿ ಇದು ಅಸಮರ್ಥ ಮತ್ತು ಅಸಮಂಜಸ ರೀತಿಯಲ್ಲಿ ನೋಡಿಕೊಂಡುದರಿಂದ ಈ ವಿಷಯವನ್ನು ಇನ್ನೂ ಅವರು ಹದಗೆಡಿಸಿದ್ದಾರೆ. ಆದರೆ ಮುಂದೆ ಬರುವ ಸರಕಾರಗಳನ್ನು ಜಾಗರೂಕವಾಗಿ ಕಾಯ್ದು ನೋಡಬೇಕು, ಅದನ್ನು ಜನರು ಮಾಡುತ್ತಾರೆಂದು ಆಶಿಸುತ್ತೇನೆ. ಈ ವರ್ಷಕ್ಕೆ ಇವತ್ತೇ ಮೊದಲ ದಿನ ಕೋಗಿಲೆಯು ಹಾಡುತ್ತಿರುವುದನ್ನು ಸಂತೋಷದಿಂದ ಕೇಳುತ್ತಿದ್ದೇನೆ.

**ಮಾರ್ಚ್ ೨೫, ೧೯೯೦**

ಇವತ್ತು ಅಹಮದಾಬಾದಿನಲ್ಲಿ ಮಣಿಬೆನ್‌ಪಟೇಲ್ ಮೃತರಾದರು. ಪ್ರಸಿದ್ಧ ತಂದೆ ಸರ್ದಾರ್ ವಲ್ಲಭಭಾಯಿ ಪಟೇಲರ ಪ್ರಸಿದ್ಧ ಮಗಳು. ತಂದೆ ಸಾಯುವತನಕ ಎಷ್ಟು ಕರ್ತವ್ಯನಿಷ್ಠಳಾಗಿ, ಜಾಗರೂಕ ಮತ್ತು ಪ್ರೀತಿಯಿಂದ ಸೇವೆ ಮಾಡಿದರು. ಆಕೆ ಸರಿಯಾಗಿ ನೋಡಿಕೊಳ್ಳದಿದ್ದರೆ ಅವರು ಇನ್ನೂ ಬೇಗ ಸಾಯುತ್ತಿದ್ದರು.

**ಮಾರ್ಚ್ ೨೭, ೧೯೯೦**

ಈ ದಿನ ಪ್ರಮೋದೂತ ವರ್ಷದ ಮೊದಲ ದಿನ. ನಮ್ಮ ಹೊಸ ವರ್ಷ ಉಗಾದಿ ಎಂದರೆ ಹೊಸ ಯುಗದ ಪ್ರಾರಂಭ ಎಂದರ್ಥ. ನಾವು ಮತ್ತು ಆಂಧ್ರರು ಮಾತ್ರ ಇದನ್ನು ಆಚರಿಸುತ್ತೇವೆ. ಇದನ್ನು ಚಂದ್ರನ ಚಲನೆಯ ಮೇಲೆ ಲೆಕ್ಕಾಚಾರ ಹಾಕಲಾಗುತ್ತದೆ. ಇವತ್ತು ಬೆಳಗಿನಿಂದ ಅವಳ ಬಗ್ಗೆ ಚಿಂತಿಸುತ್ತಿದ್ದೇನೆ. ಪ್ರತಿ ವರ್ಷ ಈ ದಿನ ಅವಳು ನನಗೆ ಒಂದು ಜೊತೆ ಖಾದಿ ಧೋತಿ ಮತ್ತು ಜುಬ್ಬವನ್ನು ನೀಡುತ್ತಿದ್ದಳು. ನಾವಿಬ್ಬರೂ ಖಾದಿಯನ್ನೇ ಧರಿಸುತ್ತಿದ್ದೆವು. ನಾನು ೧೯೨೧ ರಿಂದ ಅವಳು ೧೯೨೭ರಲ್ಲಿ ನನ್ನಲ್ಲಿಗೆ ಬಂದಂದಿನಿಂದ ಖಾದಿ ಧರಿಸುತ್ತಿದ್ದೇವೆ. ಮನೆಯ ದೊಡ್ಡ ವರಾಂಡದಲ್ಲಿ ಸಾಯಂಕಾಲ ಕುಳಿತುಕೊಂಡು ದುಃಖಿತನಾಗಿ ಅವಳ ಬಗ್ಗೆಯೇ ಚಿಂತಿಸುತ್ತಿದ್ದಾಗ ನನ್ನ ಸೋದರಳಿಯ ಬಸವರಾಜನ ೫ ಮತ್ತು ೩ ವರ್ಷಗಳ ಇಬ್ಬರು ಹೆಣ್ಣುಮಕ್ಕಳು ತಮ್ಮ ಹೊಸ ಉಡುಪುಗಳಲ್ಲಿ ಬಂದು ಸಂತೋಷವಾಗಿ ಕುಣಿದರು, ನಕ್ಕರು ಮತ್ತು ಎರಡು ಚಿಟ್ಟೆಗಳಂತೆ ನರ್ತಿಸಿದರು. ನನ್ನ ಮನಸ್ಸು ಅದರಿಂದ ಬದಲಾಯಿಸಿತು. ಈಗ ವಿಶ್ವವು ಎಷ್ಟು ಸಂತೋಷ ಮತ್ತು ಸುಂದರವಾಗಿದೆ ಎನಿಸಿತು. ಆಕಾಶ, ಮರಗಳು, ಸುತ್ತುಮುತ್ತ ಇರುವ ಬೆಟ್ಟಗಳು, ಮುಳುಗುತ್ತಿರುವ ಸೂರ್ಯ, ಹೆಂಗಸು-ಮಕ್ಕಳು ಮತ್ತು ಜನರು

ತಮ್ಮ ಹೊಸ ಉಡುಪುಗಳಲ್ಲಿ ಎಷ್ಟು ಸುಂದರವಾಗಿದ್ದಾರೆ. ಈ ವಿಶ್ವದ ಭಾಗವು ಇಷ್ಟು ವರ್ಷಗಳವರೆಗೆ ಶಕ್ತಿಯ ವಿವಿಧ ರೂಪಗಳಾಗಿರಲಿಲ್ಲವೆ ಮತ್ತು ನಾನು ಬೇಗನೆ ಅದರ ಭಾಗವಾಗಿ ಹೋಗುತ್ತೇನೆ, ನನ್ನ ಹೆಂಡತಿಯು ಆಗಲೇ ಐದು ಅಂಶಗಳ ಭಾಗವಾಗಿ ಹೋಗಿಲ್ಲವೆ. ನಾನು ಅವಳನ್ನು ಬೇಗ ಸೇರಿಕೊಳ್ಳುತ್ತಿದ್ದೇನೆಯೇ, ಬೇರೆಯಾಗದೇ ಇರುವಂತೆ ನಾವಿಬ್ಬರೂ ಒಟ್ಟಿಗಿರುತ್ತೇನೆಯೆ? ಏಕೆ ದುಃಖಿಸಬೇಕು ?

**ಮಾರ್ಚ ೩೦, ೧೯೯೦**

ಪ್ರಧಾನಿ ಅವರ ಖಾಸಗಿ ಕಾರ್ಯದರ್ಶಿಗೆ ಕಾಗದ ಹಾಕಿದೆ. ಡಾ. ಚೋಪ್ರಾಗೆ ಬರೆದು ಸರ್ದಾರ್ ಪಟೇಲರ ಮೊದಲನೆ ಸಂಪುಟವನ್ನು ಬಿಡುಗಡೆ ಮಾಡಲು ಪ್ರಧಾನಿಯಿಂದ ತಾರೀಕನ್ನು ನಿಗದಿಪಡಿಸಲು ಬರೆದೆ. ನಂತರ ಸಂಜೆ ೫-೩೦ಕ್ಕೆ ಚೋಪ್ರಾರಿಂದ ಫೋನ್ ಬಂತು, ೨೫ನೇ ಏಪ್ರಿಲ್ ಸಂಜೆ ೪-೩೦ಕ್ಕೆ ಪ್ರಧಾನಿಯವರು ಸಮಯ ಕೊಟ್ಟಿದ್ದಾರೆಂದು ಹೇಳಿದರು. ನಾನು ಇಚ್ಛೆಪಟ್ಟಂತೆಯೇ ಆಯಿತು. ಚೋಪ್ರಾಗೆ ಕೂಡ ತೃಪ್ತಿಯಾಗಿದೆ. ಒಂದೆರಡು ದಿವಸ ಮುಂಚೆಯಾದರೂ ದೆಹಲಿಗೆ ಹೋಗಲು ವ್ಯವಸ್ಥೆ ಮಾಡಿಕೊಳ್ಳಬೇಕು.

**ಏಪ್ರಿಲ್ ೧೦, ೧೯೯೦**

ಕಾಶ್ಮೀರ ವಿಶ್ವವಿದ್ಯಾಲಯದ ವಿ.ಸಿ. ಅವರ ಕಾರ್ಯದರ್ಶಿ ಮತ್ತು ಕಾಶ್ಮೀರದಲ್ಲಿ ಹೆಚ್.ಎಂ.ಟಿ. ಶಾಖಾ ಮ್ಯಾನೇಜರ್ ಖೇರಾರನ್ನು ಉಗ್ರವಾದಿಗಳು ಅಥವಾ ಪ್ರತ್ಯೇಕವಾದಿಗಳು ಅಪಹರಿಸಿಕೊಂಡು ಹೋಗಿದ್ದ ಈ ಮೂವರಲ್ಲಿ ಕೊನೆಯವರಾದ ಖೇರಾರವರನ್ನು ಈ ದಿನ ಸಾಯಂಕಾಲ ರೇಡಿಯೋದಲ್ಲಿ ಪ್ರಕಟಿಸಿದಂತೆ ಕೊಲ್ಲಲಾಗಿದೆ. ಇನ್ನಿಬ್ಬರ ಗತಿ ಏನೆಂದು ಯಾರಿಗೂ ಗೊತ್ತಿಲ್ಲ. ಪಾಕಿಸ್ತಾನವು ತೊಂದರೆ ಕೊಡಲು ದೃಢ ನಿಶ್ಚಯ ಮಾಡಿದೆ. ಪ್ರಧಾನಿ ಶ್ರೀಮತಿ ಭುಟ್ಟೊ ಅವರ ರೇಡಿಯೋ ಹೇಳಿಕೆಗಳ ಪ್ರಕಾರ ಭಾರತದ ವಿಷಯಗಳಲ್ಲಿ ಉದ್ದೇಶಪೂರ್ವಕವಾಗಿ ಹಸ್ತಕ್ಷೇಪ ಮಾಡುತ್ತಿದೆ ಎಂಬುದನ್ನು ಕಾಣಬಹುದು. ಅವರು ಯುದ್ಧವೆಂದು ಅರ್ಥೈಸುವರೆ ? ಇದು ನಮಗೆ ಚಿಂತೆಯುಂಟುಮಾಡುತ್ತದೆ. ಪ್ರಧಾನಿ ವಿ.ಪಿ. ಸಿಂಗರು ಅಗತ್ಯವಾದ ಹೇಳಿಕೆಗಳನ್ನು ನೀಡುತ್ತಿದ್ದಾರೆ. ಅದು ಸಾಕೆ ? ನಾವು ಬೇಗ ನಿರ್ಧರಿಸಬೇಕು. ಬೆಳವಣಿಗೆಗಳ ಮೇಲೆ ಅವಲಂಬಿಸಿರುತ್ತದೆ.

**ಏಪ್ರಿಲ್ ೧೪, ೧೯೯೦**

ಇವತ್ತು ಡಾ. ಅಂಬೇಡ್ಕರರ ೯೯ನೇ ಜನ್ಮದಿನ. ಅವರಿಗೆ ಮರಣೋತ್ತರ 'ಭಾರತ ರತ್ನ' ಪ್ರಶಸ್ತಿಯನ್ನು ನೀಡಲಾಗಿದೆ. ಅವರ ಹೆಂಡತಿ ದೆಹಲಿಯಲ್ಲಿ ಅದನ್ನು ಪಡೆದುಕೊಂಡರು. ಭಾರತ ಸರಕಾರವು ಒಂದು ರಜಾವನ್ನು ಘೋಷಿಸಿದೆ. ಎಲ್ಲ ಕಡೆಯಲ್ಲಿಯೂ ಸಭೆಗಳಿಗೆ ವಿಶೇಷ ವ್ಯವಸ್ಥೆಗಳನ್ನು ಮಾಡಲಾಗಿದೆ. ರೋಟರಿ ಕ್ಲಬ್‌ನಲ್ಲಿ

ಸಭೆಯನ್ನು ಉದ್ಘಾಟಿಸಿದೆ. ಭಾಷಣಗಳಾದವು. ಕೆಲವು ಪ್ರತಿಭಟನಾ ಹಾಡುಗಳನ್ನು ಸುಮಾರು ಅರ್ಧ ಡಜನ್ ಹರಿಜನ ಯುವಕರು ಹಾಡಿದರು. ಒರಟಾಗಿ ಹಾಡಿದರು. ಆದರೂ ಅವುಗಳನ್ನು ಇಷ್ಟಪಟ್ಟೆ. ಏಕೆಂದರೆ ಸಾವಿರಾರು ವರ್ಷಗಳ ತುಳಿತದ ವಿರುದ್ಧ ಅವು ಪ್ರತಿಭಟಿಸುತ್ತಿದ್ದವು.

**ಏಪ್ರಿಲ್ ೨೫, ೧೯೯೦**

೧೫ ನಿಮಿಷ ಮುಂಚೆ ಪಾರ್ಲಿಮೆಂಟಿನ ಅನೆಕ್ಸ್‌ಗೆ ಹೋಗಿ ಸಾಯಂಕಾಲ ೭ ಗಂಟೆವರೆಗೆ ವಾರ್ತಾ ಕೂಟ ಹಾಲಿನಲ್ಲಿ ಇದ್ದೆ. ಸಿಂಗ್ ೪-೩೦ಕ್ಕೆ ಬಂದರು. ನೆನ್ನೆ ಕೊಂಡಿದ್ದ ಗಂಧದ ಹಾರವನ್ನು ಅವರಿಗೆ ಹಾಕಿ ಅವರನ್ನು ವೇದಿಕೆಗೆ ಕರೆದೊಯ್ದೆ. ಸಮಾರಂಭ ಯಾವುದೆಂದರೆ ಸರ್ದಾರ್ ಪಟೇಲರ ಸಂಗ್ರಹಿತ ಪುಸ್ತಕಗಳ ಮೊದಲನೆ ಸಂಪುಟದ ಬಿಡುಗಡೆ. ಚೋಪ್ರಾರಿಂದ ಪರಿಚಯ, ಸರ್ದಾರ್ ಪಟೇಲ್ ಸೊಸೈಟಿಯ ಅಧ್ಯಕ್ಷನಾಗಿ ನನ್ನಿಂದ ಸ್ವಾಗತ ಭಾಷಣ. ದೇಶದ ಏಕತೆ ಮತ್ತು ಸಮಗ್ರತೆಗೆ ಜವಾಬ್ದಾರರಾಗಿದ್ದ ಸರ್ದಾರರ ಸಾಧನೆಗಳ ಬಗ್ಗೆ ೧೫ ನಿಮಿಷ ಮಾತಾಡಿದೆ. ಇತರ ಮೂವರು ಚಿಕ್ಕ ಭಾಷಣಗಳನ್ನು ಮಾಡಿದರು. ನಂತರ ಪ್ರಧಾನಿಯು ಬರೆದುಕೊಂಡು ಬಂದಿದ್ದ ಭಾಷಣವನ್ನು ಓದಿ ಅಂತಿಮವಾಗಿ ನನ್ನ ಒತ್ತಾಯದಂತೆ ಸಂಘಕ್ಕೆ ಸಹಾಯ ಮಾಡುವುದಾಗಿ ವಾಗ್ದಾನ ಮಾಡಿದರು. ಹಿತೇಂದ್ರ ದೇಸಾಯಿ ವಂದಿಸಿದರು. ಟೀ ತೊಗೊಂಡು ೬ ಗಂಟೆಗೆ ಹಿಂತಿರುಗಿದೆ. ರೂಮು ತುಂಬಿತ್ತು. ಬೊಮ್ಮಾಯಿ ಮತ್ತು ರಾಜಶೇಖರರು ನನ್ನನ್ನು ರಾತ್ರಿ ೮-೩೦ಕ್ಕೆ ಕಂಡರು.

**ಏಪ್ರಿಲ್ ೨೬, ೧೯೯೦** **ದೆಹಲಿ**

ಬೆಳಗಿನ ಉಪಾಹಾರಕ್ಕೆ ಮೊದಲು ಬಂದವರು, ಇಂದಿರಾಜಿ ಜೊತೆಯಲ್ಲಿ ಮಂತ್ರಿಯಾಗಿದ್ದ ರಾಜಾ ದಿನೇಶ್‌ಸಿಂಗ್. ಈಗಿನ ಅಶಾಂತ ಪರಿಸ್ಥಿತಿಯನ್ನು ವಿವರಿಸಿದರು. ಪೂರ್ಣವಾಗಿ ಈ ಸರ್ಕಾರವು ನಡೆಯಲು ಬಿಜೆಪಿ ಬಿಡುವುದಿಲ್ಲವೆಂದು ಕಾಣುತ್ತದೆ ಎಂದರು. ಅಂತಹ ಪರಿಸ್ಥಿತಿಯನ್ನು ಸೃಷ್ಟಿಸಬಹುದು. ಮೇ ಮತ್ತು ಜೂನ್ ತಿಂಗಳುಗಳು ಸಂದಿಗ್ಧವಾಗಿರಬಹುದು. ರಾಷ್ಟ್ರೀಯ ಸರ್ಕಾರದ ಅಗತ್ಯ ಮತ್ತು ಅದಕ್ಕಾಗಿ ಕೆಲವು ಪ್ರಮುಖ ವ್ಯಕ್ತಿಗಳು ಮೊದಲ ಹೆಜ್ಜೆ ಇಟ್ಟು ಎಲ್ಲ ಪಕ್ಷಗಳ ನಾಯಕರುಗಳನ್ನು ಒಟ್ಟಾಗಿ ಸೇರಿಸಬೇಕು ಎಂದು ಅಭಿಪ್ರಾಯಪಟ್ಟರು. ಸಿ. ಸುಬ್ರಹ್ಮಣ್ಯಂರವರು ರಾಜ್ಯಪಾಲ ರಾಗುವುದಕ್ಕೆ ಒಪ್ಪಿಕೊಂಡಿರುವುದಕ್ಕೆ ವಿಷಾದ ವ್ಯಕ್ತಪಡಿಸಿದರು. ಈ ವಿಷಯದಲ್ಲಿ ಅವರೊಂದಿಗೆ ನನ್ನ ಸಹಮತ. ನಾನು ಸಂಗ್ರಹಿಸಿದ ಮಾಹಿತಿಯಿಂದ ರಾಜೀವ್ ನಂಬಿಕೆಗನರ್ಹರು. ಚೆನ್ನಾಗಿ ಮಾತನಾಡುತ್ತಾರೆ, ಒಪ್ಪಿಕೊಳ್ಳುತ್ತಾರೆ ಮತ್ತು ಅದರ ವಿರುದ್ಧವನ್ನೇ ಮಾಡುತ್ತಾರೆ. ಆದರೆ ಸಂಜಯ್ ಹೆಚ್ಚು ನಂಬಿಗಸ್ಥನಾಗಿದ್ದು ಉತ್ತಮ

ಪ್ರಧಾನಿಯಾಗಬಹುದಿತ್ತು. ೧೯೬೯ರಲ್ಲಿ ನನ್ನ ಮತ್ತು ಇಂದಿರಾರ ಮಾತುಕತೆಗಳು ಮುರಿದುಹೋಗಲು ಕಮ್ಯೂನಿಸ್ಟರೇ ಜವಾಬ್ದಾರರು ಎಂದು ಅವರು ತಿಳಿದಿದ್ದಾರೆ. ಅವರು ಬಿಚ್ಚು ಮನಸ್ಸಿನವರು ಮತ್ತು ಅವರ ಚಿಂತೆಯು ದೇಶಕ್ಕಾಗಿದ್ದಿತು. ಅವರ ಪ್ರಕಾರ ಉದ್ದೇಶಪೂರ್ವಕವಾಗಿ ಇಂದಿರಾಗಾಂಧಿ ಬಿಂದ್ರನ್‌ವಾಲೆಯನ್ನು ಪ್ರೋತ್ಸಾಹಿಸಿದುದರಿಂದ ಈಗಿನ ತೊಂದರೆ ಅವರಿಂದ ಪ್ರಾರಂಭವಾಯಿತು.

ನಂತರ ನನ್ನ ಹಳೆಯ ಶಿಷ್ಯ ಹರಿಯಾಣದ ಬನ್ಸಿಲಾಲ್ ಬಂದು ಅರ್ಧ ಗಂಟೆ ಇದ್ದರು. ಇಂದಿರಾಗಾಂಧಿಯ ಕಾರ್ಯದ ರೀತಿ ಲಂಚ ಮುಂತಾದವುಗಳ ಬಗ್ಗೆ ದೂರಿದರು. ಒಂದು ಹೊಸ ಪಕ್ಷವನ್ನು ರಚಿಸಿ ದೇವಿಲಾಲ್ ಮತ್ತು ಅವರ ಮಗನ ವಿರುದ್ಧ ಹೋರಾಟ ಮಾಡಬೇಕೆಂದು ಅವರಿಗನಿಸಿದೆ. ಜನರಿಗೆ ಹಣವನ್ನು ಕೊಡಲು ಆಸ್ತಿಯನ್ನು ವರ್ಗಾಯಿಸಲು ಒತ್ತಾಯಿಸುವ ಅವರ ವಿರುದ್ಧ ತುಂಬಾ ಕಹಿಯಾಗಿದ್ದರು. ವಿಸ್ತಾರವಾದ ರಾಷ್ಟ್ರೀಯ ದೃಷ್ಟಿಕೋನವನ್ನು ಹೊಂದಲು ನಾನು ಅವರಿಗೆ ಸಲಹೆ ಮಾಡಿದೆ. ಅವರು ಬಹಳ ವಿನಯಶೀಲರು ಮತ್ತು ಪೂಜ್ಯತೆಯನ್ನು ಸೂಚಿಸುವವರಾಗಿದ್ದರು.

ನಂತರ ಡಾ. ಚೋಪ್ರಾ ಬಂದರು. ದೆಹಲಿಯಲ್ಲಿ ಒಂದು ಕಟ್ಟಡ ಪಡೆಯಲು ಮತ್ತು ನಿಧಿಸಂಗ್ರಹಣೆ ಮುಂತಾದವುಗಳ ಬಗ್ಗೆ ಏನು ಮಾಡಬೇಕೆಂದು ಒಂದು ಯೋಜನೆಯನ್ನು ತಯಾರಿಸಬೇಕೆಂದು ನಿರ್ಧರಿಸಿದೆವು. ಅದನ್ನು ತಯಾರಿಸಲು ಚೋಪ್ರಾರವರಿಗೆ ಹೇಳಿದೆ. ಮಧ್ಯಾಹ್ನ ಚೋಪ್ರಾ ಫೋನ್ ಮಾಡಿ ನಗರಾಭಿವೃದ್ಧಿ ಸಚಿವರನ್ನು ಸಂಪರ್ಕಿಸಲಾಗುತ್ತದೆ ಎಂದು ಹೇಳಿದರು. ಮಂತ್ರಿಗಳು ನನ್ನನ್ನು ಸಂಪರ್ಕಿಸುತ್ತಾರೆಂದು ಅವರ ಕಾರ್ಯದರ್ಶಿ ಫೋನ್ ಮಾಡಿದರು. ಅವರು ಮಾಡಲಿಲ್ಲ. ನಾನು ನಾಳೆ ಬೆಳಿಗ್ಗೆ ಹೊರಡುವುದರಿಂದ ಅವರಿಗೆ ನಾವು ಬರೆಯಬೇಕು.

ಸಾಯಂಕಾಲ ೬-೧೫ಕ್ಕೆ ಸಾದಿಕ್ ಆಲಿ ಬಂದು, ಒಂದು ಗಂಟೆ ಇದ್ದರು. ಪ್ರಸಕ್ತ ಸ್ಥಿತಿಯನ್ನು ಚರ್ಚಿಸಿದೆವು. ಬಿಜೆಪಿಯನ್ನು ಅದರ ಚಟುವಟಿಕೆಗಳನ್ನು ಜಾಗರೂಕವಾಗಿ ನೋಡಬೇಕು ಎಂದು ಇಬ್ಬರೂ ಭಾವಿಸಿದೆವು. ಅವರು ಒಪ್ಪಿಕೊಂಡರು. ಇತರ ಪಕ್ಷಗಳನ್ನು ಒಟ್ಟಿಗೆ ತರುವುದು ಅಪೇಕ್ಷಣೆಯ. ಅವರು ದೇಶಪ್ರೇಮಿ ಮತ್ತು ಕಾಂಗ್ರೆಸ್‌ಗೆ ತುಂಬಾ ತ್ಯಾಗ ಮಾಡಿದ್ದಾರೆ. ಕಾರ್ಯದರ್ಶಿಯಾಗಿ ಅವರು ನಿಷ್ಠರು ಮತ್ತು ಒಳ್ಳೆಯವರೆಂದು ನಾನು ಕಂಡುಕೊಂಡೆ. ಸ್ವಲ್ಪ ಕಾಲಾನಂತರ ಹೊಸಮಂತ್ರಿ ಚಿಮನ್‌ಭಾಯಿ ಮೆಹ್ತಾ ಫೋನು ಮಾಡಿ ಸರ್ದಾರ್ ಪಟೇಲ್ ಸೊಸೈಟಿಗೆ ಸಾಧ್ಯವಾದುದನ್ನೆಲ್ಲ ಮಾಡುವೆನೆಂದು ಮಾತು ಕೊಟ್ಟರು. ಅವರು ನಮ್ಮ ಕಾರ್ಯಕ್ರಮಗಳನ್ನು ತುಂಬಾ ಶ್ಲಾಘಿಸಿದರು.

**ಏಪ್ರಿಲ್ ೨೮, ೧೯೯೦**

೯ ಗಂಟೆಗೆ ಒಬ್ಬ ಪ್ರಸಿದ್ಧ ಕೈಗಾರಿಕೋದ್ಯಮಿ ಮತ್ತು ವ್ಯಾಪಾರಿ ಜಿ.ಡಿ. ಬಿರ್ಲಾರವರ ಬಲಗೈ ಮನುಷ್ಯ ಶ್ರೀ ಡಿ.ಪಿ. ಮಂಡೇಲಿಯಾ ಒಂದು ಬುಟ್ಟಿ ಹಣ್ಣುಗಳೊಂದಿಗೆ ಬಂದು ಅನೇಕ ವರ್ಷಗಳ ನಂತರ ನನ್ನನ್ನು ನೋಡಲು ಅವಕಾಶ ಸಿಕ್ಕಿದ್ದಕ್ಕೆ ಸಂತೋಷವನ್ನು ವ್ಯಕ್ತಪಡಿಸಿದರು. ಅವರು ಬಹಳ ಮರ್ಯಾದೆ ವ್ಯವಹಾರವುಳ್ಳವರು. ಅವರನ್ನು ನೋಡಿದ್ದು ನನಗೂ ಅಷ್ಟೇ ಸಂತೋಷವಾಯಿತು. ಅವರು ನಾನೊಬ್ಬ ಸಂತ ಎಂದು ತಿಳಿದಿದ್ದಾರೆ. ಹಾಸ್ಯಾಸ್ಪದ !

**ಜೂನ್ ೭, ೧೯೯೦**

ಎರಡು ದಿನಗಳ ಹಿಂದೆ ಕೌಲಲಂಪೂರಿನಿಂದ ವಾಪಸ್ಸು ಬರುವಾಗ ಭಾರತಕ್ಕೆ ರಾಷ್ಟ್ರೀಯ ಸರ್ಕಾರದ ವಿರುದ್ಧ ತಾವಿಲ್ಲವೆಂದು ಪ್ರಧಾನಿ ವಿ.ಪಿ. ಸಿಂಗರು ನೀಡಿದ ಹೇಳಿಕೆಯು ಎಲ್ಲ ಪಕ್ಷಗಳಿಂದ ಅನಗತ್ಯ ಟೀಕೆಗೊಳಗಾಗಿದೆ. ವೈಯಕ್ತಿಕವಾಗಿ ಎಲ್ಲರ ಭಾವನೆಗಳನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಅವರು ಅತಿ ಜಾಣರು ಎಂದು ಕಾಣುತ್ತದೆ. ಈ ಹಂತದಲ್ಲಿ ಅದು ಅನವಶ್ಯಕವಲ್ಲದೆ ಕಾರ್ಯಸಾಧ್ಯವೂ ಅಲ್ಲ ಎಂದು ನನಗನಿಸುತ್ತದೆ. ಸಂವಿಧಾನದ ಪ್ರಕಾರ ಕೂಡ ರಾಷ್ಟ್ರೀಯ ಸರ್ಕಾರಕ್ಕೆ ಸರಿಯಾದ ಕಾರಣಗಳಿಲ್ಲ. ಈಗಿರುವ ಸರ್ಕಾರವು ಇನ್ನೂ ಸ್ವಲ್ಪ ಕಾಲ ಇರುತ್ತದೆಂದು ನನ್ನ ಭಾವನೆ.

**ಜೂನ್ ೧೮, ೧೯೯೦**

ವ್ಯವಸ್ಥೆಗೊಳಿಸಿದಂತೆ ಪತ್ರಿಕಾಗೋಷ್ಠಿ ಮಾಡಿದೆ. ಬಹಳ ಮುಖ್ಯರಾದ ಪತ್ರಿಕಾ ಪ್ರತಿನಿಧಿಗಳು ಮಾತ್ರ ಭಾಗವಹಿಸಿದರು. ಜಾತೀಯತೆ ಮತ್ತು ಪಂಗಡಗಳ ಭಿನ್ನಾಭಿಪ್ರಾಯಗಳನ್ನು ವಿವರಿಸಿದೆ. ಜಾತಿಗಳು ಮತ್ತು ಬುಡಕಟ್ಟು ಜನಾಂಗಗಳು ಹಿಂದುಳಿದಿರುವಿಕೆಯನ್ನು ಜಾತಿ ಮುಂತಾದವುಗಳ ಆಧಾರದ ಮೇಲೆ ನಿರ್ಧರಿಸದೆ ಆರ್ಥಿಕ ಮಟ್ಟಗಳ ಮೇಲೆ ನಿರ್ಧರಿಸಬೇಕೆಂದು ಹತ್ತು ವರ್ಷ ಮತ್ತು ಅದಕ್ಕೂ ಹೆಚ್ಚು ಕಾಲದಿಂದ ಹೇಳುತ್ತಾ ಬಂದಿರುವುದನ್ನು ಬಲವಾಗಿ ಒತ್ತಾಯಿಸಿದೆ. ನಂತರ ಭ್ರಷ್ಟಾಚಾರ, ಆಸ್ತಿಗಳು, ಉತ್ತರದಾಯಿತ್ವ ಮುಂತಾದವುಗಳ ಬಗ್ಗೆ ಹೇಳಿ, ಶಿಕ್ಷೆಗಳ ರೂಪವನ್ನು ವಿವರಿಸಬೇಕೆಂದೆ.

**ಜುಲೈ ೧೨, ೧೯೯೦**

೧೦-೩೦ಕ್ಕೆ ಸಾದಿಕ್‌ಆಲಿಯವರ ಮನೆಗೆ ಹೋಗಿ ಜ್ವರ ಮತ್ತು ಕೆಮ್ಮಿನಿಂದ ನರಳುತ್ತಿದ್ದ ಅವರು ಮತ್ತು ಅವರ ಹೆಂಡತಿಯನ್ನು ಭೇಟಿ ಮಾಡಿದೆ. ವಿಶೇಷವಾಗಿ ಸರ್ದಾರ್ ಪಟೇಲರ ಸೊಸೈಟಿ, ಟ್ರಸ್ಟ್ ಮತ್ತು ಇತರ ಅನೇಕ ವಿಷಯಗಳ ಬಗ್ಗೆ ಮಾತನಾಡಿದೆವು. ಭಸಾನಿ ರಾಮಕೃಷ್ಣ ಬಂದು ಎಂಎಲ್‌ಸಿ ನಾಮಕರಣಕ್ಕೆ ಮುಖ್ಯಮಂತ್ರಿ ವೀರೇಂದ್ರ

ಪಾಟೀಲರಿಗೆ ಒಂದು ಪತ್ರ ತೆಗೆದುಕೊಂಡುಹೋದರು. ಅವರು ಮತ್ತು ಅವರ ಹೆಂಡತಿ ಹಳೆಯ ಸ್ವಾತಂತ್ರ್ಯ ಹೋರಾಟಗಾರರು. ಶಿವಮೊಗ್ಗ ಜಿಲ್ಲೆಯಲ್ಲಿ ಹೆಸರು ಮಾಡಿರುವ ಸಮಾಜ ಕಾರ್ಯಕರ್ತರು. ಮಧ್ಯಾಹ್ನದ ಊಟವಾದ ಮೇಲೆ ೧ ೧/೨ ಗಂಟೆ ಒಳ್ಳೆಯ ನಿದ್ದೆ ಬಂತು. ಅಖಿಲ ಭಾರತ ಪಾನನಿರೋಧ ಸಮಿತಿಯ ಕಾರ್ಯದರ್ಶಿ ರೂಪ್ ನಾರಾಯಣ್ ನನ್ನನ್ನು ಸಾಯಂಕಾಲ ೬-೩೦ಕ್ಕೆ ಭೇಟಿ ಮಾಡಿದರು. ಪಾನನಿರೋಧ, ಸರ್ದಾರ್ ಪಟೇಲ್ ಸೊಸೈಟಿ, ಸರಕಾರದ ಹಣಕಾಸಿನ ಸಹಾಯ ಮುಂತಾದವುಗಳ ಬಗ್ಗೆ ಅರ್ಧ ಗಂಟೆ ಮಾತನಾಡಿದೆವು. ಅವರಿಗೆ ನನ್ನ ಸಹಕಾರ ಮತ್ತು ಸಹಾಯ ಬೇಕೆಂದರು. ಅವರಿಗೆ ಭರವಸೆಯಿತ್ತೆ. ಅವರು ನನಗೆ ಬರೆಯುತ್ತಾರೆ.

೭-೩೦ಕ್ಕೆ ಡಾ. ಚೊಪ್ರಾ ಬಂದು ೯ರವರೆಗೆ ಸರ್ದಾರ್ ಸೊಸೈಟಿ, ನಿಧಿ ಸಂಗ್ರಹಣೆ, ಕೇಂದ್ರ ಸರಕಾರದಿಂದ ಒಂದು ಕಟ್ಟಡ ಪಡೆಯುವುದು, ಮುಂದಿನ ಪ್ರಕಟಣೆಗಳು, ಸಂಬಂಧಪಟ್ಟ ಜನರನ್ನು ಸೇರಿಸುವುದು ಮುಂತಾದವುಗಳಿಗೆ ಏನು ಮಾಡಬೇಕೆಂಬುದರ ಬಗ್ಗೆ ದೀರ್ಘವಾದ ಮಾತುಕತೆಯಾಡಿದೆವು. ಮಂತ್ರಿಗಳಾದ ಚಿಮನ್‌ಭಾಯಿ ಮೆಹ್ತಾ, ಮುರಸೋಳಿ ಮಾರನ್ ಮತ್ತು ದಂಡವತೆಯನ್ನು ಸಂಪರ್ಕಿಸಲು ಪ್ರಯತ್ನಿಸಿದೆವು. ಅವರು ದೊರೆಯುತ್ತಿಲ್ಲ. ನಾವು ರಾತ್ರಿ ಊಟ, ಹಣ್ಣುಗಳು ಮತ್ತು ಹಾಲನ್ನು ತೆಗೆದುಕೊಂಡೆವು. ಅವರು ೯ ಗಂಟೆಗೆ ಬಿಟ್ಟು ಮನೆಗೆ ಹೋದರು.

## ಜುಲೈ ೧೩, ೧೯೯೦

ನಿರೀಕ್ಷಿಸಿದಂತೆ ೯ ಗಂಟೆಗೆ ಚೋಪ್ರಾ ಬಂದು ಮುಖ್ಯಮಂತ್ರಿಗಳು ಮತ್ತು ಇತರರಿಗೆ ಕಳುಹಿಸಬೇಕಾದ ಅನೇಕ ಪತ್ರಗಳ ಬಗ್ಗೆ ಹೇಳಿ ನನ್ನ ಸಹಿಯನ್ನು ಪಡೆದರು. ಸಾಮಾನ್ಯವಾಗಿ ಅವುಗಳನ್ನು ಓದಿಸಿ ರುಜು ಹಾಕುತ್ತೇನೆ. ಚುಕ್ಕಿ ಇರುವ ಸಾಲಿನ ಮೇಲೆ ರುಜು ಹಾಕಿದೆ. ಏಕೆಂದರೆ ಅವರಲ್ಲಿ ನನಗೆ ಅಪಾರವಾದ ನಂಬಿಕೆ ಇದೆ. ಐತಿಹಾಸಿಕ ಮತ್ತು ಬೇರೆ ಅಂದರೆ ಶಿವಾಜಿ, ಟಿಪ್ಪು, ಮಹಾಭಾರತ ಸೀರಿಯಲ್, ರಾಮ, ಕೃಷ್ಣ ಮುಂತಾದ ಅನೇಕ ವಿಷಯಗಳ ಬಗೆ ಮಾತಾಡಿದೆವು. ಅವರು ೧೧ ಗಂಟೆಗೆ ಹೊರಟರು. ಚೋಪ್ರಾ ಬರುವುದಕ್ಕೆ ಮುಂಚೆ ಬಿಜೆಪಿಯ ಅಧ್ಯಕ್ಷ ಅಡ್ವಾಣಿ ದೂರವಾಣಿ ಮಾಡಿದರು. ಎಂ.ಪಿ. ಹರಿಯಾಣ, ಹಿಮಾಚಲಪ್ರದೇಶ ಮತ್ತು ರಾಜಾಸ್ಥಾನದಿಂದ ಹಣ ಸಹಾಯ ಮಾಡಿಸಬೇಕೆಂದು ಅವರಿಗೆ ಹೇಳಿದೆ.

## ಜುಲೈ ೧೪, ೧೯೯೦

ಇತರ ನಾಲ್ಕು ಸದಸ್ಯರು ಮಾತ್ರ ಹಾಜರಿದ್ದು ಸಭೆ ನಡೆಸಿದೆವು. ಈಗ ಪ್ರಧಾನಿಗೆ ತೊಂದರೆ ಕೊಡಕೂಡದೆಂದು ನಿರ್ಧರಿಸಿದೆವು. ಏಕೆಂದರೆ ಸರ್ದಾರ್ ಪಟೇಲ್ ಸೊಸೈಟಿ ಮನೆ ಬಗ್ಗೆ ಪ್ರಧಾನಿಯು ತುಂಬಾ ಉದ್ವೇಗದಲ್ಲಿದ್ದಾರೆ. ಉಪಪ್ರಧಾನಿ ದೇವಿಲಾಲರ

ಮಗ ಚೌತಾಲ ಪುನಃ ಹರಿಯಾಣದ ಮುಖ್ಯಮಂತ್ರಿಯಾಗಿದ್ದುದೇ ಕಾರಣವಾಗಿ ಒಬ್ಬ ಕ್ಯಾಬಿನೆಟ್ ಮಂತ್ರಿ ರಾಜಿನಾಮೆ ಕೊಟ್ಟಿದ್ದಾರೆ. ಪ್ರಧಾನಿಯನ್ನು ಭೇಟಿ ಮಾಡುವ ವಿಷಯವನ್ನು ಬಿಟ್ಟು ಬೇರೆ ವಿಷಯಗಳ ಬಗ್ಗೆ ತೀರ್ಮಾನ ಕೈಗೊಂಡೆವು. ಅದನ್ನು ಆಗಸ್ಟ್‌ನ ಮೊದಲ ವಾರದವರೆಗೆ ಮುಂದೂಡಿದೆವು. ಅಸಂತೋಷಕರ ಬೆಳವಣಿಗೆಗಳು. ವಿ.ಪಿ. ಸಿಂಗರು ರಾಜೀನಾಮೆ ನೀಡಲು ಮುಂದೆ ಬಂದಿದ್ದಾರೆ. ಇಂದು ರಾತ್ರಿ ಕ್ಯಾಬಿನೆಟ್ ಸಭೆ. ಪರಿಸ್ಥಿತಿಯನ್ನು ಕುತೂಹಲದಿಂದ ಗಮನಿಸಬೇಕು. ಸಾರ್ವಜನಿಕರು ವಿ.ಪಿ. ಸಿಂಗ್ ಮುಂದುವರಿಯಬೇಕೆಂದಿದ್ದಾರೆ. ಎಲ್ಲರೂ ನಾಳೆ ಬೆಳಿಗ್ಗೆಯ ಸಭೆಗೆ ದೆಹಲಿಗೆ ಧಾವಿಸುತ್ತಿದ್ದಾರೆ. ದೇವಿಲಾಲರಿಗೇನೂ ಪಶ್ಚಾತ್ತಾಪವಿಲ್ಲ. ಅವರ ಮಗನು ಸರಿಯಾಗಿಯೇ ಚುನಾಯಿತನಾಗಿದ್ದಾನೆ ಎಂಬುದು ಅವರ ಆಲೋಚನೆ. ಇದು ಅನಪೇಕ್ಷಣೀಯ.

**ಜುಲೈ ೧೫, ೧೯೯೦**

ದೆಹಲಿಯಲ್ಲಿ ವಿಷಯಗಳು ಸಂತೋಷಕರವಾಗಿಲ್ಲ ಮತ್ತು ಖಂಡಿತವಾಗಿ ಬಿಕ್ಕಟ್ಟು ಉಂಟಾಗಿದೆ. ಹೆಚ್ಚಾಗಿ ವಿ.ಪಿ. ಸಿಂಗ್ ಮೇಲೆ ಅವಲಂಬಿಸಿದೆ. ಇದಕ್ಕೆ ಇರುವ ಪರಿಹಾರವೆಂದರೆ ಈ ಅಪರಾಧವೆಸಗಿರುವ ಉಪಪ್ರಧಾನಿ ದೇವಿಲಾಲರನ್ನು ಮಂತ್ರಿಮಂಡಲದಿಂದ ಕಿತ್ತುಹಾಕುವುದು. ಸರಿಯಾಗಿ ಯೋಚನೆ ಮಾಡುವವರೆಲ್ಲ ಸ್ವಾಗತಿಸುತ್ತಾರೆಂಬುದು ಖಚಿತ. ಜನತಾದಳದ ನಾಯಕರು ಮತ್ತು ನ್ಯಾಷನಲ್ ಫ್ರಂಟ್ ಮತ್ತು ಇತರ ಬೆಂಬಲಿಸುವ ಪಕ್ಷಗಳ ನಾಯಕರು ದೆಹಲಿಯಲ್ಲಿ ಸಭೆ ಸೇರಿ ದೇವಿಲಾಲರ ಕೆಟ್ಟ ನಡತೆ ಮತ್ತು ಪರಿಣಾಮಗಳಿಗೆ ತೀವ್ರವಾದ ಚಟುವಟಿಕೆ ನಡೆಸುತ್ತಿದ್ದಾರೆ. ಈ ಮನುಷ್ಯ ಕೆಟ್ಟದಾಗಿ ವರ್ತಿಸಿದ್ದಾನೆಂಬುದು ಖಂಡಿತ. ಅವರನ್ನು ಉಪಪ್ರಧಾನಿಯಾಗಿ ಮುಂದುವರಿಸಿದರೆ ಆಳುತ್ತಿರುವ ಫ್ರಂಟ್‌ಗೆ ತೀವ್ರ ಪರಿಣಾಮಗಳಾಗುತ್ತವೆ. ಅವರು ಚೆನ್ನಾಗಿ ಕೆಲಸ ಮಾಡುತ್ತಿದ್ದಾರೆ.

**ಆಗಸ್ಟ್ ೧೩, ೧೯೯೦**

ಬೆಳಿಗ್ಗೆ ಸುಮಾರು ೧೧-೩೦ಕ್ಕೆ ಮಾನವ ಸಂಪನ್ಮೂಲ ಮಂತ್ರಿ ಮೆಹ್ತಾ ಬಂದು ೧೫-೨೦ ನಿಮಿಷಗಳ ಕಾಲ ಇದ್ದರು. ಸರ್ದಾರ್ ಸೊಸೈಟಿ ಕಟ್ಟಡದ ಬಗ್ಗೆ ಮತ್ತು ಕರ್ನಾಟಕ ಪ್ರದೇಶ ಹಿಂದಿ ಪ್ರಚಾರ ಸಮಿತಿ ಸುವರ್ಣ ಮಹೋತ್ಸವ ಸಮಾರಂಭಕ್ಕೆ ಹಣಕಾಸಿನ ಸಹಾಯದ ಬಗ್ಗೆ ಪ್ರಧಾನಿಯ ಹತ್ತಿರ ಮಾತಾಡುವೆನೆಂದು ಹೇಳಿದರು. ಅವರು ಆಸಕ್ತಿಯುಳ್ಳವರು ಮತ್ತು ದಕ್ಷರು ಎಂದು ನನಗನಿಸಿತು.

**ಸೆಪ್ಟೆಂಬರ್ ೧೨, ೧೯೯೦**

ಚೋಪ್ರ ೯-೩೦ಕ್ಕೆ ಫೋನ್ ಮಾಡಿ ಸೌತ್ ಬ್ಲಾಕ್‌ನಲ್ಲಿ ಮಧ್ಯಾಹ್ನ ೧-೩೦ಕ್ಕೆ ಪ್ರಧಾನಿ ಜೊತೆಯಲ್ಲಿ ಭೇಟಿ ಇದೆ ಎಂದು ಹೇಳಿದರು. ನಮಗೆ ಬೇಕಾದುದು ಸರ್ದಾರ್ ಸೊಸೈಟಿಗೆ ಒಂದು ಕಟ್ಟಡ ದೊರಕಬಹುದೆಂಬ ಆಸೆ.

**ಸೆಪ್ಟೆಂಬರ್ ೨೫, ೧೯೬೦**

ಬೆಳಿಗ್ಗೆ ೧೧ ಗಂಟೆಗೆ ರೇಡಿಯೋ ಜನರು ಭದ್ರಾವತಿ ಕೇಂದ್ರದ ಡೈರೆಕ್ಟರ್ ಜನರಲ್ ಮತ್ತು ಚಿತ್ರದುರ್ಗದ ಹೊಸ ಕೇಂದ್ರದ ಜನರು ಒಟ್ಟು ಏಳು ಜನ ಬಂದು ಸ್ವಾತಂತ್ರ್ಯ ಹೋರಾಟದ ಅನುಭವಗಳು ಮತ್ತು ಇತರ ಅನುಭವಗಳ ಬಗ್ಗೆ ನಾಲ್ಕು ಸಲದ ಬೈಠಕ್‌ನಲ್ಲಿ ಅವರ ಕೇಂದ್ರದ ಕಟ್ಟಡದಲ್ಲಿ ನಾನು ಮಾತನಾಡಬೇಕೆಂದೂ ಮುಂದಿನ ತಿಂಗಳು ನವೆಂಬರ್‌ನಲ್ಲಿ ಬೇರೆ ಬೇರೆ ತಾರೀಕುಗಳಲ್ಲಿ ನಾಲ್ಕು ರೇಡಿಯೋ ಭಾಷಣಗಳಲ್ಲಿ ಪ್ರಕಟಪಡಿಸಲು ರೆಕಾರ್ಡ್ ಮಾಡಿಕೊಳ್ಳುವೆವೆಂದರು. ನಾನು ಒಪ್ಪಿ ನಾಳೆ ಬೆಳಿಗ್ಗೆ ೧೦ ಗಂಟೆಗೆ ಸಿದ್ಧವಾಗಿರುವೆನೆಂದು ಮತ್ತು ೩-೪ ದಿನಗಳು ಸಿದ್ಧವಾಗುವೆನೆಂದೂ ಹೇಳಿದೆನು. ಪ್ರತಿ ಭಾಷಣಕ್ಕೆ ೫೦೦ ರೂ.ಗಳನ್ನು ಕೊಡುವುದಾಗಿ ಹೇಳಿದರು. ೨೦೦೦ ರೂ.ಗಳು ನನ್ನಂತಹ ಬಡ ಮನುಷ್ಯನಿಗೆ ಆಕರ್ಷಣೀಯವಾದ ಮೊತ್ತ. ನನಗೆ ಸಾವಿರ ರೂಪಾಯಿ ದೊಡ್ಡ ಮೊಬಲಗು, ಬ್ಯಾಂಕಿನಲ್ಲಿ ಸ್ವಲ್ಪ ಇದೆ. ನನ್ನ ಧನದ ಎಲ್ಲಾ ಮೂಲಗಳು ಪೆನ್ಶನ್ ಮತ್ತು ಬಡ್ಡಿ. ಎಲ್ಲದರಿಂದ ನನ್ನ ವರಮಾನವು ತಿಂಗಳಿಗೆ ಸುಮಾರು ೨೫೦೦ ರೂ.ಗಳು. ನನ್ನ ವೆಚ್ಚಗಳೂ ಅಷ್ಟೇ ಆಗುತ್ತದೆ. ಸ್ವಲ್ಪ ಉಳಿಸಬಹುದು, ಯಾಕೆ ಉಳಿಸಬೇಕು ? ಯಾರಿಗೆ.

**ಅಕ್ಟೋಬರ್ ೨, ೧೯೬೦**

ಗಾಂಧೀಜಿ ಜನ್ಮದಿನ ೨ನೇ ಅಕ್ಟೋಬರ್. ರೇಡಿಯೋ ನಿಲಯಗಳು ಅವರ ಸುದ್ದಿಯಿಂದ ತುಂಬಿಹೋಗಿವೆ. ಎಲ್ಲ ಕಡೆಯಲ್ಲೂ ಸಮಾರಂಭಗಳು ನಡೆಯುತ್ತಿವೆ. ಪ್ರಾರ್ಥನೆಗಳು ನಡೆಯುತ್ತಿವೆ. ರಾಷ್ಟ್ರಪತಿ, ಪ್ರಧಾನಿ, ಉಪರಾಷ್ಟ್ರಪತಿ ಪಕ್ಷಗಳ ನಾಯಕರು ಅವರ ಸಮಾಧಿಗೆ ಹೋಗಿ ಹೂವನ್ನು ಅರ್ಪಿಸಿ ಪ್ರಾರ್ಥನೆ ಮುಂತಾದವುಗಳಲ್ಲಿ ಶ್ರದ್ಧಾಭಕ್ತಿಯಿಂದ ಭಾಗವಹಿಸುತ್ತಾರೆ. ಅವರನ್ನು ಅನುಸರಿಸುವುದಕ್ಕೆ ಎಷ್ಟು ಜನಕ್ಕೆ ಆಸಕ್ತಿ ಇವೆ. ಇಡೀ ಪ್ರಪಂಚವು ಅವರ ಹುಟ್ಟುಹಬ್ಬವನ್ನು ಆಚರಿಸುತ್ತಿದೆ ಮತ್ತು ಅವರನ್ನು ಜ್ಞಾಪಿಸಿಕೊಳ್ಳುತ್ತಿದೆ. ಆದರೆ ವಾಸ್ತವವಾಗಿ ಅವರನ್ನು ನಾವು ಮರೆತಿದ್ದೇವೆಂದು ಕಾಣತ್ತದೆ. ಹೆಚ್ಚಿನವರಿಗೆ ಅವರ ತತ್ವಗಳು ನಿಜವಾಗಿಲ್ಲ. ಈಗಂತೂ ಅವರ ಬೋಧನೆಗಳನ್ನು ನಿರ್ಲಕ್ಷಿಸಿದ್ದೇವೆ. ಇದು ಅವರು ಸತ್ತಾಗಿನಿಂದಲೂ ಆಗಿದೆ. ಅವರು ಸಾಯುವುದಕ್ಕೆ ಒಂದು ವರ್ಷ ಮುಂಚೆಯೇ ಸ್ವತಂತ್ರ ಭಾರತದ ಕಾಂಗ್ರೆಸ್ ನಾಯಕರು ಅವರಿಗೆ ಮತ್ತು ಅವರ ಆದರ್ಶಗಳಿಗೆ ಅಗೌರವ ತೋರಿಸಲು ಪ್ರಾರಂಭಿಸಿದ್ದರು.

ಇವತ್ತು ಲಾಲ್‌ಬಹದ್ದೂರ್ ಶಾಸ್ತ್ರಿಯವರ ಜನ್ಮದಿನ. ಇನ್ನೊಬ್ಬ ಭಾರತದ ಪ್ರಸಿದ್ಧ ಪುತ್ರ. ೧೯ ತಿಂಗಳ ಅಲ್ಪಕಾಲದಲ್ಲಿ ಪ್ರಧಾನಮಂತ್ರಿಯಾಗಿ ನೆಹ್ರೂರವರು ಮಾಡಿದ್ದಕ್ಕಿಂತ ಹೆಚ್ಚಿಗೆಯೇ ಮಾಡಿದರು.

**ಅಕ್ಟೋಬರ್ ೬, ೧೯೯೦**

ವೀರೇಂದ್ರ ಪಾಟೀಲರನ್ನು ಮುಖ್ಯಮಂತ್ರಿ ಸ್ಥಾನದಿಂದ ಕೆಳಗಿಳಿಸಲಾಗಿದೆ. ಈ ಬೆಳಿಗ್ಗೆ ಪತ್ರಿಕೆಯಲ್ಲಿ ದಾವಣಗೆರೆಯಲ್ಲಿ ದೊಂಬಿಯಾಯಿತೆಂದೂ ಸುಮಾರು ೧೨ ಜನರು ಸತ್ತಿದ್ದಾರೆಂದೂ ಸುದ್ದಿಯನ್ನು ಬಂದಿದೆ. ಎಂಟು ಜನ ಪೋಲಿಸಿನವರ ಗುಂಡಿನೇಟಿನಿಂದ ಮತ್ತು ದೊಂಬಿಯ ಕಾಲದಲ್ಲಿ ಆಗುವಂತೆ ಒಬ್ಬರಿಗೊಬ್ಬರು ಹೊಡೆದಾಡಿ ನಾಲ್ವರು ಸತ್ತಿದ್ದಾರೆ. ರಾಮರಥದ ಮೆರವಣಿಗೆಯಿಂದಾಗಿ ಇದು ಆಗಿದೆ. ಬಾಬ್ರಿ ಮಸೀದಿ, ರಾಮಜನ್ಮಭೂಮಿ, ಮಂಡಲ್ ವರದಿ ಮತ್ತು ರಾಮರಥ, ಜಾತಿಯವಾದದ ನಂತರ ಘರ್ಷಣೆಗಳ ಬಗ್ಗೆ ನನ್ನ ಅಭಿಪ್ರಾಯ ನೀಡುವುದಕ್ಕೆ ಪತ್ರಿಕಾಗೋಷ್ಠಿಯನ್ನು ಮಾಡಿದೆ. ಆಕಾಶವಾಣಿಯು ಮಧ್ಯಾಹ್ನ ೨ ಗಂಟೆಗೆ ವೀರೇಂದ್ರ ಪಾಟೀಲರು ರಾಜೀನಾಮೆ ಇತ್ತರು ಮತ್ತು ಬುಧವಾರ ಹೊಸ ನಾಯಕನನ್ನು ಆರಿಸಲಾಗುತ್ತದೆ ಎಂದು ಪ್ರಕಟಿಸಿತು. ಕಾಂಗ್ರೆಸ್‌ನ ನಾಯಕ ರಾಜೀವಗಾಂಧಿ ನೆನ್ನೆಯಿಂದ ಬೆಂಗಳೂರಿನಲ್ಲಿದ್ದಾರೆ.

**ಅಕ್ಟೋಬರ್ ೨೬, ೧೯೯೦**

ಕಳೆದೆರಡು ದಿನಗಳಿಂದ ಬಿಜೆಪಿ ತೊಂದರೆ ಕೊಡುತ್ತಿದೆ. ರಾಮನ ರಥಯಾತ್ರೆಯ ಬಗ್ಗೆ ಗುಂಡು ಹಾರಿಸುವುದು, ಮತೀಯ ಗಲಭೆಗಳು ಮತ್ತು ದಸ್ತಗಿರಿಗಳಾಗುತ್ತಿವೆ. ಬಿಜೆಪಿ, ಆರ್‌ಎಸ್‌ಎಸ್ ಮತ್ತು ವಿಹೆಚ್‌ಪಿ ಬಹಳ ಹತ್ತಿರವಾಗಿದ್ದು ಭಾರತದಲ್ಲಿ ಹಿಂದೂ ಮತಾಂಧತೆ ಮೇಲುಗೈಯನ್ನು ಪಡೆಯಲು ಪ್ರಯತ್ನಿಸುತ್ತಿದೆ. ಇವೆಲ್ಲ ಸಂಪ್ರದಾಯಸ್ಥ ಬ್ರಾಹ್ಮಣರ ಹಾವಳಿ ಎಂದು ನನಗನಿಸಿದೆ.

**ಅಕ್ಟೋಬರ್ ೨೯, ೧೯೯೦**

ಹೆಚ್ಚು ಗೊಂದಲಗಳು, ದಸ್ತಗಿರಿಗಳು, ಹಿಂಸಾಚಾರ ಮುಂತಾದುವು ತುಂಬಾ ಇದೆ. ಅದರಲ್ಲಿಯೂ ಹೆಚ್ಚಾಗಿ ಮಸೀದಿ ಮತ್ತು ಉದ್ದೇಶಿತ ರಾಮಮಂದಿರವಿರುವ ಉತ್ತರ ಪ್ರದೇಶದಲ್ಲಿ ಇದೆ. ಉತ್ತರ ಪ್ರದೇಶದ ಮುಖ್ಯಮಂತ್ರಿಯಾದವರನ್ನು ಅವರ ಧೈರ್ಯದ ನಿಲುವಿಗೆ ಶ್ಲಾಘಿಸಲೇಬೇಕು. ನನ್ನ ಭಾವನೆ ಮತ್ತು ಅಭಿಪ್ರಾಯವೇನೆಂದರೆ ಬಿಜೆಪಿಯು ಶುದ್ಧವಾಗಿ ಹಿಂದೂ ರಾಜಕೀಯ ಪಕ್ಷವಾಗಿದ್ದು ಭಾರತದಲ್ಲಿ ಹಿಂದೂ ರಾಜ್ಯವಿರಬೇಕೆಂದೂ ಅದರಿಂದಾಗಿ ವಿಪಿ ಸಿಂಗ್ ಸರ್ಕಾರವು ಮಸೀದಿಯನ್ನು ಕೆಡವಿ ರಾಮದೇವಸ್ಥಾನವನ್ನು ಕಟ್ಟಲು ಮತ್ತು ತಮ್ಮ ಶ್ರೇಷ್ಠತೆಯನ್ನು ಹೆಚ್ಚಿಸಿಕೊಳ್ಳಲು ಸಹಾಯ ಮಾಡಬೇಕೆಂದು ಅದು ನಿರೀಕ್ಷಿಸಿತ್ತು. ಬಿಜೆಪಿ, ವಿಹೆಚ್‌ಪಿ ಮತ್ತು ಆರ್‌ಎಸ್‌ಎಸ್ ಇವೆಲ್ಲಾ ಒಂದೇ ಪ್ರಯತ್ನದ ವಿವಿಧ ಭಾಗಗಳಾಗಿದ್ದು ಹಿಂದೂಧರ್ಮ ಸಾಮ್ರಾಜ್ಯವನ್ನು ಹೊಂದಬೇಕೆಂದಿದ್ದವು. ಬ್ರಾಹ್ಮಣರು ಪುರೋಹಿತರಾಗಿ ಜನರ ಮೇಲೆ ಸಾವಿರಾರು ವರ್ಷದಿಂದ ಹಿಡಿತ ಹೊಂದಿದ್ದು, ಸಮಾಜದಲ್ಲಿ ಉನ್ನತ ಸ್ಥಾನ ಹೊಂದಿದ್ದು, ರಾಜರ

ಮೇಲೆ ಇದ್ದ ಯುಗಾಂತರದ ತಮ್ಮ ಹಿಡಿತ ಕಳೆದುಕೊಂಡು ಅಷ್ಟೇ ಅಲ್ಲ ಸರ್ಕಾರಿ ಹುದ್ದೆಯ ಏಕಸ್ವಾಮ್ಯವನ್ನು ಕಳೆದುಕೊಂಡರು. ಬ್ರಾಹ್ಮಣೇತರರು ಮೇಲೆ ಬರಲು ಪ್ರಾರಂಭಿಸಿದ ಮೇಲೆ ಈಗ ಅವಹೇಳನಕ್ಕೊಳಗಾಗಿರುವವರು. ಮೊದಲಿನ ಸ್ಥಾನವನ್ನು ಗಳಿಸಲು ಚಿಂತಿಸುತ್ತಿರುವ ಬ್ರಾಹ್ಮಣರ ಕೆಲಸ ಇದಾಗಿರಬಹುದೇ ! ಅದರಲ್ಲಿ ರಾಮಜನ್ಮಭೂಮಿ ವಿಷಯವು ಆ ಪ್ರಯತ್ನದ ಪ್ರಾರಂಭವಾಗಿರಬಹುದು. ಇದನ್ನು ಅವರೇ ಸ್ಪಷ್ಟಪಡಿಸಬೇಕು. ಅವರು ಸಾಮಾನ್ಯವಾಗಿ ಜಾತಿ ಗಲಭೆಯನ್ನುಂಟು ಮಾಡುತ್ತಿರುತ್ತಾರೆ. ದೇಶದ ಸಾಮಾನ್ಯ ಮನುಷ್ಯನು ಇದನ್ನು ಅರಿತುಕೊಳ್ಳವಂತಾಗಬೇಕು.

**ನವೆಂಬರ್ ೩, ೧೯೯೦**

ದೆಹಲಿಯಲ್ಲಿ ಆಗುತ್ತಿರುವ ವಿದ್ಯಮಾನಗಳು ಏನು ಅರ್ಥವನ್ನು ಬೇಕಾದರೂ ಕೊಡುತ್ತದೆ. ಲೋಕಸಭೆಗೆ ಮಧ್ಯಮಾವಧಿಯ ಚುನಾವಣೆ.

**ಮಾರ್ಚ್ ೬, ೧೯೯೧**

ಸಾಯಂಕಾಲದ ಸುದ್ದಿ ನಿರೀಕ್ಷೆಯಂತೆ. ಪಾರ್ಲಿಮೆಂಟಿನಲ್ಲಿ ನೆನ್ನೆಯಿಂದ ಏನು ನಡೆದಿದೆ. ಚಂದ್ರಶೇಖರ್ ಮತ್ತು ಅವರ ಸರ್ಕಾರವು ರಾಜೀನಾಮೆ ನೀಡಿದೆ. ರಾಷ್ಟ್ರಪತಿಗಳು ಅದನ್ನು ಒಪ್ಪಿಕೊಂಡಿದ್ದಾರೆ. 'ಕೆಟ್ಟ ಕೊಳೆಯ ತೊಲಗಾಟ' ಎಂದು ಹೇಳಲೆ. ನನಗೆ ಈಗ ಎಲ್ಲ ಪಕ್ಷಗಳಲ್ಲೂ ಹೊಲಸು ತುಂಬದೆಯೆನಿಸಿವೆ. ಈಗ ಇರುವ ಯಾವುದೇ ಪಕ್ಷದ ಸರಕಾರಕ್ಕಿಂತ ಬೇರೆ ರೀತಿಯ ಸರಕಾರ ಸ್ವಾಗತಾರ್ಹ. ರಾಷ್ಟ್ರಪತಿಗಳು ಹೊಸ ಚುನಾವಣೆಗಳನ್ನು ಆದೇಶಿಸುತ್ತಾರೆ ಎಂದು ನಾನು ಆಶಿಸುತ್ತೇನೆ. ಪ್ರಸಕ್ತ ಸ್ಥಿತಿಯಲ್ಲಿ ಬೇರೆ ಮಾರ್ಗವೇ ಇಲ್ಲ. ಕೆಲವು ವರ್ಷಗಳ ಹಿಂದೆ ಜಯಪ್ರಕಾಶನಾರಾಯಣರು ಆಶಿಸಿದ್ದಂತೆ ಪಕ್ಷರಹಿತ ಸರಕಾರವು ಸಾಧ್ಯವಾಗಬೇಕೆಂಬುದು ನನ್ನ ಆಶಯ. ಏಕೆಂದರೆ ಈಗ ಇರುವ ಎಲ್ಲಾ ರಾಜಕೀಯ ಪಕ್ಷಗಳು ಅನಪೇಕ್ಷಣೀಯವಾದವು. ವಿ.ಪಿ. ಸಿಂಗರ ಪಕ್ಷ ಒಂದೇ ನನಗೆ ಒಪ್ಪಿಗೆಯಾಗುವುದು. ನೋಡಬೇಕು ಅವರು ಸ್ವಲ್ಪ ಉತ್ತಮವೆಂದು ಕಾಣುತ್ತದೆ. ಕಡಿಮೆ ದಣಿವು, ನನ್ನ ಮಾಮೂಲು ನಡಿಗೆ ಇತ್ತು.

**ಮೇ ೧೧, ೧೯೯೧**

ಚುನಾವಣೆ ಬಿಸಿಯು ರೇಡಿಯೋ ಸುದ್ದಿ ಪ್ರಕಾರ ಹೆಚ್ಚಾಗುತ್ತಿದೆ ಎಂದು ಕಾಣಬಹುದು. ಒಳ್ಳೆಯದು. ಆದರೆ ಯಾವ ಪಕ್ಷವು ಒಳ್ಳೆಯದು. ನನ್ನ ಪ್ರಕಾರ ಅತ್ಯಂತ ಹಾಳು ಹಿಂದೂ ಮೂಲಭೂತ ತತ್ವವಿರುವ ಬಿಜೆಪಿ ಮತ್ತು ಅದಕ್ಕೆ ಬೆಂಬಲವಾಗಿರುವ ವಿಶ್ವ ಹಿಂದೂ ಪರಿಷತ್, ಆರ್‌ಎಸ್‌ಎಸ್, ಶಿವಸೇನ ಮುಂತಾದವು. ಕಳೆದ ಚುನಾವಣೆಯಲ್ಲಿ ಕೆಟ್ಟ ಫಲಿತಾಂಶ ಬಂದಂತೆ ಈಗಲೂ ಹಾಗೇ ಆಗಬೇಕೆಂದು ನನ್ನ ಇಚ್ಛೆ. ಇತರವುಗಳಲ್ಲಿ ವಿಶೇಷವಾಗಿ ಭ್ರಷ್ಟಾಚಾರದಿಂದ ಮುಕ್ತವಾಗಿರುವ ಒಂದೇ ಪಕ್ಷ ಕಮ್ಯೂನಿಸ್ಟ್ ಪಕ್ಷಗಳು.

ಇತರರಲ್ಲಿ ಯಾರೊಬ್ಬರಿಗೂ ಬೇಕಾಗಿರುವ ಬಹುಮತ ದೊರಕುವುದಿಲ್ಲ. ಈಗಲೂ ಅವರೆಲ್ಲಾ ಒಟ್ಟಾಗಿ ಸಾಮಾನ್ಯ ಅಭ್ಯರ್ಥಿಗೆ ಒಪ್ಪಿಕೊಳ್ಳಬೇಕು, ಇತರರು ಹಿಂದಕ್ಕೆ ಪಡೆಯಬೇಕು. ಇದೂ ಅಲ್ಲದೆ ಅವರೆಲ್ಲರ ನಾಯಕರು ಎಂದು ಹೇಳಿಕೊಳ್ಳುವವರು ಸಾಧ್ಯವಾದರೆ ಹಿಂತೆಗೆದುಕೊಳ್ಳಬೇಕು. ಮಂತ್ರಿಪದವಿಗೆ ನಿಂತುಕೊಳ್ಳುವುದಿಲ್ಲವೆಂದು ಮತ್ತು ಸಾಮಾನ್ಯ ಜನರಿಗೆ ಶಿಕ್ಷಣ ನೀಡುತ್ತೇವೆಂದು ಪ್ರಾಗ್ದಾನ ಮಾಡಬೇಕು.

**ಮೇ ೨೨, ೧೯೯೧**

ಮದರಾಸಿನಿಂದ ೫೦ ಕಿ.ಮೀ. ದೂರದ ಒಂದು ಹಳ್ಳಿಯಲ್ಲಿ ಬಾಂಬು ಸ್ಫೋಟದಿಂದ ಮಾಜಿ ಪ್ರಧಾನಿ ಮತ್ತು ಕಾಂಗ್ರೆ ಅಧ್ಯಕ್ಷ ರಾಜೀವ್‌ಗಾಂಧಿಯವರು ಕಳೆದ ರಾತ್ರಿ ಕೊಲ್ಲಲ್ಪಟ್ಟರು ಎಂದು ತಿಳಿಯುತ್ತಿದ್ದಂತೆಯೇ ದಿಗ್ಭ್ರಮೆಯಾಯಿತು. ಇದು ಅತ್ಯಂತ ದುರದೃಷ್ಟಕರ. ಪುಕ್ಕಲು ಮತ್ತು ಹೇಡಿಕೃತ್ಯ. ಸುಮಾರು ಒಂದು ಡಜನ್ ವ್ಯಕ್ತಿಗಳು ಕೂಡ ಸತ್ತಿದ್ದಾರೆ. ಭಾರತದಲ್ಲಿ ಮಾಫಿಯ ರಾಜ್ಯ ಆಳುತ್ತಿದೆ ಎಂದು ಪತ್ರಕರ್ತರಿಗೆ ಹೇಳಿದೆ. ಜನ ಮತ್ತು ಸರ್ಕಾರ ದುಪ್ಪಟ್ಟು ಜಾಗರೂಕವಾಗಿರಬೇಕು. ಶಾಂತಿಯು ಅಗತ್ಯ, ಅನಿವಾರ್ಯ. ಕಾನೂನು ಮತ್ತು ಶಿಸ್ತನ್ನು ಕಾಪಾಡಬೇಕು. ಸೂಕ್ಷ್ಮ ಪರಿಸ್ಥಿತಿ. ಆರೋಪಿತರನ್ನು ತಕ್ಷಣವೇ ಹಿಡಿದು, ತೀವ್ರವಾಗಿ ಶಿಕ್ಷಿಸಬೇಕು. ೫-೬ ಪತ್ರಿಕಾ ಜನರು ಬಂದಿದ್ದರು. ರಾಜೀವರ ಹೆಂಡತಿ ಮತ್ತು ಮಕ್ಕಳಿಗೆ ನನ್ನ ಹೃದಯ ಮಿಡಿಯುತ್ತಿದೆ ಹಾಗೂ ನನ್ನ ಸಂತಾಪವನ್ನು ಸೂಚಿಸಲು ಪದಗಳೇ ದೊರಕುತ್ತಿಲ್ಲ ಎಂದು ಹೇಳಿದೆ. ಹಿಂಸೆಯು ಮುಂದುವರಿಯುತ್ತದೆ ಎಂದು ನನ್ನ ಭಾವನೆ ಮತ್ತು ನಿರೀಕ್ಷೆ.

**ಆಗಸ್ಟ್ ೧೯, ೧೯೯೧**

ವಿಶ್ವಕ್ಕೇ ಇದೊಂದು ದುಃಖದ ದಿನ, ಏಕೆಂದರೆ ರಷ್ಯಾದ ನಾಯಕ ಗೊರ್ಬಚೇವ್ ಇನ್ನು ರಷ್ಯಾದ ನಾಯಕರಲ್ಲ ಮತ್ತು ಕನ್ಸರ್ವೇಟೀವ್ ಎಂದು ನಂಬಲಾಗಿರುವ ಮನುಷ್ಯನ ಪರವಾಗಿ ಹೊರಬಂದಿದ್ದಾರೆ. ಕೆಲವು ತಿಂಗಳ ಹಿಂದೆ ಖಾಸಗಿ ಉದ್ಯಮ ಮತ್ತು ಪ್ರಜಾಪ್ರಭುತ್ವದಲ್ಲಿ ನಂಬಿಕೆಯಿದ್ದ ಇನ್ನೊಬ್ಬ ನಾಯಕನು ಪಕ್ಷದ ಕಾರ್ಯದರ್ಶಿಯಾಗಿ ಚುನಾಯಿತನಾಗಿ ಗೊರ್ಬಚೇವ್ ಅಧ್ಯಕ್ಷರಾಗಿ ಮುಂದುವರಿದರು. ಪ್ರಪಂಚದಾದ್ಯಂತ ಮತ್ತು ರಷ್ಯಾದಲ್ಲೆ ಪ್ರತಿಕ್ರಿಯೆಗಳನ್ನು ನಾವು ಗಮನಿಸಬೇಕು. ತೆರೆದ ಸಮಾಜದ ಅನುಕೂಲಗಳನ್ನು ಅನುಭವಿಸಿದ ಮೇಲೆ ಜನತೆ ಶುದ್ಧ ಕಮ್ಯೂನಿಸಂಗೆ ಹಿಂದಿರುಗಿ ಹೋಗುವುದಿಲ್ಲ. ನಿಕಟವಾಗಿ ಗಮನಿಸಬೇಕಾದ ಇನ್ನೊಂದು ಪರಿಸ್ಥಿತಿ ಇದು.

**ಆಗಸ್ಟ್ ೨೭, ೧೯೯೧**

ಗೊರ್ಬಚೇವ್ ವಿರುದ್ಧದ ಕ್ಷಿಪ್ರಕ್ರಾಂತಿಯು ಮುರಿದುಹೋಯಿತು. ೯ ನಾಯಕರಲ್ಲಿ ೮ ಜನರು ದಸ್ತಗಿರಿಯಾಗಿದ್ದು ಅವುಗಳಲ್ಲಿ ಒಬ್ಬನು ಆತ್ಮಹತ್ಯೆ ಮಾಡಿಕೊಂಡನು ಎಂಬುದನ್ನು

ನನ್ನ ಡೈರಿಯಲ್ಲಿ ಅತ್ಯಂತ ಸಂತೋಷದಿಂದ ದಾಖಲು ಮಾಡುತ್ತಿದ್ದೇನೆ. ಇಡೀ ಪ್ರಪಂಚವು ಸಂತೋಷಪಡುತ್ತಿದೆ. ಇದರಲ್ಲಿ ಚೈನಾ ಸರಕಾರ ಮತ್ತು ಪಕ್ಷವು ಹೊರತಾಗಿರಬಹುದು. ಗೊರ್ಬಚೇವ್ ಅಧಿಕಾರವನ್ನು ಹಿಂದಕ್ಕೆ ಪಡೆದಿದ್ದಾರೆ.

**ಸೆಪ್ಟೆಂಬರ್ ೨೪, ೧೯೯೧**

ನಾನು ಕರ್ಣಾಟಕ ಹಿಂದಿ ಪ್ರಚಾರ ಸಮಿತಿ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆಯಿತ್ತಿದ್ದೇನೆ ಹಾಗೆಯೇ ಇತರ ಸದಸ್ಯತ್ವ ಮತ್ತು ಟ್ರಸ್ಟುಗಳ ಬಗ್ಗೆ ಮಾಡಬೇಕೆಂದಿದ್ದೇನೆ. ಆದರೆ ಸರ್ದಾರ್ ಪಟೇಲ್ ಸೊಸೈಟಿಯನ್ನು ಕಳೆದ ೩ ವರ್ಷಗಳಿಂದ ಇಲ್ಲಿಯವರೆಗೆ ಕಟ್ಟಲು ತುಂಬಾ ಸಂಕಟ ಮತ್ತು ಕಷ್ಟ ತೆಗೆದುಕೊಂಡಿರುವುದರಿಂದ ನಾನು ತಕ್ಷಣ ಹಾಗೆ ಮಾಡಲಾಗುವುದಿಲ್ಲ. ಇಲ್ಲಿಯವರೆಗೆ ನಾನೊಬ್ಬನೇ ಸಕ್ರಿಯವಾಗಿದ್ದು ಡಾ. ಚೋಪ್ರಾರವರು ಸರ್ದಾರ್ ಪಟೇಲರ ಇತಿಹಾಸದ ಸಂಶೋಧನೆ ಮತ್ತು ಬರವಣಿಗೆಯನ್ನು ಮಾಡುತ್ತಿದ್ದಾರೆ. ನಾನು ಗಂಭೀರವಾಗಿ ಯೋಚಿಸಬೇಕು. ಸಂಪುಟಗಳನ್ನು ಪ್ರಕಟಿಸುವ ಕೆಲಸ ಮತ್ತು ಸೊಸೈಟಿಯ ಉದ್ದೇಶಗಳಿಗೆ ಸೂಕ್ತ ಕಟ್ಟಡವನ್ನು ಕಂಡುಹಿಡಿಯುವ ಕೆಲಸವನ್ನು ನಾನು ಮುಗಿಸಬೇಕೆಂದಿದ್ದೇನೆ. ಸರ್ದಾರರ ಜ್ಞಾಪಕಕ್ಕೆ ಕೇಂದ್ರ ಸರ್ಕಾರವೂ ತನ್ನ ಕರ್ತವ್ಯವನ್ನು ಅರಿತುಕೊಳ್ಳುತ್ತದೆ ಎಂದು ನಾನು ಆಶಿಸುತ್ತೇನೆ. ಈ ಮೂರು ವರ್ಷಗಳಲ್ಲಿಯೂ ಅವರು ಅಲಕ್ಷ್ಯದಿಂದಿದ್ದರು. ನಾನು ಇದರಿಂದ ಖಿನ್ನ.

**ಅಕ್ಟೋಬರ್ ೫, ೧೯೯೧**

ಇಂಡಿಯನ್ ಎಕ್ಸ್‌ಪ್ರೆಸ್‌ನ ಮಾಲೀಕ ರಾಮನಾಥ್ ಗೋಯೆಂಕಾ ಬೊಂಬಾಯಿಯ ತಮ್ಮ ಕಟ್ಟಡದಲ್ಲಿ ನಿಧನರಾದರು. ಶವಸಂಸ್ಕಾರಕ್ಕೆ ಶವವನ್ನು ಮದರಾಸಿಗೆ ತರಲಾಯಿತು. ಪತ್ರಿಕೋದ್ಯಮ ಪ್ರಪಂಚಕ್ಕೆ ದೊಡ್ಡ ನಷ್ಟ. ಪ್ರಸಿದ್ಧ ಮತ್ತು ಧೀರ ಹೋರಾಟಗಾರ. ಇವರು ತತ್ವ, ಗುಣಮಟ್ಟ ಮತ್ತು ನಿರ್ಧಾರಗಳಿಗೆ ಬದ್ಧರಾಗಿದ್ದರು. ನನ್ನ ನಿಕಟ ಸ್ನೇಹಿತ.

**ನವೆಂಬರ್ ೧೬, ೧೯೯೧**

ಸಾಯಂಕಾಲದ ಹೊತ್ತಿಗೆ ಪ್ರಧಾನಿ ಪಿ.ವಿ. ನರಸಿಂಹರಾಯರು ಭಾರಿ ಮತಗಳಲ್ಲಿ ಆಗಲೇ ಮುಂದಿದ್ದಾರೆಂದು ತಿಳಿಯಿತು. ಅವರು ಖಂಡಿತ ಗೆಲ್ಲುತ್ತಾರೆ. ಕಾಂಗ್ರೆ ಕೆಲವು ಸ್ಥಾನಗಳನ್ನು ಗೆಲ್ಲಬಹುದಾದರೂ ಅಂತರವನ್ನು ತುಂಬುತ್ತಾ ಬಹುಮತವನ್ನು ಪಡೆಯಲಾರದು. ಇವರಿಗೆ ಬಹುಮತ ಬಂದರೆ ಒಳ್ಳೆಯದು. ಏಕೆಂದರೆ ನಾನು ಕೇಳಿರುವಂತೆ ರಾವ್ ಒಬ್ಬ ತತ್ವಬದ್ಧ ಮನುಷ್ಯ ಮತ್ತು ಅವರ ಕೈಗಳನ್ನು ಬಲಪಡಿಸಬೇಕು. ಅವರು ನೆಹರೂ ಪರ ಕೂಟದಿಂದ ಹೊರಬರಲು ಸಮರ್ಥರಾಗಿದ್ದಾರೆ.

**ಜನವರಿ ೨, ೧೯೯೨**

ನಿಗದಿಪಡಿಸಿದಂತೆ ೧೨-೩೦ಕ್ಕೆ ರಾಷ್ಟ್ರಪತಿ ಭವನಕ್ಕೆ ಹೋದೆ. ರಾಷ್ಟ್ರಪತಿ ವೆಂಕಟರಾಮನ್‌ರವರಿಂದ ಮಾಮೂಲಿನಂತೆ ಪ್ರೀತಿಪೂರ್ವಕ ಸ್ವಾಗತ. ಪಕ್ಷಗಳ ನಾಯಕರನ್ನು ಭೇಟಿ ಮಾಡುವ ನನ್ನ ಇಂಗಿತವನ್ನು ಹೇಳಿದೆ. ದೇಶದ ಅಸಂತೋಷಕರ ಪರಿಸ್ಥಿತಿಯನ್ನು ಗಮನಿಸಲು ಎಲ್ಲಾ ಜಾತಿಗಳ ಅಥವಾ ಸಮುದಾಯಗಳಲ್ಲಿ ಅರ್ಥಶಾಸ್ತ್ರಜ್ಞರು ಇದ್ದಾರೆ. ಅವರು ಸಹಮತದಿಂದಿದ್ದರು. ಈಗಿನ ಜಾತೀಯ ಬೆಳವಣಿಗೆಯ ಬಗ್ಗೆ ಅಸಂತೋಷವನ್ನು ವ್ಯಕ್ತಪಡಿಸಿದರು. ಅವರು ಕೆಲವು ಜನರ ಬಗ್ಗೆ (ಬಿಜೆಪಿ) ಮಾತಾಡಿದಾಗ ತತ್ವಶಃ ಒಪ್ಪಿಕೊಂಡರೂ ಪತ್ರಿಕೆಯಲ್ಲಿ ಪ್ರಕಟವಾದ ಸುದ್ದಿಯಲ್ಲಿ ದೋಷವನ್ನು ಕಂಡರು. ಅವರಿಗೆ ಸರ್ದಾರ್ ಟ್ರಸ್ಟಿನ ಕಟ್ಟಡ ಮತ್ತು ಸರ್ದಾರ್ ಸೊಸೈಟಿಯ ಕಟ್ಟಡದ ಬಗ್ಗೆ ಹೇಳಿದೆ. ನನ್ನ ಕೋರಿಕೆಗಳ ಬಗ್ಗೆ ಪ್ರಧಾನಿ ಹತ್ತಿರ ಮಾತಾಡಿರುವೆನೆಂದು ಹೇಳಿದರು.

**ಫೆಬ್ರವರಿ ೪, ೧೯೯೨**

ನನ್ನ ಹಳೆಯ ಸ್ನೇಹಿತ ದೇಶಪಾಂಡೆ ಅವರ ಮನೆಗೆ ಹೋದೆ. ಅಲ್ಲಿ ಗ್ವಾಲಿಯರ್ ರಾಜಮಾತಾ ಜೊತೆಯಲ್ಲಿ ಮಧ್ಯಾಹ್ನದ ಊಟವಾಯಿತು. ತುಂಬಾ ಜನರನ್ನು ಆಹ್ವಾನಿಸಲಾಗಿತ್ತು. ಆಕೆ ಬುದ್ಧಿವಂತೆ ಮತ್ತು ಕುತೂಹಲಕಾರಿ ಸಂಭಾಷಣಕಾರಿ. ನಾನು ಸ್ಥಾಪಿಸಿದ್ದ ಸರ್ದಾರ್ ಪಟೇಲರ ಪ್ರಕಟಣೆಗಳ ಬಗ್ಗೆ ಆಕೆಗೆ ಹೇಳಿದೆ. ನನ್ನೊಂದಿಗೆ ಒಪ್ಪಿಕೊಂಡು ಮಧ್ಯಪ್ರದೇಶದ ಮುಖ್ಯಮಂತ್ರಿಯೊಂದಿಗೆ ಮಾತಾಡಿ ಅದಕ್ಕೆ ದೇಣಿಗೆ ಕೊಡುವಂತೆ ಮಾತಾಡುತ್ತೇನೆಂದರು. ಈ ವಿಷಯದಲ್ಲಿ ಆಕೆ ನನ್ನೊಂದಿಗೆ ಸಹಮತ ಹೊಂದಿದ್ದರು. ಇಲ್ಲಿ ಉಪರಾಷ್ಟ್ರಪತಿ ಶಂಕರದಯಾಳ್ ಶರ್ಮರ ಬಗ್ಗೆ ತುಂಬಾ ತಿರಸ್ಕಾರವಿದೆ. ಅವರು ಭಾರತದ ರಾಷ್ಟ್ರಪತಿಯಾಗಲು ಪ್ರಯತ್ನಿಸುತ್ತಿದ್ದಾರೆಂದು ತಿಳಿದುಬಂತು. ಅವರು ಅಪೇಕ್ಷಣೀಯ ಅಭ್ಯರ್ಥಿಯಲ್ಲ ಎನಿಸುತ್ತದೆ.

**ಫೆಬ್ರವರಿ ೬, ೧೯೯೨** ಬೊಂಬಾಯಿ ರಾಜಭವನ

ಬೆಳಿಗ್ಗೆ ೭ ಗಂಟೆಗೆ ಎದ್ದು ೮-೩೦ಕ್ಕೆ ಬೆಳಗಿನ ಉಪಹಾರ ಮಾಡಿದೆ. ೯-೧೫ಕ್ಕೆ ರಾಜ್ಯಪಾಲ ಸಿ. ಸುಬ್ರಹ್ಮಣ್ಯಂ ನನ್ನ ಕೊಠಡಿಗೆ ಬಂದು ೩/೪ ಗಂಟೆ ಕಾಲ ಧಾರ್ಮಿಕ ವಿಷಯಗಳಲ್ಲಿ ಹೆಚ್ಚು ವಿಶಾಲ ಮನಸ್ಸಿನ ಮಾರ್ಗದ ಬಗ್ಗೆ ಮಾತಾಡಿದೆವು. ಇದನ್ನು ಬ್ರಾಹ್ಮಣರು ಅದರಲ್ಲಿಯೂ ಹೆಚ್ಚಾಗಿ ಬ್ರಾಹ್ಮಣ ಸ್ವಾಮಿಗಳು ಮತ್ತು ಮಠಗಳಿಗೆ ಮೀಸಲಾಗಿರುವುದರ ಬದಲು ಭವಾನ್ಸ್ ಜರ್ನಲ್‌ನಲ್ಲಿ ಬರಬೇಕು ಎಂದು ಹೇಳಿದೆ. ರಾಜಕೀಯ ಸಮಸ್ಯೆಗಳು ಮತ್ತು ಇತರವುಗಳನ್ನು ಕೂಡ ಚರ್ಚಿಸಿದೆವು. ಜನರು ಅದರಲ್ಲಿಯೂ ಹಳೆಯ ಪತ್ರಕರ್ತರು ಈಗಿನ ಉಪರಾಷ್ಟ್ರಪತಿ ಶಂಕರದಯಾಳ್ ಶರ್ಮಾರ

ಬಗ್ಗೆ ನನ್ನಿಂದ ತಿಳಿಯಲು ಕುತೂಹಲದಿಂದಿದ್ದಾರೆ ಎಂದರು. ಆತನ ನಿಷ್ಠೆಯಿಲ್ಲದಿರುವಿಕೆಯ ಬಗ್ಗೆ ಮಾತನಾಡಿ ನಾನು ಈಗಾಗಲೇ ಅವರು ಹೇಗೆ ನನಗೆ ನಂಬಿಕೆದ್ರೋಹ ಮಾಡಿದರು. ನಾನು ಕಾಂಗ್ರೆಸ್ ಅಧ್ಯಕ್ಷನಾಗಿದ್ದಾಗ ಇವರು ನನ್ನ ಕಾರ್ಯದರ್ಶಿಯಾಗಿದ್ದರು. ಇದಕ್ಕೆ ರಾಜ್ಯಪಾಲರು ಏನೂ ಪ್ರತಿಕ್ರಿಯೆ ತೋರಿಸಲಿಲ್ಲ. ಅವರನ್ನು ರಾಷ್ಟ್ರಪತಿಯಾಗುವಂತೆ ಬೊಂಬಾಯಿ ಮತ್ತು ಭೂಪಾಲ್ ಆಹ್ವಾನಿಸಿದೆ ಎಂದು ಹೇಳಿದಾಗಲೂ ಅವರು ಏನೂ ಪ್ರತಿಕ್ರಿಯೆ ತೋರಿಸಲಿಲ್ಲ. ತಕ್ಷಣವೇ ಅವರು ಹೊರಟುಬಿಟ್ಟರು. ಭಾರತೀಯ ವಿದ್ಯಾಭವನದ ಮಾಜಿ ಕಾರ್ಯದರ್ಶಿ ರಾಮಕೃಷ್ಣನ್ ಬಂದು ನನ್ನ ಸೇವೆಗಳು ಮುಂತಾದುವನ್ನು ಹೊಗಳುತ್ತಾ ೧೫ ನಿಮಿಷಗಳು ಕಳೆದರು. ಅವರೇ ಸುಬ್ರಹ್ಮಣ್ಯಂರವರನ್ನು ರಾಷ್ಟ್ರಪತಿ ಸ್ಥಾನಕ್ಕೆ ಸಲಹೆ ಮಾಡಿದ್ದರು.

**ಫೆಬ್ರವರಿ ೨೬, ೧೯೯೨**

ಡಾ. ಚೋಪ್ರಾರವರಿಗೆ ಫೋನು ಮಾಡಿದೆ. ಅವರು ನಾಳೆ ಬೆಳಿಗ್ಗೆ ೧೦ ಗಂಟೆಗೆ ಬಹುಮಾನವನ್ನು ತೆಗೆದುಕೊಂಡು, ಕ್ಯಾಲಿಫೋರ್ನಿಯಾದ ಪ್ರೊ. ವೋಲ್‌ಪರ್ಟ್ ಅವರು ಸರ್ದಾರ್ ಪಟೇಲರ ಭಾಷಣಗಳ ಶ್ರೇಣಿಯನ್ನು ನೀಡಲು ಮುಂದಿನ ೪ರಿಂದ ೬ನೇ ತಾರೀಕಿನವರೆಗೆ ಇಲ್ಲಿರುತ್ತಾರೆ ಎಂದು ಹೇಳಿದರು.

**ಫೆಬ್ರವರಿ ೨೭, ೧೯೯೨**

ಸಾದಿಕ್ ಆಲಿ ೯ ಗಂಟೆಗೆ ಬಂದು ೨ನೇ ಮತ್ತು ೩ನೇ ಸಮ್ಮೇಳನದ ಬಗ್ಗೆ ಸಂಜೆ ೫ ಗಂಟೆಗೆ ಹೆಗಡೆಯವರ ಮನೆಯಲ್ಲಿ ಸಭೆಯಿದೆಯೆಂದು ಹೇಳಿದರು. ಡಾ. ಚೋಪ್ರಾ ಮತ್ತು ಅವರ ಹೆಂಡತಿಯವರು ಪ್ರೊ. ವೋಲ್‌ಪರ್ಟ್ ಗೌರವಾರ್ಥ ೫ನೇ ತಾರೀಕು ರಾತ್ರಿ ಊಟ ಮತ್ತು ಸರ್ದಾರ್ ಸೊಸೈಟಿ ಬಗ್ಗೆ ಕಾರ್ಯಕ್ರಮದ ಬಗ್ಗೆ ಮಾತಾಡಿದರು. ಅವರು ನಾಳೆ ಬೆಳಿಗ್ಗೆ ೯ ಗಂಟೆಗೆ ಬರುತ್ತಿದ್ದಾರೆ. ಅವರು ಸರ್ದಾರರ ಜೀವನ ಚರಿತ್ರೆ ವಿಷಯ ಅದರಲ್ಲೂ ಸರ್ದಾರರ ಬಗೆ ನೆಹ್ರೂ ವರ್ತನೆ ಬಗ್ಗೆ ಮಾಹಿತಿ ಸಂಗ್ರಹಿಸಿದ್ದಾರೆ. ೧೧-೩೦ಕ್ಕೆ ಎಸ್.ಎನ್. ಮಿಶ್ರ ಬಂದು ೨ನೇ ಮತ್ತು ೩ನೇ ತಾರೀಕಿನ ಸಮ್ಮೇಳನದ ವಿವರಗಳನ್ನು ಚರ್ಚಿಸಿದರು. ಊಟದ ವ್ಯವಸ್ಥೆ ಕರ್ನಾಟಕ ಭವನದಲ್ಲಿ ಮಧ್ಯಾಹ್ನದ ಊಟ ಮತ್ತು ೨ ಮತ್ತು ೩ರಂದು ಗುಜರಾತ್ ಭವನ್‌ದಲ್ಲಿ ಉಳಿದುದು ಎಂದು ತೀರ್ಮಾನವಾಯಿತು.

**ಮಾರ್ಚ್ ೪, ೧೯೯೨**

ಸಂಜೆ ೫ ಗಂಟೆಗೆ ಲೋದಿ ಎಸ್ಟೇಟಿನ ಇಂಡಿಯ ಇಂಟರ್‌ನ್ಯಾಷನಲ್ ಸೆಂಟರ್‌ಗೆ ಸರ್ದಾರ್ ಪಟೇಲರ ಮೇಲೆ ಪ್ರೊ. ವೋಲ್‌ಪರ್ಟ್ ಭಾಷಣಕ್ಕೆ ಹೋದೆ. ಸರ್ದಾರ್ ಪಟೇಲ್ ಸೊಸೈಟಿಯು ಅವರನ್ನು ಆಮಂತ್ರಿಸಿತ್ತು. ಟೀ ನಂತರ ದೊಡ್ಡ ಹಾಜರಿಯಿತ್ತು.

ಅವರಲ್ಲಿ ಹೆಚ್ಚಿನವರು ಇತಿಹಾಸಕಾರರು. ಚೋಪ್ರಾ ಕಾರ್ಯದರ್ಶಿಯವರ ಕೋರಿಕೆಯ ಮೇಲೆ ಜ್ಞಾನಿ ಜೈಲ್‌ಸಿಂಗರು ಎರಡನೆಯ ಸಂಪುಟವನ್ನು ಬಿಡುಗಡೆ ಮಾಡಿ ಭಾಷಣ ಮಾಡಿದರು. ನಾನು ಅಧ್ಯಕ್ಷನಾಗಿ ಪರಿಚಯದ ಭಾಷಣವನ್ನು ಮಾಡಿದೆ. ಮಾಜಿ ಎಂ.ಪಿ. ಪಿ. ಉಪೇಂದ್ರ ಅಧ್ಯಕ್ಷತೆ ವಹಿಸಿದ್ದರು ಮತ್ತು ಪ್ರೊ. ವೋಲ್‌ಪರ್ಟ್‌ರನ್ನು ಪರಿಚಯಿಸಿದರು. ಪ್ರೊ. ವೋಲ್‌ಪರ್ಟ್ ಸರ್ದಾರರ ಮೇಲೆ ೪೫ ನಿಮಿಷಗಳ ಕಾಲ ಉಪಯುಕ್ತ ಭಾಷಣ ಮಾಡಿದರು.

**ಏಪ್ರಿಲ್ ೪, ೧೯೯೨**

ಭಾರತೀಯ ವಿದ್ಯಾಭವನದ ಎಸ್. ರಾಮಕೃಷ್ಣ ಅವರಿಂದ ಫೋನ್ ಬಂದು ನಾನು ಪ್ರಧಾನಿ ಪಿ.ವಿ. ನರಸಿಂಹರಾವ್ ಜೊತೆಯಲ್ಲಿ ರಾಷ್ಟ್ರಪತಿ ಸ್ಥಾನದ ಬಗ್ಗೆ ಮಾತನಾಡಬೇಕೆಂದೂ, ಸಿ. ಸುಬ್ರಹ್ಮಣ್ಯಂ ಬಗ್ಗೆ ಪ್ರಧಾನಿಗೆ ನನ್ನ ಪತ್ರದ ಬಗ್ಗೆ ವಿಚಾರಿಸಬೇಕೆಂದೂ ಪಾಲ್ಕಿವಾಲ ದೆಹಲಿಗೆ ಹೋಗಲು ತುಂಬಾ ಉತ್ಸುಕರಾಗಿದ್ದಾರೆಂದು ಅವರು ಬಿಜೆಪಿ ನಾಯಕರಾದ ಅಡ್ವಾಣಿ ಮತ್ತು ಇತರರ ಜೊತೆಯಲ್ಲಿ ಮಾತಾಡುವರೆಂದೂ ಹೇಳಿದರು.

ಪ್ರಧಾನಿಗೆ ಒಂದು ಟ್ರಂಕ್ ಕಾಲನ್ನು ಬುಕ್ ಮಾಡಿದೆ. ಇಡೀ ದಿವಸ ಅವರು ಅವಸರದ ಕೆಲಸದಲ್ಲಿದ್ದಾರೆಂದು ನಾಳೆ ಬೆಳಿಗ್ಗೆ ಪ್ರಯತ್ನಪಡಬಹುದೆಂದೂ ಹೇಳಲಾಯಿತು. ರಾಮಕೃಷ್ಣ ಫೋನ್ ಮಾಡಿದ ಮೇಲೆ ನಾಳೆ ಬೆಳಿಗ್ಗೆ ಫೋನ್ ಮಾಡಲು ಹೇಳಿದೆ. ಆಯ್ಕೆ ಯಾರ ಮೇಲೆ ಬೀಳುತ್ತದೆ ಎಂಬುದರ ಬಗ್ಗೆ ನನಗೆ ಖಚಿತವಿಲ್ಲ, ಬೇಕಾದಷ್ಟು ಸೆಳೆತ ಮತ್ತು ಒತ್ತಡಗಳಿರಬಹುದು. ರಾಜ್ಯಗಳು ಹೇಗೆ ವರ್ತಿಸುತ್ತವೆ ಎಂಬುದೂ ಖಚಿತವಿಲ್ಲ. ನನ್ನ ಸ್ವಂತ ಅಭಿಪ್ರಾಯವೆಂದರೆ ಸುಬ್ರಹ್ಮಣ್ಯಂ ಅತ್ಯಂತ ಉತ್ತಮ ಆಯ್ಕೆ.

**ಏಪ್ರಿಲ್ ೨೫, ೧೯೯೨**

ಡಾ. ಚೋಪ್ರಾ ದೆಹಲಿಯಿಂದ ಫೋನ್ ಮಾಡಿ ೧೧೩, ಕಾಕಾನಗರ್ ಕಟ್ಟಡದ ಬಗೆ ಪ್ರಧಾನಿಗೆ ಬರೆಯುವ ಬಗ್ಗೆ ಏನು ಮಾಡಿದಿರಿ ಎಂದು ಕೇಳಿದರು. ನನಗೆ ಪ್ರಧಾನಿಯ ದೂರವಾಣಿ ನಂಬರನ್ನು ಕೊಟ್ಟರು. ಜಾಫರ್ ಷರೀಫ್, ಶೀಲಾ ಕೌಲ್, ನಗರಾಭಿವೃದ್ಧಿ ಮಂತ್ರಿ, ಬಿಜೆಪಿ ನಾಯಕ ಅದ್ವಾನಿಯವರು ಕಾಕಾನಗರ ಕಟ್ಟಡದ ಬಗ್ಗೆ ಅವರ ಹತ್ತಿರ ಮಾತನಾಡಬೇಕೆಂದರು. ಪ್ರಧಾನಿಗೆ ಫೋನು ಮಾಡಿದಾಗ ಎರಡನೆ ಪ್ರಯತ್ನದಲ್ಲಿ ಅವರು ಸಿಕ್ಕಿದರು. ಕಟ್ಟಡವನ್ನು ಮೊದಲು ಸರ್ದಾರ್ ವಲ್ಲಭಭಾಯಿ ಸೊಸೈಟಿಗೆ ಹಂಚಿಕೆಯಾಗಿದ್ದು ಈಗ ಅದನ್ನು ಖಾಲಿ ಮಾಡಬೇಕು ಹಾಗೂ ಬಾಡಿಗೆ ಕೊಡಬೇಕು ಎಂಬ ವಿಷಯ ನನಗೆ ಕ್ಲೇಶವುಂಟು ಮಾಡಿದೆ ಎಂದು ಹೇಳಿದೆನು. ಅವರಿಗೆ ಯಾವುದೇ ಟೆಲಿಗ್ರಾಂ ಅಥವಾ ಕಾಗದ ಬಂದಿಲ್ಲವೆಂದು ಎಲ್ಲೋ ತಪ್ಪು ನಡೆದಿರಬೇಕು ಮತ್ತು

ಅನಧಿಕೃತ ಆಕ್ರಮಣದ ವಿರುದ್ಧ ಕ್ರಮ ಕೈಗೊಂಡಿರಬೇಕೆಂದು ತಕ್ಷಣ ಅದನ್ನು ತಾವು ನೋಡುತ್ತೇನೆಂದು ಹೇಳಿದರು.

**ಜೂನ್ ೧೬, ೧೯೯೨**

ಬೆಂಗಳೂರಿನಿಂದ ಬಂದ ದೂರವಾಣಿಯಂತೆ ಮಧ್ಯಾಹ್ನ ಹೊರಡುವ ದಿನಪತ್ರಿಕೆಯೊಂದರ ಪ್ರತಿನಿಧಿ ೧೦-೩೦ಕ್ಕೆ ಬಂದು ಸುಮಾರು ೩ ಗಂಟೆಗಳವರೆಗೆ ನನ್ನನ್ನು ಸಂದರ್ಶಿಸಿದರು. ೧೯೬೯ರ ನಂತರ ಒಟ್ಟಾರೆ ಅವನತಿ ಬಗ್ಗೆ ಮಾತಾಡಿದೆ. ನನಗೆ ವಿಶೇಷ ಕೆಲಸವಿಲ್ಲದ್ದರಿಂದ ಅವರನ್ನು ಮುಂದುವರಿಯಲು ಬಿಟ್ಟೆ. ಸರಿಯಾಗಿ ಅನ್ವಯಿಸದ ಸಮಾಜವಾದಕ್ಕೆ ನೆಹ್ರೂರ ಕೊಡುಗೆ, ಅವರ ಮಗಳ ನಡತೆ, ಇವುಗಳು ವಾಸ್ತವಿಕವಾಗಿ ಅವನತಿಗೆ ಸಹಾಯ ಮಾಡಿವೆ. ಹೆಗಡೆಯ ಕೊಡುಗೆ, ಬಂಗಾರಪ್ಪನ ಕೆಟ್ಟ ಆಡಳಿತ ಮುಂತಾದವುಗಳ ಬಗ್ಗೆ ಮಾತಾಡಿದೆ. ರಾಷ್ಟ್ರಪತಿ ಸ್ಥಾನಕ್ಕೆ ಶಂಕರ ದಯಾಳ್ ಶರ್ಮರ ಅರ್ಹತೆಯ ಬಗ್ಗೆ ತಿಳಿದುಕೊಳ್ಳಲು ಬಹಳ ಕುತೂಹಲಿಗಳಾಗಿದ್ದರು. ನನ್ನ ಮತ್ತು ಇಂದಿರಾಗಾಂಧಿ ನಡುವೆ ಒಡಕು ಉಂಟಾಗುವ ಸಮಯದಲ್ಲಿ ಆ ಪರಿಸ್ಥಿತಿಯನ್ನು ತರುವುದಕ್ಕೆ ಶರ್ಮರ ಪಾತ್ರದ ಬಗ್ಗೆ ಅವರಿಗೆ ತಿಳಿದಿತ್ತೆಂದು ಕಾಣುತ್ತದೆ. ಅವರು ನನ್ನ ಸೆಕ್ರೆಟರಿಗಳಲ್ಲೊಬ್ಬರಾಗಿದ್ದರು ಎಂದು ಮಾತ್ರ ಹೇಳಿ ಆ ಕಾಲದ ಪಾತ್ರದ ಬಗ್ಗೆ ನಾನು ಬೇರೇನೂ ಹೇಳುವುದಿಲ್ಲ ಎಂದೆ. ಸಿ. ಸುಬ್ರಹ್ಮಣ್ಯಂ ಬಗ್ಗೆ ಕೇಳಿದಾಗ ನಾನು ತುಂಬು ಹೃದಯದಿಂದ ಅವರ ಪರವಾಗಿ ಮಾತನಾಡಿದೆನು.

**ಆಗಸ್ಟ್ ೪, ೧೯೯೨**

ಪ್ರಧಾನಿ ಕಾರು ಕಳುಹಿಸಿದರು. ಅವರೊಂದಿಗೆ ೪೫ ನಿಮಿಷಗಳ ಕಾಲ ಇದ್ದೆ. ರಾಷ್ಟ್ರೀಯ ಒಮ್ಮತದ ಬಗ್ಗೆ ಹೇಳಿ ಸಂಬಂಧಪಟ್ಟ ಕಾಗದಗಳನ್ನು ಕೊಟ್ಟೆ. ಸರದಾರ್ ಪಟೇಲ್ ಟ್ರಸ್ಟ್ ವಿಷಯ ಅವರಲ್ಲಿ ಮಾತಾಡಿದೆ. ಹಳೆಯ ಎಐಸಿಸಿ ಇಂದ ಮನೆ ೭, ಜಂತರ್ ಮಂತರ್ ರಸ್ತೆಯ ಆಸ್ತಿಯನ್ನು ಟ್ರಸ್ಟಿನ ಹೆಸರಿಗೆ ಬದಲಾಯಿಸುವ ಕೆಲಸ ಬಾಕಿ ಉಳಿದಿದೆ ಎಂದು ಹೇಳಿದೆ. ಟ್ರಸ್ಟ್‌ಗೆ ಆಸ್ತಿಯ ಬಗ್ಗೆ ಆಸಕ್ತಿಯಿಲ್ಲವೆಂದು ಹೇಳಿ ನಾನು ಅವರಿಗೆ ವಿವರವಾಗಿ ಬರೆಯಬಹುದೆಂದರು. ಸರ್ದಾರ್ ಸೊಸೈಟಿಗೆ ಇನ್ನೂ ದೊಡ್ಡ ಕಟ್ಟಡವನ್ನು ನೀಡುವ ಅಗತ್ಯತೆ ಮತ್ತು ಬಹಳ ಕಾಲದಿಂದ ಹಾಗೆ ಉಳಿದಿರುವ ಕೋರಿಕೆಯನ್ನು ಹೇಳಿದೆ. ದೆಹಲಿಯಲ್ಲಿ ಸರ್ದಾರರ ಹೆಸರನ್ನು ತಿರಸ್ಕರಿಸುತ್ತಿರುವುದು ಮತ್ತು ಜ್ಞಾಪಕಾರ್ಥವಾಗಿ ಏನೂ ಇಲ್ಲವೆಂದು ಕೂಡ ಹೇಳಿದೆ. ಕಟ್ಟಡಕ್ಕೆ ಬರೆಯುತ್ತೇನೆಂದು ಹೇಳಿದೆ. ಪ್ರಧಾನಿಯು ವಿನಯಶೀಲರಾಗಿದ್ದರು. ಬಹಳ ಮಾಮೂಲಿನಂತಿದ್ದನ್ನು ನಾನು ಇಷ್ಟಪಡಲಿಲ್ಲ, ಅವರು ವಿನಯಪೂರ್ವಕ ವಿದಾಯ ಹೇಳಿದರು. ಬರೆಯಲು ಪುನಃ ನನಗೆ ಜ್ಞಾಪಿಸಿದರು. ಯೋಜನಾ ಆಯೋಗದ ಉಪಾಧ್ಯಕ್ಷ ಪ್ರಣಬ್ ಮುಖರ್ಜಿಗೆ ಫೋನ್ ಮಾಡಿದೆ. ನಾಳೆ ೪ ಗಂಟೆಗೆ ಬರುವುದಾಗಿ ಹೇಳಿದರು. ಕೆ.ಸಿ. ಪಂತ್ ಮತ್ತು

ಅವರ ಶ್ರೀಮತಿ ೫ನೇ ತಾರೀಕು ಬೆಳಗಿನ ಉಪಾಹಾರಕ್ಕೆ ಬರುತ್ತಾರೆ. ಡಾ. ಮತ್ತು ಶ್ರೀಮತಿ ಚೋಪ್ರಾ ಬಂದು ಪ್ರಧಾನಿಯಿಂದ ಪಟೇಲ್ ಸೊಸೈಟಿ ಕಟ್ಟಡದ ಬಗ್ಗೆ ಹೇಗೆ ಮುಂದುವರಿಯಬೇಕೆಂದು ಚರ್ಚಿಸಿ ಧೈರ್ಯವಾದ ನಿಲುವನ್ನು ತಾಳಬೇಕೆಂದಾಯಿತು.

**ಅಕ್ಟೋಬರ್ ೨೫, ೧೯೯೨**

ನನ್ನ ದಿನಗಳು ಮುಗಿಯುತ್ತಾ ಬಂದಿದೆ ಎಂದು ಇತ್ತೀಚಿನ ದಿನಗಳಲ್ಲಿ ನನಗೆ ಭಾವನೆ ಬರುತ್ತಿದೆ. ಇನ್ನೇನೂ ಬಾಕಿ ಉಳಿದಿಲ್ಲ. ಎಸ್.ಕೆ. ಪಾಟೀಲ್ ಹಾಸ್ಯವಾಗಿ ಹೇಳುತ್ತಿದ್ದಂತೆ ೭೫ ವರ್ಷಗಳಾದ ಮೇಲೆ ಬೋನಸ್ ದಿನಗಳನ್ನು ಕಳೆಯುತ್ತಿದ್ದೇವೆ ಮತ್ತು ಅದನ್ನು ಕಳೆಯಲು ತಯಾರಿರಬೇಕು ಎಂದು ಹೇಳಿದ್ದರು, ಅದು ಸರಿ. ಸುಮ್ಮನೆ ಕಳೆದುಹೋಗಿ ವಿಶ್ವದಲ್ಲಿ ಲೀನವಾಗಿ ಬಿಡಬೇಕು. ಬೂದಿಯಾಗಬೇಕು, ಗಾಳಿಯಾಗಬೇಕು, ನೀರಾಗಬೇಕು ಮತ್ತು ಸಂಪೂರ್ಣವಾಗಿ ವಿಲೀನವಾಗಿ ಹೋಗಬೇಕು. ಪುನರ್ಜನ್ಮ ಇಲ್ಲ. ಗತಜೀವನ ಮತ್ತು ಭವಿಷ್ಯತ್ತಿನಲ್ಲಿ ವಾಪಸು ಬರುವ ಅಭಿಪ್ರಾಯವು ಕೇವಲ ಊಹೆ. ಅಜ್ಞಾನಿಗಳನ್ನು ದಾರಿ ತಪ್ಪಿಸುವ ತಂತ್ರವಿದು.

**ಡಿಸೆಂಬರ್ ೬, ೧೯೯೨**

ಏನಾದರೂ ಆಗುತ್ತದೆಂದು ನಿರೀಕ್ಷಿಸಿದ್ದರೂ ಹೆಚ್ಚೇನೂ ಆಗಲಿಲ್ಲ. ಆದರೆ ಇವತ್ತಿನ ಸಾಯಂಕಾಲದ ಸುದ್ದಿಯಂತೆ ಪ್ರತಿಗಾಮಿ ಹಿಂದೂ ಪ್ರದರ್ಶನಕಾರರು ಗಣನೀಯವಾದ ಸಂಖ್ಯೆಯಲ್ಲಿ ಬಾಬ್ರಿ ಮಸೀದಿಯನ್ನು ನಾಶ ಮಾಡಿದರು. ಕರಸೇವೆ ಮಾಡಲಾಗುತ್ತದೆ ಎಂಬ ತಿಳುವಳಿಕೆಗೆ ಇದು ವಿರುದ್ಧವಾಗಿದ್ದಿತು. ಇದು ದ್ರೋಹ ಮತ್ತು ಮೋಸ. ಇದು ಅನಿರೀಕ್ಷಿತ ಕೆಟ್ಟ ನಡತೆ. ಬಿಜೆಪಿ ಸರಕಾರವನ್ನು ವಜಾ ಮಾಡಿ ರಾಷ್ಟ್ರಪತಿ ಆಳ್ವಿಕೆ ಜಾರಿಗೆ ಬರುತ್ತದೆಂಬ ಸುದ್ದಿಯನ್ನು ನಾಳೆ ಬೆಳಿಗ್ಗೆ ಕೇಳುತ್ತೇವೆಂಬುದು ಖಚಿತ. ನಾನು ಭಾವಿಸಿದ್ದು ಸರಿಯೆಂದು ಕಾಣುತ್ತದೆ. ಮುಖಂಡರನ್ನು ದಸ್ತಗಿರಿ ಮಾಡಲಾಗುತ್ತದೆ ಮತ್ತು ತುಂಬಾ ಭಾವನಾತ್ಮಕರಾದ ಮುಸ್ಲಿಮರು ತಮ್ಮ ಮಸೀದಿಗೆ ಆದ ಅವಮಾನವನ್ನು ತಾಳುವುದಿಲ್ಲವಾದ್ದರಿಂದ ಎಲ್ಲ ತರಹದ ಹಿಂಸಾಚಾರವನ್ನು ದೇಶಾದ್ಯಂತ ಎಸಗುತ್ತಾರೆ. ಏನಾಗುತ್ತದೆ ಎಂದು ಯೋಚಿಸಿದರೆ ಮೈನಡುಕ ಬರುತ್ತದೆ, ಎಷ್ಟು ಮನೆಗಳು ಸುಡಲ್ಪಡುತ್ತವೆ, ವಾಹನಗಳು ನಾಶವಾಗುತ್ತದೆ, ಹಿಂದೂ ಮತ್ತು ಮುಸ್ಲಿಮರಿಬ್ಬರಲ್ಲಿ ನೂರಾರು ಜನರು ಎಷ್ಟು ದುಃಖಿಸುತ್ತಾರೆ. ಮುಸ್ಲಿಮರಿಗೆ ಆಶ್ಚರ್ಯವಾಗಬಹುದು. ಅವರು ಹೊಡೆಯಲು ನಿರ್ಧರಿಸಿದರೆ ಹಿಂದೂಗಳೂ ಕೂಡ ಹಾಗೆಯೇ ಮಾಡಲು ತಯಾರಾಗಿರಬಹುದು. ಏನನ್ನು ಬೇಕಾದರೂ ನಿರೀಕ್ಷಿಸಬಹುದು. ರಾವ್ ಸರಕಾರವು ದಕ್ಷವಾಗಿಲ್ಲ ಮತ್ತು ಪೂರ್ಣವಾಗಿ ಬಲವಾಗಿಲ್ಲ.

**ಫೆಬ್ರವರಿ ೨೬, ೧೯೯೩ ಚಿತ್ರದುರ್ಗ**

ಭಾರತವು ಪುನಃ ಕ್ರಿಕೆಟ್ಟಿನಲ್ಲಿ ಗೆದ್ದಿದೆ. ಎಲ್ಲಾ ಟೆಸ್ಟುಗಳಲ್ಲೂ ಗೆದ್ದಿದ್ದು ಕೊನೆಯ ಎರಡರಲ್ಲಿ ಇನ್ನಿಂಗ್ಸ್‌ನಿಂದ ಗೆದ್ದಿದೆ ಎಂಬ ವಿಷಯವು ತುಂಬಾ ತೃಪ್ತಿಕರ ಮತ್ತು ಸಂತೋಷ. ಈ ವರ್ಷ ಸಾಮಾನ್ಯವಾಗಿ ಅವರು ಚೆನ್ನಾಗಿ ಆಡಿದ್ದಾರೆ. ಪಾರ್ಲಿಮೆಂಟು ತನ್ನ ಆಯವ್ಯಯ ಅಧಿವೇಶನವನ್ನು ಪ್ರಾರಂಭಿಸಿದೆ. ನೆನ್ನೆ ಪಾರ್ಲಿಮೆಂಟು ಪ್ರಾರಂಭಗೊಂಡಿದ್ದು ಅಧಿಕಾರದಲ್ಲಿರುವ ಪಕ್ಷವು ಪ್ರಜಾಪ್ರಭುತ್ವ ರೀತಿಯಲ್ಲದೆ ಸ್ಪಷ್ಟವಾಗಿ ಬಿಜೆಪಿ ಪಕ್ಷದ ವಿರುದ್ಧ ಬಲವಾದ ವರ್ತನೆಯನ್ನು ಕೈಗೊಂಡಿದೆ. ಅವರಿಗೆ ಹಾಗೆ ಆಗಬೇಕು. ನಿಷ್ಕಳಂಕ, ಸಡಿಲವಾದ ವಿಕಾರವಿಲ್ಲದ ಹಿಂದೂ ಸಮಾಜ ಎಂದು ಹೇಳಿಕೊಳ್ಳುವವರನ್ನು, ಸುಲಭವಾಗಿ ದಾರಿ ತಪ್ಪಿಸಿ ಅವರ ಧಾರ್ಮಿಕ ಮತ್ತು ಮುಸ್ಲಿಂ ವಿರೋಧಿ ಭಾವನೆಗೆ ಮನವಿ ಮಾಡಿಕೊಳ್ಳುತ್ತ, ಅಧಿಕಾರವನ್ನು ಪಡೆಯಬಹುದೆಂಬ ಬ್ರಾಹ್ಮಣ ಹುನ್ನಾರಿನ ಪ್ರಯತ್ನ ಇದೆಂದು ನನಗೆ ಖಚಿತ. ಮೂಲಭೂತವಾದಿಗಳಾದ ವಿಶ್ವ ಹಿಂದೂ ಪರಿಷತ್, ಆರ್‌ಎಸ್‌ಎಸ್ ಮತ್ತು ಶಿವಸೇನೆಯು ಅದರ ಮುಖ್ಯ ಆಧಾರ. ಸ್ಪಷ್ಟವಾಗಿ ಹಾಗೇ ಇದೆ ಎಂಬ ಅಂಶವು ತುಂಬಾ ಸ್ಪಷ್ಟವಾಗಿದೆ.

**ಫೆಬ್ರವರಿ ೨೬, ೧೯೯೩ ಚಿತ್ರದುರ್ಗ**

ಬಿಜೆಪಿ ದೆಹಲಿಯಲ್ಲಿ ರ್‍ಯಾಲಿ ನಡೆಸಲು ವಿಫಲವಾದುದಕ್ಕೆ ಅದು ಪಾರ್ಲಿಮೆಂಟು ಮತ್ತು ರಾಜ್ಯ ಶಾಸಕಾಂಗಳೆರಡರಲ್ಲಿಯೂ ತೊಂದರೆಯನ್ನುಂಟು ಮಾಡುತ್ತಿದೆ. ಅವರೇ ಈಗ ಪ್ರಹಾರಕ್ಕೆ ಅರ್ಹರು. ಅವರನ್ನು ಬಂಧಿಸಿ ಅದೇ ರೀತಿ ಶಿಕ್ಷಿಸಬೇಕಾಗಿತ್ತೆಂದು ನನ್ನ ಆಸೆ. ಏಕೆಂದರೆ ಡಿಸೆಂಬರ್ ೬ರಂದು ಮಸೀದಿಯನ್ನು ಕೆಡವಿ ನಿಷೇಧಾಜ್ಞೆಯನ್ನು ಉಲ್ಲಂಘಿಸಿದುದಕ್ಕಾಗಿ ಹಾಗೆ ಮಾಡಬೇಕಾಗಿತ್ತು. ಓದಲು ಅಥವಾ ಬರೆಯಲು ನನಗೆ ಸುಸ್ತಾದಾಗ ನಾನು ಕಾದಂಬರಿಗಳನ್ನು ಓದುತ್ತೇನೆ. ವಾಸ್ತವವಾಗಿ ನನಗೆ ಬೇಗನೆ ಸುಸ್ತಾಗಿಬಿಡುತ್ತದೆ ಆಗ ಇದೇ ಪರಿಹಾರ. ಬೆಂಗಳೂರಿನಲ್ಲಿ ಒಂದು ದಿನದ ಕ್ರಿಕೆಟ್ ಮ್ಯಾಚಿನಲ್ಲಿ ಭಾರತವು ಇಂಗ್ಲೆಂಡಿಗೆ ಸೋತುದಕ್ಕೆ ವಿಷಾದಿಸುತ್ತೇನೆ.

**ಮಾರ್ಚ್ ೧೨, ೧೯೯೩ ಚಿತ್ರದುರ್ಗ**

ಬೊಂಬಾಯಿಯಲ್ಲಿ ಬಾಂಬು ಸ್ಫೋಟದಲ್ಲಿ ೧೭೪ ಜನರು ಕೊಲ್ಲಲ್ಪಟ್ಟು ಒಂದು ಸಾವಿರ ಜನರು ಗಾಯಗೊಂಡಿದ್ದು ಅವರಲ್ಲಿ ಹೆಚ್ಚಿನವರು ಸ್ಟಾಕು ವಿನಿಮಯ ಕಟ್ಟಡದಲ್ಲಿದ್ದವರು ಎಂದು ಕೇಳಿ ದಿಗಿಲುಗೊಂಡೆ. ಈ ದುರಾದೃಷ್ಟ ದೇಶದಲ್ಲಿ ಮಾಫಿಯಾ ಹೆಚ್ಚುತ್ತಿದೆ. ಇದು ಅತ್ಯಂತ ಕೆಟ್ಟ ಬಾಂಬು ಸ್ಫೋಟ. ಗೃಹಮಂತ್ರಿ ಮತ್ತು ರಾಜ್ಯಮಂತ್ರಿ ದೆಹಲಿಯಿಂದ ಬೊಂಬಾಯಿಗೆ ನುಗ್ಗಿದ್ದಾರೆ. ಅವರೇನು ಮಾಡುತ್ತಾರೆ, ಒಂದು ಗುಂಪಿನ ಜನರು ಇದನ್ನು ಮಾಡುತ್ತಿದ್ದಾರೆಂಬುದು ನನ್ನ ಹೆದರಿಕೆ.

**ಮಾರ್ಚ್ ೧೩, ೧೯೯೩** **ಚಿತ್ರದುರ್ಗ**

ಬೊಂಬಾಯಿ ಸ್ಫೋಟದಲ್ಲಿ ಮಡಿದವರ ಸಂಖ್ಯೆ ೨೨೫ಕ್ಕೆ ಏರಿದೆ. ಹೆಚ್ಚಿನ ಸಂಖ್ಯೆಯಲ್ಲಿ ಗಾಯಗೊಂಡಿರುವವರಿಗೆ ಬೇಕಾಗಿರುವ ರಕ್ತವನ್ನು ಬೊಂಬಾಯಿನಲ್ಲಿ ಮಾತ್ರ ದಾನ ಮಾಡದೆ ಇತರ ರಾಜ್ಯಗಳಿಂದಲೂ ಬರುತ್ತಿದ್ದು ಜನರು ಸಾಲುಗಟ್ಟಿ ನಿಂತಿದ್ದಾರೆ. ಇದು ಒಳ್ಳೆಯದು. ಈ ಹೀನಕೃತ್ಯಕ್ಕೆ ಭಾರತದ ಸಮಾಜ ಘಾತುಕರು ಕಾರಣವೆಂದೂ ಅವರ ಜೊತೆಗೆ ಹೊರಗಿನವರೂ ಸೇರಿದ್ದಾರೆ ಎಂದು ಸಂದೇಹಿಸಲಾಗುತ್ತಿದೆ. ಅತ್ಯಂತ ನವೀನ ಬಾಂಬುಗಳ ದೃಷ್ಟಿಯಿಂದ ಇದು ನಿಜವಿರಬಹುದು. ಅವರನ್ನು ಕಂಡುಹಿಡಿಯ ಲಾಗುತ್ತದೆಂದು ನನ್ನ ಆಶಯ. ಮಾಹಿತಿ ನೀಡುವವರಿಗೆ ೧೦ ಲಕ್ಷ ರೂ.ಗಳು ಬಹುಮಾನವಂತೆ!

**ಮಾರ್ಚ್ ೧೭, ೧೯೯೩** **ಚಿತ್ರದುರ್ಗ**

ನೆನ್ನೆ ದಿನ ರಾತ್ರಿ ಕಲ್ಕತ್ತಾದಲ್ಲಿ ಇನ್ನೊಂದು ಬಾಂಬು ಸ್ಫೋಟವು ಸುಮಾರು ೫೦ ಜನರನ್ನು ಕೊಂದು ನೂರು ಜನರನ್ನು ಗಾಯಗೊಳಿಸಿದೆ ಎಂಬುದನ್ನು ಗಂಭೀರವಾಗಿ ಪರಿಗಣಿಸಬೇಕು. ಭಾರತದಲ್ಲಿ ಕೆಟ್ಟ ಜನರ ಸಹಕಾರದೊಂದಿಗೆ ಇದು ವಿದೇಶೀ ಪ್ರಯತ್ನ ಎಂದು ಕಾಣುತ್ತದೆ. ತಪ್ಪಿತಸ್ಥರನ್ನು ಕಂಡುಹಿಡಿಯಲು ನಮ್ಮ ಸರಕಾರವು ತೀವ್ರವಾದ ಪ್ರಯತ್ನ ಮಾಡುತ್ತಿದೆ. ವಿದೇಶಿ ಸರಕಾರಗಳೂ ಕೂಡ ಸಹಾಯ ಮಾಡುತ್ತಿವೆ. ಪಾಕಿಸ್ತಾನವೂ ಇದರಲ್ಲಿ ಸೇರಿಕೊಂಡಿದೆ ಎಂಬುದು ನನ್ನ ಸಂದೇಹ.

**ಏಪ್ರಿಲ್ ೯, ೧೯೯೩** **ಚಿತ್ರದುರ್ಗ**

ಸಂಜೆ ೬ ಗಂಟೆಗೆ ಕೃಷಿ ಮಂತ್ರಿ ಹುಚ್ಚಮಾಸ್ತಿಗೌಡ ಬಂದು ಸುಮಾರು ಒಂದು ಗಂಟೆ ಕಾಲ ನನ್ನ ಆತ್ಮೀಯ ವಿಷಯಗಳಾದ ನಿರ್ದೇಶಕ ತತ್ವಗಳು, ಕೃಷಿ, ನೀರಾವರಿ, ಜನರ ಸಹಕಾರದಿಂದ ಕೆರೆಗಳ ಹೂಳೆತ್ತುವುದು ಮುಂತಾದ ಹೆಚ್ಚಾಗಿ ಹಳ್ಳಿಗಳಿಗೆ ಸಂಬಂಧಿಸಿದ ವಿಷಯಗಳನ್ನು ಮಾತನಾಡಿದೆವು. ಸಾಮಾನ್ಯ ಜನರನ್ನೊಳಗೊಂಡ ಮುಖ್ಯವಾದ ಇಂತಹ ವಿಷಯಗಳನ್ನು ನಾನು ಈ ಇಳಿ ವಯಸ್ಸಿನಲ್ಲಿ ತೆಗೆದುಕೊಂಡಿರುವುದಕ್ಕೆ ನನ್ನನ್ನು ಅಭಿನಂದಿಸಿದರು. ಅವರಿಗೆ ಕಾವೇರಿ, ಕೃಷ್ಣ, ಕಾಳಿನದಿ, ಮೇಕೆದಾಟು ನದಿ ನೀರಿನ ಹಂಚಿಕೆ ಮುಂತಾದವುಗಳನ್ನು ಕೂಡ ಹೇಳಿದೆ. ನನ್ನ ಜೊತೆಯಲ್ಲಿದ್ದುದಕ್ಕೆ ಅವರಿಗೆ ಸಂತೋಷವಾಯಿತು.

**ಏಪ್ರಿಲ್ ೨೩, ೧೯೯೩** **ಚಿತ್ರದುರ್ಗ**

ಕೆಎಎಸ್ ಅಧಿಕಾರಿಗಳನ್ನು ಡಿಸಿಯಾಗಿ ಹಾಕದೆ ಐಎಎಸ್‌ನವರನ್ನೆ ಹಾಕಬೇಕೆಂದೂ ಕೆಎಎಸ್ ನಿಸ್ಪೃಹವಾಗಿರಲಾರರೆಂದು ಐಎಎಸ್ ಸರಕಾರಕ್ಕೆ ತಿಳಿಸಿದೆ. ಇದು ಕುಚೋದ್ಯ. ಸಾಯಂಕಾಲ ಕೆಲವು ಮುಖ್ಯವಾದ ಜನರು ಬಂದು ಡಿಸಿಯನ್ನು ಉಳಿಸಿಕೊಳ್ಳಬೇಕೆಂದರು.

ಹಿಂದಿನ ಸರಕಾರವು ಈ ಡಿಸಿಯನ್ನು ಅಭಿನಂದಿಸಿದೆ, ಅಲ್ಲದೆ ಅತ್ಯುಚ್ಚ ನ್ಯಾಯಾಲಯ ಮತ್ತು ಉಚ್ಚ ನ್ಯಾಯಾಲಯವೂ ಅವರ ಪ್ರಶಂಸಾರ್ಹ ಸೇವೆಗಳನ್ನು ಅಭಿನಂದಿಸಿ, ಕೇವಲ ಅಲ್ಪ ಹಣಕ್ಕೆ ಕೋಟಿ ರೂ.ಗಳ ಕಾಡನ್ನು ಅಧಿಕಾರಿಗಳು ವಿಲೇವಾರಿ ಮಾಡಬೇಕೆಂದಿದ್ದ ಸಂದರ್ಭದಲ್ಲಿ ಕೊಳಕು ಅಸತ್ಯಸಂಧ ಮೋಡದಲ್ಲಿ ಇವರೊಬ್ಬರೇ ಬೆಳ್ಳಿಯಗೆರೆ ಎಂದು ಹೇಳಿದ್ದಾರೆ. ಈ ವಿಶೇಷ ಅಧಿಕಾರಿಯು ಇದನ್ನೆಲ್ಲ ಕಷ್ಟಪಟ್ಟ ದುಡಿಮೆ ಮತ್ತು ತನ್ನ ಸತ್ಯಸಂಧತೆಯಿಂದ ಮಾಡಿದ್ದಾರೆ. ಈತನನ್ನು ಕನಿಷ್ಠ ಮೂರು ತಿಂಗಳಾದರೂ ಉಳಿಸಬೇಕೆಂದು ಮುಖ್ಯಮಂತ್ರಿ ಮೊಯಿಲಿಯವರಿಗೆ ಪತ್ರ ಬರೆದೆ.

**ಮೇ ೧೫, ೧೯೯೩**

ಫೀಲ್ಡ್ ಮಾರ್ಷಲ್ ಕಾರಿಯಪ್ಪ ಕೆಲವು ವರ್ಷಗಳಿಂದ ಬೆಂಗಳೂರಿನ ಮಿಲಿಟರಿ ಆಸ್ಪತ್ರೆಯಲ್ಲಿದ್ದವರು ಈ ದಿನ ಮುಂಜಾವು ಮೃತಪಟ್ಟರು. ಭಾರತೀಯ ಭಾರತದ ಮೊದಲ ಸೇನಾದಂಡನಾಯಕ ಇವರಾಗಿದ್ದರು. ನಾವು ಪರಸ್ಪರ ಚೆನ್ನಾಗಿ ಅರಿತಿದ್ದೆವು.

**ಮೇ ೧೯, ೧೯೯೩ ಚಿತ್ರದುರ್ಗ**

ಆರು ರಾಜ್ಯಗಳಿಂದ ಪಾರ್ಲಿಮೆಂಟು ಮತ್ತು ವಿಧಾನಸಭೆಗೆ ಚುನಾವಣೆಗಳು ನಡೆದವು. ಗಣನೀಯವಾದ ಚುನಾವಣೆ. ಹೆಚ್ಚು ಕಡಿಮೆ ಕಾಂಗ್ರೆ ಗೆಲ್ಲುತ್ತದೆ ಎಂಬುದು ನನ್ನ ಸ್ವಂತ ಅಭಿಪ್ರಾಯ. ನನ್ನ ಹೆಸರಿನಲ್ಲಿ ಒಂದು ಟ್ರಸ್ಟ್ ರಚಿಸಲು ೮-೯ ಸ್ನೇಹಿತರು ಬೆಂಗಳೂರಿನಲ್ಲಿ ಸಭೆ ನಡೆಸಬೇಕೆಂದಿದ್ದಾರೆಂದು ರಾತ್ರಿ ೯-೩೦ಕ್ಕೆ ಮಹಾಲಿಂಗಶೆಟ್ಟಿ ಬೆಂಗಳೂರಿನಿಂದ ಫೋನ್ ಮಾಡಿ ಹೇಳಿದರು. ಏಕೆ ಎಂದು ಕೇಳಿದಾಗ ಒಂದು ಟ್ರಸ್ಟಿನ ಕರಡನ್ನು ತಯಾರಿಸಲಾಗಿದೆ ಎಂದು ಹೇಳಿದರು. ಬದರಿನಾರಾಯಣ್, ಕೆ.ಎಂ. ನಂಜಪ್ಪ, ಡಾ. ತಿಮ್ಮೇಗೌಡ, ಶ್ಯಾಮನೂರು ಶಿವಶಂಕರಪ್ಪ, ಕೋರೆ ಮತ್ತು ಇನ್ನೂ ಒಂದಿಬ್ಬರಂತಹವರು ಇದನ್ನು ಉದ್ದೇಶಿಸಿದ್ದಾರೆ. ವೈಯಕ್ತಿಕವಾಗಿ ನಾನು ಆಸಕ್ತಿ ಹೊಂದಿಲ್ಲ. ಯಾತಕ್ಕಾಗಿ ಎಂಬುದು ನನಗೆ ತಿಳಿಯದು. ನಾನೇನು ಮಾಡಿದ್ದೇನೆ.

**ಮೇ ೨೧, ೧೯೯೩ ಚಿತ್ರದುರ್ಗ**

೮-೩೦ಕ್ಕೆ ಮಹಾಲಿಂಗಶೆಟ್ಟಿ ಮತ್ತು ಚಂದ್ರ ಬೆಂಗಳೂರಿಂದ ಬಂದು ಬೆಳಗಿನ ಉಪಾಹಾರ ಮಾಡಿ ಅರ್ಧಗಂಟೆಯಲ್ಲಿ ಹೊರಟರು. ಆ ಅವಧಿಯಲ್ಲಿ ಶೆಟ್ಟಿ ಎರಡು ಸೈಕ್ಲೋಸ್ಟೈಲ್ ಕಾಗದಗಳನ್ನು ಒಂದು ನನ್ನ ಹೆಸರಿನಲ್ಲಿನ ಪ್ರತಿಷ್ಠಾನ ಟ್ರಸ್ಟಿನ ಉದ್ದೇಶಗಳು ಮತ್ತು ಇನ್ನೊಂದು ಆ ಉದ್ದೇಶಕ್ಕೆ ಪ್ರಮುಖ ವ್ಯಕ್ತಿಗಳಾದ ಜಸ್ಟಿಸ್ ಚಂದ್ರಶೇಖರ್, ಕೆ.ಎಂ. ನಂಜಪ್ಪ, ಬದ್ರಿನಾರಾಯಣ್, ವೈ. ರಾಮಚಂದ್ರ, ಗಂಗಾಧರಶೆಟ್ಟಿ, ಡಾ. ತಿಮ್ಮೇಗೌಡ, ಶ್ಯಾಮನೂರು ಶಿವಶಂಕರಪ್ಪ, ಪ್ರಭಾಕರಕೋರೆ ಮತ್ತು ಬಿಜಿ ಜವಳಿಯವರು ಮೇ ೭ರಂದು ಬೆಂಗಳೂರಿನಲ್ಲಿ ಸಭೆ ಕರೆದಿರುವುದು. ಅದರಲ್ಲಿ ೩೧ ಉದ್ದೇಶಗಳನ್ನು

ನಮೂದಿಸಲಾಗಿದೆ. ಅವುಗಳನ್ನು ನೋಡುತ್ತೇನೆಂದು ಹೇಳಿದೆ. ಈ ಟ್ರಸ್ಟ್ ಅಗತ್ಯವೇ ಎಂದು ನನಗೆ ಇನ್ನು ತಿಳಿಯದು. ಇವನ್ನು ತಪ್ಪಿಸಲು ಸಾಧ್ಯವೆ ?

**ಮೇ ೨೨, ೧೯೯೩**

ಕೆಲವು ಉಪಚುನಾವಣೆಗಳ ಫಲಿತಾಂಶಗಳು ಬಂದಿವೆ. ಕಾಂಗ್ರೆ ಚೆನ್ನಾಗಿ ಮಾಡಿಲ್ಲವೆಂದು ಕಾಣುತ್ತದೆ. ಬಿಜೆಪಿಯು ಉತ್ತಮವಾಗಿ ಮಾಡಿದೆ. ಇದು ಒಳ್ಳೆಯದಲ್ಲ. ಬಿಜೆಪಿಯು ಗೆಲ್ಲಕೂಡದು. ಮುಂದಿನ ಸಾಮಾನ್ಯ ಚುನಾವಣೆಗಳಲ್ಲಿ ಅವರು ಗೆದ್ದರೂ ಅದು ಅಪಾಯಕಾರಿ. ಕರ್ನಾಟಕದಲ್ಲಿ ಯಲಹಂಕ ಸ್ಥಾನವನ್ನು ಕಾಂಗ್ರೆ ಉಳಿಸಿಕೊಂಡಿದ್ದು ಕೇವಲ ೫೦೦ ಮತಗಳಿಂದ ಗೆದ್ದಿದೆ. ಇದು ಸೋತಂತೆಯೇ, ತಾಂತ್ರಿಕ ಜಯ ಅಷ್ಟೆ.

**ಜೂನ್ ೧೧, ೧೯೯೩** **ಚಿತ್ರದುರ್ಗ**

ಫೋನು ಮಾಡಿದ ಮೇಲೆ ಸ್ಥಳೀಯ ಕಿರಿಯ ಜಗದ್ಗುರು ಮುರುಘರಾಜೇಂದ್ರ ಸ್ವಾಮಿ ಸಂಜೆ ೫-೩೦ಕ್ಕೆ ಬಂದು ಸುಮಾರು ಒಂದು ಗಂಟೆ ಇದ್ದರು. ಲಿಂಗಾಯತರು ಮತ್ತು ಹರಿಜನರು ಬೀದಿಯಲ್ಲಿ ಹೊಡೆದಾಡಿ ಕೊಲೆ ಮಾಡಿದ್ದು ಅವರ ಮಧ್ಯೆ ಸೌಹಾರ್ದತೆ ಮತ್ತು ಶಾಂತಿಯನ್ನು ತರಲು ಸಫಲವಾಗಿ ಪ್ರಯತ್ನಿಸಿ ಮೈಸೂರು ಜಿಲ್ಲೆಗೆ ಹೋಗಿ ಅವರು ಮಾಡಿದ ಕೆಲಸವನ್ನು ಹೊಗಳಿ ಅವರನ್ನು ಅಭಿನಂದಿಸಿದೆ. ಅವರು ಹರಿಜನರನ್ನು ಭೇಟಿ ಮಾಡಿ ಲಿಂಗಾಯತರು ಮತ್ತು ಹರಿಜನರಿಬ್ಬರೂ ಶೂದ್ರರು ಮತ್ತು ಅವರು ಸ್ನೇಹಿತರಾಗಬಹುದು, ಸಂಬಂಧಿಗಳಾಗಬಹುದು, ಅಂತರ ಮದುವೆ ಮಾಡಿಕೊಳ್ಳಬಹುದು ಎಂದು ಅವರಿಗೆ ಬುದ್ಧಿವಾದ ಹೇಳಿದರು. ಈ ಧೈರ್ಯದ ಹೆಜ್ಜೆಯನ್ನು ಇಟ್ಟುದಕ್ಕೆ ನಿಜವಾಗಿಯೂ ಅಭಿನಂದನಾರ್ಹರು. ಅವರು ಭಾಗಶಃ ಸಫಲರಾದರೆಂದು ಕಾಣುತ್ತದೆ. ಅವರು ಜನರಿಗೆ ಮನವಿ ಮಾಡಿ ಅವರ ಸಮಸ್ಯೆಗಳ ಬಗ್ಗೆ ಹೆಚ್ಚಾಗಿ ತಿಳಿದುಕೊಳ್ಳಬೇಕೆಂದರು. ನೀರಾವರಿಯ ಬಗ್ಗೆ ತಿಳಿದುಕೊಳ್ಳಬೇಕೆಂದಿದ್ದಾರೆ. ಅವರ ಬಗ್ಗೆ ನನಗೆ ತುಂಬಾ ಗೌರವ ಮತ್ತು ಮೆಚ್ಚಿಗೆ ಇದೆ ಎಂದು ಹೇಳಿದೆ. ಹಿರಿಯ ಸ್ವಾಮಿಗಳು ಇವರ ಜೊತೆಯಲ್ಲಿ ಸಹಮತದಿಂದಿದ್ದರು. ನಾವು ವೇದಗಳು, ಪಂಚಾಚಾರ್ಯರು ಮುಂತಾದ ವಿಷಯಗಳನ್ನು ಕುರಿತು ಚರ್ಚಿಸಿದೆವು.

**ಜೂನ್ ೧೬, ೧೯೯೩** **ಚಿತ್ರದುರ್ಗ**

ಕೆಲವು ಮುಖ್ಯವಾದ ಸ್ನೇಹಿತರು ಮತ್ತು ನನ್ನ ಅಭಿಮಾನಿಗಳು ನನ್ನ ಹೆಸರಿನಲ್ಲಿ ಒಂದು ಟ್ರಸ್ಟ್ ಮಾಡಿ ನನ್ನ ಆದರ್ಶಗಳನ್ನು ಮುಂದುವರಿಸಲು ಮತ್ತು ದೇಶದ ಸೇವೆ ಮತ್ತು ಅಭಿವೃದ್ಧಿಯಲ್ಲಿ ನನ್ನ ಅಭಿಪ್ರಾಯ ಮತ್ತು ನಂಬಿಕೆಗಳನ್ನು ಅನುಸರಿಸುವುದಕ್ಕೆ ಒಂದು ತಿಂಗಳ ಹಿಂದೆ ಬೆಂಗಳೂರಿನಲ್ಲಿ ಭೇಟಿ ಮಾಡಿ ಟ್ರಸ್ಟನ್ನು ಮುಂದುವರಿಸಿಕೊಂಡು ಹೋಗಲು ನಿರ್ಧರಿಸಿರುವರು.

ಸ್ಟಾಕ್ ಬ್ರೋಕರ್ ಆರೋಪಿ ಹರ್ಷದ್ ಮೆಹ್ತಾ ತಾನು ಒಬ್ಬ ಮುಖ್ಯ ವ್ಯಕ್ತಿಗೆ ಮಾಡಲಾಗಿದೆಯೆನ್ನುವ ಪಾವತಿಯ ಬಗ್ಗೆ ಹೇಳಿಕೆಯು ತುಂಬಾ ಊಹಾಪೋಹಗಳನ್ನುಂಟು ಮಾಡಿದೆ. ಪ್ರಧಾನಿ ಪಿ.ವಿ. ನರಸಿಂಹರಾವ್ ಅವರಿಗೆ ಒಂದು ಕೋಟಿ ರೂ.ಗಳನ್ನು ನೀಡಿದನೆಂದು ಅವನು ಹೇಳಿದುದನ್ನು ಪ್ರಧಾನಿ ನಿರಾಕರಿಸಿದ್ದಾರೆ. ಇದು ಸುಳ್ಳಿರಬಹುದು. ಈ ಮನುಷ್ಯ ಒಂದು ನೂರು ಕೋಟಿಗಳನ್ನು ಕೊಟ್ಟಿದ್ದೇನೆಂದು ಹೇಳಿದ್ದರೆ ನಂಬಬಹುದಿತ್ತು. ಆಳುತ್ತಿರುವ ಸರಕಾರವನ್ನು ಅಲ್ಲಾಡಿಸುವ ಪ್ರಯತ್ನ ಇದೆಂದು ನಾನು ಭಾವಿಸುತ್ತೇನೆ. ನನ್ನ ಪ್ರಕಾರ ಸರಕಾರವು ದೇಶದ ವಿಷಯಗಳನ್ನು ಅದರಲ್ಲಿಯೂ ಹಣಕಾಸಿನ ವಿಷಯವನ್ನು ಕೆಟ್ಟದಾಗಿ ನೋಡಿಕೊಂಡು ದೇಶವನ್ನು ಸಾಲದ ಬಲೆಗೆ ತಳ್ಳುತ್ತಿರುವುದರಿಂದ ಈ ದೇಶದ ಭವಿಷ್ಯದ ಬಗ್ಗೆ ಚಿಂತಾಕ್ರಾಂತನಾಗಿದ್ದೇನೆ.

**ಜೂನ್ ೧೭, ೧೯೯೩ ಚಿತ್ರದುರ್ಗ**

ಪತ್ರಿಕೆಗಳಲ್ಲಿ ಈ ದಿನ ಅತಿ ದೊಡ್ಡ ಹಗರಣ ಬಂದಿದೆ. ಅಂದರೆ ಹರ್ಷದ್ ಮೆಹ್ತಾ ಪ್ರಮಾಣ ವಚನ ಸ್ವೀಕರಿಸಿ ಒಂದು ಹೇಳಿಕೆಯನ್ನು ಅಫಿಡವಿಟ್‌ನಲ್ಲಿ ಮಾಡಿ ಪ್ರಧಾನಿ ನರಸಿಂಹರಾವ್‌ಗೆ ಒಂದು ಕೋಟಿ ರೂ.ಗಳನ್ನು ಕೊಟ್ಟಿದ್ದೇನೆಂದು ಅದರ ವಿವರಗಳನ್ನು ಕೂಡ ಕೊಟ್ಟಿದ್ದಾನೆ. ಇದು ಸುಳ್ಳು ಅಫಿಡವಿಟ್ ಎಂದು ಕಾಣುತ್ತದೆ. ಮೊಬಲಗು ಒಂದು ನೂರು ಕೋಟಿಗಳ ಸಮೀಪ ಇದೆಯೆಂದಿದ್ದರೆ ಅದನ್ನು ನಂಬಬಹುದಿತ್ತು. ಒಂದು ಕೋಟಿ ಬಹಳ ಕಡಿಮೆ. ಬಿಜೆಪಿಯು ಅದನ್ನು ದೊಡ್ಡದು ಮಾಡುತ್ತಿದೆ. ಒಂದಂತೂ ನಿಜ. ಇಡೀ ವಾತಾವರಣ ಕೊಳೆತಿದೆ. ಮಂತ್ರಿಗಳು, ವ್ಯಾಪಾರಗಾರರು, ಬ್ಯಾಂಕರುಗಳು, ಅಧಿಕಾರಶಾಹಿಗಳು, ಶಾಸಕಾಂಗದ ಹೆಚ್ಚಿನ ಸದಸ್ಯರುಗಳಲ್ಲಿ ಯಾರೂ ಸತ್ಯಸಂಧರಾಗಿ ಕಾಣುವುದಿಲ್ಲ. ಇದು ವ್ಯಸನಕರ ವಿಚಾರ.

**ಜೂನ್ ೨೧, ೧೯೯೩ ಚಿತ್ರದುರ್ಗ**

ಪ್ರಧಾನಿ ಪಿ.ವಿ. ನರಸಿಂಹರಾವ್‌ರ ಕಾಂಗ್ರೆಸ್ (ಐ) ಸರಕಾರವು ಎರಡು ವರ್ಷದ ಆಡಳಿತವನ್ನು ಮುಗಿಸಿದೆ. ಸರಕಾರದ ಸಾಧನೆ ಮುಂತಾದವುಗಳನ್ನು ಎತ್ತಿತೋರಿಸಲು ಹೆಚ್ಚಿನ ಸ್ಥಳಗಳಲ್ಲಿ ಪ್ರದರ್ಶನಗಳು ಮತ್ತು ಸಭೆಗಳನ್ನು ನಡೆಸಲಾಯಿತು ಎಂದು ರೇಡಿಯೋವು ರಾತ್ರಿ ೯-೦೦ ಗಂಟೆಗೆ ಪ್ರಸಾರ ಮಾಡಿತು. ಅದು ಸಫಲಗೊಂಡಿರುವ ಸಾಧ್ಯತೆಯಿದೆ. ಅಲ್ಪಸಂಖ್ಯಾತವಾಗಿದ್ದರೂ ಅದು ಅಧಿಕಾರದಲ್ಲುಳಿಯಲು ಸಫಲವಾಯಿತು. ಅವರು ಕೆಟ್ಟದಾಗಿಯಾಗಲಿ ಅಥವಾ ಒಳ್ಳೆ ರೀತಿಯಲ್ಲಾಗಲಿ ಮಾಡಿಲ್ಲ. ಅವರು ಉಳಿದಿರುವುದಕ್ಕೆ ಮುಖ್ಯ ಕಾರಣವೆಂದರೆ ಅವರ ಸಂಖ್ಯೆಯಲ್ಲ, ಆದರೆ ಹೊಸ ಚುನಾವಣೆಗಳನ್ನು ಎದುರಿಸಲು ಇತರ ಪಕ್ಷಗಳಿಗಿರುವ ಹೆದರಿಕೆ. ಪ್ರತಿಯೊಬ್ಬ ಸದಸ್ಯನೂ ತನ್ನ ಬಗ್ಗೆ ಯೋಚಿಸುತ್ತಾನೆ ಮತ್ತು ಅವರೆಲ್ಲರೂ ಒಟ್ಟಾಗಿ ಒಂದೇ ರೀತಿಯಲ್ಲಿ

ಯೋಚಿಸುತ್ತಾರೆ. ಮಧ್ಯಂತರ ಚುನಾವಣೆಯ ಬಗ್ಗೆ ನಿಜವಾಗಿ ಶ್ರದ್ಧೆಯಿಂದಿರುವ ಪಕ್ಷ ಬಿಜೆಪಿ ಒಂದೇ. ಮತೀಯ ಹಿಂದೂಗಳಲ್ಲಿ ಪ್ರಸಿದ್ಧವಾಗಿರುವ ಅಪಾಯಕಾರಿ ಪಕ್ಷ ಇದು.

**ಜುಲೈ ೧೫, ೧೯೯೩ ಚಿತ್ರದುರ್ಗ**

ರೆವರೆಂಡ್ ಡಾ. ಎ.ವಿ. ಥಾಮಸರವರ ಸಾವಿನ ಸಂತಾಪ ಸೂಚಿಸುವ ಸಾರ್ವಜನಿಕ ಸಭೆಯಲ್ಲಿ ಭಾಗವಹಿಸದಿದ್ದುದಕ್ಕೆ ವಿಷಾದ ವ್ಯಕ್ತಪಡಿಸುತ್ತೇನೆ. ಕ್ರಿಶ್ಚಿಯನ್ ಚರ್ಚಿನ ರೆವರೆಂಡ್ ಆಗಿದ್ದೂ ಅವರು ಮೊದಲು ಭಾರತೀಯ ಮತ್ತು ನಂತರ ಉಳಿದುದೆಲ್ಲ. ಭಾರತದ ರಾಜಕೀಯ ಆರ್ಥಿಕತೆ, ಸಾಮಾಜಿಕ ಸಮಸ್ಯೆಗಳು ಮತ್ತು ಜಾತ್ಯತೀತತೆ ದೃಷ್ಟಿಯಿಂದ ಅತ್ಯಂತ ಮೌಲ್ಯವುಳ್ಳ ಪತ್ರಿಕೆ 'ವಿಜಿಲ್ ಇಂಡಿಯಾ ಮೂವ್‌ಮೆಂಟ್' ಎಂಬ ಪತ್ರಿಕೆಗೆ ಮುಖ್ಯವಾಗಿ ಇವರು ಜವಾಬ್ದಾರರು. ಭಾರತಕ್ಕೆ ಇದು ನಿಜವಾದ ನಷ್ಟ.

**ಜುಲೈ ೧೯, ೧೯೯೩**

ಮಧು ಲಿಮಯೆಯವರು ಹಿಂದಿಯಲ್ಲಿ ಒಂದು ಪುಸ್ತಕವನ್ನು ಬರೆದಿದ್ದಾರೆ. ಅದನ್ನು ಮುದ್ರಿಸಲಾಗಿದ್ದು ಜುಲೈ ೧೯ರಂದು ಅದನ್ನು ನಾನು ಬಿಡುಗಡೆ ಮಾಡುತ್ತೇನೆ. ಆ ಪುಸ್ತಕವನ್ನು ರಿಜಿಸ್ಟರ್ಡ್ ಪೋಸ್ಟಿನಲ್ಲಿ ಪಡೆದೆ. ಈ ಆಹ್ವಾನವನ್ನು ಒಪ್ಪಿಕೊಳ್ಳಬೇಕೆಂದು ನಿಶ್ಚಯ ಮಾಡಿದೆ.

**ಜುಲೈ ೨೨, ೧೯೯೩ ಚಿತ್ರದುರ್ಗ**

ತಮಿಳುನಾಡು ಮುಖ್ಯಮಂತ್ರಿ ಕುಮಾರಿ ಜಯಲಲಿತಾ ಕೈಗೊಂಡಿದ್ದ ಉಪವಾಸವನ್ನು ಎರಡು ದಿನ ಮತ್ತು ಕೆಲವು ಗಂಟೆಗಳಾದ ಮೇಲೆ ನಿಲ್ಲಿಸಿದರು. ತಮಿಳುನಾಡಿನ ಬೆಳೆಗಳಿಗೆ ಕಾವೇರಿ ನೀರನ್ನು ಪಡೆಯಲು ಮಾಡಿದ ಉಪವಾಸ, ಕೆಆರ್ ಸಾಗರ ಜಲಾಶಯದಲ್ಲಿ ನೀರಿಲ್ಲದೆ ಕರ್ನಾಟಕಕ್ಕೆ ನೀರಿಲ್ಲದಿರುವಾಗ ಆಕೆಯ ಉಪವಾಸ ತಪ್ಪು. ಇಲ್ಲಿಯವರೆಗೆ ಸಾಕಷ್ಟು ಮಳೆ ಆಗಿಲ್ಲ. ತಮಿಳುನಾಡಿನಲ್ಲಿ ಸಿನಿಮಾ ನಟರು ಮತ್ತು ನಟಿಯರನ್ನು ಪೂಜೆ ಮಾಡುತ್ತಾರೆ. ಮಾಜಿ ನಟಿ, ಈಗಿನ ಮುಖ್ಯಮಂತ್ರಿ ತಮ್ಮ ಉಪವಾಸದಿಂದ ಪ್ರಪಂಚವೇ ತಲೆಕೆಳಗಾಗುತ್ತದೆಂದು ಯೋಚಿಸಿದರು. ದುರಹಂಕಾರದ ಹೆಂಗಸು ಆಕೆ.

**ಜುಲೈ ೨೬, ೧೯೯೩ ಚಿತ್ರದುರ್ಗ**

ಮೈಸೂರು ಮತ್ತು ತುಮಕೂರಿನ ಸ್ವಾಮಿಜಿಗಳಿಗೆ ವಾಗ್ದಾನ ಮಾಡಿದಂತೆ ಪ್ರತಿಯೊಬ್ಬರು ೨ ಲಕ್ಷ ರೂ.ಗಳನ್ನು ಕಳುಹಿಸುವಂತೆ ಫೋನು ಮಾಡಿದೆ. ಅವರ ಏಜೆಂಟರನ್ನು ಸಂಪರ್ಕಿಸಿ ಸಮಾಚಾರವನ್ನು ಅವರಿಗೆ ಮುಟ್ಟಿಸಲಾಯಿತು. ಬೇಗನೆ ಸಹಾಯವನ್ನು

ನಿರೀಕ್ಷಿಸುತ್ತಿದ್ದೇನೆ. ಹಾಗಿಲ್ಲದಿದ್ದರೆ ಯಾರನ್ನಾದರೂ ಕಳುಹಿಸಬೇಕು ಅಥವಾ ಅವರಿಗೆ ಬರೆಯಬೇಕು. ಅವರು ತಮ್ಮ ಮಾತು ಉಳಿಸಿಕೊಳ್ಳುತ್ತಾರೆಂದು ನಂಬುತ್ತೇನೆ.

ಲೋಕಸಭೆಯಲ್ಲಿ ಈ ದಿನ ಕುತೂಹಲದಿಂದ ನಿರೀಕ್ಷಿಸುತ್ತಿದ್ದ ಅವಿಶ್ವಾಸ ನಿರ್ಣಯಗಳು ಪ್ರಾರಂಭವಾಗಿವೆ ಮತ್ತು ಮಂಡಿಸಿದವರ ಮತ್ತು ಅವರ ಬೆಂಬಲಿಗರ ಭಾಷಣಗಳು ಕುತೂಹಲಕರವಾಗಿದ್ದಿತು. ನರಸಿಂಹರಾವ್ ಸರಕಾರದ ವಿರುದ್ಧ ಮಾಡಿರುವ ಆರೋಪಗಳು ಗಣನೀಯವಾಗಿ ನಿಜ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಆಪಾದಿತರ ಬಗ್ಗೆ ಏನು ? ನನ್ನ ಪ್ರಕಾರ ಅವರು ಇನ್ನೂ ಹಾಳು. ಅವರು ಒಗ್ಗಟ್ಟಾಗಿದ್ದಾರೆಯೆ ? ಆದ್ದರಿಂದ ಬೇರೆ ಯಾವುದಾದರು ವಿಷಯ ಅಥವಾ ಸಾಮಾನ್ಯವಾಗಿರುವ ನೀತಿಗಳು ಇರಬಹುದು.

**ಆಗಸ್ಟ್ ೮, ೧೯೯೩ ದೆಹಲಿ**

ಪ್ರೊ. ಸೋಂದಿ ಮತ್ತು ಅವರ ಹೆಂಡತಿ ಮತ್ತು ಅವರ ಮಗ ವಿವೇಕ್ ೨-೩೦ಕ್ಕೆ ಬಂದರು. ನಾವು ಅಶೋಕ ಹೋಟೆಲ್‌ಗೆ ಹೋಗಿ ೬ನೇ ಮಹಡಿಯಲ್ಲಿರುವ ದಲಾಯಿಲಾಮಾರ ಕೊಠಡಿಯಲ್ಲಿ ಅವರನ್ನು ಕಂಡು ಟಿಬೆಟಿನ ಸಮಸ್ಯೆ ಮತ್ತು ಭಾರತವು ಅದರ ಬಿಡುಗಡೆಯಲ್ಲಿ ಅಗತ್ಯವಾದ ಆಸಕ್ತಿಯನ್ನು ತೋರಿಸುವುದು, ಏಕೆಂದರೆ ಅವರು ನೆರೆ ರಾಷ್ಟ್ರವಾಗಿರುವುದು ಮಾತ್ರವಲ್ಲದೆ, ಭಾರತದ ಒಂದು ಭಾಗದ ರೀತಿಯಲ್ಲಿ ಸಾಂಸ್ಕೃತಿಕವಾಗಿ ಪ್ರಭಾವಗೊಂಡಿದೆ. ಸಮ್ಮೇಳನದಲ್ಲಿ ನಾನು ಅಧ್ಯಕ್ಷನಾಗುತ್ತೇನೆಂದು ಅವರಿಗೆ ಗೊತ್ತು, ಅದರ ಬಗ್ಗೆ ಅವರಿಗೆ ಸಂತೋಷವಾಗಿದೆ. ನನ್ನನ್ನು ಅಪ್ಪಿಕೊಂಡು ನಮ್ಮ ತಲೆಗಳ ಮೇಲೆ ಕೈಯಿಟ್ಟು ಬಹಳ ಪ್ರೀತಿಯಿಂದ ಬೀಳ್ಕೊಟ್ಟರು. ಟಿಬೆಟ್ ಬಗ್ಗೆ ನೆಹ್ರೂರಿಗೆ ಸರ್ದಾರರು ಬರೆದ ಕಾಗದ ಸುಮಾರು ೨೦೦ ಪ್ರತಿಗಳು ನನ್ನಲ್ಲಿದೆ. ನಾಳೆ ಅವನ್ನು ಡಾ. ಚೋಪ್ರಾ ತರುತ್ತಿದ್ದಾರೆ.

**ಆಗಸ್ಟ್ ೧೧, ೧೯೯೩ ದೆಹಲಿ**

ಜಾಫರ್ ಷರೀಫ್ ಬಂದು ನನ್ನನ್ನು ಪ್ರಧಾನಿಯ ಕಾರಿನಲ್ಲಿ ೭, ರೇಸ್‌ಕೋರ್ಸ್ ರೋಡ್‌ನಲ್ಲಿನ ಅವರ ಮನೆಗೆ ಕರೆದುಕೊಂಡು ಹೋದರು. ನಾನು ಅವರೊಟ್ಟಿಗೆ ಅರ್ಧ ಗಂಟೆಗಿಂತ ಜಾಸ್ತಿ ಇದ್ದೆ. ಶರೀಫ್ ಕೂಡ ಇದ್ದರು. ಮೂಲ ಸಮಸ್ಯೆಗಳು ಹೇಗೆ ತಿರಸ್ಕರಿಸಲ್ಪಟ್ಟಿವೆ ಅದರಲ್ಲಿಯೂ ವಿಶೇಷವಾಗಿ ರಾಜ್ಯನೀತಿಯ ನಿರ್ದೇಶಕ ತತ್ವಗಳು ಅಲ್ಲದೆ ಶಿಕ್ಷಣ, ಕೃಷಿ, ಗೃಹಕೈಗಾರಿಕೆಗಳು, ಅಧಿಕಾರ ಮತ್ತು ಸಂಪತ್ತಿನ ಕ್ರೋಢೀಕರಣವಾಗಿರುವುದು. ಖಾದಿ-ಗಾಣದ ಎಣ್ಣೆಗಳಿಗೆ ಮೀಸಲಾತಿಗೆ ಒತ್ತಾಯಿಸಿದೆ. ಚರ್ಮ ತಯಾರಕರು ಮುಂತಾದವರಿಗೂ ಮೀಸಲಿಡಬೇಕು. ತಾವು ಉದ್ದೇಶ ಪೂರ್ವಕವಾಗಿ ತಮ್ಮನ್ನೇ ಖಾದಿಯ ಅಧ್ಯಕ್ಷರನ್ನಾಗಿ ನೇಮಕ ಮಾಡಿಕೊಂಡು

ಅಗತ್ಯವಾದುದನ್ನು ಮಾಡುತ್ತೇನೆಂದರು. ಮುಂದಿನ ತಿಂಗಳ ಮೊದಲನೆ ವಾರದಲ್ಲಿ ಚೀನಾಕ್ಕೆ ಭೇಟಿ ಕೊಟ್ಟಾಗ ಟಿಬೆಟ್ಟಿನ ಸಮಸ್ಯೆಯನ್ನು ಪರಿಹರಿಸುವ ಅಗತ್ಯತೆಯನ್ನು ಚೀನಾ ಸರಕಾರಕ್ಕೆ ಎತ್ತಿಹೇಳಬೇಕೆಂದೂ ಹೇಳಿದೆ. ನೆನ್ನೆಯ ಸಮಾರಂಭದ ಬಗ್ಗೆಯೂ ಹೇಳಿದೆ. ಭಕ್ತಿಯಿಂದ ಹೈದರಾಬಾದ್ ರಾಜ್ಯ ಕಾಂಗ್ರೆಸ್‌ನಲ್ಲಿ ಅವರು ಕಾರ್ಯದರ್ಶಿಯಾಗಿದ್ದಾಗ ಸ್ವಾಮಿ ರಮಾನಂದ ತೀರ್ಥರ ಬಗ್ಗೆ ಹೇಳಿದರು. ರೈಲ್ವೆ ಮಂತ್ರಿ ಜಾಫರ್ ಷರೀಫರು ಒಳ್ಳೆಯ ಕೆಲಸ ಮಾಡುತ್ತಿರುವುದರಿಂದ ಬ್ರಾಡ್‌ಗೇಜ್‌ಗೆ ಪರಿವರ್ತನೆಗೆ ಎಲ್ಲಾ ಸಹಾಯ ಮಾಡಬೇಕೆಂದು ಹೇಳಿದೆ.

**ಆಗಸ್ಟ್ ೨೭, ೧೯೯೩ ಚಿತ್ರದುರ್ಗ**

ನೆನ್ನೆ ದಿನ ಕಾಂಗ್ರೆಸ್ ಪಕ್ಷದ ಸಭೆಯಲ್ಲಿ ಕಾಂಗ್ರೆಸ್ (ಐ) ಪಕ್ಷದ ಶಾಸಕಾಂಗದ ಸದಸ್ಯರಲ್ಲಿ ಕುರ್ಚಿಗಳು, ಪೇಪರ್ ವೈಟ್‌ಗಳು ಮುಂತಾದವುಗಳಿಂದ ಜಗಳವಾದದ್ದು ಪೇಪರುಗಳಲ್ಲಿ ತುಂಬಿಹೋಗಿವೆ. ಕರ್ನಾಟಕದಲ್ಲಿ ಇದು ಆಗಿರುವುದು ಇದೇ ಮೊದಲು. ಅಂತಹ ಅಸಂತೋಷ ಒರಟು ಪ್ರದರ್ಶನಗಳು ಹೆಚ್ಚು ಕಡಿಮೆ ಎಲ್ಲಾ ರಾಜ್ಯಗಳಲ್ಲಿ ಸಾಮಾನ್ಯ. ಎಲ್ಲ ಕಡೆಯಲ್ಲಿಯೂ ಗುಣಮಟ್ಟವು ಅಷ್ಟು ಕೆಳಮಟ್ಟದಲ್ಲಿದೆ. ಅಧಿಕಾರದಲ್ಲಿರುವವರನ್ನು ಹೊರಕ್ಕೆ ಓಡಿಸುವುದರಲ್ಲಿ ಪಕ್ಷಗಳು ಹೆಚ್ಚು ಆಸಕ್ತಿವಹಿಸಿ ಆನಂತರ ಅವರು ಅಧಿಕಾರಕ್ಕೆ ಬರುವುದು ಜನರಿಗೆ ಸೇವೆ ಮಾಡುವುದಕ್ಕಲ್ಲ ತಮಗೆ ತಾವೇ ಸಹಾಯ ಮಾಡಿಕೊಳ್ಳುವುದಕ್ಕೆ. ಇದು ವ್ಯಸನಕರ.

**ಸೆಪ್ಟಂಬರ್ ೩೦, ೧೯೯೩ ಚಿತ್ರದುರ್ಗ**

ಬೆಳಗಾಂ, ಧಾರವಾಡ, ಬಿಜಾಪುರವನ್ನು ಒಳಗೊಂಡಂತೆ ಕರ್ನಾಟಕದಲ್ಲಿ ಮತ್ತು ಮಹಾರಾಷ್ಟ್ರದಲ್ಲಿ ನೆನ್ನೆ ದಿನ ಭೂಕಂಪವಾಗಿದ್ದು ದಿಗ್ಭ್ರಮೆಗೊಳಿಸುವ ಸಮಾಚಾರ. ದಕ್ಷಿಣ ಭಾರತವು ಅದರಿಂದ ತೊಂದರೆಗೊಳಗಾಗಿಲ್ಲ. ಏಕೆಂದರೆ ಅದು ದೊಡ್ಡ ಬಂಡೆಯ ಮೇಲಿರುವುದರಿಂದ ಅದಕ್ಕೆ ತೊಂದರೆಯಾಗುವುದಿಲ್ಲ ಎಂದು ಸಾಮಾನ್ಯವಾಗಿ ನಾವು ನಂಬಿದ್ದೆವು. ಗಣನೀಯವಾಗಿ ಆಸ್ತಿ ನಷ್ಟ ಮತ್ತು ಸ್ವಲ್ಪ ಜೀವಹಾನಿ ಎರಡೂ ಆಗಿದೆ. ಆದರೆ ತುಂಬಾ ಹೆಚ್ಚಾಗಿ ತೊಂದರೆಗೊಳಗಾದ ರಾಜ್ಯ ಮಹಾರಾಷ್ಟ್ರ. ಅಲ್ಲಿ ೧೦೦೦೦ಕ್ಕೂ ಹೆಚ್ಚು ಜನ ಮಡಿದು ತಂಬಾ ಜನಕ್ಕೆ ಗಾಯಗಳಾಗಿ ತುಂಬಾ ಆಸ್ತಿ ನಷ್ಟವಾಗಿದೆ. ಹೋಲಿಸಿದರೆ ಕರ್ನಾಟಕ, ಗುಜರಾತ್, ಆಂಧ್ರ ಮತ್ತು ತಮಿಳುನಾಡಿನಲ್ಲಿ ಕಡಿಮೆ ಆಗಿದೆ. ತೊಂದರೆಗೊಳಗಾದವರಿಗೆ ಉಪಶಮನಗೊಳಿಸಲು ತಕ್ಷಣದ ಕ್ರಮಗಳನ್ನು ಕೈಗೊಳ್ಳಲಾಗಿದೆ.

**ಅಕ್ಟೋಬರ್ ೧, ೧೯೯೩** **ಚಿತ್ರದುರ್ಗ**

ನೆನ್ನೆಯ ಭೂಕಂಪದ ದುರಂತವು ಹೆಚ್ಚು ಹೆಚ್ಚು ಭೀಕರವಾಗುತ್ತಿದೆ. ಸಾವು ೨೦ ಸಾವಿರಕ್ಕೂ ಹೆಚ್ಚಾಗಿದೆ. ಹೆಚ್ಚಿನ ಹಳ್ಳಿಗಳು ಮತ್ತು ಪಟ್ಟಣಗಳಲ್ಲಿ ಮನೆಗಳು ನೆಲಸಮವಾಗಿರುವುದರಿಂದ ಸಂಖ್ಯೆಯು ಇನ್ನೂ ಹೆಚ್ಚಾಗಿರುವ ಸಾಧ್ಯತೆಯಿದೆ. ಪಾಶ್ಚಿಮಾತ್ಯ ದೇಶಗಳು ಸಹಾನುಭೂತಿಯನ್ನು ವ್ಯಕ್ತಪಡಿಸುವುದು ಮಾತ್ರವಲ್ಲದೆ ಅವರಿಂದ ಸಹಾಯವೂ ಬರುತ್ತದೆ ಎಂಬುದು ಸಮಾಧಾನ. ಅನೇಕ ವರ್ಷಗಳಿಂದ ಹೀಗೆ ಆಗಿರಲಿಲ್ಲ.

**ಅಕ್ಟೋಬರ್ ೨, ೧೯೯೩** **ಚಿತ್ರದುರ್ಗ**

ಇಂದು ಗಾಂಧೀಜಿಯ ೧೨೪ನೇ ಹುಟ್ಟಿದ ದಿನ. ಎಷ್ಟು ಜನ ಅವರನ್ನು ಜ್ಞಾಪಿಸಿಕೊಳ್ಳುತ್ತಾರೆ. ಅನೇಕರಿರಬಹುದು. ಆದರೆ ಯಾವ ಸರಕಾರ ಮತ್ತು ಮಂತ್ರಿಗಳು ಅವರನ್ನು ಜ್ಞಾಪಿಸಿಕೊಳ್ಳುತ್ತಾರೆ. ಕೆಲವರೇ. ಇನ್ನೂ ಕಡಿಮೆ ಜನ ಅವರನ್ನು ಅನುಸರಿಸುತ್ತಾರೆ. ಅವರ ಅಭಿಪ್ರಾಯ ಮತ್ತು ಅವರ ರಚನಾತ್ಮಕ ಕಾರ್ಯಕ್ರಮಗಳನ್ನು ಒಪ್ಪಿಕೊಳ್ಳುವುದು ಬೇರೆಯ ಮಾತು.

**ಡಿಸೆಂಬರ್ ೧೭, ೧೯೯೩** **ಚಿತ್ರದುರ್ಗ-ಬೆಂಗಳೂರು**

ದಯಾನಂದಸ್ವಾಮಿ, ಗಾಂಧಿ ತತ್ವಗಳಿಗೆ ಸಮರ್ಪಿಸಿಕೊಂಡಿರುವವರು ಮತ್ತು ವಿನೋಬಾ ಭಾವೆಯವರ ಕಟ್ಟಾ ಅನುಯಾಯಿಯಾದ ರಾಮಕೃಷ್ಣ ಹೆಗಡೆ ಅಕ್ಕ ಮಹಾದೇವಿ ತಾಯಿ ಮತ್ತು ಇನ್ನಿತರ ೨-೩ ಜೈನರು ಹೈದರಾಬಾದಿನ ಸಮೀಪ ಹೊಸದಾಗಿ ಕಟ್ಟಿ ಪ್ರಾರಂಭಿಸಿರುವ ಕಸಾಯಿ ಮನೆ ಸಂದರ್ಭದಲ್ಲಿ ನನ್ನನ್ನು ಭೇಟಿ ಮಾಡಿ ಅದರ ಬಗ್ಗೆ ಪ್ರತಿಭಟಿಸಿ, ಸ್ವಾತಂತ್ರ್ಯ ಹೋರಾಟಗಾರರ ಸಮ್ಮೇಳನದಲ್ಲಿ ನಾಳೆ ಸಾಯಂಕಾಲ ನಾನು ಅಧ್ಯಕ್ಷತೆ ವಹಿಸುತ್ತಿದ್ದು ಪ್ರಧಾನಿ ನರಸಿಂಹರಾವ್ ನಾಳೆ ಭಾಷಣ ಮಾಡುವ ಸಮಯದಲ್ಲಿ ಪ್ರತಿಭಟನೆಯ ಪತ್ರವನ್ನು ತಾಯಿಯವರು ಸಲ್ಲಿಸಲು ಸಹಾಯ ಮಾಡಬೇಕೆಂದರು. ಇನ್ನೂ ಸ್ವಲ್ಪ ಜನ ಬಂದು ನನ್ನನ್ನು ವಿಚಾರಿಸಿಕೊಂಡು ಹೋದರು.

**ಡಿಸೆಂಬರ್ ೧೮, ೧೯೯೩** **ಬೆಂಗಳೂರು**

ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರರ ಸಮ್ಮೇಳನವು ಚೆನ್ನಾಗಿ ನಡೆಯಿತು. ಸುಮಾರು ೨೦೦೦ ಜನ ಸೇರಿದ್ದು ಗಾಂಧೀ ಟೋಪಿಯ ಪ್ರವಾಹದಂತಿತ್ತು. ಸುಮಾರು ೬೦ ನಿಮಿಷಗಳ ಕಾಲ ಅವರನ್ನುದ್ದೇಶಿಸಿ ಮಾತನಾಡಿ ಅವರಿಗೆ ಪ್ರಸಕ್ತ ಅಸಂತೋಷ ಸ್ಥಿತಿಯ ಬಗೆ ಹೋರಾಡುವ ಅಗತ್ಯ, ಅದು ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ತುಂಬಿಕೊಂಡಿದ್ದ ಚೈತನ್ಯದ ರೀತಿಯಲ್ಲಿರಬೇಕು, ಒಂದು ಚಳವಳಿಯನ್ನು ವ್ಯವಸ್ಥೆಗೊಳಿಸಬೇಕು ಮತ್ತು ಅದಕ್ಕಾಗಿ ಒಂದು ತಿಂಗಳ ಪೆನ್ಷನ್‌ಅನ್ನು ವಂತಿಗೆಯಾಗಿ ನೀಡಬೇಕು ಎಂದು ಹೇಳಿದೆ. ಅದಕ್ಕೆ ಅವರು ಒಪ್ಪಿಕೊಂಡು ಇತರ ವಿಷಯಗಳ ಜೊತೆಯಲ್ಲಿ ಈ ಠರಾವುಗಳನ್ನು

ಅನುಮೋದಿಸಲಾಯಿತು. ಹಣಕಾಸು ಅಧ್ಯಕ್ಷ ಕೆ.ಸಿ. ಪಂತ್ ಕೂಡ ಸಭಿಕರನ್ನುದ್ದೇಶಿಸಿ ಮಾತನಾಡಿದರು. ೮-೩೦ಕ್ಕೆ ಗಾಂಧೀಜಿ ಪ್ರತಿಮೆ ಹತ್ತಿರ ಹೋಗಿ ಅದರ ಮುಂದೆ ತಾವು ಗಾಂಧಿ ತತ್ವಗಳಿಗನುಸಾರವಾಗಿ ದೇಶಕ್ಕೆ ಸೇವೆ ಮಾಡುತ್ತೇವೆಂಬ ಪ್ರಮಾಣವಚನವನ್ನು ಅವರೆಲ್ಲಾ ತೆಗೆದುಕೊಂಡರು. ಸಾಯಂಕಾಲ ಪ್ರಧಾನಿಯವರ ಭಾಷಣದಿಂದಾಗಿ, ಸಭೆಯ ಸ್ಥಳವನ್ನು ವಿಧಾನಸೌಧ ಸೆಂಟ್ರಲ್ ಹಾಲ್‌ಗೆ ಬದಲಾಯಿಸಲಾಯಿತು. ಎಲ್ಲಾ ಸ್ವಾತಂತ್ರ್ಯ ಹೋರಾಟಗಾರರು ಹಾಜರಿದ್ದರು. ನಾನು ಅಧ್ಯಕ್ಷತೆ ವಹಿಸಿದ್ದೆ. ಪ್ರಧಾನಿ ಮತ್ತು ಕೆ.ಸಿ. ಪಂತ್ ಮತ್ತು ಶೀಲಭದ್ರಯೋಗಿ ಭಾಷಣ ಮಾಡಿದರು. ಅವರ ಬೇಡಿಕೆಗಳನ್ನು ಸಹಾನುಭೂತಿಯಿಂದ ಪರಿಶೀಲಿಸುವುದಾಗಿ ಪ್ರಧಾನಿ ಭರವಸೆ ನೀಡಿದರು. ಅವರು ೨೦ ನಿಮಿಷ ಮಾತನಾಡಿದರು. ಕೆ.ಸಿ. ಪಂತ್ ಕೂಡ ಮಾತನಾಡಿದರು. ನನ್ನ ಅನುಮತಿಯನ್ನು ಪಡೆದು ಪ್ರಧಾನಿ ಹೋದರು. ಅದಾದ ಮೇಲೆ ಕೆಲವು ಸ್ವಾತಂತ್ರ್ಯ ಹೋರಾಟಗಾರರಿಗೆ ಬಹುಮಾನ ನೀಡಲಾಯಿತು. ಅದು ಒಳ್ಳೆಯ ಸಮಾರಂಭವಾಗಿದ್ದು ನನಗೆ ಸಂತೋಷವುಂಟುಮಾಡಿತು.

**ಡಿಸೆಂಬರ್ ೨೦, ೧೯೯೩ ಬೆಂಗಳೂರು**

ಪತ್ರಿಕಾಗೋಷ್ಠಿಯನ್ನು ನಡೆಸಿದೆ. ಜನ ತುಂಬಿದ್ದರು. ಎಲ್ಲಾ ಮಟ್ಟಗಳಲ್ಲಿ ಪಂಚಾಯಿತ್‌ಗಳಲ್ಲಿ ರಾಜಕೀಯ ಪಕ್ಷಗಳು ಭಾಗವಹಿಸುವುದರ ಬಗ್ಗೆ ಮಾತನಾಡಿದೆ. ಅವರು ಖಂಡಿತವಾಗಿ ಈ ಎಲ್ಲಾ ಚುನಾವಣೆಗಳಿಂದ ತಪ್ಪಿಸಿಕೊಳ್ಳಬೇಕು ಮತ್ತು ಹಳ್ಳಿಗಳನ್ನು ಒಡೆಯುವುದನ್ನು ತಪ್ಪಿಸಬೇಕು. ಅವುಗಳನ್ನು ತಪ್ಪಿಸುವಂತೆ ರಾಜಕೀಯ ಪಕ್ಷಗಳಿಗೆ ಬಲವಾಗಿ ಮನವಿ ಮಾಡಿದೆ. ಹೆಚ್ಚಿನ ಜನರ ಜೀವನ ಮಟ್ಟದಲ್ಲಿ ಕುಸಿತ, ಭ್ರಷ್ಟಾಚಾರ, ಅದಕ್ಷತೆ ಮುಂತಾದವು ಉಂಟಾಗಿರುವುದಕ್ಕೆ ಸರಕಾರವು ರಾಜ್ಯನೀತಿಯ ನಿರ್ದೇಶಕ ತತ್ವಗಳ ಉಪೇಕ್ಷೆ, ತಿರಸ್ಕಾರ ಮತ್ತು ಅವಹೇಳನದಿಂದ ಕೂಡ ನೋಡುತ್ತದೆ ಎಂಬುದರ ಬಗ್ಗೆ ಮಾತಾಡಿದೆ. ೨೫ ವರ್ಷಗಳಿಗೂ ಹೆಚ್ಚಿನ ಕಾಲದಿಂದ ಇದೇ ನನ್ನ ಮುಖ್ಯ ವಿಷಯವಾಗಿದೆ. ನಂತರ ರಾಜಕೀಯ ಸಂತ್ರಸ್ತರ ಸಮ್ಮೇಳನದ ಮುಖ್ಯ ಠರಾವಾದ ಒಗ್ಗೂಡಿ ಕೆಲಸ ಮಾಡಿ ಪ್ರಸಕ್ತ ಪರಿಸ್ಥಿತಿಯ ಬಗ್ಗೆ ಹೋರಾಡುವುದು ಮತ್ತು ಒಂದು ತಿಂಗಳ ಪೆನ್ಷನ್ ವಂತಿಗೆ ನೀಡಿ ನಿಧಿಯನ್ನು ರಚಿಸುವುದನ್ನು ಅಂಗೀಕರಿಸಲಾಯಿತು. ಲೋಕಸಭಾ ಪಕ್ಷದ ನಾಯಕನೊಬ್ಬನಲ್ಲಿ ಹೋದೆ. ಅವರು ಈಗ ಬಾಟಾದ ಏಜೆಂಟ್ ಆಗಿದ್ದಾರೆ. ಅವರು ಪ್ರಸ್ತುತ ಪರಿಸ್ಥಿತಿಯ ಬಗ್ಗೆ ತುಂಬಾ ಮಾಹಿತಿಯನ್ನು ನೀಡಿ ಒಬ್ಬರ ಕೆಟ್ಟ ನಡತೆಯ ಬಗ್ಗೆ ಒಂದು ಟಿಪ್ಪಣಿಯನ್ನು ಕೊಟ್ಟರು.

**ಡಿಸೆಂಬರ್ ೨೧, ೧೯೯೩ ಬೆಂಗಳೂರು-ಮೈಸೂರು**

ವೀರಭದ್ರಯ್ಯನ ಕೋರಿಕೆಯ ಮೇರೆಗೆ ಅವರ ಮನೆಗೆ ಹೋಗಿ ನನ್ನ ಮಾಮೂಲು ಊಟ ಮಾಡಿದೆ. ಬಡ ಲಿಂಗಾಯಿತ ವಿದ್ಯಾರ್ಥಿಗಳಿಗೆ ೧೯೦೨ರಲ್ಲಿ ತೋಟದಪ್ಪ

ಚಾರಿಟೀಸ್ ಅನ್ನು ಸ್ಥಾಪಿಸಿದ ದಿವಂಗತ ರಾವ್ ಬಹದ್ದೂರ್ ತೋಟದಪ್ಪನವರ ವಂಶಜೆಯಾದ ಆತನ ಹೆಂಡತಿ ನನ್ನ ಬಗ್ಗೆ ತುಂಬಾ ದಯೆಯಿಂದಿದ್ದರು. ನಾವು ಅವರ ಪ್ರಸಿದ್ಧಿ ಮತ್ತು ಅವರ ಸಂಬಂಧಿಗಳ ಬಗ್ಗೆ ಮಾತಾಡಿದೆವು. ನಾನು ಈ ಛತ್ರದಲ್ಲಿ ೪ ವರ್ಷಗಳು ಅಂದರೆ ೧೯೨೦-೧೯೨೩ರವರೆಗೆ ವಿದ್ಯಾರ್ಥಿಯಾಗಿದ್ದೆ. ಆಕೆಯ ತಂದೆ ಚೆನ್ನಸೋಮಣ್ಣ ತೋಟದಪ್ಪನವರ ದತ್ತುಪುತ್ರನ ಮಗ. ಆಕೆ ಅನೇಕ ವಿವರಗಳನ್ನು ನೀಡಿದರು ಮತ್ತು ಹಾಗೆ ಹೇಳುವಾಗ ಜಂಭವಿತ್ತು. ಅವರ ಜೀವನದ ಅನೇಕ ಘಟನೆಗಳನ್ನು ಜ್ಞಾಪಿಸಿಕೊಂಡೆವು. ವೀರಭದ್ರಯ್ಯನವರು ಬೆಂಗಳೂರು ರೈಲ್ವೆ ಸ್ಟೇಷನ್ ಬಳಿ ಇರುವ ಹಳೆಯ ಕಟ್ಟಡದಲ್ಲಿರುವ ಹಾಸ್ಟೆಲ್‌ಅನ್ನು ನಿರ್ವಹಿಸುತ್ತಿದ್ದಾರೆ. ಗುಬ್ಬಿ ಮತ್ತು ಇತರ ೩-೪ ಸ್ಥಳಗಳಲ್ಲಿ ಅನೇಕ ಪುಕ್ಕಟ್ಟೆ ಹಾಸ್ಟೆಲುಗಳನ್ನು ಕಟ್ಟಿಸಿದ್ದಾರೆ. ಅವರು ಹೆಚ್‌ಹೆಚ್ ಶಿವರಾತ್ರಿ ಜಗದ್ಗುರು ಸಂಸ್ಥೆಗಳನ್ನು ನಿರ್ವಹಿಸುತ್ತಿದ್ದಾರೆ. ಸಮರ್ಥ ಮನುಷ್ಯ. ಒಳ್ಳೆ ನಿದ್ದೆ ಬಂತು. ಸುಖವಾದ ಅತಿಥಿಗೃಹ.

**ಡಿಸೆಂಬರ್ ೩೧, ೧೯೯೩ ಚಿತ್ರದುರ್ಗ**

೧೯೯೩ರ ಕೊನೆಯ ಮತ್ತು ಅಂತಿಮ ದಿನ ಮುಗಿಯಿತು. ಪ್ರಪಂಚ, ಮಾನವ ಜನಾಂಗ ಈ ವರ್ಷದಲ್ಲಿ ಹಿಂದೆ ಇದ್ದುದಕ್ಕಿಂತ ಉತ್ತಮವಾಗಿದೆಯೆ ? ಖಂಡಿತವಾಗಿ ಇಲ್ಲ. ಯುಎನ್‌ಓ ಇದ್ದರೂ ಅದು ಇನ್ನೂ ಹಾಳು. ಸಾಮಾಜಿಕ ಮತ್ತು ಸಂಬಂಧಿತ ತಿಳುವಳಿಕೆಗೆ ಸಂಬಂಧಪಟ್ಟಂತೆ ಯುಎನ್ ಸಕಾರಾತ್ಮಕವಾಗಿ ಸಾಧಿಸಿರುವುದು ಕಡಿಮೆಯೆ. ಆದರೆ ರಾಜಕೀಯವಾಗಿ ಬಹಳ ತಪ್ಪು ತಿಳುವಳಿಕೆಗಳು, ಸಂದೇಹಗಳು, ಪರಸ್ಪರ ಅಪನಂಬಿಕೆಗಳು ರಾಷ್ಟ್ರಗಳ ನಡುವೆ ಹೆಚ್ಚುತ್ತಿವೆ. ಅಮೆರಿಕಾವು ಇಡೀ ಪ್ರಪಂಚವನ್ನು ತುಳಿದುಹಾಕುವ ಆದೇಶ ನೀಡಲು ಪ್ರಯತ್ನಿಸುತ್ತಿದೆ. ಅದು ಬೇಗನೆ ಪಾಠವನ್ನು ಕಲಿಯುತ್ತದೆ ಎಂದು ನನಗನಿಸುತ್ತದೆ. ಭಾರತವು ರಾಜಕೀಯವಾಗಿ, ಸಾಮಾಜಿಕವಾಗಿ, ನೈತಿಕವಾಗಿ ಅದಕ್ಕಿಂತ ಹೆಚ್ಚಾಗಿ ಆರ್ಥಿಕವಾಗಿ ಕೆಳಗಿಳಿದಿದೆ. ಯಾವುದೇ ರಾಜಕೀಯ ಪಕ್ಷವನ್ನು ನೈತಿಕ ಗುಣಮಟ್ಟಗಳಿಂದ ಪ್ರಚೋದಿಸಿಲ್ಲ. ಕೆಲವೇ ರಾಜಕೀಯ ನಾಯಕರು ನೈತಿಕ ಮೌಲ್ಯಗಳಿಂದ ಪ್ರಚೋದಿಸಲ್ಪಟ್ಟಿದ್ದಾರೆ. ಹೆಚ್ಚಾಗಿ ಉತ್ತರ ಭಾರತದಲ್ಲಿ ಇತ್ತೀಚಿನ ಚುನಾವಣೆಗಳು ಒಂದು ನಿರ್ದೇಶಕ. ಪ್ರತಿಯೊಂದು ವ್ಯಾಪಾರ, ಅನ್ಯೆತಿಕ ವ್ಯಾಪಾರ, ಭಾರತದ ಸಮೀಪದ ಭವಿಷ್ಯವು ಬಹಳ ಕತ್ತಲಾಗಿದೆ. ಪ್ರಪಂಚದ ಮಾನವ ಸಮಾಜಕ್ಕೆ ಅದೇನೂ ಉತ್ತಮವಲ್ಲ, ನಿರಾಶಾದಾಯಕ ಟಿಪ್ಪಣಿಯೊಂದಿಗೆ ಇಂದಿನದನ್ನು ನಾನು ಮುಕ್ತಾಯಗೊಳಿಸುತ್ತೇನೆ.

**ಜನವರಿ ೧, ೧೯೯೪ ಚಿತ್ರದುರ್ಗ**

ಸಂದೇಹ, ದ್ವೇಷ, ಮಾಫಿಯ, ಮೋಸ ಮಾಡುವುದು, ಭ್ರಷ್ಟಾಚಾರ ಇವೆಲ್ಲ ಎಲ್ಲಾ ಕಡೆಯಲ್ಲಿಯೂ ಪ್ರತಿಯೊಂದು ರಾಷ್ಟ್ರದಲ್ಲಿಯೂ ತುಂಬಿಹೋಗಿದೆ. ಒಂದು ರಾಷ್ಟ್ರದ

ವಿರುದ್ಧ ಒಂದು ಅಂತರರಾಷ್ಟ್ರೀಯ ಮತ್ತು ಇನ್ನೊಂದು ರಾಷ್ಟ್ರದೊಳಗಿನದು. ಇಂಡಿಯಾ ದೇಶವು ಅವರ ಜಂಬ ಕೊಚ್ಚಿಕೊಳ್ಳುವ ಭಾಗದಲ್ಲಿ ಬೇರೆ ಯಾವುದರಷ್ಟೆ ಹಾಳು ಅಥವಾ ಇನ್ನೂ ಹೆಚ್ಚು ಹಾಳು. ಮಾನವನ ನೈತಿಕ ಅವನತಿಯಿಂದಾಗಿ ಈಗ ನಾನು ಅತ್ಯಂತ ಅಸಂತೋಷದ ಮನುಷ್ಯ. ವಿಜ್ಞಾನದ ಸಂಶೋಧನೆಯನ್ನು ನಿಯಂತ್ರಣವಿಲ್ಲದ ದುರುಪಯೋಗ ಮತ್ತು ಕಳೆದ ಎರಡು ವಿಶ್ವ ಯುದ್ಧಗಳ ಕಾಲದಲ್ಲಿ ಅದರ ದುರುಪಯೋಗ, ಇವುಗಳಿಂದ ಇಷ್ಟೆಲ್ಲಾ ಆದರೂ ಮನುಷ್ಯನು ಪಾಠ ಕಲಿತಿಲ್ಲ. ಮನುಷ್ಯನ ನೈತಿಕ ಗುಣಮಟ್ಟ, ಮಾನವ ಮೌಲ್ಯಗಳಿಗೆ ಪರಸ್ಪರ ಗೌರವ, ಸಾರ್ವತ್ರಿಕ ಸಮಾನತೆಯನ್ನು ಅನುಭವಿಸುವ ಅಗತ್ಯವನ್ನು ಗುರುತಿಸುವುದು ಮತ್ತು ಗೌರವಿಸುವುದು, ಎಲ್ಲ ರೀತಿಯ ಅಧಿಕಾರವನ್ನು ನಿಯಂತ್ರಿಸುವುದರ ಕಡೆಗೆ ನಾವು ತಿರುಗದಿದ್ದರೆ ಎಲ್ಲವೂ ಕರಾಳವಾಗಿರುತ್ತದೆ. ಈ ಪಾಠವನ್ನು ಕಲಿಯಲು ಅಮೆರಿಕವು ಮೊದಲನೆಯದಾಗಬೇಕು. ಅವರಿಗೆ ಮಿತಿ ಮೀರಿದ ಜಂಭ ಮತ್ತು ಅವರ ಶ್ರೀಮಂತಿಕೆಯಿಂದಾಗಿ ತಾವು ಪ್ರಪಂಚವನ್ನು ಆಳಬೇಕೆಂದು ಭಾವಿಸುತ್ತಾರೆ. ವಿನೀತವಾಗಿರಬೇಕಾದುದು ಅಗತ್ಯ ಎಂಬುದನ್ನು ಅವರು ಆದಷ್ಟು ಬೇಗನೆ ಕಲಿಯುತ್ತಾರೆ.

**ಜನವರಿ ೧೪, ೧೯೯೪ — ಪಾಪು ಹುಟ್ಟಿದ ದಿನ ಹುಬ್ಬಳ್ಳಿ-ಚಿತ್ರದುರ್ಗ**

ಪಾಟೀಲ್ ಪುಟ್ಟಪ್ಪನವರ ೭೬ನೇ ಹುಟ್ಟುಹಬ್ಬವನ್ನು ದೊಡ್ಡದಾಗಿ ಆಚರಿಸಲಾಗುತ್ತದೆ. ಎಂದಿನಂತೆ ಬಂದು ಅವರು ನನ್ನ ಕಾಲು ಮುಟ್ಟಿದರು. ನಮ್ಮ ಜೊತೆಯಲ್ಲಿ ಬೆಳಗಿನ ಉಪಾಹಾರ ಮಾಡಿದರು. ಸಕಾಲಕ್ಕೆ ಪ್ರಾರಂಭವಾದ ಸಮಾರಂಭವು ಅತಿ ದೊಡ್ಡ ಸಮಾರಂಭವಾಗಿತ್ತು. ಗಂಧರ್ವ ಹಾಲ್ ತುಂಬಿದ್ದು ಅದು ಭವ್ಯವಾದ ಸಮಾರಂಭ. ಸಾಕಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಹಾರಗಳು ಮತ್ತು ಬಹುಮಾನಗಳನ್ನು ಅವರಿಗೆ ಮತ್ತು ಅವರ ಹೆಂಡತಿ ಇಂದುಮತಿಗೆ ನೀಡಲಾಯಿತು. ಅನೇಕ ವರ್ಷಗಳಿಂದ ಕನ್ನಡಕ್ಕಾಗಿ ಹೋರಾಟಗಾರನಾಗಿ, ಪತ್ರಕರ್ತನಾಗಿ ಮತ್ತು 'ಪ್ರಪಂಚ' ಕನ್ನಡ ದಿನಪತ್ರಿಕೆಯ ಧೈರ್ಯವಾದ ಸಂಪಾದಕತ್ವ ಮುಂತಾದ ಅವರ ಸೇವೆಗಳನ್ನು ಹೊಗಳುತ್ತಾ ಅನೇಕರು ಮಾತನಾಡಿದರು. ಹುಟ್ಟುಹಬ್ಬ ಆಚರಣೆ ಸಮಿತಿಯಿಂದ ಅರ್ಪಿಸಿದ ಅಭಿನಂದನ ಗ್ರಂಥವನ್ನು ಬಿಡುಗಡೆ ಮಾಡಿದೆ. ಇನ್ನೊಂದು ಪುಟ್ಟಪ್ಪನವರೇ ತಯಾರಿಸಿದುದನ್ನು ಮಂತ್ರಿ ಚಂದ್ರಶೇಖರ್ ಬಿಡುಗಡೆ ಮಾಡಿದರು. ಅವರನ್ನು ಮತ್ತು ಅವರ ಕುಟುಂಬವು ಅನೇಕ ವರ್ಷಗಳಿಂದ ನನಗೆ ಗೊತ್ತಿರುವುದರಿಂದ ಪುಟ್ಟಪ್ಪನವರ ಬಗ್ಗೆ ಅರ್ಧ ಗಂಟೆ ಕಾಲ ಮಾತನಾಡಿದೆ. ನನ್ನ ಅತ್ಯಂತ ಪ್ರೀತಿಯ ವಿಷಯವಾದ ರಾಜ್ಯನೀತಿಯ ನಿರ್ದೇಶಕ ತತ್ವಗಳು ಮತ್ತು ಈಗಿನ ಅಸಂತೋಷ ಪರಿಸ್ಥಿತಿಯ ಬಗ್ಗೆ ಕೂಡ ಮಾತನಾಡಿದೆ.

**ಜನವರಿ ೩೧, ೧೯೯೪** **ದೆಹಲಿ**

ಇಂಟರ್‌ನ್ಯಾಷನಲ್ ಸೆಂಟರ್ ಕಟ್ಟಡಕ್ಕೆ ೧೧ ಗಂಟೆಗೆ ಹೋದೆ. ದೆಹಲಿಯ ಉತ್ತಮ ಜನರನ್ನೊಳಗೊಂಡಿದ್ದು ಸಭಾಂಗಣವು ತುಂಬಿತ್ತು. ಇಂಗ್ಲೆಂಡ್, ಜಪಾನ್, ಜರ್ಮನಿ ಮುಂತಾದ ವಿದೇಶಿ ಪ್ರತಿನಿಧಿಗಳ ಜೊತೆಯಲ್ಲಿ ಕಾರ್ಯದರ್ಶಿಗಳೂ ಸೇರಿದಂತೆ ಸರಕಾರಿ ನೌಕರರೂ ಸೇರಿದ್ದರು. ಪ್ರೊ. ಸೋಂದಿಯವರು ಸ್ವಾಗತಿಸಿದ ಮೇಲೆ ಟಿ.ಎನ್. ಶೇಷನ್ 'ಯಾರೂ ಕಾನೂನಿಗೆ ಮೇಲಿಲ್ಲ' ಎಂಬುದರ ಮೇಲೆ ಅತ್ಯಂತ ಅದ್ಭುತವಾದ ಕುತೂಹಲವಾದ ಭಾಷಣ ಮಾಡಿ ಅದರಲ್ಲಿ ಬಲವಾಗಿ ಪೆಟ್ಟು ಕೊಡುವ ಹಾಸ್ಯ, ಭ್ರಷ್ಟಾಚಾರ, ಚುನಾವಣೆಗಳಲ್ಲಿ ಅಕ್ರಮಗಳು ಮತ್ತು ಅವು ಹೇಗೆ ತಮ್ಮ ನಿಜವಾದ ಉದ್ದೇಶವನ್ನು ಪೂರೈಸಲು ವಿಫಲವಾಗಿದೆ ಎಂದು ಭಾಷಣ ಮಾಡಿದರು. ಅದನ್ನು ಎಲ್ಲರೂ ತುಂಬಾ ಶ್ಲಾಘಿಸಿದರು. ಮುಖ್ಯ ಅತಿಥಿ ಮತ್ತು ಸಭೆಯ ಅಧ್ಯಕ್ಷನಾಗಿ ನಾನು ಶೇಷನ್‌ರನ್ನು ಅಭಿನಂದಿಸಿದೆ. ಹೇಗೆ ಸರಕಾರವು ರಾಜ್ಯನೀತಿಯ ನಿರ್ದೇಶಕ ತತ್ವಗಳನ್ನು ಜಾರಿಗೊಳಿಸಲು ವಿಫಲವಾಗಿದೆ. ಬಡತನ, ಅನಕ್ಷರತೆ, ನಿರುದ್ಯೋಗ, ಅನಾರೋಗ್ಯ, ಅಪೌಷ್ಟಿಕತೆ, ರಾಷ್ಟ್ರೀಯ ಸಮಸ್ಯೆಗಳಿಗೆ ಗಾಂಧಿಯ ರೀತಿಯಲ್ಲದ ಮಾರ್ಗಗಳು ಮುಂತಾದ ದುರದೃಷ್ಟ ಪರಿಣಾಮಗಳ ಬಗ್ಗೆ ಸುಮಾರು ೨೦ ನಿಮಿಷಗಳತನಕ ಮಾತನಾಡಿದುದನ್ನು ಪರವಶರಾದವರಂತೆ ಕೇಳಿದರು. ಶೇಷನ್‌ರನ್ನು ಮನಮೆಚ್ಚಿ ಆಶೀರ್ವದಿಸಿದೆ. ಅನೇಕಾನೇಕ ವರ್ಷಗಳವರೆಗೆ ತಮ್ಮ ದೇಶವನ್ನು ಸಾಮರ್ಥ್ಯ ಮತ್ತು ಬುದ್ಧಿಮತ್ತೆಯಿಂದ ನಿವೃತ್ತಿಯಾದ ಮೇಲೂ ಸೇವೆ ಮಾಡಲಿ ಎಂದು ಹಾರೈಸಿದೆ. ಅವರು ಅದನ್ನು ಇಷ್ಟಪಟ್ಟರು ಮತ್ತು ನನ್ನ ಆಶೀರ್ವಾದಗಳಿಗೆ ವಂದಿಸಿದರು.

**ಫೆಬ್ರವರಿ ೨೮, ೧೯೯೪** **ಚಿತ್ರದುರ್ಗ**

ಅತ್ಯಂತ ಕುತೂಹಲವಾದ ಆಯವ್ಯಯ ಭಾಷಣವನ್ನು ಹಣಕಾಸು ಮಂತ್ರಿ ಮನಮೋಹನ್‌ಸಿಂಗ್‌ರವರು ೧ ೧/೨ ಗಂಟೆಗೂ ಹೆಚ್ಚಿಗೆ ಕಾಲ ಪ್ರಕಟಪಡಿಸಿದರು. ಗ್ರಾಮೀಣ ಅಭಿವೃದ್ಧಿಗೆ ಹೆಚ್ಚಿನ ಗಮನ ಮತ್ತು ಅವಕಾಶ ಮಾಡಿದ್ದರೂ ಅದು ಸಾಕಷ್ಟಿಲ್ಲ ಎಂದು ನನ್ನ ಭಾವನೆ. ಏಕೆಂದರೆ ಸುಮಾರು ಶೇ. ೮೦ರಷ್ಟು ಜನರು ಹಳ್ಳಿಗಳಲ್ಲಿದ್ದಾರೆ ಮತ್ತು ಹೆಚ್ಚಾಗಿ ಕೃಷಿ ಮತ್ತು ಅದಕ್ಕೆ ಸಂಬಂಧಿಸಿದ ಕೈಗಾರಿಕೆಗಳ ಮೇಲೆ ಹೆಚ್ಚಾಗಿ ಅವಲಂಬಿಸಿದ್ದಾರೆ. ಹೆಚ್ಚಿನ ಗಮನ ಮತ್ತು ಅವಕಾಶವನ್ನು ಕೈಗಾರಿಕೆ ಮತ್ತು ರಫ್ತಿಗೆ ನೀಡಲಾಗಿದೆ. ವಿದೇಶಿ ಬ್ಯಾಂಕುಗಳಿಂದ ಹೆಚ್ಚು ಹೆಚ್ಚಿನ ಸಾಲವನ್ನು ಪಡೆದು ನಮ್ಮನ್ನು ದೊಡ್ಡದಾದ ಮತ್ತು ಬಲವಾದ ಸಾಲದ ಬಲೆಯೊಳಗೆ ಬೀಳಿಸುವುದೇ ನಮ್ಮ ಆರ್ಥಿಕ ನೀತಿಯಾಗಿದೆ. ಸ್ವದೇಶಿಯ ಆದರ್ಶವಾದ ನೀತಿ ಸತ್ತಿದೆ ಎಂದು ಸುಲಭವಾಗಿ ಹೇಳಬಹುದು. ನಮ್ಮ ಪ್ರಮುಖ ಕೈಗಾರಿಕೋದ್ಯಮಿಗಳು ಹೆಚ್ಚು ಹೆಚ್ಚಾಗಿ ವಿದೇಶಿ ಬಂಡವಾಳಗಾರರ ಬಲೆಯೊಳಗೆ ಬೀಳುತ್ತಿದ್ದಾರೆ. ನಿಸ್ಸಂದೇಹವಾಗಿ ಹಣಕಾಸು ಮಂತ್ರಿಗಳು

ಸತ್ಯಸಂಧರು. ಆದರೆ ಭಾರತದ ಸ್ಥಿತಿ ಮತ್ತು ಸಮಸ್ಯೆಗಳಿಗೆ ಅವರು ಸಂಪೂರ್ಣವಾಗಿ ವಿದೇಶೀಯರು ಎಂದು ಕಾಣುತ್ತದೆ. ರಾಜಕೀಯ ಪಕ್ಷಗಳ ನಾಯಕರುಗಳಲ್ಲಿ ಕೆಲವೇ ಜನರು ದೇಶದ ಜನರ ಬಡತನ, ನಿರುದ್ಯೋಗ ಮತ್ತು ಕೆಳಮಟ್ಟದ ಜೀವನ ಮುಂತಾದವುಗಳ ಬಗ್ಗೆ ಯೋಚಿಸುತ್ತಾರೆ. ಇದು ವ್ಯಸನಕರ.

**ಮಾರ್ಚ ೮, ೧೯೯೪**

ಅನೇಕ ವರ್ಷಗಳ ನನ್ನ ಸ್ನೇಹಿತನ ಬಗ್ಗೆ ಇವತ್ತು ಅನೇಕ ಸಲ ಜ್ಞಾಪಿಸಿಕೊಂಡೆ. ಅವರೇ ಅಲ್ಲಂ ಕರಿಬಸಪ್ಪ. ನಾನು ಬಳ್ಳಾರಿಗೆ ಭೇಟಿ ಕೊಟ್ಟಾಗ ಅನೇಕ ಸಲ ನಾನು ಬೆಳಗಿನ ಉಪಾಹಾರ ಮತ್ತು ಮಧ್ಯಾಹ್ನದ ಊಟಕ್ಕೆ ಅವರ ಅತಿಥಿಯಾಗುತ್ತಿದ್ದೆ. ಅವರಿಗೆ ಅತಿ ದೊಡ್ಡ ಮನೆ ಮತ್ತು ಅದರಲ್ಲಿ ೧೦ ಮಕ್ಕಳು. ಅವರಲ್ಲಿ ಅರ್ಧದಷ್ಟು ಗಂಡು ಮಕ್ಕಳ ದೊಡ್ಡ ಸಂಸಾರವು ವಾಸವಾಗಿತ್ತು. ಅದಕ್ಕೆ 'ಗಾಡ್ಗಿ ಮನೆ' ಎಂದು ಹೆಸರು. ಅವರ ಹೆಂಡತಿ ಬಹಳ ಕಾಲ ವಿಧಾನಸಭಾ ಸದಸ್ಯರಾಗಿದ್ದು ಕುಟುಂಬವನ್ನು ಪ್ರಸಿದ್ಧಗೊಳಿಸಿದರು. ನಾನು ಕಂಡಿರುವ ಅತ್ಯಂತ ಗೌರವಾನ್ವಿತ ಮಹಿಳೆ. ಜಿಲ್ಲೆಯ ಇಡೀ ಜನರು ಆಕೆಯನ್ನು ಗೌರವಿಸುತ್ತಿದ್ದರು. ಆಕೆ ಯಾವಾಗಲೂ ನನ್ನನ್ನು 'ಅಪ್ಪಯ್ಯ' ಎಂದೇ ಕರೆಯುತ್ತಿದ್ದರು. ಅವರ ಬಗ್ಗೆ ಹೆಚ್ಚಿನ ಗೌರವ ಮತ್ತು ಮರ್ಯಾದೆ ನನಗಿತ್ತು. ೧೦ ವರ್ಷಗಳ ಹಿಂದೆ ಆಕೆ ತೀರಿಕೊಂಡರು.

**ಮಾರ್ಚ ೯, ೧೯೯೪**

ಈ ದಿನ ಬೆಳಿಗ್ಗೆ ಅತ್ಯಂತ ಸುಂದರಿಯಾದ ಮಹಿಳೆ ಮತ್ತು ೩೦-೪೦ ವರ್ಷಗಳ ಹಿಂದೆ ತುಂಬಾ ಪ್ರಸಿದ್ಧವಾದ ನಟಿ ದೇವಿಕಾರಾಣಿ ಬೆಂಗಳೂರಿನಲ್ಲಿ ನಿಧನರಾದರು. ಬೆಂಗಳೂರಿನ ಸಮೀಪ ಆಕೆಗೆ ಒಂದು ಎಸ್ಟೇಟ್ ಇದ್ದು ಅದರಲ್ಲಿ ಬಹಳ ಬೆಲೆ ಬಾಳುವ ಪರಿಮಳವೊಂದನ್ನು ಬೆಳೆಯುತ್ತಿದ್ದು ಅದನ್ನು ಅನೇಕ ವರ್ಷಗಳವರೆಗೆ ಗುಟ್ಟಾಗಿಟ್ಟಿದ್ದರು. ಆಕೆಯ ಗಂಡ ಎರಡನೇ ರೋರಿಚ್. ಈತ ಪ್ರಸಿದ್ಧ ಹಿಮಾಲಯದ ವರ್ಣಚಿತ್ರಕಾರ ರೋರಿಚ್‌ನ ಮಗನಾಗಿದ್ದು ತಾನೇ ಸ್ವತಃ ಪ್ರಸಿದ್ಧ ವರ್ಣಚಿತ್ರಕಾರನಾಗಿದ್ದು ೨-೩ ವರ್ಷಗಳ ಹಿಂದೆ ಮೃತರಾದರು. ಅವರಲ್ಲಿಗೆ ಭೇಟಿ ಕೊಟ್ಟಿದ್ದೆ. ರೋರಿಚ್‌ರ ಪ್ರಸಿದ್ಧ ವರ್ಣಚಿತ್ರಗಳ ಮಧ್ಯೆ ಇರಲು ನನಗೆ ತುಂಬಾ ಸಂತೋಷವಾಗಿತ್ತು. ಆಕೆಯೇ ಸ್ವತಃ ಸೌಂದರ್ಯ ಮತ್ತು ಸಂಸ್ಕೃತಿ ಕಲಾಕಾರ್ತಿ. ಆಕೆಯನ್ನು ಅನೇಕ ಸಲ ಭೇಟಿ ಮಾಡಿದ್ದೆ. ಅದು ಯಾವಾಗಲೂ ಸಂತೋಷದಾಯಕವಾಗಿತ್ತು. ಆಕೆ ತುಂಬಾ ದಯಾಳು. ಆಕೆಯ ಆಸ್ತಿಯ ಬಗೆ ಏನೋ ಸ್ವಲ್ಪ ವಿವಾದವಿರುವಂತೆ ಕಾಣುತ್ತದೆ.

**ಮೇ ೧೦, ೧೯೯೪** **ಚಿತ್ರದುರ್ಗ**

ಇವತ್ತು ನಿಜವಾಗಿ ಒಂದು ಪ್ರಸಿದ್ಧ ದಿನ. ದಕ್ಷಿಣ ಆಫ್ರಿಕಾವು ವರ್ಣನೀತಿಗೆ ಕುಪ್ರಸಿದ್ಧವಾಗಿದ್ದುದು ಈಗ ಸ್ವತಂತ್ರ ದೇಶವಾಗಿದೆ. ಕಪ್ಪು ಮನುಷ್ಯ ನೆಲ್ಸನ್ ಮಂಡೇಲಾ, ಸಮಾನತೆಯ ಮೇಲೆ ಸ್ವಾತಂತ್ರ್ಯಕ್ಕೆ ಹೋರಾಡಿ ಜೈಲಿನಲ್ಲಿ ೨೭ ವರ್ಷಗಳವರೆಗೆ ಇದ್ದರು. ಈಗ ಇವರನ್ನು ದಕ್ಷಿಣ ಆಫ್ರಿಕಾದ ಅಧ್ಯಕ್ಷ ಮತ್ತು ದೇಶದ ಮುಖ್ಯಸ್ಥನನ್ನಾಗಿ ಆರಿಸಲಾಯಿತು. ಅವರು ತಮ್ಮ ಸರಕಾರವನ್ನು ರಚಿಸಿದರು. ಹಾಗೆಯೇ ಅವರ ವರ್ತನೆ ನಿಜವಾಗಿ ಒಳ್ಳೆಯದು. ಅವರ ವಿಶಾಲವಾದ ದೃಷ್ಟಿಕೋನ, ಉದಾರತ್ವ ಮತ್ತು ವಿಶಾಲ ಹೃದಯದ ಸೂಚಕವಾಗಿದ್ದಿತು. ಕೀಳು ಮನೋಭಾವ ಅವರಲ್ಲಿರಲಿಲ್ಲ. ಅವರು ಅನುಭವಿಸಿದ ಎಲ್ಲ ಕೆಟ್ಟುದನ್ನೂ ಮರೆಯುವವರು. ಅವರು ಮಹಾತ್ಮಗಾಂಧಿಯನ್ನು ಸ್ವಾಭಾವಿಕವಾಗಿ ಕೃತಜ್ಞತೆಯಿಂದ ಸ್ಮರಿಸುತ್ತಾರೆ. ದಕ್ಷಿಣ ಆಫ್ರಿಕಾದ ಪ್ರಗತಿ ಮತ್ತು ಅಭಿವೃದ್ಧಿ ಎಲ್ಲಾ ದೇಶದವರಿಗೂ ಮಾದರಿಯ ಪಾಠವಾಗಿರಲಿ ಎಂದು ಆಶಿಸುತ್ತೇನೆ.

**ಜೂನ್ ೨೧, ೧೯೯೪** **ಹುಬ್ಬಳ್ಳಿ**

ಮೊದಲೇ ಒಪ್ಪಿಕೊಂಡಂತೆ ಪಾಟೀಲ್ ಪುಟ್ಟಪ್ಪ ಸ್ವಲ್ಪ ತಡವಾಗಿ ೧೦-೩೦ಕ್ಕೆ ಬಂದರು ಮತ್ತು ೧೨-೩೦ರವರೆಗೆ ಕುಳಿತೆವು. ನನ್ನ ಪ್ರಾರಂಭದ ನನ್ನ ಬಾಲ್ಯ ಮತ್ತು ಅನುಭವಗಳ ಬಗ್ಗೆ ಕೆಲವು ಪ್ರಶ್ನೆಗಳೊಂದಿಗೆ ಪ್ರಾರಂಭಿಸಿದರು. ಅಲ್ಲಿಂದ ಹುಲವಾಗಲುನಿಂದ ದಾವಣಗೆರೆ, ಅಲ್ಲಿಯ ನನ್ನ ಜೀವನ, ೧೨ನೇ ವಯಸ್ಸಿನಲ್ಲಿ ಲೋಯರ್ ಸೆಕೆಂಡರಿಯನ್ನು ಪಾಸು ಮಾಡಿದವರೆಗೆ ನನ್ನ ಅನುಭವಗಳು, ಏಕೆಂದರೆ ಆ ಕಾಲದಲ್ಲಿ ಹಾಗೆ ಎಲ್.ಎಸ್. ಪಾಸು ಮಾಡುವುದು ಅಪರೂಪವಾಗಿದ್ದಿತು. ಚಿತ್ರದುರ್ಗದಲ್ಲಿ ಸಾಹುಕಾರ್ ವೀರಭದ್ರಪ್ಪನವರ ಮನೆಯಲ್ಲಿ ಹಿನ್ನೆಲೆಯಾಗಿ ಅವರ ತಾಯಿಯೊಂದಿಗೆ ವಾಸ್ತವ್ಯ, ಇನ್‌ಫ್ಲುಯೆಂಜಾ; ಎಸ್.ಎಸ್.ಎಲ್.ಸಿ. ಪರೀಕ್ಷೆ ಮತ್ತು ಬೆಂಗಳೂರಿನಲ್ಲಿ ಪ್ರವೇಶ ಪಡೆಯಲು ನನ್ನ ಪ್ರಯತ್ನ, ಯು.ಇ. ಹೈಸ್ಕೂಲ್ ಮತ್ತು ತೋಟದಪ್ಪನವರ ಪುಕ್ಕಟೆ ಹಾಸ್ಟೆಲ್ಲಿನಲ್ಲಿ ನನ್ನ ಜೀವನ, ಕಾಲೇಜಿನಲ್ಲಿ ನನ್ನ ಅನುಭವ, ತಿಲಕರ ದಿನ ಮುಂತಾದವು. ೧೯೨೪ರಲ್ಲಿ ಬಿ.ಎ. ಪಾಸು ಮಾಡಿದ ಮೇಲೆ ಪೂನಾದಲ್ಲಿ ಕಾನೂನು ವ್ಯಾಸಂಗ ಮಾಡುವಾಗಿನ ನನ್ನ ಅನುಭವ.

**ಜೂನ್ ೨೨, ೧೯೯೪** **ಹುಬ್ಬಳ್ಳಿ**

ಪಾಟೀಲ್ ಪುಟ್ಟಪ್ಪ ಮತ್ತೆ ೧೦ ಗಂಟೆಗೆ ಬಂದರು. ೧೨ ಗಂಟೆವರೆಗೆ ಮುಂದುವರಿಯಿತು ಮತ್ತು ಪುನಃ ೬ ರಿಂದ ೭ರವರೆಗೆ ಮುಂದುವರಿದು ಚಿತ್ರದುರ್ಗದಲ್ಲಿ ನನ್ನ ವಕೀಲ ವೃತ್ತಿಯಿಂದ ಪ್ರಾರಂಭಿಸಿ ಅದರಲ್ಲಿ ಕ್ಲಬ್ ಮನುಷ್ಯನಾಗಿ, ವಕೀಲನಾಗಿ ಮತ್ತು ಅದರ

ಕಾರ್ಯದರ್ಶಿಯಾಗಿ ನನ್ನ ಅನುಭವ ಹೇಳಿದೆ. ಕೆಲವು ಕೇಸುಗಳನ್ನು ಹೇಗೆ ನಡೆಸಿದೆ ಮತ್ತು ಕ್ಲಬ್‌ನ ಕಾರ್ಯದರ್ಶಿಯಾಗಿ ಹೇಗೆ ಅಧಿಕಾರಿಗಳನ್ನು ವಿರೋಧಿಸಿದೆ. ಧಾರ್ಷ್ಟ್ಯ ಮತ್ತು ನಿಧಾನವಾಗಿ ಕಾಂಗ್ರೆಸ್ ಚಟುವಟಿಕೆಗಳಲ್ಲಿ ಸೇರಿಕೊಂಡುದು. ನನ್ನ ಡಿಸಿಸಿ ಅಧ್ಯಕ್ಷತೆ, ಅರಣ್ಯ ಸತ್ಯಾಗ್ರಹ, ಅನೇಕ ಹುದ್ದೆಗಳಲ್ಲಿ ಸೇವೆ ಸಲ್ಲಿಸಿದ ಮೇಲೆ ಗಾಂಧೀಜಿಯವರ ಹಿತವಚನ, ಪಿಸಿಸಿ ಕಾರ್ಯದರ್ಶಿಯಾದುದು, ೧೯೩೯ರಲ್ಲಿ ತುರವನೂರಿನಲ್ಲಿ ಅರಣ್ಯ ಸತ್ಯಾಗ್ರಹ ಮತ್ತು ೧೯೪೨ರ ಭಾರತ ಬಿಟ್ಟು ತೊಲಗಿ ಚಳವಳಿಗಾಗಿ ಬಂಧಿಸಲ್ಪಟ್ಟುದು. ಎರಡೂ ಕಾಲದಲ್ಲಿ ಜೈಲಿನಲ್ಲಿ ನನ್ನ ಜೀವನ, ಮೂರನೆಯ ಮೈಸೂರು ಕಾಂಗ್ರೆಸ್ ಅಧಿವೇಶನದಲ್ಲಿ ನನ್ನ ಅಧ್ಯಕ್ಷತೆ. ಅಂತಿಮವಾಗಿ ಕರ್ನಾಟಕ ಪಿಸಿಸಿ ಅಧ್ಯಕ್ಷನಾದುದು ಮತ್ತು ಹುಬ್ಬಳ್ಳಿಯಲ್ಲಿ ಕ್ವಾರ್ಟರ್ಸ್ ಈ ಎಲ್ಲಾ ಅನುಭವಗಳನ್ನು ಜ್ಞಾಪಿಸಿಕೊಳ್ಳುವುದು ಈಗಲೂ ಕಷ್ಟ.

**ಜೂನ್ ೨೪, ೧೯೯೪** **ಹುಬ್ಬಳ್ಳಿ**

ಪುಟ್ಟಪ್ಪ ಬೆಳಿಗ್ಗೆ ಮತ್ತು ಸಾಯಂಕಾಲ ಬಂದು ಸ್ವಲ್ಪ ಟಿಪ್ಪಣಿಗಳನ್ನು ಬರೆದುಕೊಂಡರು. ಅವರಿಗೆ ಬಹಳ ಒಳ್ಳೆಯ ಜ್ಞಾಪಕಶಕ್ತಿ ಇರುವುದರಿಂದ ವಿಷಯದ ಆಳಕ್ಕೆ ಹೋಗಲು ಮತ್ತು ಹಳೆಯ ಘಟನೆಗಳ ಬಗ್ಗೆ ಮಾತಾಡಲು ತುಂಬಾ ಸಮಯ ತೆಗೆದುಕೊಳ್ಳುತ್ತಿದ್ದರು. ನಾವು ಮುಂದುವರಿಯುತ್ತಿದ್ದಂತೆ ಜನ, ಪರಿಸ್ಥಿತಿ ಮತ್ತು ಚಟುವಟಿಕೆಗಳ ಬಗ್ಗೆ ನನ್ನ ಅಭಿಪ್ರಾಯಗಳನ್ನು ಬರೆದುಕೊಂಡು ಅದರ ಜೊತೆಯಲ್ಲಿ ತಮ್ಮ ಅಭಿಪ್ರಾಯಗಳನ್ನು ಸೇರಿಸಿಕೊಳ್ಳುತ್ತಿದ್ದರು.

**ಜೂನ್ ೨೫, ೧೯೯೪** **ಹುಬ್ಬಳ್ಳಿ**

ಪುಟ್ಟಪ್ಪ ಬೆಳಿಗ್ಗೆ ಮತ್ತು ಸಾಯಂಕಾಲ ಬಂದರು. ನನ್ನ ಮುಖ್ಯಮಂತ್ರಿತ್ವದ ಬಗ್ಗೆ ವಿಶೇಷವಾಗಿ ತಿಳಿದುಕೊಳ್ಳಬೇಕೆಂದಿದ್ದರು. ನನ್ನ ಕೆಲಸದ ವಿವರಗಳನ್ನು ನೀಡಿದೆ. ಹಾಗೆಯೇ ಆದ್ಯತೆಯ ಮೇರೆಗೆ ಶರಾವತಿ ಯೋಜನೆಯ ನಿರ್ಮಾಣ, ಪ್ರಮುಖ ನೀರಾವರಿ ಯೋಜನೆಗಳಿಗೆ ಅಸ್ತಿಭಾರ ಹಾಕಿದುದು. ಅವುಗಳು ಯಾವುವೆಂದರೆ ಅಪ್ಪರ್ ಕೃಷ್ಣಾ, ಮಲಪ್ರಭಾ, ಘಟಪ್ರಭಾ, ಹಾರಂಗಿ, ಹೇಮಾವತಿ ಮತ್ತು ಅನೇಕ ಮಧ್ಯಮ ಯೋಜನೆ ಮತ್ತು ಇನ್ನೂ ಹೆಚ್ಚಿನ ಸಣ್ಣ ನೀರಾವರಿ ಯೋಜನೆಗಳಿಂದ ಅರಣ್ಯಗಳ ವಿಸ್ತೀರ್ಣವನ್ನು ಹೆಚ್ಚಿಸುವುದು, ನೀರಾವರಿ, ವಿದ್ಯುತ್ ಮತ್ತು ಅರಣ್ಯಗಳ ಆರ್ಥಿಕ ಬೆಳವಣಿಗೆಗೆ ಪೂರಕ ಸೌಲಭ್ಯಗಳಿಗೆ ನನ್ನ ಅಭಿಪ್ರಾಯ, ಆತುರದಲ್ಲಿ ಮುಖ್ಯಮಂತ್ರಿ ಸ್ಥಾನಕ್ಕೆ ನನ್ನ ರಾಜೀನಾಮೆ, ನಂತರ ಹೊಸದುರ್ಗ ವಿಧಾನಸಭೆ ಚುನಾವಣೆಯಲ್ಲಿ ಸೋಲು ಮುಂತಾದವು. ಕಾಂಗ್ರೆಸ್ ಅಧ್ಯಕ್ಷನಾಗಲು ಬಲವಂತದಿಂದ ಒಪ್ಪಿಗೆ ಹಾಗೂ ಉತ್ತರ ಪ್ರದೇಶ, ಕಾಶ್ಮೀರ ಮತ್ತು ಈಶಾನ್ಯದ ೨-೩ ಸಣ್ಣ ರಾಜ್ಯಗಳನ್ನು ಬಿಟ್ಟು ಅಖಿಲ ಭಾರತ ಪ್ರವಾಸ. ಕೊನೆಯಲ್ಲಿ

ಸರ್ದಾರರು ನನ್ನನ್ನು ಇಷ್ಟಪಟ್ಟಿದ್ದು, ಮತ್ತು ನನ್ನ ಶಿಫಾರಸುಗಳನ್ನು ಅವರು ಒಪ್ಪಿಕೊಳ್ಳುತ್ತಿದ್ದರು. ಹೈದರಾಬಾದ್ ವಿಚಾರಣೆ ಮತ್ತು ಹೈದರಾಬಾದಿನಲ್ಲಿ ಮುಸ್ಲಿಮರ ವಿರುದ್ಧ, ಅದರಲ್ಲಿಯೂ ಹೆಂಗಸರ ಮೇಲೆ ನಡೆದ ಅತ್ಯಾಚಾರ ಆ ಬಗ್ಗೆ ದೂರುಗಳ ಅವರ ಮೇಲೆ ನನ್ನ ವರದಿ ಮತ್ತು ನನ್ನ ವರದಿಯನ್ನು ಕೇಂದ್ರ ಸರಕಾರವು ಒಪ್ಪಿಕೊಂಡುದು ಮತ್ತು ಹೈದರಾಬಾದ್‌ನಲ್ಲಿ ತಾತ್ಕಾಲಿಕ ಸರ್ಕಾರ, ಮುಂತಾದವು.

**ಜೂನ್ ೨೭, ೧೯೯೪ ಹುಬ್ಬಳ್ಳಿ**

ಪುಟ್ಟಪ್ಪ ೧೧ ಗಂಟೆಗೆ ಬಂದು ೧೨-೩೦ರ ವರೆಗೆ ಇದ್ದರು. ಗೋಪಾಲರಾವ್ ವಿಚಾರಣೆ ಸಮಿತಿ, ಎಐಸಿಸಿಯ ಕಾರ್ಯಕಾರಿ ಸಮಿತಿಯ ಕೆಲವು ಘಟನೆಗಳು, ನನ್ನ ಮಂತ್ರಿಮಂಡಲದ ಕೆಲವು ಸದಸ್ಯರು, ಕಾಂಗ್ರೆಸ್ ಅಧ್ಯಕ್ಷತೆಯನ್ನು ಒಪ್ಪಿಕೊಳ್ಳಲು ಬಂದ ಒತ್ತಾಯ, ಮುಂತಾದವುಗಳ ಜೊತೆಗೆ ನಾನು ಮುಖ್ಯಮಂತ್ರಿಯಾಗಿದ್ದಾಗ ಸರಕಾರದ ಕಾರ್ಯದರ್ಶಿಗಳ ಜೊತೆಯಲ್ಲಿ ನನ್ನ ಅನುಭವ ಮುಂತಾದ ಅನೇಕ ವಿಷಯಗಳನ್ನು ಕುರಿತು, ತತ್ಕಾಲಕ್ಕೆ ಸಂದರ್ಶನವನ್ನು ನಿಲ್ಲಿಸಲಾಯಿತು. ಅಗತ್ಯವಾದರೆ ನಾನೇ ಬರೆಯುತ್ತೇನೆಂದು ಅವರಿಗೆ ಹೇಳಿದೆ.

**ಜುಲೈ ೧೪, ೧೯೯೪ ದೆಹಲಿ**

ಆ ಮೂರ್ಖನ ರ್‍ಯಾಲಿಗೆ ೧೦ ಲಕ್ಷ ಜನರು ಸೇರಿದ್ದರೆಂದು ನನಗೆ ಹೇಳಲಾಯಿತು. ನನಗೆ ತಿಳಿಸಿದಂತೆ ಇಂದಿರಾಗಾಂಧಿಯವರ ಕಟ್‌ಔಟ್ ಇರಲಿಲ್ಲ ಮತ್ತು ಕೆಲವೇ ರಾಜೀವ್‌ಗಾಂಧಿಯದು. ತುಂಬಾ ದೊಡ್ಡ ಕಟ್‌ಔಟ್ ನರಸಿಂಹರಾವ್‌ರದು ಇತ್ತೆಂದು ಹೇಳಲಾಗಿದೆ. ಇಂದು ಜಾಹೀರಾತು ಒಂದು ಫ್ಯಾಶನ್ ಆಗಿದೆ. ಸರಕಾರ ಅಂದರೆ ದೊಡ್ಡ ವ್ಯಾಪಾರವಾಗಿದ್ದು ಅದನ್ನು ಪ್ರಚಾರದಿಂದ ಮಾತ್ರ ಉಳಿಸಬಹುದು ಎಂದುಕೊಂಡಿದ್ದಾರೆ. ಪ್ರಧಾನಿಗಳು, ಮುಖ್ಯಮಂತ್ರಿಗಳು ಮತ್ತು ಇತರ ಮಂತ್ರಿಗಳು ಈಗ ಜಾಹೀರಾತುಗಳಿಗೆ ವಸ್ತುಗಳಾಗುತ್ತಾರೆ. ಅವರು ಹಾಗೇ ತಮಗೆ ದೊಡ್ಡ ಪ್ರಮಾಣದಲ್ಲಿ ಪ್ರಚಾರ ಮಾಡಿಕೊಳ್ಳುವುದು ಮತ್ತು ದೇಶಕ್ಕೆ ಮತ್ತು ಜನರಿಗೆ ಏನೂ ಮಾಡದಿರಬಹುದು. ಅವಮಾನ. ಇದರಲ್ಲಿ ಅತಿ ಹಾಳು ಮಾದರಿಯೆಂದರೆ ತಮಿಳುನಾಡಿನ ಮಹಿಳಾ ಮುಖ್ಯಮಂತ್ರಿ.

**ಜುಲೈ ೩೦, ೧೯೯೪ ಚಿತ್ರದುರ್ಗ**

ರಾಣಿ ಕೆಳದಿ ಚನ್ನಮ್ಮಾಜಿಯವರ ಇತಿಹಾಸದ ಮೇಲೆ ಗಾಢವಾದ ಮತ್ತು ವಿಸ್ತಾರವಾದ ಸಂಶೋಧನೆಯನ್ನು ಮಾಡಿರುವ ಕೆಳದಿ ಗುಂಡಾ ಜೋಯಿಸ್ ೭೦ ವರ್ಷಗಳವರೆಗೆ ತಮ್ಮ ಜೀವನವನ್ನೆಲ್ಲಾ ಈ ಸಂಬಂಧವಾದ ಸಂಶೋಧನೆಯಲ್ಲಿ ಕಳೆದವರು. ನೆನ್ನೆ ಸಾಯಂಕಾಲ ಬಂದು ಮತ್ತು ಪುನಃ ಈ ದಿನ ಬೆಳಿಗ್ಗೆ ಬಂದರು. ಅವರು ಮಾಡಿರುವ

ಹೆಚ್ಚಿನ ಕೆಲಸ ಕೇಂದ್ರ ಸರ್ಕಾರದಿಂದ ಮತ್ತು ಎಂಪಿಗಳ ಮತ್ತು ಮಂತ್ರಿಗಳ ಮುಖಾಂತರ ಸಹಾಯ ಪಡೆಯಲು ತಮ್ಮ ಕಾತುರ ಇವುಗಳನ್ನು ವಿವರಿಸುತ್ತಾ ೧ ೧/೨ ಗಂಟೆ ಕಳೆದರು. ಮಂತ್ರಿ ಅರ್ಜುನ್‌ಸಿಂಗ್, ಸ್ಪೀಕರ್ ಶಿವರಾಜ್ ಪಾಟೀಲ್, ರಾಜ್ಯಸಭಾ ಸದಸ್ಯರಾದ ರಾಜಶೇಖರಮೂರ್ತಿ ಹಾಗೂ ಹನುಮಂತಪ್ಪ ಅವರಿಗೆ ಸಹಾಯ ಮಾಡುವಂತೆ ಪತ್ರಗಳನ್ನು ಅವರಿಗೆ ಕೊಟ್ಟೆ. ಕೆಲವು ಸಂಪುಟಗಳಿಗೆ ಬೇಕಾಗುವಷ್ಟು ವಿಷಯ ಅವರಲ್ಲಿದೆಯೆಂದೆನಿಸುತ್ತದೆ. ಕೆಳದಿ ಸಂತತಿಯ ಇತಿಹಾಸವು ಪ್ರಸಿದ್ಧ ಸಾಧನೆಗಳಿಂದ ತುಂಬಿದೆ ಎಂದು ಜೋಯಿಸರು ಹೇಳುತ್ತಾರೆ. ಶಿವಪ್ಪನಾಯಕ ಅವನ 'ಶಿವಪ್ಪನಾಯಕನ ಶಿಸ್ತು' ಎಂಬುದರ ಬಗ್ಗೆ ಪ್ರಸಿದ್ಧನಾಗಿದ್ದಾನೆ. ಅವನ ಸೊಸೆ ರಾಣಿ ಚನ್ನಮ್ಮಾಜಿ ಜೀವನವು ಅದ್ಭುತವಾದುದು. ಆಕೆಯ ಸಾಧನೆಗಳು ಶ್ಲಾಘನೀಯ. ಇತಿಹಾಸವನ್ನು ಬರೆಯಲು ಸಾಕಷ್ಟು ವಿಷಯ ಜೋಯಿಸರಲ್ಲಿದೆಯೆಂದು ನನಗನಿಸುತ್ತದೆ.

**ನವಂಬರ್ ೧೦, ೧೯೯೪ ಚಿತ್ರದುರ್ಗ-ಬೆಂಗಳೂರು**

ಬೆಂಗಳೂರಿಗೆ ಹೊರಡುವುದಕ್ಕೆ ಮುಂಚೆ ಕೆ.ವಿ. ಪುಟ್ಟಪ್ಪ 'ಕುವೆಂಪು' ಮೈಸೂರಿನಲ್ಲಿ ನಿಧನರಾದರೆಂದು ತಿಳಿದುಬಂತು. ಎಲ್ಲಾ ಕಾಲಕ್ಕೂ ಇವರು ಪ್ರಸಿದ್ಧ ಕವಿಗಳಲ್ಲಿ ಒಬ್ಬರು. ಇದು ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ತುಂಬಾ ದೊಡ್ಡ ನಷ್ಟ. ಅವರ ಶ್ರೀ ರಾಮಾಯಣ ದರ್ಶನವು ಒಂದು ಪ್ರಸಿದ್ಧ ಮಹಾಕಾವ್ಯ. ಎಲ್ಲಾ ಕಾಲಕ್ಕೂ ಅತ್ಯಂತ ಪ್ರಸಿದ್ಧ ಕಾವ್ಯಗಳಲ್ಲಿ ಒಂದಾಗಿ ನಿಲ್ಲುತ್ತದೆ. ರಾಜಣ್ಣ ಇದನ್ನು ಗದ್ಯಕ್ಕೆ ಪರಿವರ್ತಿಸಿರುವುದನ್ನು ನೋಡಿ 'ಕುವೆಂಪು'ರವರು ತಮ್ಮ ಮೂಲ ಕಾವ್ಯದಷ್ಟೇ ಇದು ಚೆನ್ನಾಗಿದೆ ಎಂದರು. ಅವರಿಗೆ ಸಮನಾದವರನ್ನು ಕಂಡುಹಿಡಿಯುವುದು ಸ್ವಲ್ಪ ಕಾಲಕ್ಕಾದರೂ ಸಾಧ್ಯವಿಲ್ಲ. ಅವರು ನಾಟಕ, ಸಣ್ಣ ಕವಿತೆ, ಕಾದಂಬರಿ, ಶಿಶುಗೀತೆ ಮುಂತಾದುವನ್ನು ಬರೆದಿದ್ದಾರೆ. ಇದೊಂದು ದೊಡ್ಡ ನಷ್ಟ. ೭-೮ ವರ್ಷಗಳ ಹಿಂದೆ ಅವರ ಪತ್ನಿಯ ಮರಣದ ನಂತರ ಅವರು ಬಹಳ ಬೇಗನೆ ಇಳಿಮುಖವಾಗುತ್ತ ಬಂದು ಅಂತಿಮವಾಗಿ ಕಳೆದ ೩-೪ ವರ್ಷಗಳಲ್ಲಿ ಕೇವಲ ಉಸಿರಾಟದ ಜೀವಿಯಾಗಿಬಿಟ್ಟಿದ್ದರು. ನಾನು ಹೇಳಿಕೆಯನ್ನು ನೀಡಿದ್ದನ್ನು ಮಧ್ಯಾಹ್ನ ೨ ಗಂಟೆಗೆ ರೇಡಿಯೋದಲ್ಲಿ ಪ್ರಸಾರ ಮಾಡಲಾಯಿತು.

**ಜನವರಿ ೧, ೧೯೯೫ ಬೆಂಗಳೂರು**

ನಾನು ಬಂದಿರುವ ಸಮಾರಂಭವು ಅಂದರೆ 'ಕುವೆಂಪು' ಅವರ ಪ್ರತಿಮೆಯನ್ನು ಅನಾವರಣ ಮಾಡಲು. ಅವರು ಕನ್ನಡದ ಪ್ರಸಿದ್ಧ ಸಾಹಿತಿ, ಬಹಳ ಪ್ರಸಿದ್ಧರು ಮತ್ತು ಗೌರವಿಸಲ್ಪಟ್ಟವರು. ಇನ್ನೊಬ್ಬ ಸಾಹಿತಿ ಅಂದರೆ 'ಪ್ರೊ. ಬಿ.ಎಂ.ಶ್ರೀ' ಯವರು. ಪ್ರತಿಮೆಯನ್ನು ಅನಾವರಣ ಮಾಡುವ ಸಮಾರಂಭವು ಸಕಾಲಕ್ಕೆ ಪ್ರಾರಂಭವಾಯಿತು. ಬಿಎಂಶ್ರೀ ಕೂಡ ಪ್ರಸಿದ್ಧ ಸಾಹಿತಿ ಹಾಗೂ ಶ್ರೇಷ್ಠ ಕನ್ನಡಿಗ. ಈ ಸಮಾರಂಭವು

ಲಾಲ್‌ಬಾಗ್‌ನ ಪಶ್ಚಿಮ ದ್ವಾರದಲ್ಲಿ ಮತ್ತು ಇನ್ನೊಂದನ್ನು ನ್ಯಾಷನಲ್ ಸ್ಕೂಲಿನ ಹತ್ತಿರ ಮಾಡಲಾಗಿ ದೊಡ್ಡ ಸಮೂಹ ಸೇರಿತು. ಬ್ರಾಹ್ಮಣ ಪೂಜಾರಿಗಳಿಂದ ಪೂಜೆ ಮುಂತಾದವು ನಡೆದವು. ನಂತರ ೧೧ ಗಂಟೆಗೆ ಸಭೆ ನಡೆಯಿತು. ಸುಮಾರು ೫-೬ ಸಾವಿರ ಜನರು ಸೇರಿದ್ದರು. ಮಹಾಪೌರರು, ಮುಖ್ಯಮಂತ್ರಿ ಹೆಚ್.ಡಿ. ದೇವೇಗೌಡರಿಗೆ ಬದಲಾಗಿ ಹಣಕಾಸು ಮಂತ್ರಿ ಸಿದ್ಧರಾಮಯ್ಯ, ನಾನು ಮತ್ತು ಎ.ಎನ್. ಮೂರ್ತಿರಾವ್ ಭಾಷಣ ಮಾಡಿದೆವು. ಎಲ್ಲರೂ ಚಿಕ್ಕ ಭಾಷಣ ಮಾಡಿದ್ದನ್ನು ಸಂದೇಹವಿಲ್ಲದೆ ಮೆಚ್ಚಲಾಯಿತು. ಆದರೆ ನನಗೆ ತೃಪ್ತಿಯಿರಲಿಲ್ಲ. ನಮಗೆ ಜ್ಞಾಪಕಾರ್ಥವಾಗಿ ನಾನು ಅನಾವರಣಗೊಳಿಸಿದ ಮರದಲ್ಲಿ ಮಾಡಿದ ಎದೆಯ ಮೇಲುಭಾಗದ ಪ್ರತಿಯನ್ನು ಕೊಡಲಾಯಿತು. ಮಧ್ಯಾಹ್ನ ಹೆಚ್ಚಿನ ಜನರು ಗುಂಪು ಗುಂಪಾಗಿ ಬಂದರು. ೧೯೪೨ರ ಹೋರಾಟದಲ್ಲಿ ಆಕೆಯ ಕುಟುಂಬವು ತುಂಬಾ ತೊಂದರೆಗೀಡಾಗಿದ್ದು, ನೇಣು ಹಾಕಲ್ಪಟ್ಟ ಕುಟುಂಬದ ಮಹಿಳೆಯ ಜೊತೆಗೆ ಬಂದ ಒಂದು ಗುಂಪನ್ನು ಸ್ವಾಗತಿಸಿದೆ. ಆಕೆಯೂ ಜೈಲಿನಲ್ಲಿದ್ದರು. ಅದೊಂದು ವೀರ ಕುಟುಂಬ.

**ಜನವರಿ ೮, ೧೯೯೫** **ಚಿತ್ರದುರ್ಗ**

ಮೊದಲೇ ತಿಳಿಸಿದಂತೆ ಕನ್ನಡ ವಿಶ್ವವಿದ್ಯಾಲಯದ ಉಪಕುಲಪತಿ ತಮ್ಮ ಹೆಂಡತಿಯೊಂದಿಗೆ ಬೆಳಿಗ್ಗೆ ೧೧ ಗಂಟೆಗೆ ಬಂದು ಫೆಬ್ರವರಿ ೧೫ರಂದು ವಿಶ್ವವಿದ್ಯಾನಿಲಯದ ಡಾಕ್ಟರೇಟ್ ಪದವಿಯನ್ನು ಸ್ವೀಕರಿಸಿಲು ನಾನು ಒಪ್ಪಬೇಕೆಂದು ಕೇಳಿಕೊಂಡರು. ಅವರು ಹಂಪಿಯಿಂದ ಅಷ್ಟು ದೂರದಿಂದ ಬಂದಿದ್ದರು. ಆದರೆ ಆ ಡಾಕ್ಟರೇಟ್‌ಗೆ ನಾನು ಅರ್ಹನಲ್ಲ ಎಂಬ ಭಾವನೆ ನನಗೆ. ಆದರೂ ಒಪ್ಪಿಕೊಳ್ಳ ಬೇಕಾಯಿತು. ಮಾರ್ಚ್ ೨೨ರಂದು ಪ್ರಾರಂಭವಾಗುವ 'ಕುವೆಂಪು' ವಿಶ್ವವಿದ್ಯಾಲಯದ ಬಗ್ಗೆಯೂ ಹಾಗೆಯೇ ಆಯಿತು. ಹಾಸ್ಯಾಸ್ಪದ. ನನಗೆ ಡಾಕ್ಟರೇಟುಗಳು ಬರುತ್ತಲೇ ಇವೆ. ಅವುಗಳೆಲ್ಲ ನನಗೇಕೆಂದು ನನಗೆ ತಿಳಿಯದು. ಹೇಗಾದರೂ ಇರಲಿ. ಅದು ಬಂದಿದೆ, ಬರಲಿ.

**ಮಾರ್ಚ್ ೭, ೧೯೯೫** **ಭದ್ರಾವತಿ-ಚಿತ್ರದುರ್ಗ**

ಹೊಳಲ್ಕೆರೆಯಲ್ಲಿ ೧೦-೧೫ಕ್ಕೆ ಇದ್ದೆವು. ಕೆಲವು ಮುಸ್ಲಿಮರು ನನ್ನನ್ನು ನೋಡಲು ಮತ್ತು ನನಗೆ ಗೌರವ ಸಲ್ಲಿಸಲು ಕಾಯುತ್ತಿದ್ದರು. ನಂತರ ಪೊಂಟಿಕಂಬದ ಮಠವನ್ನು ನೋಡಲು ಹೋದೆ. ಮಧ್ಯದಲ್ಲಿರುವ ದಪ್ಪ ಕಲ್ಲಿನ ಕಂಬವು ಒಂದು ತುದಿಯಲ್ಲಿ ೮ ಚಪ್ಪಡಿಗಳ ಒಂದು ಕಲ್ಲಿನ ಬ್ಲಾಕ್ ಆಗಿದ್ದು ೮ ದಿಕ್ಕುಗಳಿಗೆ ಹೋಗುತ್ತಿದ್ದು ೮ ಇತರ ಕಂಬಗಳ ಮೇಲೆ ಕುಳಿತಿದ್ದವು. ಎಲ್ಲವೂ ಸೇರಿ ಒಂದು ಮಂಟಪವಾಗಿತ್ತು. ಇದು ಸುಮಾರು ೧೦೦೦ ವರ್ಷ ಹಳೆಯದೆಂದು ಕಾಣುತ್ತದೆ. ತಪಸ್ವಿಗಳು ಇಲ್ಲಿ

ವಾಸಿಸುತ್ತಿದ್ದರೆಂದು ಹೇಳಲಾಗಿದೆ. ಹೊರಗಿನ ಗೋಡೆಗಳು ಬಿದ್ದುಹೋಗಿವೆ. ಅದನ್ನು ಸರಿಪಡಿಸಲಾಗುತ್ತಿದೆ. ಅದರ ಪಕ್ಕದಲ್ಲಿ ಹತ್ತಿರ ಕೆಲವು ತಿಂಗಳ ಹಿಂದೆ ಸ್ವರ್ಗಸ್ಥರಾದ ಮಲ್ಲಿಕಾರ್ಜುನ ಜಗದ್ಗುರುಗಳ ಸಮಾಧಿಯನ್ನು ಹಾಗೂ ದಿವಂಗತ ಸ್ವಾಮಿಯ ಇಚ್ಛೆಯಂತೆ ಶಾಲೆಗಳು, ಹಾಸ್ಟೆಲ್, ಕಲ್ಯಾಣಮಂಟಪ ಮುಂತಾದುವನ್ನು ಕಟ್ಟಬೇಕು.

**ಮಾರ್ಚ್ ೧೧, ೧೯೯೪ ಡಾ। ದೇಜಗೌ ೭೫ನೇ ಜನ್ಮದಿನ ಸಂಜೆ ೬ ಗಂಟೆ**

ಪುಟ್ಟಣ್ಣಚೆಟ್ಟಿ ಟೌನ್‌ಹಾಲಿಗೆ ಮಂಜು ಜೊತೆಯಲ್ಲಿ ಹೋದೆ. ಸಭಾಂಗಣ ಸುಮಾರಾಗಿ ತುಂಬಿದ್ದು ಕಾರ್ಯಕ್ರಮವು ಸರಿಯಾದ ಸಮಯಕ್ಕೆ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಸ್ನೇಹಿತರು ಡಾ. ಜವರೇಗೌಡರ (ದೇಜಗೌ ಎಂದೇ ಹೆಸರಾಗಿರುವ) ಅವರ ೭೫ನೇ ಜನ್ಮದಿನವನ್ನು ಆಚರಿಸುತ್ತಾ ಮಾತಾಡಿದರು. ಅವರ ೭೫ನೇ ಹುಟ್ಟುಹಬ್ಬದ ಜ್ಞಾಪಕಾರ್ಥವಾಗಿ ಒಂದು ಪುಸ್ತಕವನ್ನು ಪ್ರಕಟಿಸಲಾಯಿತು. ಡಾ. ಜವರೇಗೌಡರು ದೀರ್ಘವಾಗಿ ಉತ್ತರಿಸಿದರು. ನನ್ನ ಮೂತ್ರದ ಒತ್ತಡದಿಂದ ನನಗೆ ಚಿಂತೆಯಾಯಿತು. ಆದರೂ ಸೂಕ್ತವಾಗಿ ಉತ್ತರಿಸಲು ಸಾಕಷ್ಟು ಸಮಯವನ್ನು ತೆಗೆದುಕೊಂಡು ಅವರ ಮತ್ತು ಅವರ ಹೆಂಡತಿಯ ಸತ್ಕಾರಕ್ಕೆ, ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಯಾಗಿ ಅವರು ಸಲ್ಲಿಸಿದ ಹೆಚ್ಚಿನ ಸೇವೆ, ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿರುವ ದೊಡ್ಡ ಸೇವೆ ಮುಂತಾದವುಗಳನ್ನು ಕುರಿತು ಮಾತಾಡಿದೆ. ಅಂತಿಮವಾಗಿ ಅತೃಪ್ತಿಗೊಂಡಿರುವ ಅಜ್ಞಾನಿ ಬಡವರನ್ನು ಮೇಲೆತ್ತುವುದಕ್ಕೆ ಸರಿಯಾದ ವಿಚಾರ ಸಾಹಿತ್ಯವನ್ನು ರಚಿಸಬೇಕೆಂದು ಮನವಿ ಮಾಡಿದೆ. ನಾನು ಮಾಡಿದ ಮನವಿ ಎಲ್ಲರ ಮನಸ್ಸಿಗೆ ನಾಟಿತ್ತೆಂದು ಭಾವಿಸುತ್ತೇನೆ.

**ಮಾರ್ಚ್ ೧೩, ೧೯೯೫**

ಚುನಾವಣೆಗಳ ಫಲಿತಾಂಶಗಳು ನೆನ್ನೆಯಿಂದ ಬರುತ್ತಿವೆ. ನನಗೆ ಸ್ವಲ್ಪವೂ ಆಸಕ್ತಿಯಿಲ್ಲ. ಎಂದಿನ ಕುತೂಹಲದ ವಿನಾ ಗಂಟೆಗೊಂದು ಸಲ ರೇಡಿಯೋ ಹಾಕಲಿಲ್ಲ. ಸಂಜೆ ೪-೨೦ಕ್ಕೆ ಬೆಂಗಳೂರು ಬಿಟ್ಟಾಗ ಮಾತ್ರ ಶಾಮಣ್ಣ ರೇಡಿಯೋ ಹಾಕಿದಾಗ ನಾನು ಕೇಳುತ್ತಿದ್ದೆ. ನಿರೀಕ್ಷಿಸಿದಂತೆ ನೆನ್ನೆಯಿಂದ ಮಹಾರಾಷ್ಟ್ರ ಮತ್ತು ಗುಜರಾತ್ ಕಾಂಗ್ರೆಸ್ಸಿಗೆ ಬಂದಿದ್ದು, ಒರಿಸ್ಸಾನೂ ಇರಬಹುದು. ನನ್ನ ಪ್ರಕಾರ ಕಾಂಗ್ರೆಸ್ ಒರಿಸ್ಸಾದಲ್ಲಿ, ಬೇರೆ ಯಾವುದೇ ವ್ಯವಸ್ಥಿತ ಪಕ್ಷವಿಲ್ಲದ್ದರಿಂದ ಗೆಲ್ಲಬಹುದು.

**ಮಾರ್ಚ್ ೧೪, ೧೯೯೫ ಚಿತ್ರದುರ್ಗ**

ಬಿಹಾರ ಬಿಟ್ಟು ಉಳಿದ ಎಲ್ಲಾ ರಾಜ್ಯಗಳ ಫಲಿತಾಂಶಗಳನ್ನು ಪ್ರಕಟಿಸಲಾಗಿದ್ದು ಒರಿಸ್ಸಾ, ಮಹಾರಾಷ್ಟ್ರ, ಗುಜರಾತಿನಲ್ಲಿ ಮುಖ್ಯಮಂತ್ರಿಗಳನ್ನೂ ಪ್ರಕಟಿಸಲಾಗಿದೆ. ಒರಿಸ್ಸಾದಲ್ಲಿ ಮಾತ್ರ ಕಾಂಗ್ರೆಸ್ ಗೆದ್ದು ಬೇರೆ ಕಡೆಗಳಲ್ಲೆಲ್ಲಾ ಸೋತಿದೆ. ನಾನು ಮೊದಲೇ ಮಾಡಿದ

ವಿಶ್ಲೇಷಣೆಯಂತೆ ಎಲ್ಲಾ ರಾಜ್ಯಗಳಲ್ಲೂ ಯಾವುದೇ ಸರಕಾರವು ಜಯಗಳಿಸಿಲ್ಲ. ಎಲ್ಲಾ ಚುನಾವಣೆಗಳು ಇಂದಿರಾಗಾಂಧಿಯ ಕಾಲದಿಂದ ತಪ್ಪಾಗಿ ಮತ್ತು ಪ್ರಜಾಪ್ರಭುತ್ವದ ಎಲ್ಲಾ ತತ್ವಗಳು ಮತ್ತು ನಿಯಮಗಳಿಗೆ ವಿರುದ್ಧವಾಗಿ ನಡೆಯುತ್ತಿವೆ. ೧೯೭೫ರಲ್ಲಿ ತುರ್ತು ಪರಿಸ್ಥಿತಿಯನ್ನು ಘೋಷಿಸಲಾಯಿತು. ಆಗಿನಿಂದ ಎಲ್ಲಾ ಆಳುವ ಪಕ್ಷಗಳೂ ಸೋಲುತ್ತಿವೆ. ಹೊಸ ಪಕ್ಷಗಳು ಜಯಗಳಿಸಿವೆ, ಇವರಿಂದ ಯಾವುದೇ ಪಕ್ಷವು ಚೆನ್ನಾಗಿ ಆಳಲಿಲ್ಲ ಎಂದು ತೋರಿಸಿದೆ, ಆದ್ದರಿಂದ ಜನ ಅವರನ್ನು ಒದ್ದೋಡಿಸಿದ್ದಾರೆ. ಬೇರೆ ಪಕ್ಷಗಳು ಏನೇ ಆದರೂ ಅವುಗಳನ್ನು ಒಳಗೆ ತರಲಾಗಿದೆ. ಇದನ್ನೇ ನಾನು ನಕಾರಾತ್ಮಕ ಎಂದು ಕರೆಯುವುದು. ಜಯಕ್ಕೆ ಕಾರಣವಾಗಿರುವ ಇದು ನಕರಾತ್ಮಕವಾಗಿದೆ. ನಕಾರಾತ್ಮಕ ಕೆಟ್ಟ ಧೋರಣೆ. ಇದು ದುರದೃಷ್ಟಕರ. ಬೇಗನೆ ಬಿಹಾರದಲ್ಲೂ ಇದು ಆಗಬಹುದು. ಕೇಂದ್ರ ಸರ್ಕಾರಕ್ಕೂ ಕಾಂಗ್ರೆಸ್‌ಗೆ ಇದು ಸಕಾಲವಲ್ಲ.

**ಮಾರ್ಚ್ ೧೫, ೧೯೯೫**

ಹಣಕಾಸು ಮಂತ್ರಿ ಮನ್‌ಮೋಹನ್‌ಸಿಂಗ್ ಪ್ರಧಾನಿ ರಾವ್‌ರೊಡನೆ, ಮುಖ್ಯವಾದ ರಾಜ್ಯಗಳಾದ ಕರ್ನಾಟಕ, ಆಂಧ್ರ, ಮಹಾರಾಷ್ಟ್ರ, ಗುಜರಾತ್‌ಗಳಲ್ಲಿ ಪ್ರತಿಕೂಲವಾದರೂ, ಬಡತನದ ಬಗ್ಗೆ ಅನುಕಂಪ ತೋರಿಸುವ ಅಗತ್ಯತೆಯನ್ನು ತೋರಿಸಿದಂತಿದೆ. ಬಡತನ ಮತ್ತು ಗ್ರಾಮೀಣ ಸಮಸ್ಯೆಗಳಿಗೆ ಕೆಲವು ಹಳೆಯ ರೀತಿಯಲ್ಲಿಯೇ ಅನುಕಂಪ ವ್ಯಕ್ತಪಡಿಸಲೋ ಎಂಬಂತೆ ೧೯೯೫-೯೬ರ ಆಯವ್ಯಯವನ್ನು ತಯಾರಿಸಿದ್ದಾರೆ. ಸಂಜೆ ೫ ಗಂಟೆಯಿಂದ ಸುಮಾರು ೧ ೧/೨ ಗಂಟೆ ಕಾಲ ಅದನ್ನು ಕೇಳಿದೆ. ಅದನ್ನು ಈಗ ಅನುಷ್ಠಾನಗೊಳಿಸುವುದನ್ನು ನಾವು ಕಾಯಬೇಕು. ಆದರೆ ಕೃಷಿ, ನೀರಾವರಿ ಮತ್ತು ಗ್ರಾಮೀಣ ಉದ್ಯೋಗ, ವಿಕೇಂದ್ರೀಕೃತ ಉತ್ಪಾದನೆಗಳಿಗೆ ಪ್ರಾಮುಖ್ಯತೆ ಕೊಡಬೇಕಿದ್ದು ಅದನ್ನು ಕೊಟ್ಟಿಲ್ಲ. ಈ ಎಲ್ಲ ದಶಕಗಳಲ್ಲಿರುವಂತೆ ಮಾಮೂಲಿನಂತೆ ಇದು ಒಂದು ಕಷ್ಟವಾದ ಆಯವ್ಯಯ. ಆದರೆ ಕೆಟ್ಟ ಆಯವ್ಯಯವಲ್ಲ. ರಾಜಕೀಯ ಮತ್ತು ಆರ್ಥಿಕ ಸಮಸ್ಯೆಗಳನ್ನು ಗಮನಿಸಿದೆ. ಮುಂದಿನ ಸಾರ್ವತ್ರಿಕ ಚುನಾವಣೆಗಳ ಹಿಂದಿನ ವರ್ಷ ಇದಾದುದರಿಂದ ಸರಕಾರವು ಹೇಗೆ ನಡೆದುಕೊಳ್ಳುತ್ತದೆಯೆಂಬುದನ್ನು ನೋಡಬೇಕು. ನನ್ನ ನಿರೀಕ್ಷೆಯೇನೆಂದರೆ ಈ ಸರ್ಕಾರ ಸೋತುಹೋಗುತ್ತದೆ. ಅತಂತ್ರ ಪಾರ್ಲಿಮೆಂಟು ಅಸ್ತಿತ್ವಕ್ಕೆ ಬರಬಹುದು.

**ಮಾರ್ಚ್ ೧೭, ೧೯೯೫** **ಚಿತ್ರದುರ್ಗ**

ಅರುಣಾಚಲ ಸಣ್ಣ ಈಶಾನ್ಯ ರಾಜ್ಯವಾಗಿದ್ದು ಕಾಂಗ್ರೆಸ್ (ಐ) ನಿಚ್ಚಳವಾಗಿ ಗೆದ್ದಿದೆ. ಒರಿಸ್ಸಾ ಜೊತೆಯಲ್ಲಿ ಇದು ಕಾಂಗ್ರೆಸ್ ಲೆಕ್ಕಕ್ಕೆ ಎರಡು ಜಯಗಳನ್ನು ಪಡೆದಿದೆ. ಬಹಳ ಮುಖ್ಯವಾದ ರಾಜ್ಯಗಳಲ್ಲಿ ಅದು ಸೋತಿದೆ. ಜನತಾದಳದ ಬಿಜು ಪಟ್ನಾಯಕ್‌ನ ಸೋಲು ನನ್ನ ಸಿದ್ಧಾಂತವನ್ನು ಸಾಬೀತುಗೊಳಿಸುತ್ತಿದೆ. ಏನೆಂದರೆ ಈಗಿರುವ ಸರಕಾರದ

ವಿರುದ್ಧ ಜನರು ಮತ ಹಾಕಿದ್ದಾರೆಯೇ ಹೊರತು ಅವರು ಮತ ಹಾಕಿರುವ ಹೊಸ ಸರಕಾರದ ಪರವಾಗಿ ಅಲ್ಲ. ತುರ್ತು ಪರಿಸ್ಥಿತಿಯ ನಂತರ ಇಂದಿರಾ ಕಾಲದಿಂದ ಹೀಗೇ ಇದೆ. ಈಗೀಗ ಅರುಣಾಚಲದಂತೆ ಉದ್ದಕ್ಕೂ ನಕರಾತ್ಮಕ ಮತವೇ. ಬಹಳ ಅಪರೂಪದ ಅಪವಾದ.

**ಮಾರ್ಚ ೧೮, ೧೯೯೫ ಚಿತ್ರದುರ್ಗ**

ಕರ್ನಾಟಕದಲ್ಲಿ ಪಂಚಾಯಿತಿ ಮತ್ತು ಜಿಲ್ಲಾ ಪರಿಷತ್‌ಗೆ ಚುನಾವಣೆಗಳು ಒಂದು ವಾರದಿಂದ ನಡೆಯುತ್ತಿದ್ದು ೩ ದಿನಗಳ ಅವಧಿಯಲ್ಲಿ ಇಂದು ಕೊನೇ ದಿನ. ಯಾವ ಪಕ್ಷ ಗೆಲ್ಲುತ್ತದೆಂದು ನನಗೆ ತಿಳಿಯದು. ಮುಖ್ಯವಾದ ಪಕ್ಷಗಳು ಯಾವುವೆಂದರೆ ಆಳುತ್ತಿರುವ ಜನತಾದಳ, ಬಹಳ ಹೀನಾಯವಾಗಿ ಸೋತಿರುವ ಕಾಂಗ್ರೆಸ್ (ಐ) ಮತ್ತು ಮೇಲೆ ಬರುತ್ತಿರುವ ಬಿಜೆಪಿ. ೨-೩ ದಿನಗಳಲ್ಲಿ ಎಲ್ಲವೂ ಗೊತ್ತಾಗುತ್ತದೆ. ಸಾಮಾನ್ಯವಾಗಿ ಜನತಾದಳ ಗೆಲ್ಲುತ್ತದೆ. ಬಿಜೆಪಿಯು ದಕ್ಷಿಣ ಕನ್ನಡ, ಶಿವಮೊಗ್ಗ, ಚಿಕ್ಕಮಗಳೂರಿನಂಥ ಸಣ್ಣ ಪ್ರದೇಶಗಳಲ್ಲಿ ಗೆಲ್ಲಬಹುದು.

**ಮಾರ್ಚ ೨೦, ೧೯೯೫ ಚಿತ್ರದುರ್ಗ**

ಬಿಹಾರಿನಲ್ಲಿ ಮತ್ತು ಇಲ್ಲಿಯವರೆಗೆ ಕಳೆದ ಎರಡು ಚುನಾವಣೆ ದಿನಗಳಲ್ಲಿ ಕೆಲವು ಬಹಳ ಅಪರೂಪವಾದ ಪ್ರಕರಣಗಳನ್ನು ಬಿಟ್ಟು ಪ್ರತಿ ಕಡೆಯಲ್ಲೂ ಚುನಾವಣೆಗಳು ಶಾಂತಿಯುತವಾಗಿ ನಡೆಯುತ್ತಿದೆ. ನಾಳೆ ಕೊನೆಯ ದಿನ. ಯಾವ ಪಕ್ಷ ಗೆಲ್ಲುತ್ತದೆ ಅಥವಾ ಕುಪ್ರಸಿದ್ಧ ಯಾದವ್ ಪಕ್ಷ ಗೆಲ್ಲುತ್ತದೆ ಎಂದು ತಿಳಿಯಲು ಕುತೂಹಲವಾಗಿರುತ್ತದೆ. ಅವರ ಪಕ್ಷ ಗೆಲ್ಲುವುದಿಲ್ಲ ಎಂದು ನಾನು ನಿರೀಕ್ಷಿಸುತ್ತೇನೆ. ಕರ್ನಾಟಕದಲ್ಲಿ ದಕ್ಷಿಣ ಕನ್ನಡ ಜಿಲ್ಲೆ ವಿನಾ ಪಂಚಾಯಿತಿ ರಾಜ್ಯ ಚುನಾವಣೆಗಳು ಇಲ್ಲಿಯವರೆಗೆ ಆಳುವ ಪಕ್ಷದ ಪರವಾಗಿ ಹೋಗಿದೆ. ಈ ಮೂಲ ಸ್ಥಳೀಯ ಸಂಸ್ಥೆಗಳು ನಮ್ಮ ರಾಜ್ಯದಲ್ಲಿ ಹೇಗೆ ಕೆಲಸ ಮಾಡುತ್ತವೆಂದು ನಾವು ನೋಡಬೇಕು.

**ಮಾರ್ಚ ೨೪, ೧೯೯೫ ಚಿತ್ರದುರ್ಗ**

ಹರಿಹರ್ ಪಾಲಿಫೈಬರ್ಸ್ ಸುತ್ತಮುತ್ತ ಇರುವ ಗ್ರಾಮಸ್ಥರು ನನ್ನನ್ನು ಭೇಟಿ ಮಾಡಲು ಬಂದು ಒಂದು ಮನವಿ ಕಳುಹಿಸಿದ್ದರು. ತುಂಗಭದ್ರಾ ನದಿಯಲ್ಲಿ ಆಗಲೇ ಮೀನು ಸಾಯುತ್ತಿರುವುದರಿಂದ ಗ್ರಾಮಸ್ಥರು ಹೆಚ್ಚಿನ ಸಂಖ್ಯೆಯಲ್ಲಿ ನಾಳೆ ಜಿಲ್ಲಾಧಿಕಾರಿಯನ್ನು ಭೇಟಿ ಮಾಡಲು ಬರುತ್ತಿದ್ದಾರೆ. ೧೫-೨೦ ವರ್ಷಗಳಿಂದ ಈ ವಿಷಯದ ಬಗ್ಗೆ ಚಳವಳಿಯಾಗುತ್ತಿದೆ. ಈ ದೊಡ್ಡ ಕಾರ್ಖಾನೆಯ ಅಸಾಮಾಜಿಕ, ಜನವಿರೋಧಿ, ಅನಾರೋಗ್ಯ ಪರಿಸರ ಪ್ರಯತ್ನವನ್ನು ತಡೆಯಲು ರಾಜ್ಯ ಸರಕಾರ ಮತ್ತು ಕೇಂದ್ರ ಸರಕಾರ ಏನೂ ಮಾಡಿಲ್ಲ. ಏಕೆಂದರೆ ಹಣವು ಪರಿಣಾಮಕಾರಿ ಪಾತ್ರವಹಿಸುತ್ತಿವೆ ಎಂದು ಕಾಣುತ್ತದೆ. ಮುಖ್ಯಮಂತ್ರಿಗೆ ಖಾರವಾದ ಪತ್ರವೊಂದನ್ನು ಬರೆದೆ.

**ಜುಲೈ ೩, ೧೯೯೫ ಚಿತ್ರದುರ್ಗ**

ನಾನು ೧೪ನೇ ತಾರೀಕು ಈಗಾಗಲೇ ಒಪ್ಪಿಕೊಂಡಿರುವುದರಿಂದ ಮದ್ರಾಸ್‌ನಲ್ಲಿ ನಡೆಯುವ ಪ್ರಸಿದ್ಧ ಗಾಂಧೀವಾದಿ ದಿವಂಗತ ಕೆ. ಸಂತಾನಂರವರ ಶತಮಾನೋತ್ಸವ ಸಮಾರಂಭದಲ್ಲಿ ಭಾಗವಹಿಸಲಾಗುವುದಿಲ್ಲವೆಂದು ಟೆಲಿಗ್ರಾಂ ಕಳುಹಿಸಿದೆ. ದೃಢೀಕರಿಸುತ್ತಾ ಭಾರತೀಯ ವಿದ್ಯಾಭವನದ ಮುಖ್ಯ ಕಚೇರಿಯ ರಾಮಕೃಷ್ಣನ್‌ಗೆ ಪತ್ರ ಬರೆದೆ. ಆತನ ಮಗಳು ಮಾಧುರಿ ಮತ್ತು ಆಕೆಯ ಗಂಡ ದೆಹಲಿಯ ಪ್ರೊ. ಎಂ.ಎಂ. ಸೋಂದಿ ಚೆನ್ನಾಗಿ ಗೊತ್ತು. ಸಂತಾನಂ ಪರವಾಗಿ ಒಂದು ಸ್ಮಾರಕ ಅಂಚೆ ಸ್ಟಾಂಪನ್ನು ಹೊರಡಿಸುವಂತೆ ಕೇಂದ್ರ ಸರ್ಕಾರಕ್ಕೆ ಬರೆಯುತ್ತಿದ್ದೇನೆ. ಅವರು ನುಣುಚಿಕೊಳ್ಳುತ್ತಿದ್ದಾರೆ. ನಾನು ಅಧ್ಯಕ್ಷನಾಗಿ ಮತ್ತು ಚುನಾವಣಾ ಆಯುಕ್ತ ಶೇಷನ್ ಮುಖ್ಯ ಭಾಷಣಕಾರರಾಗಿದ್ದ ಸಂತಾನಂರವರ ಶತಮಾನೋತ್ಸವವನ್ನು ಕಳೆದ ವರ್ಷ ಶ್ರೀಮತಿ ಮಾಧುರಿ ಮತ್ತು ಪ್ರೊ. ಸೋಂದಿ ಆಚರಿಸಿದರು. ಅದು ದೆಹಲಿಯಲ್ಲಿ ಬಹಳ ಅರ್ಥಪೂರ್ಣವಾಗಿ ನಡೆದ ಸಭೆಯಾಗಿತ್ತು. ಇವೆಲ್ಲವನ್ನೂ ರಾಮಕೃಷ್ಣನ್‌ನವರಿಗೆ ಪತ್ರ ಬರೆದು ಹೇಳಿದೆ.

**ಜುಲೈ ೩೧, ೧೯೯೫ ಚಿತ್ರದುರ್ಗ**

ಹುಲ್ಲೂರು ಶ್ರೀನಿವಾಸ ಜೋಯಿಸರ ಪುಸ್ತಕವನ್ನು ಬಿಡುಗಡೆ ಮಾಡಲು ಬಂದಿದ್ದ ಪ್ರೊ. ಎಸ್. ಶೆಟ್ಟರ್ ಈ ದಿನ ಬೆಳಿಗ್ಗೆ ನನ್ನನ್ನು ನೋಡಲು ಬಂದಿದ್ದು ಅನೇಕ ಸಮಸ್ಯೆಗಳನ್ನು ಚರ್ಚಿಸುತ್ತಾ ಒಂದು ಗಂಟೆಗೂ ಹೆಚ್ಚು ಕಾಲ ಕಳೆದರು. ಐತಿಹಾಸಿಕ, ಸಾಂಸ್ಕೃತಿಕ, ವಾಸ್ತುಶಿಲ್ಪ ವಿಷಯಗಳಲ್ಲಿ ಇವರು ಪ್ರಸಿದ್ಧ ಬರಹಗಾರರು, ಪ್ರಭುತ್ವ ಪಡೆದವರು ಮತ್ತು ಅಂತರರಾಷ್ಟ್ರೀಯವಾಗಿ ಪ್ರಸಿದ್ಧರು. ಅಮೆರಿಕದ ವಿಶ್ವವಿದ್ಯಾಲಯಗಳಲ್ಲಿ ಹೆಚ್ಚು ಕೆಲಸ ಮಾಡಿದವರು. ಜೀವನ, ಹುಟ್ಟು, ಸಾವು ಮುಂತಾದವುಗಳ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ಅವರು ಒಪ್ಪಿಕೊಂಡರು. ಅವರೊಬ್ಬ ವಿಚಾರವಾದಿ. ಅವರು ಸಾವಿನ ಮೇಲೆ ೨-೩ ಪುಸ್ತಕಗಳನ್ನು ಬರೆದಿದ್ದಾರೆ. ಬಹಳ ವೈಚಾರಿಕತೆಯದು. ಹೋಗುವಾಗ ಅವರು ಹೊಯ್ಸಳ ದೇವಸ್ಥಾನಗಳ ತುಂಬಾ ಬೆಲೆಯುಳ್ಳ ಎರಡು ಸಂಪುಟಗಳನ್ನು ನನಗೆ ಬಹುಮಾನವಾಗಿ ನೀಡಿದರು. ಅವರು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಇತಿಹಾಸದ ಪ್ರಾಧ್ಯಾಪಕರಾಗಿದ್ದು ಇನ್ನೇನು ನಿವೃತ್ತಿ ಹೊಂದಲಿದ್ದಾರೆ. ಬಹಳ ಬುದ್ಧಿವಂತರು.

**ಆಗಸ್ಟ್ ೧೫, ೧೯೯೫ ಚಿತ್ರದುರ್ಗ**

ಇದು ೪೯ನೇ ಸ್ವಾತಂತ್ರ್ಯ ದಿನ. ಆಗಿನ ಭರವಸೆಗಳು ಮತ್ತು ಈಗಿನ ಚುಕ್ಕಾ ಚೂರಾದ ಭರವಸೆಗಳ ನಡುವೆ ಎಷ್ಟು ವ್ಯತ್ಯಾಸ. ಒಂದು ಮಾತು ಸಾಕಾಗುತ್ತದೆ. ಅಧಿಕಾರದಲ್ಲಿರುವ ಜನರು, ಅವರು ಅಧಿಕಾರ ವಹಿಸಿಕೊಂಡಂದಿನಿಂದ ಗಾಂಧೀಜಿಯನ್ನು ಮರೆತರು. ಅವರಿಗೆ ಅತ್ಯಂತ ಪ್ರೀತಿ ಪಾತ್ರವಾದ ತತ್ವಗಳ ವಿರುದ್ಧ ಎಲ್ಲವನ್ನೂ ಮಾಡಿದರು. ಇದರ ಪರಿಣಾಮವೆಂದರೆ ಈಗಿನ ನತದೃಷ್ಟ ಪರಿಸ್ಥಿತಿ.

**ಸೆಪ್ಟೆಂಬರ್ ೧೭, ೧೯೯೫**

೧೨ ಗಂಟೆಗೆ ಹಳ್ಳಿಕೇರಿ ಗುದ್ಲೆಪ್ಪನವರ ಮಗ ಮತ್ತು ಒಬ್ಬ ನಿವೃತ್ತ ಮಹಿಳಾ ಪ್ರಾಧ್ಯಾಪಕಿ ಸೇರಿದಂತೆ ಹುಬ್ಬಳ್ಳಿ, ಧಾರವಾಡದಿಂದ ಐವರು ಸ್ನೇಹಿತರು ಬಂದರು. ಅದು ಇದು ಮತ್ತು ನನ್ನ ಜೀವನದ ಬಗ್ಗೆ ಚರ್ಚಿಸಿದ ಮೇಲೆ ಹಳ್ಳಿಕೇರಿ ಗುದ್ಲೆಪ್ಪನವರ ಜೀವನಚರಿತ್ರೆಗೆ ನನ್ನಿಂದ ಒಂದು 'ಮುನ್ನುಡಿ'ಗಾಗಿ ಕೆಲವು ಮಾತುಗಳನ್ನು ದಾಖಲು ಮಾಡಿಕೊಂಡರು. ನನ್ನ ಭಾವನೆ, ಅನುಭವ, ಕೆಪಿಸಿಸಿ ಅಧ್ಯಕ್ಷ ಮತ್ತು ಕಾರ್ಯದರ್ಶಿಯಾಗಿ ಕಾಂಗ್ರೆಸ್ಸಿನಲ್ಲಿ ನಾವು ಒಟ್ಟಿಗೆ ಕೆಲಸ ಮಾಡಿದ ರೀತಿ; ಅವರ ಸಂಘಟನಾ ಸಾಮರ್ಥ್ಯ, ಕರ್ನಾಟಕ ರಾಜ್ಯ ರಚನೆಗಾಗಿ ಅವರ ಕೆಲಸ ಮತ್ತು ಅವರ ಇತರ ಗುಣ ಮತ್ತು ಶಿಕ್ಷಣ, ರಚನಾತ್ಮಕ ಕೆಲಸ ಮುಂತಾದವುಗಳ ಬಗ್ಗೆ ನಾನು ಮಾತಾಡಿದೆ. ಅವರು ನಾನು ಹೃದಯದಿಂದ ಮಾತನಾಡುತ್ತಿದ್ದೇನೆ ಎಂದು ಭಾವಿಸಿದರು. ಒಂದು ಗ್ರೂಪ್ ಫೋಟೋವನ್ನು ತೆಗೆದ ಮೇಲೆ ಮಧ್ಯಾಹ್ನ ಸುಮಾರು ೨ ಗಂಟೆಗೆ ಹೊರಟರು.

**ಸೆಪ್ಟೆಂಬರ್ ೨೦, ೧೯೯೫**

ವಿಶ್ರಾಂತಿಯಾದ ಮೇಲೆ ಶಿವಯೋಗಿ ಆಶ್ರಮ ಕಟ್ಟಡದ ಮುಂಭಾಗದಲ್ಲಿನ ಶಾಮಿಯಾನಕ್ಕೆ ಹೋದೆ. ಜಗದ್ಗುರು ಜಯದೇವಸ್ವಾಮೀಜಿಯವರ ೬೯ನೇ ಪುಣ್ಯತಿಥಿ ದಿನವನ್ನು ಆಚರಿಸಲಾಯಿತು. ಈಗಿರುವ ಜಗದ್ಗುರು ಶಿವಮೂರ್ತಿಸ್ವಾಮಿ ಮತ್ತು ಇನ್ನು ಕೆಲವು ಸ್ವಾಮಿಗಳು ಹಾಜರಿದ್ದರು. ಬೆಳಗಾಂನಿಂದ ಒಬ್ಬ ಮಹಿಳೆ ಮಾತೆ ವಾಗ್ದೇವಿಯು ಅಲ್ಲಿದ್ದರು. ಆಕೆ ಮೊದಲು ಮಾತನಾಡಿದರು. ಒಳ್ಳೆಯ ಭಾಷಣ. ನಾನು ಹೊರಟು ಬಿಡಬೇಕಾಗಿದ್ದುದರಿಂದ ನಂತರ ನಾನು ಮಾತನಾಡಲು ವ್ಯವಸ್ಥೆ ಮಾಡಿದರು. ನಾನು ಅವತ್ತಿನ ವಿಷಯವಾದ ಭಾವೈಕ್ಯತಾ ಗೋಷ್ಠಿ ಕುರಿತು ಅನಂತರ ದಿವಂಗತ ಜಯದೇವಸ್ವಾಮಿ, ಬಸವೇಶ್ವರನ ತತ್ವಗಳಾದ ಸಮಾನತೆ, ಐಕ್ಯತೆ, ಕಾಯಕ, ಗಾಂಧೀಜಿ ಮುಂತಾದ ವಿಷಯಗಳ ಮೇಲೆ ಸುಮಾರು ೨೫ ನಿಮಿಷಗಳ ಕಾಲ ಮಾತನಾಡಿದೆ. ಸಭಿಕರ ಮೇಲೆ ಅದು ಒಳ್ಳೆಯ ಭಾವನೆಯುಂಟು ಮಾಡಿತೆಂದು ಕಾಣುತ್ತದೆ.

**ಅಕ್ಟೋಬರ್ ೪, ೧೯೯೫** **ಚಿತ್ರದುರ್ಗ**

ಅನೇಕ ವರ್ಷಗಳಿಂದ ಸುಮಾರು ಒಂದು ವಾರದವರೆಗೆ ದಸರಾ ಹಬ್ಬದ ಕಾಲದಲ್ಲಿ ಪ್ರತಿವರ್ಷ ಮಾಡುತ್ತಿದ್ದಂತೆ ಮುರುಘಾಮಠದ ಜಗದ್ಗುರು ಕರೆದಿದ್ದ ಸಭೆಯ ಸಂದರ್ಭದಲ್ಲಿ ಒಂದು ಸಾವಿರ ಜನಕ್ಕೂ ಹೆಚ್ಚು ಶ್ರೋತೃಗಳ ಗುಂಪಿಗೆ ನಾನು ಭಾಷಣ ಮಾಡಬೇಕಾಯಿತು. ಸಾಮಾನ್ಯವಾಗಿ ನಾನು ಉದ್ಘಾಟಿಸುತ್ತೇನೆ. ಈ ಸಲ ಸಮಾರೋಪ ಸಮಾರಂಭದಲ್ಲಿ ಭಾಗವಹಿಸುತ್ತಿದ್ದೇನೆ. ಈ ಸಲದ ವಿಷಯ 'ಶರಣ ಸಾಹಿತ್ಯ'. ಕುತೂಹಲವಾದ ವಿಷಯ. ಪ್ರಾರಂಭಿಕ ಮತ್ತು ಸಂಗೀತವಾದ ಮೇಲೆ ಸ್ವಾಮೀಜಿ ನನ್ನನ್ನು ಮಾತಾಡಲು ಹೇಳಿದರು.

ಅವಕಾಶ ಸಿಕ್ಕರೆ, ಕೆಲಸ ಮಾಡುವ ಎಲ್ಲಾ ವರ್ಗದ ಗಂಡಸು ಮತ್ತು ಹೆಂಗಸರು ಅಂದರೆ ಕೀಳು ಜಾತಿಯವರು, ಅವಿದ್ಯಾವಂತರಾದ ಹಜಾಮರು, ಅಗಸರು, ಚರ್ಮ ಕೆಲಸ ಮಾಡುವವರು, ಕಸ ಗುಡಿಸುವವರು, ಕೃಷಿಕರು ಮುಂತಾದವರಿಗೆ ಅವಕಾಶ ಕೊಟ್ಟರೆ ಅವರು ತಮ್ಮಲ್ಲಿ ತಾವು ಜ್ಞಾನೋದಯವನ್ನು ಮಾಡಿಕೊಂಡು ಮಾನವ ಸಮಾಜದ ಅತ್ಯಂತ ಶ್ರೇಷ್ಠ ಮಾನವ ಬಸವಣ್ಣನವರ ಆದರ್ಶಗಳಿಗೆ ಚಾಲನೆ ಕೊಡುತ್ತಾರೆ ಎಂದು ಹೇಳಿದೆ. ಅರ್ಧ ಗಂಟೆ ಭಾಷಣ ಮಾಡಿ ಸ್ವಾಮಿಗಳ ಅನುಮತಿ ಪಡೆದು ಮನೆಗೆ ಬಂದು ಎಲ್ಲರೊಂದಿಗೆ ಪುಷ್ಕಳ ಊಟ ಮಾಡಿದೆ.

ಸಭೆಯಲ್ಲಿ ನನಗೆ 'ರತ್ನ' ಎಂಬ ಬಿರುದು, ಒಂದು ಶಾಲು ಮತ್ತು ಒಂದು ಬಹುಮಾನ ಕೊಡಲಾಯಿತು. ವಾಸ್ತವವಾಗಿ ಆ ಬಿರುದಿನಿಂದ ಯಾರೂ ನನ್ನನ್ನು ಕರೆಯುವುದಿಲ್ಲ.

**ಅಕ್ಟೋಬರ್ ೬, ೧೯೯೫**

ಜ್ಞಾಪಿಸಿಕೊಳ್ಳಬಹುದಾದ ದಿನ. ಉಪಮುಖ್ಯಮಂತ್ರಿ ಜೆ.ಹೆಚ್. ಪಟೇಲ್, ಮಂತ್ರಿ ಎಂ.ಪಿ. ಪ್ರಕಾಶ್ ೧೦ ಗಂಟೆಗೆ ಬಂದು ನನ್ನನ್ನು ಚಿತ್ರದುರ್ಗದ ಸಮೀಪವಿರುವ ಹೆಲಿಪಾಡ್‌ಗೆ ಕರೆದೊಯ್ದರು. ಮಂಜು ನನ್ನ ಜೊತೆಗೆ ಬಂದ. ನಾವು ಹುಲವಾಗಲುವನ್ನು ೧೦-೩೦ಕ್ಕೆ ತಲುಪಿದಾಗ ನಮ್ಮನ್ನು ಸ್ವಾಗತಿಸಲಾಯಿತು. ಪಟೇಲರು ನನ್ನ ತಂದೆ ತಾಯಿಯರಾದ ಅಡೆವಪ್ಪ ಮತ್ತು ನೀಲಮ್ಮನವರ ಹೆಸರಿನಲ್ಲಿ ಕಟ್ಟಲಾಗುವ ಕಲ್ಯಾಣಮಂಟಪದ ಅಸ್ತಿಭಾರ ಹಾಕಿದರು. ನಾನು ಯಕ್ಷಗಾನ ಗೊಂಬೆ ಮಂಡಳಿಗೆ ಅಸ್ತಿಭಾರ ಹಾಕಿದೆನು. ಪ್ರಕಾಶ್ ನೀರು ಸರಬರಾಜು ಯೋಜನೆಗೆ ಅಸ್ತಿಭಾರ ಹಾಕಿದರು. ಅತಿ ದೊಡ್ಡ ಶಾಮಿಯಾನ ಕೆಳಗೆ ಆ ಹಳ್ಳಿಗೆ ಬಹಳ ದೊಡ್ಡದೆನಿಸಿದ ಸುಮಾರು ೧೦೦೦೦ ಜನರ ದೊಡ್ಡ ಸಮೂಹ ಅಲ್ಲಿತ್ತು. ನನಗೆ ಸಂತೋಷವಾಗಿ ಜಂಭ ಬಂದಿತು. ಅವರೆಲ್ಲ ಅಲ್ಲಿ ಸೇರಿದ್ದರು. ಅವರನ್ನು ನಾನು ನೋಡಿದೆ. ರಸ್ತೆಸಾರಿಗೆ, ಅರಣ್ಯ, ಗ್ರಾಮೀಣಾಭಿವೃದ್ಧಿ, ವಿದ್ಯುಚ್ಛಕ್ತಿ ಮಂತ್ರಿಗಳಾದ ಶ್ರೀ ಬಾಲಾಜಿ, ಮೇಟಿ, ಪ್ರಕಾಶ್ ಮತ್ತು ಪಟೇಲರು ಕ್ರಮವಾಗಿ ಭಾಷಣ ಮಾಡಿದರು. ನನಗೆ ಒಂದು ಪರ್ಸನ್ನು ನೀಡಲಾಗಿದ್ದು ೧೯೯೫ರ ಡಿಸೆಂಬರ್ ೧೦ರಂದು ನನ್ನ ೯೪ನೇ ಜನ್ಮದಿನದ ನಿರೀಕ್ಷೆಯಲ್ಲಿ ೯೪,೦೦೦ ರೂ.ಗಳನ್ನು ನೀಡಲಾಯಿತು. ಇದನ್ನು ನಾನು ನಿರೀಕ್ಷಿಸಿರಲಿಲ್ಲ. ಈ ಮೊಬಲಗನ್ನು ಹರಪನಹಳ್ಳಿ ಮತ್ತು ಹಡಗಲಿ ತಾಲ್ಲೂಕುಗಳಲ್ಲಿ ೯೪ ಜನರಿಂದ ಸಂಗ್ರಹಿಸಲಾಯಿತು. ನಾನು ಸುಮಾರು ೫-೬ ವರ್ಷದವನಾಗಿದ್ದಾಗ ಈ ಹಳ್ಳಿಯಲ್ಲಿ ಕಳೆದ ದಿನಗಳನ್ನು ಜ್ಞಾಪಿಸಿಕೊಳ್ಳುತ್ತಾ ಸ್ವಲ್ಪವೇ ಕಾಲ ಮಾತನಾಡಿದೆ. ನೂಲುವುದು, ನೇಯುವುದು ಮತ್ತು ಇತರ ಗ್ರಾಮ ಕೈಗಾರಿಕೆ ಮುಂತಾದವುಗಳಿಂದ ಸ್ವಸಂಪೂರ್ಣ ಜೀವನವನ್ನು ವಿವರಿಸಿದೆ. ಒಟ್ಟಿನಲ್ಲಿ ನನಗೆ ತುಂಬಾ ಸಂತೋಷವಾಗಿತ್ತು. ನನ್ನ ದಿವಂಗತ

ಸಹೋದರಿ ಪಾರಕ್ಕನನ್ನು ತಿಳಿದಿದ್ದ ಒಬ್ಬ ಹಿರಿಯ ಮಹಿಳೆ ಮನೆಯಲ್ಲಿ ಒಳ್ಳೆಯ ಊಟವಾದ ಮೇಲೆ ಹೆಲಿಕಾಪ್ಟರ್‌ನಲ್ಲಿ ಚಿತ್ರದುರ್ಗಕ್ಕೆ ಹೊರಟೆವು.

**ಅಕ್ಟೋಬರ್ ೧೪, ೧೯೯೫ — ಚಿತ್ರದುರ್ಗ-ಹುಬ್ಬಳ್ಳಿ**

ನಾಳೆಯ ಸಭೆಗೆ ಮುಖ್ಯವಾಗಿ ಜವಾಬ್ದಾರರಾಗಿರುವ ಪಾಟೀಲ್ ಪುಟ್ಟಪ್ಪ ಬಂದು ನನ್ನನ್ನು ನೋಡಿದರು. ಎಂದಿನಂತೆ ಅವರಿಗೆ ತುಂಬಾ ಹೇಳುವುದಿತ್ತು. ಹೆಚ್ಚಾಗಿ ಅವರೇ ಮಾತನಾಡುತ್ತಾರೆಯೇ ಹೊರತು ಇತರರನ್ನು ಮಾತಾಡಲು ಬಿಡುವುದಿಲ್ಲ. ಅವರು ಒಂದು ಸಲ ಯೋಚಿಸಿದ್ದ ಉತ್ತರ ಕರ್ನಾಟಕವನ್ನು ಪ್ರತ್ಯೇಕಿಸುವ ಬದಲು, ಸಂಪೂರ್ಣವಾಗಿ ಕರ್ನಾಟಕದ ಒಟ್ಟಾರೆ ಅಭಿವೃದ್ಧಿಯ ಬಗ್ಗೆ ಚಿಂತಿಸಿದ್ದರೆ ಅನುಕೂಲವಾಗುತಿತ್ತು. ಅವರು ನನ್ನ ನಿಲುವನ್ನು ಮೆಚ್ಚುತ್ತಾರೆಂದು ಕಾಣುತ್ತದೆ. ನಿಜ. ಅವರು ಹುಬ್ಬಳ್ಳಿ, ಅಪ್ಪರ್ ಕೃಷ್ಣಾ ಪ್ರಾಜೆಕ್ಟ್, ಹುಬ್ಬಳ್ಳಿ-ಕಾರವಾರ ರೈಲು ಮಾರ್ಗ ಮುಂತಾದವುಗಳ ಸರ್ಕಾರದ ನಿರ್ಲಕ್ಷ್ಯದ ಬಗ್ಗೆ ಯೋಚಿಸುತ್ತಿದ್ದಾರೆ. ಅವರೊಂದಿಗೆ ನನ್ನ ಸಹಮತವಿದೆ.

**ಅಕ್ಟೋಬರ್ ೧೫, ೧೯೯೫ — ಹುಬ್ಬಳ್ಳಿ**

ಸಮ್ಮೇಳನವು ಸರಿಯಾಗಿ ೧೦ ಗಂಟೆಗೆ ಪ್ರಾರಂಭವಾಗುತ್ತದೆ. ನಾನು ಅಲ್ಲಿರಬೇಕು ಎಂದು ಹೇಳಲು ಪಾಟೀಲ್ ಪುಟ್ಟಪ್ಪನವರು ಬೆಳಗಿನ ಉಪಾಹಾರದ ಸಮಯದಲ್ಲಿ ಬಂದರು. ಸಕಾಲಕ್ಕೆ ಅಲ್ಲಿಗೆ ಹೋದೆ. ರಾಮಕೃಷ್ಣ ಹೆಗಡೆ, ಎಂ.ಎಸ್. ಗುರುಪಾದಸ್ವಾಮಿ, ಮಾಜಿ ಸ್ಪೀಕರ್ ಬಿ.ಜಿ. ಬಣಕಾರ್, ವಿರೋಧ ಪಕ್ಷದ ನಾಯಕ ಹೆಚ್.ಕೆ. ಪಾಟೀಲ್ ಮತ್ತು ಇತರರು ಸೇರಿದಂತೆ ೨೫೦ ಜನ ಪ್ರತಿನಿಧಿಗಳು ಸೇರಿರುವ ಒಳ್ಳೆಯ ಸಭೆ. ಹೆಗಡೆ ದೀಪ ಹಚ್ಚಿದ ಮೇಲೆ ಅಧ್ಯಕ್ಷತೆ ವಹಿಸಿದ್ದ ಪಾಟೀಲ ಪುಟ್ಟಪ್ಪ ವಿವರಗಳಿಂದ ತುಂಬಿದ್ದ ದೊಡ್ಡ ಭಾಷಣ ಮಾಡಿ ಮಾಮೂಲು ವಿಷಯಗಳನ್ನೇ ಒತ್ತಾಯಿಸಿದರು. ಹುಬ್ಬಳ್ಳಿ ರೈಲ್ವೆ ವರ್ಕ್‌ಷಾಪ್, ಕೇಂದ್ರ ಕಚೇರಿ, ಹುಬ್ಬಳ್ಳಿ-ಕಾರವಾರ ರೈಲು ಮಾರ್ಗ, ಅಪ್ಪರ್ ಕೃಷ್ಣ ನೀರಾವರಿ ಪ್ರಾಜೆಕ್ಟ್ ಮುಂತಾದವುಗಳ ಬಗ್ಗೆ ೪೫ ನಿಮಿಷಗಳ ಕಾಲ ಮಾತನಾಡಿದರು. ನಂತರ ನಾನು ಭಾಷಣ ಮಾಡಿ ಸುಮಾರು ಅರ್ಧ ಗಂಟೆ ಮಾತನಾಡಿ ಈ ವಿಷಯಗಳನ್ನು ಒಪ್ಪಿಕೊಂಡು, ಹಳೆ ಮೈಸೂರು ಮತ್ತು ಹೈದರಾಬಾದ್ ಕರ್ನಾಟಕದಲ್ಲಿನ ಇನ್ನೂ ಹೆಚ್ಚಿನ ವಿಷಯಗಳನ್ನು ಹೇಳುತ್ತಾ ನೀರಾವರಿಗೆ ತೋರುತ್ತಿರುವ ಅತೀವ ನಿರ್ಲಕ್ಷ್ಯದ ಬಗ್ಗೆ ಹೇಳಿ, ನನ್ನ ಪ್ರೀತಿಯ ವಿಷಯವಾದ ರಾಜ್ಯನೀತಿಯ ನಿರ್ದೇಶಕ ತತ್ವಗಳ ನಿರ್ಲಕ್ಷ್ಯ ಮತ್ತು ದುಸ್ಥಿತಿಗೆ ಬರುತ್ತಿರುವ ಪರಿಸ್ಥಿತಿ ಮತ್ತು ತಪ್ಪಾದ ಉದಾರೀಕರಣದ ನೀತಿ, ನಗರ ಮತ್ತು ಗ್ರಾಮೀಣ ಪ್ರದೇಶಗಳು ದೂರದೂರ ಹೋಗುತ್ತಿರುವುದು ಮುಂತಾದವುಗಳ ಬಗ್ಗೆ ಮಾತನಾಡಿದೆನು. ಆನಂತರ ಹೆಗಡೆ,

ಗುರುಪಾದಸ್ವಾಮಿ ಮತ್ತು ಇತರರನ್ನು ಮಾತಾಡಲು ಬಿಟ್ಟು ನಾನು ಬಂದುಬಿಟ್ಟೆ. ಪುಟ್ಟಪ್ಪ ಪುನಃ ಸಾಯಂಕಾಲ ಬಂದು ಸಭೆಯು ೬-೩೦ರವರೆಗೆ ಮುಂದುವರಿದು ಕೆಲವು ಠರಾವುಗಳನ್ನು ಅಂಗೀಕರಿಸಲಾಯಿತೆಂದು ಹೇಳಿದರು. ಧಾರವಾಡದ ಮುರುಘಾಮಠದ ವಿಷಯಗಳ ಬಗ್ಗೆ ಡಾ. ಆರ್. ಸಿ. ಹಿರೇಮಠ್ ಮತ್ತು ಇನ್ನೊಬ್ಬರನ್ನು ತಮ್ಮ ಜೊತೆಯಲ್ಲಿ ಕರೆತಂದು ಮಠದ ಅವ್ಯವಹಾರದ ಬಗ್ಗೆ ಜಗದ್ಗುರುಗಳ ಹತ್ತಿರ ನಾನು ಮಾತನಾಡಬೇಕೆಂದು ಅವರು ಹೇಳಿದ್ದಕ್ಕೆ ನಾನು ಒಪ್ಪಿಕೊಂಡೆ.

**ಡಿಸೆಂಬರ್ ೧೦, ೧೯೯೫ ಬೆಂಗಳೂರು ಭಾರತೀಯ ವಿದ್ಯಾಭವನ ನನ್ನ ಹುಟ್ಟುಹಬ್ಬದ ಆಚರಣೆ**

ಆರ್.ಕೆ. ಹೆಗಡೆ ಮತ್ತು ಅವರ ಹೆಂಡತಿ ಶಕುಂತಲಾ ನನ್ನನ್ನು ೨೦ ನಿಮಿಷಗಳಿಗೆ ಮುಂಚೆ ಇರಬೇಕೆಂದು ಹೇಳಿದ್ದರಿಂದ ಭವನದ ಕಟ್ಟಡಕ್ಕೆ ಕರೆದುಕೊಂಡು ಹೋಗಲು ಬಂದರು. ಶ್ರೀಮಂತ ಕೈಗಾರಿಕೋದ್ಯಮಿ ಆರ್.ಎನ್. ಶೆಟ್ಟಿ ನಮ್ಮ ಜೊತೆಯಲ್ಲಿದ್ದರು. ಬೆಳಗಿನ ಉಪಾಹಾರವಾದ ಮೇಲೆ ನಾವು ಭವನಕ್ಕೆ ಹೊರಟೆವು. ವೇದಮಂತ್ರಗಳಿಂದ 'ಪೂರ್ಣ ಕುಂಭ'ದೊಂದಿಗೆ ಸ್ವಾಗತಿಸಿದರು. ಮಾಮೂಲಿನಂತೆ ದೇವೇಗೌಡ ೧೦ ನಿಮಿಷ ತಡವಾಗಿ ಬಂದು ಬಿರ್ಲಾ ಕುಟುಂಬ ದಾನವಾಗಿ ನೀಡಿದ್ದ ೯೦ ಲಕ್ಷ ರೂ.ಗಳಿಂದ ಕಟ್ಟುವ ಹೆಚ್ಚುವರಿ ಕಟ್ಟಡಕ್ಕೆ ಅಸ್ತಿಭಾರ ಹಾಕಿದರು. ಮುಖ್ಯವ್ಯಕ್ತಿಯಾದ ನನ್ನನ್ನು ೯೪ನೇ ವರ್ಷಕ್ಕೆ ಅಭಿನಂದಿಸುವ ಸಮಾರಂಭವು ೯-೩೦ಕ್ಕೆ ಪ್ರಾರಂಭವಾಗಿ ೨ ಗಂಟೆಗಳ ಬದಲಾಗಿ ಮಧ್ಯಾಹ್ನ ೧-೩೦ರವರೆಗೆ ನಡೆಯಿತು. ಸ್ವಾಗತ ಭಾಷಣ, ಭವನವನ್ನು ನಿರ್ಮಿಸಿದ ಬಹುಮುಖ್ಯವ್ಯಕ್ತಿ ಸೆಕ್ರೆಟರಿ ಜನರಲ್ ಎಸ್. ರಾಮಕೃಷ್ಣನ್ ನೀಡಿದ ತಾಮ್ರ ಮತ್ತು ಬೆಳ್ಳಿಯಿಂದ ಮಾಡಿದ 'ತಾಮ್ರ ಪತ್ರ' ಸಮರ್ಪಣೆ, ದೇವೇಗೌಡ, ಜತ್ತಿ, ಆರ್.ಕೆ. ಹೆಗಡೆ, ಮೊಯಿಲಿ, ಸಿನಿಮಾತಾರೆ ಶ್ರೀಮತಿ ಸರೋಜಾದೇವಿ, ಬದರಿನಾರಾಯಣ್, ನನ್ನ ಹಳೆಯ ಟೈಪಿಸ್ಟ್ ಚನ್ನವೀರಪ್ಪ ಭಾಷಣಗಳನ್ನು ಮಾಡಿದರು. ಕೆಲವು ಪದ್ಯಗಳನ್ನು ಓದಲಾಯಿತು. ಇವೆಲ್ಲವನ್ನೂ ನಾನು ನಿರೀಕ್ಷಿಸಿರಲಿಲ್ಲ. ನಾನು ೪೫ ನಿಮಿಷಗಳ ಕಾಲ ಜವಾಬು ಕೊಟ್ಟೆ. ರಾಷ್ಟ್ರೀಯ ವಿಷಯಗಳಾದ ಭ್ರಷ್ಟಾಚಾರ, ಜಾತಿಯತೆಯಂತಹ ಕೆಟ್ಟ ವಿಷಯವನ್ನು ದೂರವಿಡುವ ಅಗತ್ಯ, ನಿರ್ದೇಶಕ ತತ್ವಗಳ ಬಗ್ಗೆ ಮಾತನಾಡಿದೆ. ಅವನ್ನು ಸಾಮಾನ್ಯವಾಗಿ ಮೆಚ್ಚಲಾಯಿತು. ನನಗೆ ಕೂಡ ತೃಪ್ತಿಯಾಗಿತ್ತು. ಹಾರಗಳಿಂದ ವೇದಿಕೆ ತುಂಬಿಹೋಗಿದ್ದವು. ನಂತರ ನಾನು ಕಬ್ಬನ್‌ಪಾರ್ಕಿಗೆ ಹೋದೆ. ನಾನು ನಿರಾಕರಿಸಿದ್ದರೂ ಎಂಎಲ್‌ಎ ವಾಟಾಳ್ ನಾಗರಾಜ್ ೨-೩ ಸಾವಿರ ಜನರನ್ನು ಕಲೆಹಾಕಿದ್ದರು. ನನ್ನ ಜನ್ಮದಿನದ ಬಗ್ಗೆ ಅವರು ೫ ನಿಮಿಷಗಳ ಕಾಲ ಮಾತನಾಡಿದರು. ನಾನು ೧೫ ನಿಮಿಷಗಳ ಕಾಲ ಜವಾಬು ನೀಡಿದೆ. ೨-೩೦ಕ್ಕೆ ಮನೆಗೆ ಹಿಂತಿರುಗಿ ವಿಶ್ರಾಂತಿ ಪಡೆದೆ. ೫-೩೦ರಿಂದ ಜನ ಹಾರಗಳನ್ನು ಹಿಡಿದು

ಬಂದರು. ೮ ರಿಂದ ೯-೪೫ರವರೆಗೆ ನನ್ನ ಜನ್ಮದಿನದ ಗೌರವಾರ್ಥವಾಗಿ ಕಿರಣ್ ವ್ಯವಸ್ಥೆಗೊಳಿಸಿದ್ದ ಊಟ ಮಾಡಿದೆವು. ಕೇಕನ್ನು ಕತ್ತರಿಸಿ ಮಕ್ಕಳು 'ಹ್ಯಾಪಿ ಬರ್ತ್‌ಡೇ ಟು ಯೂ' ಎಂದು ಹಾಡಿದರು. ಎಲ್ಲರಿಗೂ ಸಂತೋಷವಾಗಿತ್ತು. ಇದು ನನಗೆ ಒಂದು ಸಂತೋಷದ ದಿನವಾಗಿತ್ತು.

**ಡಿಸೆಂಬರ್ ೧೧, ೧೯೯೫** **ಚಿತ್ರದುರ್ಗ**

ಬೆಳಿಗ್ಗೆ ೧೦ ಗಂಟೆಗೆ ಗ್ರಾಮೀಣ ಅಭಿವೃದ್ಧಿ ಮಂತ್ರಿ ಎಂ.ಪಿ. ಪ್ರಕಾಶ್ ಮುಂತಾದವರು ಬಂದು ೧೦ ನಿಮಿಷ ನನ್ನ ಜೊತೆಯಲ್ಲಿ ಮತ್ತು ಅಭಿಶಂಕರ್ ಮತ್ತು ಎಲ್.ಎಸ್. ಚಂದ್ರಶೇಖರ್‌ರವರು ತಮಿಳುನಾಡಿನಲ್ಲಿ 'ಗಾಂಧಿ ಗ್ರಾಮ' ಮಾದರಿಯಂತೆ ಕರ್ನಾಟಕದ ಉದ್ದೇಶದ ಗ್ರಾಮೀಣ ಅಭಿವೃದ್ಧಿ ಕೇಂದ್ರದ ಬಗ್ಗೆ ಮಾತನಾಡಿದರು. ಅವರು ಎಲ್ಲಾ ಸಾಧ್ಯವಾದ ನೆರವು ನೀಡುವುದಕ್ಕೆ ಒಪ್ಪಿಕೊಂಡು ೧೯೮೩ರಿಂದ ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರದ ಬಾಕಿ ಇರುವ ಅಭಿಶಂಕರರ ಯೋಜನೆಗೆ ಎರಡು ಗಂಟೆಗಳನ್ನು ಮೀಸಲಿಡುವುದಾಗಿ ಒಪ್ಪಿಕೊಂಡರು. ಕಳೆದ ೧೦ ವರ್ಷಗಳು ಮತ್ತು ಅದಕ್ಕಿಂತ ಹೆಚ್ಚಾಗಿ ನನ್ನಿಂದ ಪತ್ರವ್ಯವಹಾರ ನಡೆಯುತ್ತಲೇ ಇದೆ. ಗ್ರಾಮೀಣ ಪ್ರದೇಶಗಳಿಗೆ ಸಂಬಂಧಿಸಿದ ಯೋಜನೆಗಳನ್ನು ಸರಕಾರಗಳು ಹೀಗೆ ನೋಡಿಕೊಳ್ಳುತ್ತಿವೆ. ಅವರು ಹೊರಟು ಹೋದ ತಕ್ಷಣವೇ ಮಾಜಿ ರೈಲ್ವೆ ಮಂತ್ರಿ ಜಾಫರ್ ಷರೀಫ್ ಬಂದು ನಾವಿಬ್ಬರೂ ರೈಲ್ವೆ ಮಂತ್ರಿ ಪದವಿಯಿಂದ ಅವರ ವಜಾ ಮತ್ತು ಖಾತೆರಹಿತ ಮಂತ್ರಿಪದವಿ, ಇವರ ರಾಜೀನಾಮೆ ಕುರಿತಾದ ರಾಜಕೀಯ ವಿಚಾರಗಳನ್ನು ಚರ್ಚಿಸಿದೆವು. ಅವರ ರಾಜೀನಾಮೆಯನ್ನು ನಾನು ಮೆಚ್ಚಿದೆ. ಅವರ ವಿರುದ್ಧ ಇರುವ ಹಗರಣಗಳ ಗಾಳಿಮಾತಿನ ವಿಚಾರಣೆ ಬಗ್ಗೆ ಅವರು ವ್ಯಾಕುಲ ವ್ಯಕ್ತಪಡಿಸಿದರು. ಅವರು ಯಾವುದೇ ನ್ಯಾಯಾಂಗ ತನಿಖೆಗೆ ಸಿದ್ಧ ಎಂದು ಹೇಳಿದರು. ನಾನು ತವಕ ಪಡಬೇಕಾಗಿಲ್ಲ ಎಂದೆ. ದೇವರ ಮುಂದೆ ತಾವು ನಿರಪರಾಧಿ ಎಂದು ಹೇಳಿದರು.

**ಡಿಸೆಂಬರ್ ೩೧, ೧೯೯೫**

ಇವತ್ತು ವರ್ಷದ ಕೊನೆಯ ದಿನ. ಇವತ್ತು ಅದು ಮುಕ್ತಾಯಗೊಳ್ಳುತ್ತಿದೆ. ವರ್ಷ ಅಂತ್ಯವಾಗುವುದರ ಬಗ್ಗೆ ಏನೋ ವಿಶೇಷವಿದೆಯೆಂದು ನಾನು ನಂಬುವುದಿಲ್ಲ. ಅದೇ ಸಮಸ್ಯೆಗಳು. ಕೇಂದ್ರದಲ್ಲಿರುವ ಆಳುವ ಪಕ್ಷ ಕಾಂಗ್ರೆಸ್ (ಐ) ಇತ್ತೀಚೆಗೆ 'ಗ್ರಾಮೀಣ ಬಡವರ' ಬಗ್ಗೆ ಚಿಂತಿಸುತ್ತಿದ್ದೇನೆಂದು ಗಟ್ಟಿಯಾಗಿ ಹೇಳುತ್ತಿದೆ. ಇತ್ತೀಚೆಗೆ 'ನಗರದ ಬಡವರ' ಬಗ್ಗೆ ಅದು ಹೇಳುತ್ತಿದೆ. ಬರುವ ಚುನಾವಣೆಗಳಲ್ಲಿ ಯಾವುದೇ ಪಕ್ಷಕ್ಕೆ ಕಾರ್ಯರೂಪದ ಬಹುಮತವಿರುವುದಿಲ್ಲ. ಅತಂತ್ರ ಪಾರ್ಲಿಮೆಂಟು ಬರಬಹುದು. ಬಿಜೆಪಿಗೆ ಮಾತ್ರ ಬಹುಮತ ಬರಬಾರದು. ಅದು ದೇಶವನ್ನು ಹಾಳು ಮಾಡಿಬಿಡುತ್ತದೆ.

**ಜನವರಿ ೬, ೧೯೯೬ ಚಿತ್ರದುರ್ಗ-ಬೆಂಗಳೂರು**

ಕಾವೇರಿ ಚಳವಳಿಯು ಮೈಸೂರು-ಮಂಡ್ಯದಿಂದ ಸಣ್ಣ ರೀತಿಯಲ್ಲಿ ತುಮಕೂರು, ಶಿವಮೊಗ್ಗಗಳಿಗೆ ವಿಸ್ತರಿಸುತ್ತಿದೆಯೆಂದು ಕಾಣುತ್ತದೆ. ಇದರಲ್ಲಿ ಹೆಚ್ಚಿನದು ರಾಜಕೀಯ ಪ್ರೇರಿತವಾದುದು. ಕರ್ಣಾಟಕವು ಗಣನೀಯವಾಗಿ ಲಾಭ ಪಡೆಯುತ್ತಿದೆ ಎಂದು ನನ್ನ ಭಾವನೆ. ಶುದ್ಧ ಮತ್ತು ಸರಳ ರಾಜಕೀಯ.

**ಜನವರಿ ೩೧, ೧೯೯೬ ಚಿತ್ರದುರ್ಗ**

ಈ ಬೆಳಿಗ್ಗೆ ರಾಮಕೃಷ್ಣ ಹೆಗಡೆಯವರ ತಾಯಿ ನಿಧನ ಹೊಂದಿದರು. ಅವರು ಬಹಳ ವಯಸ್ಸಾಗಿ ದುರ್ಬಲರಾಗಿದ್ದರು. ಅವರ ಮನೆಗೆ ಯಾವಾಗ ಹೋದಾಗಲೂ ವಿಚಾರಿಸುತ್ತಿದ್ದರು. ಆಕೆ ಸ್ವಾತಂತ್ರ್ಯ ಹೋರಾಟಗಾರ್ತಿ ಮತ್ತು ಒಂದು ಸಲಕ್ಕಿಂತ ಜಾಸ್ತಿ ಜೈಲು ವಾಸ ಅನುಭವಿಸಿದ್ದರು. ಅದರಲ್ಲಿ ೩೦ರ ದಶಕದ ಪ್ರಾರಂಭದಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಪ್ರಸಿದ್ಧ 'ತೆರಿಗೆ ಇಲ್ಲ' ಚಳವಳಿಯೂ ಸೇರಿದೆ. ಹೆಗಡೆಗೆ ಸಂತಾಪ ಸಂದೇಶ ಕಳುಹಿಸಿದೆ.

**ಫೆಬ್ರವರಿ ೭, ೧೯೯೬ ಹುಬ್ಬಳ್ಳಿ-ಧಾರವಾಡ ಸಮಾರಂಭ ಸಾಯಂಕಾಲ ೪ ಗಂಟೆಗೆ**

ಬೆಳಿಗ್ಗೆ ಪಾಟೀಲ ಪುಟ್ಟಪ್ಪ ಪಾಪುವಿಗೆ ಫೋನ್ ಮಾಡಿದೆ. ಅವರು ೯-೩೦ಕ್ಕೆ ಬಂದು ನನ್ನ ಜೊತೆಯಲ್ಲಿ ಒಂದು ಗಂಟೆ ಕಳೆದರು. ಅವರಲ್ಲಿ ಅನೇಕ ವಿಷಯಗಳು ಮತ್ತು ಅಭಿಪ್ರಾಯಗಳು ಇವೆ. ಹೆಚ್ಚಾಗಿ ಅವರೇ ಮಾತಾಡುತ್ತಾರೆ, ನಾನು ಅವರಿಗೆ ಅವಕಾಶ ಕೊಡುತ್ತೇನೆ. ಹೆಚ್ಚಾಗಿ ಊಟ ಮಾಡಿದ ಮೇಲೆ ವಿಶ್ರಾಂತಿ. ಮಂಜು ಮತ್ತು ಮುರುಗೇಶ್ ನಾಲ್ಕು ಗಂಟೆಗೆ ಬಂದರು. ನಾವು ಧಾರವಾಡದಲ್ಲಿ ಜನತಾ ಶಿಕ್ಷಣ ಸಮಿತಿ ಸುವರ್ಣ ಮಹೋತ್ಸವ ಸಮಾರಂಭಕ್ಕೆ ಹೊರಟೆವು. ಅದನ್ನು ರಾಮರಾವ್ ಹುಕ್ಕೇರಿಕರ್ ಮಾಸ್ಟರ್ ಪ್ರಾರಂಭಿಸಿದರು. ಅವರ ಮರಣಾನಂತರ ಅದು ಕಪ್ಪು ಕೈಗಳಿಗೆ ಬಿದ್ದು ನಂತರ ಧರ್ಮಾಧಿಕಾರಿ ವೀರೇಂದ್ರ ಹೆಗ್ಡೆಯವರಿಂದ ಪುನಶ್ಚೇತನಗೊಳಿಸಲ್ಪಟ್ಟಿತು. ಅವರು ಕೈಗೊಂಡ ಎಲ್ಲಾ ಸಂಸ್ಥೆಗಳಲ್ಲಿ ಮಾಮೂಲಾಗಿರುವಂತೆ ತುಂಬಾ ಪ್ರಗತಿಯನ್ನು ಸಾಧಿಸಿ ಅತಿ ಚೆನ್ನಾಗಿ ನಡೆಸಲ್ಪಡುತ್ತಿರುವ ಕಾಲೇಜುಗಳಲ್ಲಿ ಒಂದಾಗಿದೆ. ಸಕಾಲಕ್ಕೆ ಹೋದೆ ಮೆರವಣಿಗೆಯಾದ ಮೇಲೆ ಸಮಾರಂಭವು ಐದು ಗಂಟೆಗೆ ಪ್ರಾರಂಭವಾಯಿತು. ನಾನು 'ಗುರುಶ್ರೀ ಭವನ' ಉಪಾಧ್ಯಾಯರ ಸಮಾಲೋಚನೆ ಕೊಠಡಿಯ ಉದ್ಘಾಟನೆ ಭಾಷಣ ಮಾಡಿದ ಮೇಲೆ ೫-೩೦ಕ್ಕೆ ಹೊರಟೆ. ಕೆಲವು ಮಂತ್ರಿಗಳು ಅಂದರೆ ಲೋಕೋಪಯೋಗಿ ಮತ್ತು ಕೃಷಿ ಮಂತ್ರಿಗಳು ಭಾಷಣ ಮಾಡಿದ ಮೇಲೆ ಶಿಕ್ಷಣ, ವಿಶ್ವಮಾನವೀಯತೆ, ವೈಜ್ಞಾನಿಕ ಬೆಳವಣಿಗೆ ಮುಂತಾದವನ್ನು ಉಲ್ಲೇಖಿಸಿ ಸುಮಾರು ೫೦ ನಿಮಿಷಗಳವರೆಗೆ ಭಾಷಣ ಮಾಡಿದೆ.

**ಫೆಬ್ರವರಿ ೧೪, ೧೯೯೬**

ನಿನ್ನೆ ತೀರ್ಮಾನಿಸಿದಂತೆ ಆಲಮಟ್ಟಿ ಅಣೆಕಟ್ಟು ಜಾಗಕ್ಕೆ ಮತ್ತು ಅಪ್ಪರ್ ಕೃಷ್ಣ ನೀರಾವರಿ ಪ್ರಾಜೆಕ್ಟಿಗೆ ಹೊರಟಾಗ ಕೆ.ಪಿ. ಪಾಟೀಲ್ ಮತ್ತು ಇತರ ಸ್ನೇಹಿತರು ಇತರ ಕಾರುಗಳಲ್ಲಿ ಬಂದರು. ೧೧ ಗಂಟೆಗೆ ಅಣೆಕಟ್ಟು ಸ್ಥಳವನ್ನು ಸೇರಿದೆವು. ನಾವು ತಿಳಿಸಿದಂತೆ ಕಾರ್ಯನಿರ್ವಾಹಕ ಇಂಜಿನಿಯರ್ ಮತ್ತು ಸೂಪರಿಂಟೆಂಡಿಂಗ್ ಇಂಜಿನಿಯರ್ ನನ್ನನ್ನು ಭೇಟಿ ಮಾಡಿ ನಾರಾಯಣಪುರದ ಅಣೆಕಟ್ಟು ಮತ್ತು ನಾಲೆಗಳ ಕಟ್ಟುವಿಕೆಯ ಬಗೆ ವಿವರಗಳನ್ನು ಚರ್ಚಿಸಿದೆ. ಅದರೊಟ್ಟಿಗೆ ನೆಟ್ಟಗೆ ಮತ್ತು ಅಡ್ಡಲಾಗಿ ವಿದ್ಯುಚ್ಛಕ್ತಿ ಉತ್ಪಾದನೆ, ದೊಡ್ಡ ಗೇಟುಗಳು, ಬಾಗಲಕೋಟೆ ಮುಳುಗಡೆ ಪ್ರದೇಶ, ನೀರಾವರಿ ಮುಂತಾದವುಗಳ ಬಗ್ಗೆ ಚರ್ಚಿಸಿದೆ. ಅವರು ಎಲ್ಲಾ ಮಾಹಿತಿ ನೀಡಿದರು. ಸುಮಾರು ೨೫ ಪುಟಗಳ ವಿವರವಾದ ಟಿಪ್ಪಣಿಯನ್ನು ಬೆಳಗಾಂನಲ್ಲಿ ಮೊದಲು ಮುಖ್ಯ ಇಂಜಿನಿಯರರಾಗಿದ್ದ ರೆಡ್ಡಿಯವರಿಂದ ಬಂದಿದ್ದು ಆ ದೃಷ್ಟಿಯಿಂದ ಕೆಲವು ವಿವರಗಳನ್ನು ಕೇಳಿದೆ. ಆಲಮಟ್ಟಿಯಲ್ಲಿ ಈ ಚರ್ಚೆಯಾದ ಮೇಲೆ ರೆಡ್ಡಿಯ ಅಭಿಪ್ರಾಯಗಳ ಬಗ್ಗೆ ಸಂದೇಹವುಂಟಾಯಿತು. ಮಣ್ಣು ದಿಣ್ಣೆಯ ಉದ್ದಕ್ಕೂ ಕರೆದೊಯ್ದರು ಮತ್ತು ಅಲ್ಲಿಂದ ಅಣೆಕಟ್ಟಿನ ಕಾಂಕ್ರೀಟ್ ನಿರ್ಮಾಣಕ್ಕೆ ವಸ್ತುಗಳನ್ನು ಟ್ರಾಲಿಗಳಲ್ಲಿ ತರುತ್ತಿರುವುದನ್ನು ನೋಡಿದೆ.

**ಫೆಬ್ರವರಿ ೧೬, ೧೯೯೬** **ಚಿತ್ರದುರ್ಗ**

ರಾಜಾಸ್ಥಾನ ರಾಜ್ಯಗಳಲ್ಲಿ ಜೈನಾರಾಯಣವ್ಯಾಸ್ ಮತ್ತು ಇತರರ ಜೊತೆಯಲ್ಲಿ ಸ್ವಾತಂತ್ರ್ಯಪೂರ್ವ ದಿನಗಳಲ್ಲಿ ರಾಜಾಸ್ತಾನದಲ್ಲಿ ಶಾಸ್ತ್ರಿ ಒಬ್ಬ ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು. ಹೆಚ್ಚಿನ ನಾಯಕರುಗಳೆಲ್ಲಾ ನನ್ನ ಸ್ನೇಹಿತರು. ಅಖಿಲ ಭಾರತ ರಾಜ್ಯಗಳ ಜನರ ಸಮ್ಮೇಳನದಲ್ಲಿ ಪ್ರತಿ ವರ್ಷ ನಾವು ಭೇಟಿ ಮಾಡುತ್ತಿದ್ದೆವು. ಭಾರತದ ವಿವಿಧ ಭಾಗಗಳಲ್ಲಿ ಹೆಚ್ಚಾಗಿ ಉತ್ತರ ಭಾರತದಲ್ಲಿ ಸಭೆಗಳು ನಡೆಯುತ್ತಿದ್ದವು. ಕರ್ನಾಟಕದ ಮುಖ್ಯಮಂತ್ರಿಯಾಗಿದ್ದಾಗ ನಾನು ಈ ಸಂಸ್ಥೆಗೆ ಹಣಕಾಸು ಸಹಾಯ ಮಾಡಿದ್ದೆ. ಇತರ ರಾಜ್ಯಗಳಿಂದ ಸಹಾಯ ಬರುವಂತೆ ಮಾಡಿದ್ದೆ. ಹೊರಸ್ಥಳಗಳಿಗೆ ಹೋಗುವುದಕ್ಕೆ ನನಗೆ ಸಂತೋಷ.

**ಫೆಬ್ರವರಿ ೨೩, ೧೯೯೬**

ಟೆಲಿಗ್ರಾಂ ಮೂಲಕ ಸಂಪರ್ಕಿಸಲು ನಿರಂತರ ಪ್ರಯತ್ನಗಳಾದ ಮೇಲೆ ಕಳೆದ ಮೂರು ದಿನಗಳಿಂದ ಅನೇಕ ಸಲ ಫೋನು ಮಾಡಿದ ಮೇಲೆ ರಾತ್ರಿ ೮ ಗಂಟೆಗೆ ಎಸ್.ಎನ್. ಮಿಶ್ರ (ಶ್ಯಾಂ ಬಾಬು) ರವರ ಫೋನು ಕರೆ ಬಂತು. ದೇಶದಲ್ಲಿ ಅಸಂತೋಷ ಮತ್ತು ಅನಪೇಕ್ಷಿತ ಬೆಳವಣಿಗೆಗಳನ್ನು ಗಮನದಲ್ಲಿಟ್ಟುಕೊಂಡು ಕೇಂದ್ರದಲ್ಲಿ ಮಂತ್ರಿ ಮತ್ತು ವಿಶೇಷವಾಗಿ ಸರಕಾರಗಳಲ್ಲಿ ಒಟ್ಟಾರೆ ನೈತಿಕತೆಯು ಕುಸಿಯುತ್ತಿರುವುದು, ಮಾಫಿಯಾ,

ಆರ್ಥಿಕ ಅಸಮತೋಲನಗಳು, ಕ್ಲೇಶ, ಬಡತನ, ನಿರುದ್ಯೋಗ, ಉಪವಾಸ, ಅನಾರೋಗ್ಯ ಮುಂತಾದವುಗಳ ಬಗ್ಗೆ ಹೇಳಿದೆ. ರಾಷ್ಟ್ರೀಯ ಒಮ್ಮತದ ಸದಸ್ಯರ ಸಭೆಯನ್ನು ಕರೆಯುವ ಅಗತ್ಯವಿದೆಯೆಂದು ಹೇಳಿದೆ. ನಾನು ಅದರ ಅಧ್ಯಕ್ಷನಾಗಿದ್ದೆ ಮತ್ತು ಅವರು ಕಾರ್ಯದರ್ಶಿ. ಅವರು ಈ ಅಭಿಪ್ರಾಯಕ್ಕೆ ನನ್ನನ್ನು ಅಭಿನಂದಿಸಿದರು. ಅಗತ್ಯವಾದುದನ್ನು ಮಾಡಲು ತನಗೆ ಇಷ್ಟವಿದೆ ಎಂದು ಹೇಳಿದರು. ಈ ವಿಷಯದ ಬಗ್ಗೆ ಪತ್ರ ಬರೆಯುವುದಾಗಿ ಹೇಳಿದೆ. 'ವೃತ್ತಿ ಶಿಕ್ಷಣ ಸಮಿತಿ'ಯ ಉಪಾಧ್ಯಾಯರು ೧೦ ವರ್ಷಗಳಿಗಿಂತ ಜಾಸ್ತಿ ಸೇವೆ ಸಲ್ಲಿಸಿದ್ದು ೧೭ ವರ್ಷಗಳವರೆಗೆ ಆಗಿದ್ದರೂ ಅವರನ್ನು ಖಾಯಂಗೊಳಿಸಿಲ್ಲ, ಹತ್ತುಸಾವಿರಕ್ಕೂ ಜಾಸ್ತಿ ಇರುವ ಇವರು ಎಲ್ಲಾ ಜಿಲ್ಲೆಗಳಲ್ಲಿ ಹರತಾಳ ನಡೆಸುತ್ತಿದ್ದಾರೆ. ಮುಖ್ಯಮಂತ್ರಿ ದೇವೇಗೌಡರಿಗೆ ನಾನು ಕಾಗದ ಬರೆದಿದ್ದಕ್ಕೆ ಈ ವಿಷಯವನ್ನು ಬೇಗ ಇತ್ಯರ್ಥ ಮಾಡುವುದಾಗಿ ಹೇಳಿದರು. ರಾಜ್ಯದ ವಿಧಾನಸಭೆ ಮತ್ತು ಪರಿಷತ್ತು ಈಗ ಅಧಿವೇಶನದಲ್ಲಿದೆ. ಈ ವಿಷಯವು ಸ್ಪಷ್ಟವಾಗಿ ಬರುತ್ತಿದೆ. 'ಹವಾಲಾ' ಚಳವಳಿಯಲ್ಲಿ ಹೆಚ್ಚು ಹೆಚ್ಚು ಮಂತ್ರಿಗಳು, ಮಾಜಿ ಮಂತ್ರಿಗಳು, ಕಾರ್ಯದರ್ಶಿಗಳು ಮತ್ತು ಇತರ ಮುಖಂಡರುಗಳು ಸಿಕ್ಕಿಹಾಕಿಕೊಳ್ಳುತ್ತಿದ್ದಾರೆ. ಸುಮಾರು ೧೦ ಮಂತ್ರಿಗಳು ರಾಜೀನಾಮೆ ನೀಡಿದ್ದಾರೆ. ಇದನ್ನು ಸೂಕ್ಷ್ಮವಾಗಿ ಗಮನಿಸಬೇಕಾದ ಅಗತ್ಯವಿದೆ.

**ಫೆಬ್ರವರಿ ೨೮, ೧೯೯೬ ಚಿತ್ರದುರ್ಗ**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿ ಶ್ರೀ ಗುಪ್ತಾ ಮತ್ತು ವಾಸ್ತುಶಿಲ್ಪ ಇಲಾಖೆಯ ನಿರ್ದೇಶಕ ಶ್ರೀ ದೇವರಾಜ್ ಶ್ರೀ ಶೈಲಾರಾಧ್ಯ ನೆನ್ನೆ ಕೂಡಿ ಬಂದಿದ್ದರು. ಅವರ ಜೊತೆಯಲ್ಲಿ ಇನ್ನಿಬ್ಬರು, ಬೆಳಿಗ್ಗೆ ೧೦-೩೦ಕ್ಕೆ ಬಂದು ಸರಕಾರವು ರೂ. ೫೦,೦೦೦ ಅನ್ನು ಆ ಜಿಲ್ಲೆಯ ಇತಿಹಾಸ ಮತ್ತು ಶತಮಾನಗಳವರೆಗೆ ಪಾಳೆಗಾರ ಮತ್ತು ಮುಂತಾದವರ ಇತಿಹಾಸವನ್ನು ಚೆನ್ನಾಗಿ ತಿಳಿದವರೆಂದು ಪ್ರಸಿದ್ಧವಾದ ದಿವಂಗತ ಹುಲ್ಲೂರು ಶ್ರೀನಿವಾಸ ಜೋಯಿಸರ ಪುತ್ರ ಪಾಂಡುರಂಗ ಜೋಯಿಸರಿಗೆ ಮಂಜೂರು ಮಾಡಿದ್ದಾರೆ. ಸ್ಥಳೀಯ ಮ್ಯೂಸಿಯಂಅನ್ನು ಕಟ್ಟಿದ್ದು ಅದರ ಕ್ಯೂರೇಟರ್ ಎಂದು ನೇಮಕವಾಗಿದ್ದರೂ ಪಾಂಡುರಂಗ ಜೋಯಿಸರಿಗೆ ಬಹಳ ಕಮ್ಮಿ ಸಂಭಾವನೆ ಕೊಡಲಾಗುತ್ತಿತ್ತು. ಇನ್ನೂ ಹೆಚ್ಚಿಗೆ ಕೊಡಬೇಕೆಂದು ೮-೧೦ ವರ್ಷಗಳಿಂದ ಬಹಳ ಬಲವಾಗಿ ಬರೆಯುತ್ತಿದ್ದೆ. ಈಗ ಅವರಿಗೆ ಸುಮಾರಾಗಿ ಒಳ್ಳೆಯ ಮೊಬಲಗನ್ನು ಕೊಡಲು ನಿರ್ಧರಿಸಿದ್ದಾರೆ. ಪಾಂಡುರಂಗ ಜೋಯಿಸರು ಬಹಳ ಬಡ ಪರಿಸ್ಥಿತಿಯಲ್ಲಿದ್ದಾರೆ. ನನಗೆ ಇದರಿಂದ ಸಂತೋಷವಾಗಿದೆ. ಅವರ ತಂದೆ ಸಂಗ್ರಹಿಸಿದ ಅನೇಕ ಹಳೆಯ ದಾಖಲೆಗಳು ಮುಂತಾದುವುಗಳನ್ನು ಅವರು ಹೊಂದಿದ್ದಾರೆ. ಸಂಬಂಧಪಟ್ಟ ದಾಖಲೆಗಳನ್ನು ಪ್ರಕಟಿಸುತ್ತೇವೆ ಮತ್ತು ಅದಕ್ಕೆ ಪಾಂಡುರಂಗ ಜೋಯಿಸರಿಗೆ ಗೌರವಧನ (Royalty) ಕೊಡುತ್ತೇವೆಂದು ಈ ಅಧಿಕಾರಿಗಳು ಹೇಳಿದರು. ಅವರು ಹಾಗೆ

ಮಾಡಬಹುದೆಂದು ನಾನು ಹೇಳಿಕಳುಹಿಸಿದೆ. ಸಂಜೆ ಪಾಂಡುರಂಗ ಜೋಯಿಸರು ಬಂದು ಆ ಹಣವನ್ನು ತಮಗೆ ಪಾವತಿ ಮಾಡಿರುವುದಾಗಿ ಹೇಳಿದರು. ಅವರಿಗೆ ಸಂತೋಷವಾಗಿತ್ತು. ದಾಖಲೆಗಳನ್ನು ಕೊಡಲು ಕೂಡ ಒಪ್ಪಿಕೊಂಡರು.

**ಮಾರ್ಚ್ ೩, ೧೯೯೬ ಚಿತ್ರದುರ್ಗ**

ಈ ದಿನ ಎಂದಿನಂತೆ ಅರ್ಧ ಗಂಟೆ ನಡೆದೆ. ಕಳೆದ ಒಂದು ತಿಂಗಳಿಂದ 'ಹವಾಲಾ' ಹಗರಣದಲ್ಲಿ ಇಡೀ ಭಾರತವು ಆಸಕ್ತಿ ವಹಿಸುತ್ತಿದೆ. ಎಸ್.ಪಿ. ಜೈನ್ ಎಂಬ ಶ್ರೀಮಂತ ಕೈಗಾರಿಕೋದ್ಯಮಿಯ ದಿನಚರಿ ಪುಸ್ತಕ(ಡೈರಿ)ದಿಂದ ಹೊರ ಬಂದ ವಿಷಯವೆಂದರೆ ಕೆಲವು ಮಂತ್ರಿಗಳು, ಅಧಿಕಾರಶಾಹಿ ಹಾಗೂ ರಾಜಕೀಯ ಪಕ್ಷಗಳ ಮುಖಂಡರುಗಳಿಗೆ ಲಂಚ ನೀಡಲಾಗಿದೆ ಎಂಬ ವಿಚಾರ ಹೊರಬಿದ್ದುದರಿಂದ ಗಲಾಟೆಯಾಗುತ್ತಿದೆ. ಈ ವಿಷಯದಲ್ಲಿ ಸುಪ್ರೀಂ ಕೋರ್ಟನ್ನು ಅದರ ಮುಖ್ಯ ನ್ಯಾಯಾಧೀಶರು ಹಾಗೂ ನ್ಯಾಯಾಧೀಶರುಗಳನ್ನು ಅಭಿನಂದಿಸಬೇಕು. ಏಕೆಂದರೆ ಸಿಬಿಐ ಎಚ್ಚೆತ್ತುಕೊಳ್ಳಬೇಕು ಮತ್ತು ಅದು ತನ್ನ ಕರ್ತವ್ಯಗಳ ಬಗ್ಗೆ ಅತೀವ ನಿರ್ಲಕ್ಷ್ಯ ತೋರಿಸಬಾರದೆಂದು ಚುರುಕಾಗಿ ಮತ್ತು ಸತ್ಯಸಂಧವಾಗಿರಬೇಕೆಂದು ಚಾಟಿ ಏಟು ಕೊಟ್ಟಂತೆ ಹೇಳಿದೆ. ಇದರ ಪರಿಣಾಮವೇನೆಂದರೆ ಕೆಲವು ಕೇಂದ್ರಮಂತ್ರಿಗಳು ರಾಜೀನಾಮೆ ನೀಡಿದ್ದಾರೆ. ಬಿಜೆಪಿಯ ಅಧ್ಯಕ್ಷ ಅಡ್ವಾನಿಯೂ ಸೇರಿದಂತೆ ರಾಜಕೀಯ ಪಕ್ಷಗಳ ಮುಂದಾಳುಗಳು ಲೋಕಸಭೆಗೆ ರಾಜೀನಾಮೆ ನೀಡಿದರು. ಇನ್ನೂ ಆಶ್ಚರ್ಯಗಳು ಆಗಬಹುದು. ಪ್ರಧಾನಿಯ ಹೆಸರು ಡೈರಿಯಲ್ಲಿಲ್ಲ. ಆದರೆ ಸಿಬಿಐಗೆ ಕೊಟ್ಟಿರುವ ಹೇಳಿಕೆಯಲ್ಲಿ ಅವರ ಹೆಸರನ್ನು ಹೇಳಿರುವಂತಿದೆ. ಇಲ್ಲಿಯವರೆಗೆ ಅವರು ಮುಕ್ತರಾಗಿದ್ದರು. ಅವರೂ ಕೂಡ ಅಂತಹ ಸತ್ಯಸಂಧರೇನಲ್ಲ. ಅವರು ಅಷ್ಟೇ ಅಥವಾ ಅದಕ್ಕೂ ಹೆಚ್ಚು ಭ್ರಷ್ಟರೆನಿಸುತ್ತದೆ. ಕಾದುನೋಡೋಣ.

**ಮಾರ್ಚ್ ೪, ೧೯೯೬ ಇಂಗಳದ್ಹಾಳ್ ತಾಮ್ರದ ಗಣಿ**

ತಾಮ್ರದ ಗಣಿಗಾರಿಕೆಯು ಲಾಭವಲ್ಲದ್ದರಿಂದ ಮತ್ತು ಬೆಟ್ಟಗಳಲ್ಲಿ ದೊರೆಯುವ ಚಿನ್ನವು ವರ್ಷಕ್ಕೆ ೮ ಕೋಟಿ ರೂ.ಗಳು (೮-೧೦) ನಿವ್ವಳ ವರಮಾನವನ್ನು ಕೊಡುತ್ತದೆ ಎಂದು ನಿರೀಕ್ಷಿಸಿರುವುದರಿಂದ ತಾಮ್ರದ ಗಣಿಯನ್ನು ಚಿನ್ನದ ಗಣಿಯಾಗಿ ಪರಿವರ್ತಿಸುವ ಉದ್ಘಾಟನಾ ಸಮಾರಂಭಕ್ಕೆ ಮುಖ್ಯಮಂತ್ರಿ ದೇವೇಗೌಡರು ಬರಲಿಲ್ಲ. ಸುಮಾರು ೫ ಸಾವಿರ ಹಳ್ಳಿಗರು ಅದರಲ್ಲಿ ಹೆಚ್ಚಾಗಿ ಅಧಿಕಾರಿಗಳು, ಮಂತ್ರಿಗಳು ಮತ್ತು ಪಾರ್ಲಿಮೆಂಟು ಸದಸ್ಯರು ಮತ್ತು ವಿಧಾನಸಭೆಯ ಸದಸ್ಯರೂ ಸಭೆಗೆ ಬಂದಿದ್ದರು. ಮಂತ್ರಿಗಳಾದ ದೇಶಪಾಂಡೆ ಮತ್ತು ತಿಪ್ಪೇಸ್ವಾಮಿ ಭಾಷಣ ಮಾಡಿ ೧೯೯೬-೯೭ರ ಆಯವ್ಯಯವನ್ನು ಮಧ್ಯಾಹ್ನ ೧ ಗಂಟೆಗೆ ಮಂಡಿಸಲಿರುವುದರಿಂದ ತಾನು ತುರ್ತಾಗಿ ಬೆಂಗಳೂರಿಗೆ ಹೋಗಬೇಕಾಗಿದೆಯೆಂದು ಹೇಳಿ ಹೋದರು. ನಾನು ಗಣಿಗಾರಿಕೆ ಮಾತ್ರವಲ್ಲದೆ

ರಾಜಕೀಯ ಭ್ರಷ್ಟಾಚಾರ ಮುಂತಾದುವುಗಳ ಬಗ್ಗೆ ಭಾಷಣ ಮಾಡಿದೆ. ಆಮೇಲೆ ಪಾರ್ಲಿಮೆಂಟು ಸದಸ್ಯ ಹೆಚ್. ಹನುಮಂತಪ್ಪ ಸುಮಾರು ಅರ್ಧ ಗಂಟೆ ಭಾಷಣ ಮಾಡಿದರು. ಇನ್ನು ಇಬ್ಬರು ಮೂವರು ಭಾಷಣ ಮಾಡುವ ನಿರೀಕ್ಷೆಯಿತ್ತು. ಗಣೆಯು ಒಳ್ಳೆಯ ಫಲಿತಾಂಶ ಕೊಡುತ್ತದೆಯೆಂದು ಮತ್ತು ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿ ಪ್ರಾರಂಭಿಸುವ ಇತರವುಗಳೂ ಕೂಡ ಒಳ್ಳೆಯ ಫಲಿತಾಂಶ ನೀಡುತ್ತವೆಯೆಂದು ಆಶಿಸುತ್ತೇನೆ.

**ಮಾರ್ಚ ೧೯, ೧೯೯೬ ಬೆಂಗಳೂರು-ದೆಹಲಿ**

ಸರ್ದಾರ್ ವಲ್ಲಭಭಾಯಿ ಪಟೇಲರ ಸ್ಮಾರಕ ಟ್ರಸ್ಟಿನ ಮ್ಯಾನೇಜಿಂಗ್ ಟ್ರಸ್ಟಿಯಾಗಿರುವ ಪಟೇಲರು ಸೇಥಿಯಾ ಜೊತೆಯಲ್ಲಿ ಬಂದರು. ನಾಳಿನ ಟ್ರಸ್ಟಿಗಳ ಬೋರ್ಡು ಮೀಟಿಂಗ್‌ನ ಬಗ್ಗೆ ಸ್ವಲ್ಪ ಚರ್ಚೆಯನ್ನೂ ಮಾಡಿದೆವು. ೧೯೯೬ರ ಏಪ್ರಿಲ್ ೨೭, ಮೇ ೨ ಮತ್ತು ೭ರಂದು ಚುನಾವಣೆ ನಡೆಯಬೇಕೆಂದು ಚುನಾವಣಾ ಆಯೋಗವು ಚುನಾವಣಾ ತಾರೀಕನ್ನು ನಿರ್ಧರಿಸಿರುವುದರಿಂದ ಪ್ರಧಾನಿ ನರಸಿಂಹರಾವ್‌ರನ್ನು ನೋಡಬೇಕಾಗಿಲ್ಲ. ನನಗೆ ತಿಳಿದಂತೆ ನರಸಿಂಹರಾವ್‌ರವರು ಚುನಾವಣೆಯನ್ನು ಉದ್ದೇಶಪೂರ್ವಕವಾಗಿ ಮುಂದೂಡುತ್ತಿದ್ದುದರಿಂದ ಸರ್ಕಾರವು ಒಪ್ಪಿಗೆ ಕೊಟ್ಟಿಲ್ಲವಾದರೂ ಚುನಾವಣಾ ಆಯೋಗವು ಚುನಾವಣೆ ದಿನಗಳನ್ನು ನಿಗದಿಪಡಿಸಿದೆ. ಪ್ರಧಾನಿಯು ರಾಷ್ಟ್ರಪತಿ ಶಂಕರ ದಯಾಳ್ ಶರ್ಮಾರಿಗೆ ಸಲ್ಲಿಸಿದ ಎರಡು ಸುಗ್ರೀವಾಜ್ಞೆಯನ್ನು ತಿರಸ್ಕರಿಸಲಾಯಿತು. ಈ ಮನುಷ್ಯ ಈಗ ಚೆನ್ನಾಗಿ ನಡೆದುಕೊಂಡಿದ್ದಾರೆ. ಅವರು ಇಷ್ಟು ಧೈರ್ಯವಾಗಿ ಕೆಲಸ ಮಾಡುತ್ತಾರೆಂದು ನಾನು ನಿರೀಕ್ಷಿಸಿರಲಿಲ್ಲ. ಚುನಾವಣೆಗಳ ನಂತರ ಪ್ರಧಾನಿಯು ಪ್ರಧಾನಿಯಾಗಿರುವುದಿಲ್ಲವೆಂಬುದರಿಂದ ಅವರು ಹಾಗೇ ಮಾಡಿರಬಹುದು. ರಾತ್ರಿ ೮-೩೦ಕ್ಕೆ ಕರ್ನಾಟಕದ ಜನತಾದಳ ಪಕ್ಷದ ಅಧ್ಯಕ್ಷ ಸಿ.ಎಂ. ಇಬ್ರಾಹಿಂ ಈಗ ದೆಹಲಿಯಲ್ಲಿದ್ದುದರಿಂದ ನನ್ನಲ್ಲಿಗೆ ಬಂದು ನನ್ನ ಕಾಲು ಮುಟ್ಟಿ ನಮಸ್ಕಾರ ಮಾಡಿ ಸಾಮಾನ್ಯರಂತೆ ಕರ್ನಾಟಕದ ರಾಜಕೀಯವನ್ನು ಚರ್ಚಿಸಿದರು. ಮಧ್ಯಾಹ್ನ ಭವನ್‌ನ ಅಧಿಕಾರಿಗಳು ಬಂದು ನನಗಾಗಿ ಎಲ್ಲವನ್ನೂ ಮಾಡುವುದಾಗಿ ಹೇಳಿದರು.

**ಮಾರ್ಚ ೩೦, ೧೯೯೬ ದೆಹಲಿ**

ಬೆಳಿಗ್ಗೆ ೧೧ ಗಂಟೆಗೆ ಟ್ರಸ್ಟಿಗಳ ಮಂಡಳಿಯ ಸಭೆ ನಡೆಯಿತು. ಸಾದಿಕ್ ಆಲಿ, ಚೌಧರಿ, ಎಸ್.ಎನ್. ಮಿಶ್ರ, ನಿರ್ವಾಹಕ ನಿರ್ದೇಶಕ ಮನುಭಾಯಿ ಪಟೇಲ್, ರಾಮಕೃಷ್ಣ ಹೆಗಡೆ ಮತ್ತು ನಾನು ಹಾಜರಿದ್ದೆವು. ಇಬ್ಬರು ಗೈರುಹಾಜರಾಗಿದ್ದರು. ಹಿಂದಿನ ಸಭೆಯ ನಡವಳಿಕೆಗಳನ್ನು ದೃಢೀಕರಿಸಿದೆವು. ಕಾರ್ಯಕ್ರಮ ಪಟ್ಟಿಯಲ್ಲಿದ್ದ ಇತರ ವಿಷಯಗಳನ್ನು ಪರಿಗಣಿಸಿದೆವು. ಮುಂದಿನ ವರ್ಷದ ಆಯವ್ಯಯವನ್ನು ಅಂಗೀಕರಿಸಿದೆವು.

ಚುನಾವಣೆಗಳಾಗುವವರೆಗೆ ಟ್ರಸ್ಟಿಗಳ ೩ ಸ್ಥಾನಗಳನ್ನು ತುಂಬುವುದನ್ನು ಮುಂದೂಡಿದೆವು ಮತ್ತು ಸಿಬ್ಬಂದಿಯ ಸಂಬಳಗಳನ್ನು ಹೆಚ್ಚಿಸಲು ನಿರ್ಧರಿಸಿದೆವು. ಚುನಾವಣೆಗಳ ನಂತರ ಸೇರಬೇಕೆಂದಾಯಿತು. ನಾನು ರಾಜೀನಾಮೆ ಕೊಡುತ್ತೇನೆಂದಾಗ ಒತ್ತಾಯಪೂರ್ವಕವಾಗಿ ಪ್ರತಿಭಟಿಸಲಾಯಿತು. ನನಗೆ ವಿಮಾನ ವೆಚ್ಚ ಮತ್ತು ಕಾರು ವೆಚ್ಚಕ್ಕಾಗಿ ಸೇಥಿಯವರಿಂದ ೪೦೦೦ ರೂ. ಗಳು ಬಂದವು. ಆಗಲೇ ಚೆಕ್ ಮುಖಾಂತರ ೬೦೦೦ ರೂ. ಗಳನ್ನು ಪಡೆದಿದ್ದೇನೆ. ಸಾಯಂಕಾಲ ೫ ಗಂಟೆಗೆ ಸರ್ದಾರ್ ವಲ್ಲಭಭಾಯಿ ಪಟೇಲ್ ಸೊಸೈಟಿ ಸಭೆ ಇತ್ತು. ಕಾರ್ಯದರ್ಶಿ ಚೋಪ್ರಾ, ಅವರ ಹೆಂಡತಿ, ಒಬ್ಬ ಸದಸ್ಯ ಮತ್ತು ಅಧ್ಯಕ್ಷನಾಗಿ ನಾನು ಹಾಜರಿದ್ದೆವು. ಹಿಂದಿನ ಸಭೆಯ ನಡವಳಿಕೆಗಳನ್ನು ಅಂಗೀಕರಿಸಿದೆವು ಮತ್ತು ನಾವು ನಾಲ್ವರೇ ಇದ್ದೆವು. ಬೇರೆಲ್ಲಾ ವಿಷಯಗಳನ್ನು ತೀರ್ಮಾನಿಸಿದೆವು. ಸಾಮಾನ್ಯವಾಗಿ ಬೇರೆ ಯಾರೂ ಹಾಜರಾಗುವುದಿಲ್ಲ. ವಾಸ್ತವವಾಗಿ ಇದು ಒಬ್ಬನೇ ವ್ಯಕ್ತಿಯ ಅಂದರೆ ಡಾ. ಚೋಪ್ರಾರ ಕೆಲಸವಾಗಿ ಬಿಟ್ಟಿದೆ. ಮುಖ್ಯ ಉದ್ದೇಶವಾದ ಸರ್ದಾರ್ ಪಟೇಲರ ಜೀವನ ಚರಿತ್ರೆಯನ್ನು ಪ್ರಕಟಿಸುವ ಕೆಲಸ ಮಾಡುತ್ತಿದ್ದಾರೆ. ಆರು ಮತ್ತು ಏಳನೇ ಸಂಪುಟಗಳು ಸಿದ್ಧವಾಗಿವೆ. ಚುನಾವಣೆಗಳ ನಂತರ ಈ ಎರಡೂ ಸಂಪುಟಗಳನ್ನು ಪ್ರಕಟಿಸಬಹುದೆಂದು ಚೋಪ್ರಾರವರಿಗೆ ಹೇಳಿದೆ. ನೇತಾಜಿ ಸುಭಾಷ್ ಚಂದ್ರ ಬೋಸರ ಜೀವನ ಚರಿತ್ರೆಯನ್ನೂ ಕೂಡ ಪ್ರಕಟಿಸಲು ಒಪ್ಪಿಕೊಂಡು ವಿವರಗಳನ್ನು ಚರ್ಚಿಸಿದೆವು.

**ಏಪ್ರಿಲ್ ೨, ೧೯೯೬**

ಗುಲ್ಬರ್ಗಾ ವಿಶ್ವವಿದ್ಯಾನಿಲಯವನ್ನು ಬಸವೇಶ್ವರ ವಿಶ್ವವಿದ್ಯಾನಿಲಯ ಎಂದು ಹೆಸರಿಡುವುದರಲ್ಲಿ ತಡವಾದುದರಿಂದ ಬೀದರ್ ಜಿಲ್ಲೆಯ ಒಂದು ಹಳ್ಳಿಯಲ್ಲಿ ಬಸ್ಸೊಂದನ್ನು ಸುಡಲಾಯಿತು ಎಂದು ಬೆಳಗಿನ ವೃತ್ತಪತ್ರಿಕೆಗಳಲ್ಲಿ ಓದಿದೆ. ಒಂದು ಪತ್ರಿಕಾಗೋಷ್ಠಿಯನ್ನು ಕರೆದು ಹಿಂಸಾಕೃತ್ಯಗಳಲ್ಲಿ ಪ್ರತಿಭಟನೆಯನ್ನು ವ್ಯಕ್ತಪಡಿಸುವ ಈ ಪ್ರವೃತ್ತಿಯ ವಿರುದ್ಧ ಬಹಳ ಬಲವಾದ ಹೇಳಿಕೆ ನೀಡಿದೆ. ಬಸವೇಶ್ವರರ ಅನುಯಾಯಿಗಳು ಈ ರೀತಿಯಾಗಿ ಒತ್ತಡ ತರುವುದು ಯೋಗ್ಯವಲ್ಲ. ಸರಕಾರವು ವಿಶ್ವವಿದ್ಯಾನಿಲಯಕ್ಕೆ ಅವರ ಹೆಸರನ್ನು ಇಡುತ್ತದೆಯೋ ಇಲ್ಲವೋ ಅದೇನೂ ಅಷ್ಟು ಪ್ರಾಮುಖ್ಯವಲ್ಲ ಮತ್ತು ಅವರ ಭಕ್ತರಿಂದ ಈ ರೀತಿಯ ಒರಟು ಕೆಲಸವು ತಪ್ಪು. ಅಂತಹ ದೊಡ್ಡ ಸಮಾಜ ಸುಧಾರಕರಿಗೆ ಇದು ಗೌರವ ತರುವುದಿಲ್ಲ ಎಂದು ಹೇಳಿದೆ.

**ಏಪ್ರಿಲ್ ೧೨, ೧೯೯೬** **ಬೆಂಗಳೂರು**

ಲಂಡನ್ ವಿಶ್ವವಿದ್ಯಾನಿಲಯದ ರಾಜನೀತಿಯಲ್ಲಿ ಹಿರಿಯ ಉಪನ್ಯಾಸಕರಾದ ಸುನಿಲ್ ಖಿಲ್ನಾನಿಯವರು ೧೦ ಗಂಟೆಗೆ ಬಂದು ೧೨-೩೦ರವರೆಗಿದ್ದರು. ಅವರು ಪಂಡಿತ ಜವಹರಲಾಲ್ ನೆಹ್ರೂ ಅವರ ಬಗ್ಗೆ ಬರೆಯುತ್ತಿದ್ದು ಅವರ ಬಗ್ಗೆ ನನ್ನನ್ನು ಕೇಳಿದರು.

ನಾನು ಮುಚ್ಚುಮರೆಯಿಲ್ಲದೆ ನೆಹ್ರೂರ ಒಳ್ಳೆಯದು ಮತ್ತು ಕೆಟ್ಟದ್ದನ್ನು ಅವರು ಹೇಗೆ ಇಷ್ಟವಾಗುತ್ತಿದ್ದರು ಮತ್ತು ಅವರ 'ಸಮಾಜವಾದದ ಮಾದರಿ ಸಮಾಜ'ದಿಂದ ಭಾರತವು ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕವಾಗಿ ಕೆಳಮಟ್ಟಕ್ಕೆ ಇಳಿಯುವುದನ್ನು ಹೇಗೆ ತಪ್ಪಿಸಿತು; ಅವರು ಗ್ರಾಮೀಣ ಭಾರತ ಮತ್ತು ಅದರ ಸಮಸ್ಯೆಗಳ ಬಗ್ಗೆ ಅರಿವಿಲ್ಲದವರಾಗಿದ್ದರು ಎಂಬ ನಿರ್ದೇಶಕತತ್ವದ ಬಗ್ಗೆ ನನ್ನ ಮಾಮೂಲಿನ ಅಭಿಪ್ರಾಯಗಳನ್ನು ಹೇಳಿದೆ. ಭಾರತದ ಸಮಸ್ಯೆ, ಜನಜೀವನ, ಧರ್ಮ ಮುಂತಾದವುಗಳ ಬಗ್ಗೆ ನನ್ನ ವಿಷಯಗಳ ಬಗ್ಗೆ ನನ್ನ ಅಭಿಪ್ರಾಯಗಳನ್ನು ಅವರು ಕೇಳಿದರು.

**ಏಪ್ರಿಲ್ ೧೭, ೧೯೯೬** **ಚಿತ್ರದುರ್ಗ**

ರಾಮಕೃಷ್ಣ ಹೆಗಡೆಯವರು ಈ ಬೆಳಿಗ್ಗೆ ಸುಮಾರು ೯-೩೦ಕ್ಕೆ ನನ್ನ ಮನೆಗೆ ಬಂದು ೧೦ ನಿಮಿಷ ಕಳೆದರು. ತಮ್ಮ ಪಕ್ಷ ಜನತಾದಳದ ಪರವಾಗಿ ಅವರ ಜೊತೆಯಲ್ಲಿ ಅನೇಕರು ಬಂದಿದ್ದು ಅವರಲ್ಲಿ ೨-೩ ವ್ಯಕ್ತಿಗಳನ್ನು ಪರಿಚಯಿಸಿದರು. ಒಬ್ಬರು ಸಿನಿಮಾತಾರೆ. ಯಾವುದಾದರೂ ವಿಶ್ವವಿದ್ಯಾನಿಲಯದಲ್ಲಿ ಹೆಗಡೆ ತಾಯಿಯ ಜ್ಞಾಪಕಾರ್ಥ ವಾರ್ಷಿಕ ಬಹುಮಾನ ಅಥವಾ ವಿದ್ಯಾರ್ಥಿವೇತನವನ್ನು ಕೊಡುವುದಕ್ಕೆ ಒಂದು ನಿಧಿಯನ್ನು ಇಡಬೇಕೆಂದು ಅವರಿಗೆ ಸಲಹೆ ಮಾಡಿದೆ. ಮುಂದಿನ ವಾರ್ಷಿಕ ತಿಥಿಯಂದು ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಹಾಗೆ ಮಾಡುತ್ತೇನೆಂದು ಅವರು ಹೇಳಿದರು. ರಾಜಕೀಯದ ಬಗ್ಗೆ ನಾವು ಚರ್ಚಿಸಲಿಲ್ಲ. ಅವರೇನೂ ಅಷ್ಟೊಂದು ಗಂಭೀರವಾಗಿ ಸಂಬಂಧಪಟ್ಟಿಲ್ಲದಂತೆ ನನಗೆ ಅನಿಸಿತು. ಅವರ ಜೊತೆಯಲ್ಲಿ ಬಂದಿದ್ದವರೊಬ್ಬರು ಹೆಗಡೆ ಮುಂದಿನ ಪ್ರಧಾನಿಯಾಗುವಂತೆ ಹರಸಬೇಕೆಂದು ಕೇಳಿದಾಗ ನಾವಿಬ್ಬರೂ ನಕ್ಕೆವು.

**ಮೇ ೧೪, ೧೯೯೬**

ಸಂಜೆಯ ಹೊತ್ತಿಗೆ ರಾಷ್ಟ್ರಪತಿ ಶಂಕರ ದಯಾಳ ಶರ್ಮರು ಬಿಜೆಪಿಯ ನಾಯಕ ವಾಜಪೇಯಿಯನ್ನು ಆಹ್ವಾನಿಸಿ ಸರಕಾರವನ್ನು ರಚಿಸಿ ಈ ತಿಂಗಳ ೩೦ನೇ ತಾರೀಕಿನೊಳಗೆ ಬಲವನ್ನು ಪರೀಕ್ಷಿಸಬೇಕೆಂದು ಹೇಳಿದರೆಂದು ಸುದ್ಧಿ ಬಂದಿತು. ಪತ್ರಿಕಾ ಜನರು ನನ್ನ ಅಭಿಪ್ರಾಯಕ್ಕೆ ಫೋನು ಮಾಡುತ್ತಿದ್ದರು. ಬಿಜೆಪಿಯು ಅತಿ ದೊಡ್ಡ ಪಕ್ಷವಾದುದರಿಂದ ಒಂದು ಸಂಪ್ರದಾಯವನ್ನು ಅನುಸರಿಸಿ ಅವರು ಸರಿಯಾದ ಕೆಲಸ ಮಾಡಿದ್ದಾರೆ. ಆದರೆ ನನ್ನ ಅಭಿಪ್ರಾಯವೇನೆಂದರೆ ದೇವೇಗೌಡ ನಾಯಕರಾಗಿರುವ ಪಕ್ಷವು ಸರಕಾರವನ್ನು ರಚಿಸುವುದಕ್ಕೆ ಅರ್ಹವಾದುದು. ನಾವು ೩೦ನೇ ತಾರೀಕಿನವರೆಗೆ ಕಾಯಬೇಕು. ರಾಷ್ಟ್ರಪತಿ ಸಂಪ್ರದಾಯವನ್ನು ಪಾಲಿಸಿದುದು ಸರಿ ಎಂಬುದು ನನ್ನ ಭಾವನೆ. ನಾವು ಕಾಯಬೇಕು.

**ಮೇ ೧೬, ೧೯೯೬ ಚಿತ್ರದುರ್ಗ**

ರಾಷ್ಟ್ರಪತಿಯವರು ಬಿಜೆಪಿ ನಾಯಕ ವಾಜಪೇಯಿಗೆ ಪ್ರಧಾನಮಂತ್ರಿಯಾಗಿ ಪ್ರಮಾಣವಚನ ಬೋಧಿಸಿದರು. ಪ್ರಧಾನಿಯು ಅವರ ಪಕ್ಷದ ೧೧ ಜನರನ್ನು ಕೇಂದ್ರದ ಮಂತ್ರಿಗಳ ಗುಂಪಾಗಿ ಮಾಡಿದ್ದಾರೆ. ಹೊಸ ಮಂತ್ರಿಮಂಡಲದ ಮೊದಲನೆ ಸಭೆ ಕೂಡ ಸೇರಿತು. ಸ್ವಾಭಾವಿಕವಾಗಿ ಹೊಸ ಪ್ರಧಾನಿಯು ಸರ್ಕಾರದ ಉದ್ದೇಶಗಳ ಬಗೆ ಕೆಲವು ಹಳೆಯ ಮಾತುಗಳನ್ನೇ ಹೇಳಿದರು. ವಾಸ್ತವವಾಗಿ ಅವರು ಹಾಗೆಯೇ ಮಾಡಬೇಕಾಗಿತ್ತು, ಮಾಡಿದ್ದಾರೆ, ಸಹಜ. ಅನೇಕ ವಿದೇಶಿ ಸರಕಾರಗಳು ಹೊಸ ಭಾರತ ಸರಕಾರದೊಂದಿಗೆ ಸಹಾನುಭೂತಿ ಮತ್ತು ಸ್ನೇಹವನ್ನು ವ್ಯಕ್ತಪಡಿಸಿವೆ. ಈ ತಿಂಗಳ ಕೊನೆಯೊಳಗೆ ಏನಾಗುತ್ತದೆ ಎಂದು ಕುತೂಹಲದಿಂದ ನಾವು ಗಮನಿಸಬೇಕು.

**ಮೇ ೧೭, ೧೯೯೬ ಚಿತ್ರದುರ್ಗ**

ದೆಹಲಿ ಮತ್ತು ಕೆಲವು ರಾಜ್ಯಗಳಲ್ಲಿ ಮಂತ್ರಿಮಂಡಲಗಳ ರಚನೆಯೇ ದೊಡ್ಡ ಸಮಾಚಾರ. ಅಟಲ್ ಬಿಹಾರಿ ವಾಜಪೇಯಿಯವರು ಭಾರತದ ಪ್ರಧಾನಿಗಳಾಗಿದ್ದಾರೆ. ಅದು ಎಷ್ಟು ದಿವಸಕ್ಕೆ ಪ್ರಧಾನಿ ಎಂಬುದು ಯಾರಿಗೂ ಗೊತ್ತಿಲ್ಲ. ೧೫ ದಿನಗಳು ಅಥವಾ ಕಡಿಮೆ ಇರಬಹುದು. ಈ ಪದವಿಗೆ ಅವರು ಅತ್ಯಂತ ಸೂಕ್ತವಾದ ವ್ಯಕ್ತಿ ಎಂಬುದರಲ್ಲಿ ಸಂದೇಹವಿಲ್ಲ. ಆ ತರಹದ ಗುಣ ಮತ್ತು ವರ್ಗದವರು ಕೆಲವೇ ವ್ಯಕ್ತಿಗಳು ನಮ್ಮಲ್ಲಿ ಇದ್ದಾರೆ. ಆದರೆ ಅವರಿಗೆ ಒಂದು ಪಕ್ಷ ಬೇಕು. ಆದರೆ ಬಿಜೆಪಿಯು ಮತೀಯ ಪ್ರವೃತ್ತಿಗಳಿಗೆ ಕುಪ್ರಸಿದ್ಧವಾಗಿದೆ.

**ಮೇ ೨೩, ೧೯೯೬ ಚಿತ್ರದುರ್ಗ**

ನಿರೀಕ್ಷಿಸಿದಂತೆ ಸಂಗ್ಮಾರವರು ಲೋಕಸಭೆಯ ಅಧ್ಯಕ್ಷರಾಗಿ ಚುನಾಯಿತರಾಗಿದ್ದಾರೆ. ಅವರು ಅತ್ಯಂತ ಕಿರಿಯ ಸಭಾಧ್ಯಕ್ಷ. ಆಗಲೇ ನಿರ್ಧರಿಸಿರುವ ಅವಿಶ್ವಾಸ ಮತವನ್ನು ಸಭೆಯಲ್ಲಿ ಮಂಡಿಸುವುದಕ್ಕೆ ಮುಂಚೆ ಅದು ನಡೆಯುವುದು ನಾಳೆ ರಾಷ್ಟ್ರಪತಿಗಳು ಜಂಟಿ ಸದನಗಳನ್ನು ಉದ್ದೇಶಿಸಿ ಭಾಷಣ ಮಾಡಿದ ಮೇಲೆ ಮಾತ್ರ ಎಂದು ರೂಲಿಂಗ್ ಕೊಟ್ಟಿದ್ದಾರೆ. ರಾಷ್ಟ್ರಪತಿಗಳು ಏನು ಹೇಳುತ್ತಾರೆಂಬುದು ಕುತೂಹಲಕಾರಿಯಾದುದು. ಅವರು ಅಟಲ್ ಬಿಹಾರಿ ವಾಜಪೇಯಿಯ ತಾತ್ಕಾಲಿಕ ಸರಕಾರದಿಂದ ಮಾರ್ಗದರ್ಶನ ಪಡೆಯುತ್ತಾರೆಯೆ ನೋಡಬೇಕು.

**ಮೇ ೨೪, ೧೯೯೬ ಚಿತ್ರದುರ್ಗ**

ಪಾರ್ಲಿಮೆಂಟಿನ ಜಂಟಿ ಸಭೆಯನ್ನುದ್ದೇಶಿಸಿ ರಾಷ್ಟ್ರಪತಿಯವರು ಮಾಡಿದ ಭಾಷಣವು ಆಡಳಿತದಲ್ಲಿ ನೀತಿಗಳು, ಭ್ರಷ್ಟಾಚಾರವನ್ನು ಇಳಿಸುವುದು, ಗೋಸಂರಕ್ಷಣೆ ಮುಂತಾದವುಗಳ ಬಗ್ಗೆ ಒತ್ತು ಕೊಟ್ಟಿತು. ಬಿಜೆಪಿ ಪಕ್ಷದ ಅಭಿಪ್ರಾಯಗಳು ಅಥವಾ ಉದ್ದೇಶಗಳು ಇದರ

ಪ್ರಕಾರ ಇರುವುದು ವಾಸ್ತವ. ನಾಲ್ಕು ದಿನಗಳಲ್ಲಿ ಅವರು ಅಧಿಕಾರದ ಹೊರ ಹೋಗುವರೆಂದು ಕಾಣುತ್ತದೆ. ಕುತೂಹಲಕಾರಿ. ಮಾಜಿ ರಾಷ್ಟ್ರಪತಿ ಆರ್. ವೆಂಕಟರಾಮನ್, ಸಿ. ಸುಬ್ರಹ್ಮಣ್ಯಂ, ಪಾಲ್ಕಿವಾಲಗಳನ್ನೊಂಡ ಕೆಲವು ನಾಯಕರು ಈಗ ರಾಷ್ಟ್ರೀಯ ಸರಕಾರ ಬೇಕೆನ್ನುತ್ತಾರೆ. ಅದು ಚೆನ್ನಾಗಿರುತ್ತದೆ. ಈಗಿನ ಪರಿಸ್ಥಿತಿಯಲ್ಲಿ ಅದು ಸಾಧ್ಯವೆ ?

**ಜೂನ್ ೧, ೧೯೯೬ ಬೆಂಗಳೂರು-ಚಿತ್ರದುರ್ಗ**

ಹೆಗಡೆಯು ಬೆಳಗಿನ ಉಪಾಹಾರಕ್ಕೆ ಬಂದಿದ್ದು ಸುಮಾರು ೪೫ ನಿಮಿಷಗಳ ಕಾಲ ನನ್ನೊಡನಿದ್ದರು. ಅವರು ದೇವೇಗೌಡರ ಬಗ್ಗೆ ಖಾರವಾಗಿದ್ದು ಅವರ ವಿರುದ್ಧ ಹೇಳಲು ಅವರಿಗೆ ಬೇಕಾದಷ್ಟಿದ್ದಿತು. ಹೆಗಡೆಗೆ ನಿರಾಶೆಯಾಗಿದೆ ಎಂದು ಕಾಣುತ್ತದೆ. ಗೌಡ ಮತ್ತು ಹೆಗಡೆ ಇವರಿಬ್ಬರ ನಡುವೆ, ನನ್ನ ಪ್ರಕಾರ, ಹೆಗಡೆಯವರು ಉತ್ತಮ ಎಂಬುದರಲ್ಲಿ ಸಂದೇಹವೇ ಇಲ್ಲ. ಆದರೆ ಅವರ ವಿರುದ್ಧ ಕೆಲಸ ಮಾಡಿರುವುದು ಯಾವುದೆಂದರೆ ವಿವಿಧ ರಾಜ್ಯಗಳ ಪಕ್ಷಗಳು. ವಿಶೇಷವಾಗಿ ತಮಿಳುನಾಡು, ಆಂಧ್ರಪ್ರದೇಶ, ಕರ್ನಾಟಕ, ಉತ್ತರ ಪ್ರದೇಶ, ಬಿಹಾರ ಮತ್ತು ಇತರವು. ಎಲ್ಲಾ ರಾಜ್ಯಗಳು ಬ್ರಾಹ್ಮಣ ವಿರೋಧಿಗಳಾಗಿದ್ದುದರಿಂದ ಸ್ವಾಭಾವಿಕವಾಗಿ ಗೌಡರನ್ನು ನಾಯಕರಾಗಿ ಆರಿಸಲಾಗಿದೆ. ಅಲ್ಲದೆ ನಾಯಕರು ಮತ್ತು ಮುಖ್ಯಮಂತ್ರಿಗಳು ಎಲ್ಲಿದ್ದಾರೋ ಅಲ್ಲಿಯೇ ಇರಲು ಆಸಕ್ತಿಯುಳ್ಳವರಾಗಿದ್ದಾರೆ ಸದಸ್ಯರು. ಹಾಗಿಲ್ಲದಿದ್ದರೆ ತಮ್ಮ ತಮ್ಮ ಪಕ್ಷಗಳಿಗೆ ಸಮಾಧಾನವಾಗುವ ನಾಯಕರಿಲ್ಲದೆ ಹೋಗಬಹುದು. ಕರ್ನಾಟಕದಲ್ಲಿ ಕೂಡ ಜೆ.ಹೆಚ್. ಪಟೇಲರನ್ನು ಮುಖ್ಯಮಂತ್ರಿಗಳಾಗಿ ಒಪ್ಪಿಕೊಳ್ಳಬೇಕಾದರೆ ತುಂಬಾ ತೊಂದರೆ ಇದ್ದು ತುಂಬಾ ಸೆಳೆತ, ಜಾತಿಯ ಅಂತರಿಕ ಜಗಳಗಳಿದ್ದವು. ಸಂಧಾನದ ಒಂದು ಭಾಗವಾಗಿ ಲಿಂಗಾಯಿತೇತರ ಕುರುಬರಾದ ಸಿದ್ಧರಾಮಯ್ಯನವರನ್ನು ಉಪನಾಯಕರನ್ನಾಗಿ ಆರಿಸಲಾಯಿತು. ಜಾತಿ ! ಜಾತಿ ! ಎಲ್ಲೆಲ್ಲೂ ಜಾತಿಯೇ. ಇದರಿಂದಲೇ ನಮ್ಮ ದೇಶಕೆ ದೊಡ್ಡ ತೊಂದರೆಯಾಗುತ್ತಿದೆ.

**ಜೂನ್ ೨, ೧೯೯೬**

ಭಾರತದ ಮಾಜಿ ರಾಷ್ಟ್ರಪತಿ ಡಾ. ನೀಲಂ ಸಂಜೀವರೆಡ್ಡಿ ನೆನ್ನೆ ಸಾಯಂಕಾಲ ನಿಧನ ಹೊಂದಿದ್ದು ಈ ದಿನ ಸಕಲ ಮರ್ಯಾದೆಗಳೊಂದಿಗೆ ಶವಸಂಸ್ಕಾರ ಮಾಡಲಾಯಿತು. ಅವರನ್ನು ಲೋಕಸಭೆ ಅಧ್ಯಕ್ಷನನ್ನಾಗಿ ಮಾಡಲು ಮತ್ತು ನಂತರ ನನ್ನ ಅವಕಾಶವನ್ನು ಬಿಟ್ಟುಕೊಟ್ಟು ಅವರನ್ನು ರಾಷ್ಟ್ರಪತಿಯನ್ನಾಗಿ ಆರಿಸಲು ನಾನು ಎಷ್ಟು ಜವಾಬ್ದಾರಿ ವಹಿಸಿದ್ದೆ ಎಂಬುದನ್ನು ಜ್ಞಾಪಿಸಿಕೊಳ್ಳುತ್ತಿದ್ದೆ.

**ಜೂನ್ ೧೨, ೧೯೯೬** **ಚಿತ್ರದುರ್ಗ**

ಪ್ರಧಾನಮಂತ್ರಿಯಾಗಿ ದೇವೇಗೌಡ ಮುಂದುವರಿಯಲು ನೆನ್ನೆ ದಿನ ಮಂಡಿಸಿದ ವಿಶ್ವಾಸ ಮತದ ಬಗ್ಗೆ ಚರ್ಚೆಯು ಮುಂದುವರಿದು ಅವರು ಪ್ರಧಾನಿಯಾಗಿ ಮತ್ತು ಸಂಯುಕ್ತ ದಳದ ಸರಕಾರವು ಮುಂದುವರಿಯುವಂತೆ ಅವಕಾಶ ಕೊಟ್ಟು ಠರಾವನ್ನು ಅಂಗೀಕರಿಸಲಾಯಿತು. ಕೊನೆಯಲ್ಲಿ ಅವರ ಭಾಷಣವು ಹಾಳಾಗೇನೂ ಇರಲಿಲ್ಲ. ಅವರು ಇಂಗ್ಲಿಷ್ ಅಷ್ಟೇನೂ ಚೆನ್ನಾಗಿಲ್ಲದಿರುವುದು ವಾಸ್ತವ. ಆದರೆ ಅದು ನಡೆಸಿಕೊಂಡು ಹೋಗಲು ಸಾಕೆಂದು ಕಾಣುತ್ತದೆ. ಹಾಗೆ ಮಾಡುತ್ತಾರೆಂಬುದು ಖಚಿತ. ಬಡಜನರ ಬಗ್ಗೆ, ಕೃಷಿ, ಕುಡಿಯುವ ನೀರು, ರಸ್ತೆಗಳು, ಮನೆ ಮುಂತಾದ ಗ್ರಾಮೀಣ ಸಮಸ್ಯೆಗಳ ಬಗ್ಗೆ ಕಾಳಜಿ. ಅವರು ಬಿಚ್ಚು ಮನಸ್ಸಿನರಾಗಿದ್ದಾರೆ. ಈಗ ಅವರು ದೃಢವಾದ ಮೇಲೆ ತಮ್ಮ ಸರ್ಕಾರವನ್ನು ಹೇಗೆ ರೂಪಿಸುತ್ತಾರೆ ಎಂದು ಗಮನಿಸಬೇಕು.

**ಜೂನ್ ೧೩, ೧೯೯೬** **ಚಿತ್ರದುರ್ಗ**

ಸಂಜೆ ೬ ಗಂಟೆ ಹೊತ್ತಿಗೆ ಯುಎನ್ಐ ಬಾತ್ಮೀದಾರ ಬಂದು ಜನತಾದಳ ಪಕ್ಷದಿಂದ ರಾಮಕೃಷ್ಣ ಹೆಗಡೆಯವರ ಉಚ್ಚಾಟನೆ ಬಗ್ಗೆ ನನ್ನ ಪ್ರತಿಕ್ರಿಯೆಗಳನ್ನು ಕೇಳಿದರು. ನನಗೆ ಆಶ್ಚರ್ಯವಾಗಿದೆಯೇ ಹೊರತು ಬೇರೇನೂ ಪ್ರತಿಕ್ರಿಯೆಯಿಲ್ಲ ಎಂದು ಹೇಳಿದೆ. ಅಲ್ಲದೆ ಅವರ ಉಚ್ಚಾಟನೆಗೆ ಕಾರಣವಾದ ಪರಿಸ್ಥಿತಿಗಳೇನು ಎಂಬುದೂ ನನಗೆ ತಿಳಿಯದು ಎಂದು ಹೇಳಿದೆ. ಸ್ವಲ್ಪ ಮಟ್ಟಿಗೆ ಚಿಂತಿಸಿದ ಮೇಲೆ ಇದು ಬ್ರಾಹ್ಮಣ ವಿರೋಧಿ ಚಟುವಟಿಕೆಯೆಂದೆನಿಸುತ್ತದೆ. ದೇವೇಗೌಡರು ಮತ್ತು ಹೆಗಡೆ ನಡುವೆ ಸ್ನೇಹವಿಲ್ಲದೇ ಇರುವುದು ನಿಜ. ಇದರಿಂದ ಸ್ವಲ್ಪ ಮಟ್ಟಿನ ಬ್ರಾಹ್ಮಣ ಪ್ರತಿಕ್ರಿಯೆಯುಂಟಾಗಬಹುದು. ಬ್ರಾಹ್ಮಣರಿಂದಲೇ ಹೆಚ್ಚಾಗಿ ಸಂಪಾದಿಸಲ್ಪಡುವ ಪತ್ರಿಕೆಗಳು ಕೇಂದ್ರ ಸರಕಾರದ ವಿರುದ್ಧ ಕಾರ್ಯಾಚರಣೆ ಮಾಡುತ್ತಾರೆಂದು ಕಾಣುತ್ತದೆ. ನಾವು ಕಾಯ್ದು ನೋಡಬೇಕು.

**ಜೂನ್ ೧೯, ೧೯೯೬** **ಚಿತ್ರದುರ್ಗ-ಬೆಂಗಳೂರು**

೫-೧೫ಕ್ಕೆ ಹೆಗಡೆಯವರು ಬಂದು ಒಂದು ಗಂಟೆ ಹೊತ್ತಿದ್ದರು. ದೇವೇಗೌಡರ ವಿರುದ್ಧ ಬಹಳ ಖಾರವಾಗಿ ದೂರುತ್ತಿದ್ದರು. ಅವರು ಹೇಗೆ ಉದ್ದಕ್ಕೂ ಕೆಟ್ಟದಾಗಿ ನಡೆದುಕೊಂಡಿದ್ದಾರೆ. ಹೆಗಡೆ ಹೇಗೆ ಜನತಾದಳ ಸಂಸ್ಥೆಯನ್ನು ಕಟ್ಟಿದ್ದರು ಮತ್ತು ದೇವೇಗೌಡ ಹೇಗೆ ಅದಕ್ಕೆ ವಿರೋಧವಾಗಿದ್ದರು, ಮುಂತಾದವನ್ನು ಹೇಳಿದರು. ಗೌಡ ಹೇಗೆ ಕೆಟ್ಟದಾಗಿ ನಡೆದುಕೊಂಡಿದ್ದಾರೆ ಮತ್ತು ನೋಟೀಸನ್ನೂ ಕೊಡದೆ ಹೇಗೆ ತಮ್ಮನ್ನು ಪಕ್ಷದಿಂದ ಉಚ್ಚಾಟಿಸಿದ್ದಾರೆ ಎಂದು ಹೇಳಿದರು. ಈ ಆಕ್ಷೇಪಿಸಬಹುದಾದ ವ್ಯಕ್ತಿ ಇಬ್ರಾಹಿಂ ಹೇಗೆ ಕೆಟ್ಟದಾಗಿ ನಡೆದುಕೊಳ್ಳುತ್ತಿದ್ದಾರೆಂದು ಕೂಡ ಹೇಳಿದರು. ಈ ವೈಯಕ್ತಿಕ ಭಿನ್ನಾಭಿಪ್ರಾಯಗಳು ಹೇಗೆ ಕರ್ನಾಟಕ ಮತ್ತು ಅದರಲ್ಲೂ ಹೆಚ್ಚಾಗಿ ದೇಶದ ಮೇಲೆ ಪರಿಣಾಮ ಬೀರುತ್ತದೆಂಬುದನ್ನು ಹೇಳಿದೆ.

**ಜುಲೈ ೯, ೧೯೯೬ ಚಿತ್ರದುರ್ಗ**

ಉಚ್ಚಾಟನೆ ಮಾಡಿ ಬಹಳ ಕೆಟ್ಟದಾಗಿ ಹೆಗಡೆಯವರನ್ನು ನೋಡಿಕೊಳ್ಳಲಾಗಿದೆ ಎಂದು ಅವರ ಪರವಾಗಿ ಅನೇಕ ಕಾಗದಗಳು ನನಗೆ ಬರುತ್ತಿವೆ. ಅವರಿಗೆ ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ದೊಡ್ಡದಾಗಿ ಸ್ವಾಗತ ಸಮಾರಂಭಗಳನ್ನು ನಡೆಸಿ ಹೊಸ ಪಕ್ಷವೊಂದನ್ನು ರಚಿಸುವುದಕ್ಕೆ ಅವರ 'ನವ ನಿರ್ಮಾಣ ವೇದಿಕೆ'ಗೆ ಹೆಚ್ಚಿನ ಸಂಖ್ಯೆಯಲ್ಲಿ ಸೇರುತ್ತಿದ್ದಾರೆ. ಯಾವುದೇ ರೀತಿಯ ರಾಜಕೀಯ ತತ್ವಗಳಿಲ್ಲ, ದೇಶದ ಒಳಿತಿಗಾಗಿ ಹೊಸ ಆದರ್ಶ ಅಥವಾ ಹೊಸ ಉದ್ದೇಶಗಳಲ್ಲ. ಇವೆಲ್ಲ ಏಕೆಂದರೆ ಅವರನ್ನು ಉಚ್ಚಾಟಿಸಿದುದರಿಂದ ಆಗಿದ್ದು. ಇನ್ನೇನೂ ಬದಲಾವಣೆ ಇಲ್ಲ. ಅವರನ್ನು ಉಚ್ಚಾಟಿಸದೆ ಅಥವಾ ಪಕ್ಷದಲ್ಲಿ ಮುಂದುವರಿಸಿದ್ದರೆ ಈ ಹೊಸ ಪಕ್ಷದ ರಚನೆಯನ್ನು ಅವರು ಯೋಚಿಸುತ್ತಲೇ ಇರಲಿಲ್ಲ. ಅದು ಕೇವಲ ವೈಯಕ್ತಿಕ. ವ್ಯಸನಕರ. ಇನ್ನೊಂದು ಕಡೆ ದೇವೇಗೌಡ ಸಮಾಧಾನ ಚಿತ್ತದಲ್ಲಿ ಕೈಚಳಕ ತೋರಿಸುವವರು. ನಾವು ಸ್ವಲ್ಪ ಕಾಲ ಗಮನಿಸುತ್ತಿರಬೇಕು. ಏನೋ ಅಪೇಕ್ಷಣೀಯವಾದುದು ನಡೆಯುತ್ತದೆಂದು ನಾನು ನಿರೀಕ್ಷಿಸುವುದಿಲ್ಲ.

**ಆಗಸ್ಟ್ ೯, ೧೯೯೬ ಚಿತ್ರದುರ್ಗ**

ರೇಡಿಯೋ ಕಚೇರಿಯಿಂದ ಕಾರು ೯-೩೦ಕ್ಕೆ ಬಂತು. ಅದಕ್ಕಾಗಿ ಕಾಯುತ್ತಿದ್ದೆ. ಅಲ್ಲಿಗೆ ಹೋಗಿ ಪ್ರಾರಂಭಿಕಗಳಾದ ಮೇಲೆ ನನ್ನ ಮೂರು ವಿಷಯಗಳನ್ನು ಎಲ್ಲಾ ಕನ್ನಡದಲ್ಲಿ ದಾಖಲು ಮಾಡಲಾಯಿತು. ಮೊದಲನೆಯದು ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದಲ್ಲಿ 'ನಾಡೋಜ' ಪ್ರಶಸ್ತಿಯನ್ನು ಪಡೆದುದರ ಬಗ್ಗೆ ನನ್ನ ಭಾವನೆ. ಉಪಕುಲಪತಿ ಚಂದ್ರಶೇಖರ ಕಂಬಾರ ಮತ್ತು ಅವರ ಸಿಬ್ಬಂದಿ ಮುಂತಾದವರು ವಿಶ್ವವಿದ್ಯಾನಿಲಯಕ್ಕೆ ಮಾಡಿರುವ ಅಮೋಘವಾದ ಅಭಿವೃದ್ಧಿಗಳು ಮತ್ತು ಸಾಧನೆಗಳ ಬಗ್ಗೆ ಅಭಿನಂದಿಸುತ್ತಾ ಅಪೇಕ್ಷೆಯಂತೆ ೩ ನಿಮಿಷಗಳ ಕಾಲ ಮಾತಾಡಿದೆ. ದಿವಂಗತ ಕುವೆಂಪು ಮತ್ತು ಪ್ರಸಿದ್ಧ ಗಂಗೂಬಾಯಿ ಹಾನಗಲ್‌ರಿಗೆ ಪ್ರಶಸ್ತಿ ನೀಡಿದುದಕ್ಕೆ ಸಂತೋಷವಾಗಿದೆ. ಎರಡನೆಯದು ದೊಡ್ಡ ಮೇಟಿ ಅಂದಾನಪ್ಪನವರ ಬಗ್ಗೆ ೪-೫ ನಿಮಿಷಗಳವರೆಗೆ ಮಾತಾಡಿದೆ. ಸ್ವಾತಂತ್ರ್ಯ ಯೋಧನಾಗಿ ಅವರ ಚಟುವಟಿಕೆಗಳು, ಗಾಂಧೀಜಿ ಬಗ್ಗೆ ಅವರ ನಂಬಿಕೆ ಮತ್ತು ಭಕ್ತಿ, ಅವರ ಹಳ್ಳಿಗೆ ಒಂದು ರಸ್ತೆಯನ್ನು ಅವರೇ ಮಾಡಿಸಿದ್ದು, ಗಾಂಧೀಜಿಯನ್ನು ಅವರ ಹಳ್ಳಿಗೆ ಕರೆದೊಯ್ದುದು, ಕರ್ನಾಟಕದ ಏಕೀಕರಣದ ಬಗ್ಗೆ ಅವರ ನಂಬಿಕೆ, ನನ್ನ ಜೊತೆಯಲ್ಲಿ ಮಂತ್ರಿಯಾಗಿದ್ದಾಗ ಅವರ ಕೆಲಸ, ಅವರ ಮದುವೆಯಾದ ಹೆಂಡತಿ ಮತ್ತು ಇನ್ನೊಬ್ಬ ಮಹಿಳೆ ಇಬ್ಬರಿಗೂ ಹುಟ್ಟಿದ ಮಕ್ಕಳ ನಡುವೆ ತಮ್ಮ ಆಸ್ತಿಯನ್ನು ಸಮನಾಗಿ ಹಂಚಿದುದು. ಮೂರನೆಯದು, ಸ್ವಾತಂತ್ರ್ಯ ಹೋರಾಟದ ಬಗ್ಗೆ ಪ್ರಶ್ನೆಗಳನ್ನು ಉತ್ತರಿಸಿದೆ. ಕಳೆದ ೫೦ ವರ್ಷಗಳಲ್ಲಿ ಉದ್ದೇಶ ಮತ್ತು ಸಾಧನೆ ಮತ್ತು ವಿಫಲತೆಗಳು, ಈಗಿನ ಅತೃಪ್ತಿಕರ ಪರಿಸ್ಥಿತಿ, ಭ್ರಷ್ಟಾಚಾರ ಮುಂತಾದವು. ನನ್ನ ಆಪ್ತ ವಿಷಯವಾದ ರಾಜ್ಯನೀತಿಯ ನಿರ್ದೇಶಕ

ತತ್ವಗಳು ಮುಂತಾದವುಗಳ ನಿರ್ಲಕ್ಷ್ಯ-ಇವುಗಳ ಬಗ್ಗೆ ೧೫-೨೦ ನಿಮಿಷಗಳು ಮಾತನಾಡಿದೆ. ಮೊದಲನೆಯದು ಹೊಸಪೇಟೆ ರೇಡಿಯೋ ಕೇಂದ್ರ, ೨ನೆಯದು ಧಾರವಾಡ ಕೇಂದ್ರದಿಂದ ಮತ್ತು ೩ನೆಯದು ಚಿತ್ರದುರ್ಗ ಕೇಂದ್ರದಿಂದ.

**ಆಗಸ್ಟ್ ೧೩, ೧೯೯೬ ಚಿತ್ರದುರ್ಗ**

ನನ್ನ ಆತ್ಮಕಥೆಯು ಮುಗಿಯಿತು ಮತ್ತು ಬೆರಳಚ್ಚು ಪ್ರತಿಯ ಕೊನೆಯ ಪುಟಗಳನ್ನು ನೋಡುತ್ತಿದ್ದೇನೆ. ಅದನ್ನು ಸಿದ್ಧಗೊಳಿಸಬಲ್ಲೆನೆಂದು ಕಾಣುತ್ತದೆ. ಹೈದರಾಬಾದು ಕರ್ನಾಟಕ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಿಗೆ ಗುಲ್ಬರ್ಗಾಕ್ಕೆ ದೂರವಾಣಿ ಮಾಡಿ ಈ ತಿಂಗಳ ೩೦ನೇ ತಾರೀಕು ನನಗೆ ಅನುಕೂಲವಾಗಿದ್ದು, ಅದೇ ಪ್ರಕಾರ 'ನಿಜಲಿಂಗಪ್ಪ ಡೆಂಟಲ್ ಕಾಲೇಜ'ನ್ನು ತೆರೆಯುವುದಕ್ಕೆ ಅವರು ವ್ಯವಸ್ಥೆಗಳನ್ನು ಮಾಡಿಕೊಳ್ಳಬಹುದೆಂದು ಹೇಳಿದೆ.

**ಆಗಸ್ಟ್ ೧೫, ೧೯೯೬ ಬೆಂಗಳೂರು**

ಬೆಳಿಗ್ಗೆ ೯ ಗಂಟೆಗೆ ಬಸವನಗುಡಿ ಮತದಾರ ಕ್ಷೇತ್ರದ ಸೇವೆಗಿರುವ ಒಂದು ಖಾಸಗಿ ಸಂಸ್ಥೆಯಾದ 'ನಿವಾರಣಾ ಸಂಸ್ಥೆ'ಯು ವ್ಯವಸ್ಥೆಗೊಳಿಸಿರುವ ಸ್ವಾತಂತ್ರ್ಯ ದಿನ ಸಮಾರಂಭಕ್ಕೆ ಹೋದೆ. ನೆನ್ನೆ ರಾತ್ರಿ ಒಳ್ಳೆ ಮಳೆ ಬಿದ್ದುದರಿಂದ ಅದು ಪ್ರಾರಂಭವಾದಾಗ ಸ್ವಲ್ಪ ತಡವಾಗಿತ್ತು. ನನಗೆ 'ಪ್ರಜಾರತ್ನ' ಎಂಬ ಬಿರುದನ್ನು ಕೊಟ್ಟು ಒಂದು ತಾಮ್ರದ ತಟ್ಟೆಯ ಮೇಲೆ ಇಡೀ ಪದಸಮುಚ್ಚಯವನ್ನು ಕೆತ್ತಿ ಅದನ್ನು ಬೀಟೆಮರದ ಚೌಕಟ್ಟಿನಲ್ಲಿ ಸೇರಿಸಿ ಅದರ ಸುತ್ತ ಕಸೂತಿ ಕೆಲಸ ಮಾಡಿರುವುದನ್ನು ನನಗೆ ಕೊಡುಗೆಯಾಗಿ ನೀಡಿದರು. ಅವರು ನನ್ನನ್ನು 'ಭೀಷ್ಮ' ಎಂದು ಕರೆದರು. ಸಮಾರಂಭವನ್ನು ಉದ್ಘಾಟಿಸಿದವರು ಪ್ರಸಿದ್ಧ ಸಾಹಿತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಮತ್ತು ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಡಾ. ಯು.ಆರ್. ಅನಂತಮೂರ್ತಿ. ಮಾಜಿ ಮಂತ್ರಿ ಧರಂಸಿಂಗ್ ಅಧ್ಯಕ್ಷತೆ ವಹಿಸಿದ್ದರು.

ಆ ಪ್ರದೇಶದ ವಿವಿಧ ವಿದ್ಯಾ ಸಂಸ್ಥೆಗಳಿಗೆ ಸೇರಿದ ಮಕ್ಕಳಿಂದ ಕವಾಯತು, ನೃತ್ಯ, ಹಾಡುಗಳು ಮುಂತಾದವುಗಳ ಪ್ರದರ್ಶನದಿಂದ ಇಡೀ ಸಮಾರಂಭವು ಆಕರ್ಷಕವಾಗಿತ್ತು. ಅದು ನನಗೆ ತುಂಬಾ ಸಂತೋಷವುಂಟು ಮಾಡಿತ್ತು. ಇಡೀ ಸಮಾರಂಭವನ್ನು ವೀಕ್ಷಿಸುತ್ತಾ ವಿದ್ಯಾರ್ಥಿ ಮತ್ತು ಉಪಾಧ್ಯಾಯರುಗಳಿಗೆ ಪಾರಿತೋಷಕಗಳನ್ನು ಕೊಡುವುದನ್ನು ನೋಡುತ್ತಾ ಸಂತೋಷದಿಂದ ಮೂರು ಗಂಟೆಗಳನ್ನು ಕಳೆದೆ. ಡಾ. ಅನಂತಮೂರ್ತಿಯವರು ನನ್ನನ್ನು ಮಿತಿಮೀರಿ ಹೊಗಳಿದರು, ಅದನ್ನು ನಾನು ನಿರೀಕ್ಷಿಸಿರಲಿಲ್ಲ. ನಾನು ವೀಕ್ಷಿಸಿದ ಸ್ವಾತಂತ್ರ್ಯೋತ್ಸವ ಸಮಾರಂಭಗಳಲ್ಲಿ ಇದು ಅತ್ಯುತ್ತಮ. ಇಂತಹ ಉತ್ತಮವಾದ ಸಮಾರಂಭವನ್ನು ನಾನು ಮರೆಯಲಾಗುವುದಿಲ್ಲ. ನನ್ನ ಭಾಷಣವು ಅರ್ಧ ಗಂಟೆ ಕಾಲವಾಯಿತು. ನಾನು ಈ ದಿನದ ಪ್ರಾಮುಖ್ಯತೆಯ ಬಗ್ಗೆ,

ಗಾಂಧೀಜಿಯವರ ಅದ್ವಿತೀಯ ಮುಂದಾಳುತನ, ಮುಂತಾದವುಗಳ ಬಗ್ಗೆ ಮಾತನಾಡಿದೆ. ಈಗಿನ ಅಸಂತೋಷಕರ ಪರಿಸ್ಥಿತಿ ಮತ್ತು ಭಾರತದ ನಾಗರಿಕರಿಗೆ ಅದರ ವಿರುದ್ಧ ಹೋರಾಡಬೇಕಾದ ಅಗತ್ಯ ಹಾಗೂ ಭವಿಷ್ಯದ ನಾಗರಿಕರಾದ ಮಕ್ಕಳು ಒಟ್ಟುಗೂಡಿ ಬಲವಾದ ಭಾರತವನ್ನು ನಿರ್ಮಿಸಲು ಸಿದ್ಧರಾಗಬೇಕು ಎಂದು ಭಾಷಣ ಮಾಡಿದೆ.

**ಸೆಪ್ಟೆಂಬರ್ ೯, ೧೯೯೬ ಚಿತ್ರದುರ್ಗ**

ಬೆಳಿಗ್ಗೆ ಪ್ರಸಿದ್ಧರಾದ ಸಾಮಾಜಿಕ ಕಾರ್ಯಕರ್ತೆ ಗಿರಿಜಮ್ಮ ಒಬ್ಬ ಸ್ನೇಹಿತರೊಂದಿಗೆ ಬಂದು ತಾವು ಕರ್ನಾಟಕ ರಾಜ್ಯ ಮಹಿಳಾ ಕಲ್ಯಾಣದ ಸಮಿತಿಗೆ ಅಧ್ಯಕ್ಷಳಾಗಿ ನೇಮಕಗೊಂಡಿರುವುದನ್ನು ತಿಳಿಸಿ ಮತ್ತು ವಂದಿಸಲು ಬಂದಿರುವುದಾಗಿ ಹೇಳಿದರು. ಅವರಿಗೆ ತುಂಬಾ ಸಂತೋಷವಾಗಿದ್ದು ಅಧಿಕೃತ ಪ್ರವಾಸಗಳಿಗೆ ಆಕೆಗೆ ಕೊಡಲಾಗಿದ್ದ ಅಧಿಕೃತ ಕಾರಿನಲ್ಲೇ ಆಕೆ ಬಂದಿದ್ದರು. ಈ ನೇಮಕಾತಿಗೆ ಆಕೆ ಅರ್ಹರು. ಆಕೆ ಬಹಳ ಸಫಲವಾದ ಕಾರ್ಯಕರ್ತೆ. ದಾವಣಗೆರೆಯಲ್ಲಿ ೩-೪ ಸಾಮಾಜಿಕ ಸಂಸ್ಥೆಗಳಲ್ಲಿ ಚಟುವಟಿಕೆ ಹೊಂದಿದ್ದರು. ಅವುಗಳಲ್ಲಿ ಒಂದಕ್ಕೆ ನಮ್ಮ ತಾಯಿ ಮತ್ತು ಹೆಂಡತಿಯ ಹೆಸರಿನಲ್ಲಿ ೬೦,೦೦೦ ರೂ.ಗಳನ್ನು ದಾನ ಮಾಡಿದ್ದೆ.

**ಸೆಪ್ಟೆಂಬರ್ ೧೨, ೧೯೯೬ ಚಿತ್ರದುರ್ಗ**

ಬುದ್ಧಿವಂತ ವಿದ್ಯಾರ್ಥಿ, ಪ್ರಾಧ್ಯಾಪಕ, ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್, ಉಪಕುಲಪತಿ, ಬರಹಗಾರ, ಇಂಗ್ಲಿಷ್ ಮತ್ತು ಕನ್ನಡಗಳೆರಡರಲ್ಲಿಯೂ ಹೀಗೆ ಅನೇಕ ವಿಷಯಗಳು ಒಟ್ಟುಗೂಡಿರುವ ಡಾ. ಸದಾಶಿವ ಒಡೆಯರ್ ಅನಿರೀಕ್ಷಿತವಾಗಿ ಬೆಂಗಳೂರಿನಲ್ಲಿ ನಿಧನ ಹೊಂದಿದುದು ವ್ಯಸನಕರ. ಕೆಲವರು ನನ್ನ ಜೀವನ ಚರಿತ್ರೆಯನ್ನು ಬರೆಯಲು ಕೇಳಿಕೊಂಡರು. ಅದರ ಗಣನೀಯವಾದ ಭಾಗವನ್ನು ಆಗಲೇ ಬರೆದಿರುವುದಾಗಿ ಅವರಿಗೆ ತಿಳಿಸಿದೆ. ಒಬ್ಬ ಪ್ರಸಿದ್ಧ ವಿದ್ವಾಂಸ ಮತ್ತು ಕರ್ನಾಟಕದ ಕರ್ತೃವನ್ನು ಕಳೆದುಕೊಂಡಿದ್ದೇವೆ. ಅವರು ೭೫ ವರ್ಷ ಸಮೀಪಿಸುತ್ತಿದ್ದರೆಂದು ಕೇಳಿದ್ದೆ.

**ಸೆಪ್ಟೆಂಬರ್ ೧೮, ೧೯೯೬ ರಾಯಚೂರು**

ಜವಳಿ ಮಂತ್ರಿ ಎಂ.ಎಸ್. ಪಾಟೀಲರು ನಿನ್ನೆಯ ಅವರ ಫೋನಿನಂತೆ ತಮ್ಮ ಕಾರಿನಲ್ಲಿ ೯ಕ್ಕೆ ಬಂದರು. ಅಷ್ಟೊತ್ತಿಗೆ ನಾನು ಬೆಳಗಿನ ಉಪಾಹಾರ ಮಾಡಿದ್ದೆ. ನಾವು ೯-೩೦ಕ್ಕೆ ಹೆಲಿಪಾಡ್‌ಗೆ ಹೊರಟು ೧೦ ಗಂಟೆಗೆ ಹೆಲಿಕಾಪ್ಟರ್‌ನಲ್ಲಿ ಹೋದೆವು. ಅದು ವಿಮಾನ ನಿಲ್ದಾಣದ ಬಹಳ ಸಮೀಪವಿದ್ದು ಅದರ ಒಂದು ಭಾಗವೇ ಆಗಿದೆ. ಮೊದಲು ಬಳ್ಳಾರಿ ತಲುಪಿ ಅಲ್ಲಿ ಇಂಧನವನ್ನು ಪುನಃ ತುಂಬಿಸಿ ರಾಯಚೂರಿಗೆ ಹೊರಟೆವು. ಅಲ್ಲಿ ಅನೇಕ ಸಂಖ್ಯೆಯ ಹಾರಗಳಿಂದ ಉತ್ಸಾಹದಿಂದ ನಮ್ಮನ್ನು ಸ್ವಾಗತಿಸಲಾಯಿತು. ಕಾಂಗ್ರೆಸ್ (ಐ) ನ ವಕ್ತಾರ ಶ್ರೀ ಎನ್.ವಿ. ಗಾಡ್ಗಿಲ್ ಅವರ ಜೊತೆಯಲ್ಲಿ ಕರ್ನಾಟಕ ವಿಧಾನ

ಪರಿಷತ್ತಿನ ಅಧ್ಯಕ್ಷರು ಮತ್ತು ಎಂ.ಎಸ್. ಪಾಟೀಲರು ಎಲ್ಲರೂ ರಾಯಚೂರಿಗೆ ಸೇರಿದವರಾಗಿದ್ದು ಈ ಸಮಾರಂಭಕ್ಕೆ ಮುಖ್ಯವಾಗಿ ಅವರೇ ಜವಾಬ್ದಾರರಾಗಿದ್ದರು. ಇದನ್ನು ವೀರಶೈವ ಕಲ್ಯಾಣ ಮಂಟಪದಲ್ಲಿ ನಡೆಸಲಾಯಿತು. ಸಭಾಂಗಣದ ಒಳಗೆ ಮತ್ತು ಹೊರಗೆ ನೆರೆದಿದ್ದವರ ಸಂಖ್ಯೆ ೩ ರಿಂದ ೩ ೧/೨ ಸಾವಿರ. ಅವರು ಉತ್ಸಾಹಿ ಶ್ರೋತೃಗಳಾಗಿದ್ದು ಹೆಚ್ಚಾಗಿ ಮೂರು ಕರ್ನಾಟಕ ಜಿಲ್ಲೆಗಳಾದ ರಾಯಚೂರು, ಗುಲ್ಬರ್ಗ ಮತ್ತು ಬೀದರ್‌ನಿಂದ ಬಂದ ಸ್ವಾತಂತ್ರ್ಯ ಯೋಧರಾಗಿದ್ದರು. ಪ್ರಾರಂಭಿಕಗಳಾದ ಮೇಲೆ ಕಾಂಗ್ರೆಸ್ (ಐ) ವಕ್ತಾರ ಎನ್.ವಿ. ಗಾಡ್ಗಿಲ್, ಸ್ಥಳೀಯ ವಕೀಲರಾದ ನಾಗಪ್ಪ ಮತ್ತು ವಿಧಾನಪರಿಷತ್ತಿನ ಅಧ್ಯಕ್ಷ ಕಲ್ಮಣಕರ್ ಅವರುಗಳ ಭಾಷಣಗಳಾದವು ಇವರಿಬ್ಬರೂ ಸಮಾರಂಭಕ್ಕೆ ಜವಾಬ್ದಾರರಾಗಿದ್ದರು. ನನ್ನನ್ನು ರೂಪಾಯಿಯ ನಾಣ್ಯದಲ್ಲಿ ತೂಕ ಮಾಡಲಾಯಿತು. ಅದು ೧೦ ರಿಂದ ೧೨ ಸಾವಿರ ರೂಪಾಯಿಗಳಿದ್ದುವೆಂದು ಕಾಣುತ್ತದೆ. ಅದಕ್ಕೆ ಸ್ವಲ್ಪ ಸೇರಿಸಿ ನನ್ನ ಹೆಸರಿನಲ್ಲಿ ಒಂದು ನಿಧಿಯನ್ನು ಮಾಡಬೇಕೆಂದಿದ್ದಾರೆ. ಜವಾಬು ಕೊಡುತ್ತಾ ೪೦ ನಿಮಿಷಗಳ ಕಾಲ ಮಾತಾಡಿದೆ. ಅದನ್ನು ಅವರು ತುಂಬಾ ಇಷ್ಟಪಟ್ಟರು. ಮೂರು ಜಿಲ್ಲೆಗಳ ನಕ್ಷೆಯನ್ನು ಬಿಡಿಸಿದ್ದ ಒಂದು ಬೆಳ್ಳಿಯ ತಟ್ಟೆ ಮತ್ತು ಒಂದು ಕಸೂತಿ ಮಾಡಿದ ಶಾಲನ್ನು ಬಹುಮಾನವಾಗಿ ನೀಡಿದರು. ನನ್ನ ಬಗ್ಗೆ ಈ ಜನರಿಗೆ ತುಂಬಾ ಗೌರವವಿದೆ. ನಾನು ಅವರಿಗೆ ಮಾಡಿದ ಉಪಕಾರಕ್ಕೆ ಕೃತಜ್ಞತೆ ವ್ಯಕ್ತಪಡಿಸುತ್ತಿದ್ದಾರೆ ಎಂಬುದು ನನ್ನ ಭಾವನೆ.

**ಸೆಪ್ಟೆಂಬರ್ ೨೨, ೧೯೯೬** **ಚಿತ್ರದುರ್ಗ**

ಪಿ.ವಿ. ನರಸಿಂಹರಾಯರು ಕಾಂಗ್ರೆಸ್ (ಐ) ನ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ನೀಡಿದ್ದರೂ ಕೆಲವು ಎಐಸಿಸಿ (ಐ) ಸದಸ್ಯರು ಅವರು ಮುಂದುವರಿಯಬೇಕೆಂದೂ ಇನ್ನು ಕೆಲವರು ದಿವಂಗತ ರಾಜೀವ ಗಾಂಧಿಯ ಹೆಂಡತಿ ಸೋನಿಯಾ ಗಾಂಧಿ ಕಾಂಗ್ರೆಸ್ ಅಧ್ಯಕ್ಷರಾಗಬೇಕೆಂದು ಯೋಚಿಸುತ್ತಿರುವುದು ತಮಾಷೆಯಾಗಿದೆ. ಇದು ಸಂಪೂರ್ಣ ನಾಯಕತ್ವದ ಕೊರತೆಯ ಸೂಚನೆ. ಈ ಪಕ್ಷದಲ್ಲಿ ಅಧ್ಯಕ್ಷರಾಗುವವರಿದ್ದಾರೆ. ಇದು ವಿಲಕ್ಷಣವಾಗಿಯೂ ಮತ್ತು ಪಕ್ಷದಲ್ಲಿ ನೈತಿಕತೆಯ ಕೊರತೆಯನ್ನು ಪ್ರಕಟಿಸುತ್ತದೆ. ರಾವ್‌ರವರು ಅಧ್ಯಕ್ಷರಾಗಿ ಮುಂದುವರಿದ ಆಕ್ಷೇಪಣೀಯ ರೀತಿಯ ನಂತರ ಮೋಸ ಮಾಡಿದ ಆರೋಪವು ಅವರ ಮೇಲಿದ್ದು ಅವರ ಹೆಸರು ದೋಷಾರೋಪಣ ಪಟ್ಟಿಯಲ್ಲಿ ಕಂಡುಬಂದ ಮೇಲೆ ರಾವ್ ರಾಜೀನಾಮೆಯಿತ್ತರು. ಆ ಪಕ್ಷದ ಸದಸ್ಯರು ಅವರು ಮುಂದುವರಿಯಬೇಕೆನ್ನುವುದು ಅಷ್ಟೇ ಕುತೂಹಲಕಾರಿ. ಹಾಗೆಯೇ ಪ್ರಜಾಪ್ರಭುತ್ವಕ್ಕೆ ಮಾಡಿದ ಅವಮಾನ.

**ಸೆಪ್ಟೆಂಬರ್ ೨೬, ೧೯೯೬ ಚಿತ್ರದುರ್ಗ**

ಪ್ರಧಾನಮಂತ್ರಿ, ಕೇಂದ್ರ ಮಂತ್ರಿಗಳು, ಮುಖ್ಯಮಂತ್ರಿಗಳು ಉನ್ನತ ಸ್ಥಾನದಲ್ಲಿರುವ ಅಧಿಕಾರಶಾಹಿಗಳು ಮತ್ತು ವಿವಿಧ ರಾಜ್ಯಗಳ ಮಂತ್ರಿಗಳೂ ಸೇರಿದಂತೆ ದೇಶದಲ್ಲಿ ಉನ್ನತ ಸ್ಥಾನದಲ್ಲಿರುವವರೂ ಸೇರಿದಂತೆ ಅನೇಕರ ಹಗರಣಗಳು ಅಂದರೆ ಭ್ರಷ್ಟಾಚಾರದ ಮೊಬಲಗು ಹೊರಬರುತ್ತಿವೆ. ಈ ಜನರ ಇಂತಹ ದಿನನಿತ್ಯದ ಚಟುವಟಿಕೆಗಳಿಗೆ ಅಂತ್ಯವೇ ಇಲ್ಲವೆಂದು ಕಾಣುತ್ತದೆ. ನಿಜವಾಗಿ ಇದು ಆ ಮಹಿಳೆ ಇಂದಿರಾ ಗಾಂಧಿಯಿಂದ ಪ್ರಾರಂಭವಾಯಿತು. ಅವರು ಸಾರ್ವಜನಿಕ ಜೀವನದಲ್ಲಿ ಭ್ರಷ್ಟಾಚಾರಕ್ಕೆ ಅಸ್ತಿಭಾರ ಹಾಕಿದ್ದರು. ಈ ಕಾನೂನು ಕ್ರಮಗಳ ಫಲಿತಾಂಶಗಳೇನಾಗುತ್ತದೆ ಎಂಬುದನ್ನು ಲಕ್ಷ್ಯದಿಂದ ಮತ್ತು ಜಾಗರೂಕತೆಯಿಂದ ಗಮನಿಸಬೇಕು. ಉಚ್ಚತಮ ನ್ಯಾಯಾಲಯ ಮತ್ತು ವಿವಿಧ ಉಚ್ಚ ನ್ಯಾಯಾಲಯಗಳ ಮಾರ್ಗದರ್ಶನದಿಂದ ಈ ಕೊಳಕು ವಿಷಯಗಳು ಹೊರಬರುತ್ತಿವೆಯೆಂಬುದರಲ್ಲಿ ಸಂದೇಹವಿಲ್ಲ. ಭಾರತದ ನಾಗರಿಕರು ಜಾಗರೂಕವಾಗಿ ಇದನ್ನು ಗಮನಿಸಬೇಕು.

**ಅಕ್ಟೋಬರ್ ೧೯, ೧೯೯೬ ಚಿತ್ರದುರ್ಗ**

ನೆನ್ನೆಯಿಂದ ಉತ್ತರ ಪ್ರಪದೇಶದಲ್ಲಿ ರಾಜಕೀಯ ಪಕ್ಷಗಳು ಸರಕಾರವನ್ನು ರಚಿಸುವುದಕ್ಕೆ ಒಮ್ಮತಕ್ಕೆ ಬರದಿದ್ದುದರಿಂದ ರಾಷ್ಟ್ರಪತಿಯವರ ಆಳ್ವಿಕೆಯನ್ನು ಇನ್ನೂ ೬ ತಿಂಗಳ ಕಾಲ ಮುಂದುವರಿಸಲಾಗಿದೆ. ಬಿಜೆಪಿ ಏಕೈಕ ದೊಡ್ಡ ಪಕ್ಷವಾಗಿದ್ದು ಕೆಲವು ತಿಂಗಳುಗಳ ಹಿಂದೆ ಮಾಡಿದಂತೆ ಸರಕಾರವನ್ನು ರಚಿಸುವುದಕ್ಕೆ ಅವಕಾಶವನ್ನು ಕೊಡಬೇಕಾಗಿತ್ತು. ಈಗ ಉತ್ತರ ಪ್ರದೇಶದಲ್ಲಿ ಸರಕಾರವನ್ನು ರಚಿಸುವುದಕ್ಕೆ ಬಿಡದೆ ಇರುವುದು ತಪ್ಪು. ಹಾಸ್ಯಾಸ್ಪದ! ಸ್ವಾಭಾವಿಕವಾಗಿ ಬಿಜೆಪಿಯು ಎಲ್ಲಾ ರಾಜ್ಯಗಳಲ್ಲಿ ಪ್ರತಿಭಟಿಸಲು ಇಚ್ಛಿಸುತ್ತದೆ.

**ನವೆಂಬರ್ ೧, ೧೯೯೬ ಚಿತ್ರದುರ್ಗ**

೧೧೦-೩೦ರ ಸುಮಾರಿಗೆ ಕನ್ನಡ ಚಳವಳಿಗಾರ ಸದಸ್ಯರು ಐದು ಜನ ಬಂದು ಈ ಅರ್ಥಪೂರ್ಣ ದಿನ ನಲವತ್ತು ವರ್ಷಗಳ ಹಿಂದೆ ಒಗ್ಗೂಡಿದ ಕರ್ನಾಟಕ ರಾಜ್ಯವು ಅಸ್ತಿತ್ವಕ್ಕೆ ಬಂದಿತು. ನೀವು ಮೊದಲ ಮುಖ್ಯಮಂತ್ರಿಯಾಗಿದ್ದದರಿಂದ ಅದಕ್ಕಾಗಿ ಮುಖ್ಯವಾಗಿ ಕೆಲಸ ಮಾಡಿದ ನಿಮಗೆ ಗೌರವ ಸಲ್ಲಿಸಲು ಬಂದಿದ್ದೇವೆಂದು ಹೇಳಿದರು. ನನ್ನೊಂದಿಗೆ ಮತ್ತು ನಾನು ಮಾತ್ರ ಇರುವ ಅನೇಕ ಫೋಟೋಗಳನ್ನು ತೆಗೆದುಕೊಂಡರು. ಒಂದು ಉಣ್ಣೆ ಕಾಶ್ಮೀರದ ಶಾಲು, ಗಣಪತಿ ವಿಗ್ರಹವಿರುವ ಹೆಚ್ಚು ಬೆಲೆ ಬಾಳುವ ಚೌಕಟ್ಟು, ಹೂವ ಮತ್ತು ಹಣ್ಣುಗಳನ್ನು ನೀಡಿದರು. ಒಂದು ಗಂಟೆಯ ನಂತರ ಹೋದರು. ಮೈಸೂರಿನಿಂದ ಅಷ್ಟು ದೂರದಿಂದ ಅವರೆಲ್ಲಾ ಕಾರಿನಲ್ಲಿ ಬಂದಿದ್ದರು. ನನ್ನಿಂದ ಅವರಿಗೆ

ಏನೂ ಬೇಕಿರಲಿಲ್ಲ. ಹೀಗೆ ಮಾಡಲು ಪ್ರಚೋದಿಸಿದುದು ಕೇವಲ ನನ್ನ ಮೇಲಿನ ಗೌರವದಿಂದ ಎಂದೆನಿಸುತ್ತದೆ.

**ನವೆಂಬರ್ ೩, ೧೯೯೬ ಚಿತ್ರದುರ್ಗ-ಹುಬ್ಬಳ್ಳಿ**

ಸಂಯುಕ್ತ ಕರ್ನಾಟಕದ ನಿರ್ವಾಹಕ ಸಂಪಾದಕರಾದ ಕೆ. ಶ್ಯಾಮರಾವ್ ಬಂದು ಸಮಾರಂಭಕ್ಕೆ ೧೦-೩೦ಕ್ಕೆ ಬರಬೇಕೆಂದು ಹೇಳಿದರು. ಅವರ ಜೊತೆಯಲ್ಲಿ ಇತರ ಸ್ನೇಹಿತರು ಇದ್ದರು. ನಂತರ ಸಂಯುಕ್ತ ಕರ್ನಾಟಕದ ಕೆಲವು ಸ್ನೇಹಿತರು ಬಂದು ನಾಳೆಯ ಸಮಾರಂಭದ ಬಗ್ಗೆ ಚರ್ಚಿಸಿದರು. ನಾನು ಅಲ್ಲಿರಬೇಕೆಂದು ಅವರಿಗೆ ಕುತೂಹಲವಾಗಿತ್ತು. ತುಂಬಾ ಸುಸ್ತಾಗಿತ್ತು ಮತ್ತು ತುಂಬಾ ಹೊತ್ತು ಕಾರಿನಲ್ಲಿ ಕುಳಿತರೆ ಆಗುವಂತೆ ಸ್ವಲ್ಪ ಕಾಲು ಊದಿಕೊಂಡಿದ್ದವು.

**ನವೆಂಬರ್ ೭, ೧೯೯೬ ಚಿತ್ರದುರ್ಗ**

ಎಂದಿನಂತೆ ಪೇಪರಿನ ತುಂಬಾ ದಸ್ತಗಿರಿಗಳು, ಜಾಮೀನು ಅರ್ಜಿಗಳು, ಹುಡುಕಾಟಗಳು, ಹಗರಣಗಳು ಮುಂತಾದವು ಇವೆ. ಎಷ್ಟೊಂದು ಅಸತ್ಯಸಂಧತೆ ಇದು ನಿಜ. ಇವೆಲ್ಲ ೧೯೬೯ರಿಂದ ಇಂದಿರಾ ಕಾಂಗ್ರೆಸ್ ಅನ್ನು ವಿಭಜಿಸಿದಂದಿನಿಂದ ಇದು ಬೆಳೆದಿದೆ. ಸಾರ್ವಜನಿಕ ಜೀವನ, ಆಡಳಿತ ವಿಶೇಷವಾಗಿ ಮಂತ್ರಿಗಳು ಮತ್ತು ಶಾಸಕರಲ್ಲಿ ಭ್ರಷ್ಟಾಚಾರ ಕಾರ್ಯತಃ ಹೆಚ್ಚಲು ಆಕೆಯೇ ಮೂಲ ಕಾರಣ. ಒಂದಾದರೊಂದರಂತೆ ದಕ್ಷಿಣ ಆಫ್ರಿಕಾದ ವಿರುದ್ಧ ೫ ಪಂದ್ಯಗಳನ್ನು ಗೆದ್ದಿದ್ದ ಭಾರತವು ಈಗಲೂ ಗೆದ್ದಿರುವುದು ಸಂತೋಷ.

**ಡಿಸೆಂಬರ್ ೯, ೧೯೯೬ ದೆಹಲಿ**

ಪಾರ್ಲಿಮೆಂಟಿನ ಹಳೆಯ ಸೆಂಟ್ರಲ್ ಹಾಲಿಗೆ ಹೋದೆ. ಅಲ್ಲಿ ಅರ್ಧ ಶತಮಾನಗಳ ಹಿಂದೆ ೧೯೪೬ರ ಡಿಸೆಂಬರ್ ೯ರಂದು ಅಧ್ಯಕ್ಷತೆ ವಹಿಸಿದ್ದ ದೇಶದ ಅತ್ಯಂತ ಶ್ರೇಷ್ಠ ವ್ಯಕ್ತಿಗಳನ್ನೊಳಗೊಂಡ ಕಾನ್‌ಸ್ಟಿಟ್ಯುಯೆಂಟ್ ಸಭೆಯಲ್ಲಿ ೩೦೦ರಷ್ಟು ಜನರು ೩ ವರ್ಷಗಳ ಕಾಲ ಸಭೆ ಸೇರಿ ನಮ್ಮ ಸಂವಿಧಾನವನ್ನು ರೂಪಿಸಿತು. ಅವುಗಳನ್ನೆಲ್ಲಾ ಜಂಭದಿಂದ ಜ್ಞಾಪಿಸಿಕೊಂಡೆ. ಈಗ ತುಂಬಾ ತುಂಬಾ ಮುದುಕರಾಗಿರುವ ೧೫ ಸದಸ್ಯರು ಮಾತ್ರ ಜೀವಿಸಿದ್ದು, ಅದರಲ್ಲಿ ನಾವು ೮ ಅಥವಾ ೯ ಜನರನ್ನು ಮುಂದಿನ ಸಾಲಿನಲ್ಲಿ ಕುಳಿತುಕೊಳ್ಳುವಂತೆ ಮಾಡಿದರು. ನಾನು ಕಾಂಗ್ರೆಸ್ ಅಧ್ಯಕ್ಷನಾಗಿದ್ದಾಗ ೧೯೬೮ ರಿಂದ ೧೯೬೯ರವರೆಗೆ ನನ್ನ ಮೊದಲಿನ ಕಾರ್ಯದರ್ಶಿಯಾಗಿದ್ದ ರಾಷ್ಟ್ರಪತಿ ಶಂಕರ ದಯಾಳ್ ಶರ್ಮ, ಉಪರಾಷ್ಟ್ರಪತಿ ನಾರಾಯಣ್, ದೇವೇಗೌಡ ಮತ್ತು ಶ್ರೀಮತಿ ಹೆಪ್ತುಲ್ಲಾ ಭಾಷಣಗಳನ್ನು ಮಾಡಿದ ಮೇಲೆ ನಮ್ಮನ್ನು ಗೌರವಿಸಲಾಯಿತು. ಉಪಸಭಾಪತಿ ಹೆಪ್ತುಲ್ಲಾ ತುಂಬಾ ಪ್ರಭಾವವುಳ್ಳ ವ್ಯಕ್ತಿಯಾಗಿದ್ದರು. ಪ್ರತಿಯೊಬ್ಬ ಮಾಜಿ ಸದಸ್ಯನಿಗೂ ಒಂದು ಶಾಲು, ಚಿನ್ನದ ಮೆರುಗು ಕೊಟ್ಟಿರುವ ಬೆಳ್ಳಿ ತಟ್ಟೆ ಬಹುಮಾನವಾಗಿ ನೀಡಿದರು. ಸಮಾರಂಭ ಮುಕ್ತಾಯವಾಯಿತು.

**ಡಿಸೆಂಬರ್ ೧೦, ೧೯೯೬** **ದೆಹಲಿ**

ಮಧ್ಯಾಹ್ನ ೨ ರಿಂದ ೪ ಗಂಟೆವರೆಗೆ ಬಿಟ್ಟು ಇಡೀ ದಿವಸವು ತೀವ್ರವಾದ ಚಟುವಟಿಕೆಯಿಂದ ಕೂಡಿದ್ದಿತು. ಬೆಳಿಗ್ಗೆ ತುಂಬಾ ಜನರು ಹೂವುಗಳೊಂದಿಗೆ ಬಂದು ನನಗೆ ಶುಭವನ್ನು ಕೋರಿದರು. ಮಧ್ಯಹ್ನಾ ೪ ಗಂಟೆಯಿಂದ ೭ ಗಂಟೆವರೆಗೆ ಸಾಮಾನ್ಯವಾಗಿ ಸಭೆಗಳು ನಡೆಯುವ ಮುಂದಿನ ಸಭಾಂಗಣದಲ್ಲಿ ಪ್ರಮುಖವಾದ ವ್ಯಕ್ತಿಗಳು, ಇತರರೊಂದಿಗೆ ಬಂದು ಶುಭದಿನವನ್ನು ಕೋರಿದರು. ಕೆಲವರು ಕೇಕು ಕಳುಹಿಸಿದ್ದು ಅದನ್ನು ನಾನು ಕತ್ತರಿಸಿ ಹಂಚಿದೆ. ಮುಂಚಿನ ಕಾಶ್ಮೀರದ ಮಹಾರಾಜ ಕರಣ್‌ಸಿಂಗ್, ಪಿ.ವಿ. ಆರ್. ರಾವ್, ಸಿಕಂದರ್ ಭಕ್ತ್, ಚಂದ್ರಶೇಖರ್, ರಾಮಕೃಷ್ಣ ಹೆಗಡೆ, ಹಳೆಯ ಸ್ನೇಹಿತ ಅವದೇಶ್ ಪ್ರತಾಪ್‌ಸಿಂಗ್ ಮತ್ತು ಇನ್ನೊಬ್ಬ ಮಹಿಳೆ ಪಾಶ್ಮಿನಾ ಶಾಲುಗಳು, ಸಿಹಿ ತಿಂಡಿಗಳು ಮತ್ತು ಹೆಚ್ಚಿನವರು ಹೂವುಗಳನ್ನು ಅರ್ಪಿಸಿದರು. ಪಂತ್ ಕೂಡ ಬಂದರು. ಇದು ಬಹಳ ಸಂತೋಷವಾದ ಸಂಜೆ. ಎಲ್ಲರಿಗೂ ಕಾಫಿ, ಟೀ, ಬಿಸಿಯಾಗಿ ತಯಾರಿಸಿದ ಒಂದು ಸಿಹಿ ತಿಂಡಿ ಕೊಡಲಾಯಿತು ಒಟ್ಟಿನಲ್ಲಿ ನನಗೆ ತುಂಬಾ ಸಂತೋಷವಾಯಿತು. ಶ್ರೀ ಅಶ್ರಫ್ ತುಂಬಾ ಚಟುವಟಿಕೆಯುಳ್ಳ ವ್ಯಕ್ತಿಯಾಗಿದ್ದರು. ಮಾಜಿ ಪ್ರಧಾನಿ ರಾವ್ ೫ ನಿಮಿಷಗಳ ಕಾಲ ಮಾತನಾಡಿದರು. ಅನೇಕ ಪ್ರಕರಣಗಳಲ್ಲಿ ದೋಷಾರೋಪಿತರಾಗಿರುವ ಇವರು ಹೀಗೆ ಮಾಡಿದ್ದಾರೆಯೆ ಎಂಬ ಭಾವನೆ ನನ್ನ ಮನಸ್ಸಿನಲ್ಲುಳಿಯಿತು. ಈ ಎಲ್ಲಾ ಅಪರಾಧಗಳನ್ನು ಮಾಡಿದ್ದೂ ನಿಜವಾದರೆ ಅವರು ಉತ್ಕೃಷ್ಟ ನಟನಾಗಿರಬಹುದು. ದಿವಂಗತ ಅವದೇಶ್ ಪ್ರತಾಪನ ಮಗ ದೊಡ್ಡ ಗಾತ್ರದ ಬೆಳ್ಳಿ ತಟ್ಟೆಯನ್ನು ಕೊಟ್ಟಿರಬಹುದು. ಇವೆಲ್ಲವನ್ನೂ ನನ್ನ ಶಿಷ್ಯ ಶೆಟ್ಟಿ ಸಹಕಾರದಿಂದ ಅಶ್ರಫ್ ವ್ಯವಸ್ಥೆಗೊಳಿಸಿದ್ದಾಗಿತ್ತು.

**ಡಿಸೆಂಬರ್ ೨೯, ೧೯೯೬** **ಮಂಡ್ಯ-ಬೆಂಗಳೂರು**

ಇದು ಸುಮಾರಾಗಿ ಆರಾಮವಾಗಿರುವ ಗೆಸ್ಟ್‌ಹೌಸ್. ಇಲ್ಲಿ ಹಿಂದೆ ೨-೩ ಸಲ ತಂಗಿದ್ದುದನ್ನು ನಾನು ಜ್ಞಾಪಿಸಿಕೊಂಡೆ. ಸ್ನಾನ ಮಾಡಿ ದಿವಂಗತ ಶಂಕರಗೌಡರ ಮನೆಗೆ ಶ್ರೀಮತಿ ಗೌಡರ ಆಹ್ವಾನದ ಮೇರೆಗೆ ಬೆಳಗಿನ ಉಪಾಹಾರಕ್ಕೆ ಹೋದೆ. ಅವರ ೩ ಜನ ಗಂಡುಮಕ್ಕಳು ಮತ್ತು ಹೆಣ್ಣುಮಕ್ಕಳು, ಅವರ ಮಕ್ಕಳೆಲ್ಲಾ ಅಲ್ಲಿದ್ದು ನನ್ನನ್ನು ಸ್ವಾಗತಿಸಿ ಎಲ್ಲರೂ ಮಾಮೂಲಿನಂತೆ ನನ್ನ ಕಾಲು ಮುಟ್ಟಿ ನಮಸ್ಕರಿಸಿದರು. ಅವರು ನನಗೆ ಋಣಿಗಳಾಗಿದ್ದರು. ಸುಮಾರು ಅರ್ಧ ಡಜನ್ ಪ್ರತ್ರಕರ್ತರು ಇಲ್ಲಿ ಭೇಟಿ ಮಾಡಿ ದೇಶದಲ್ಲಿ ಈಗಿರುವ ಸ್ಥಿತಿಯ ಬಗ್ಗೆ ಪ್ರಶ್ನೆ ಕೇಳಿ ಏಕೆ ಇಷ್ಟೊಂದು ಭ್ರಷ್ಟಾಚಾರ ಎಂದು ನನ್ನನ್ನು ಕೇಳಿದರು. ನನ್ನ ಮಾಮೂಲಿನ ಉತ್ತರಗಳನ್ನು ಕೊಟ್ಟೆ. ಗೆಸ್ಟ್‌ಹೌಸ್‌ಗೆ ಹೋಗಿ ಒಂದು ಗಂಟೆ ವಿಶ್ರಾಂತಿ ಪಡೆದೆ.

'ಕುವೆಂಪು' ರವರು 'ವಿಶ್ವಮಾನವ' ಎಂಬ ವಿಷಯದ ಬಗ್ಗೆ ಅವರ 'ರಾಮಾಯಣ ದರ್ಶನಂ'ನ ಕೊನೆಯ ಭಾಗದಲ್ಲಿ ಹೇಳಿರುವುದನ್ನು ಮುಖ್ಯವಾಗಿ ಉಲ್ಲೇಖಿಸಿ, ೨೦ ವರ್ಷಗಳ ಹಿಂದೆ ನಾನು ಮತ್ತು ಜನರಲ್ ಕಾರ್ಯಪ್ಪನವರಿಂದ ಉದ್ಘಾಟಿಸಲ್ಪಟ್ಟ 'ವಿಶ್ವಮಾನವ' ಸಂಸ್ಥೆಗೆ ಊಟಕ್ಕೆ ಹೋದೆ. ಈ ಸಮಾರಂಭದಲ್ಲಿ ಉಪಸ್ಥಿತರಿದ್ದ ಆದಿ ಚುಂಚನಗಿರಿ ಜಗದ್ಗುರುಗಳಿಂದ ಈ ಸಂಸ್ಥೆ ನಡೆಯುತ್ತಿದೆ.

**ಡಿಸೆಂಬರ್ ೩೧, ೧೯೯೬ ಬೆಂಗಳೂರು-ಚಿತ್ರದುರ್ಗ**

೧೯೯೬ ಈ ವರ್ಷ ಮುಗಿಯಿತು. ಇದು ಕೊನೆಯ ಗಂಟೆಗಳು. ನಾನು ಚೆನ್ನಾಗಿ ಕೆಲಸ ಮಾಡಿದ್ದೇನೆಯೆ ? ನನಗೆ ತಿಳಿಯದು, ಹಳೆಯ ಕಾಂಗ್ರೆಸ್‌ಅನ್ನು ಪುನಶ್ಚೇತನಗೊಳಿಸುವ ನನ್ನ ಪ್ರಯತ್ನಗಳು ಫಲಿತಾಂಶವನ್ನು ನೀಡುತ್ತವೆಂದು ಕಾಣುತ್ತದೆ. ಇದು ಒಂದು ಆಸೆ ಮಾತ್ರ.

**ಜನವರಿ ೨, ೧೯೯೭**

೫ ಗಂಟೆಗೆ ನನ್ನ ಕೋರಿಕೆಯಂತೆ ಧಾರವಾಡದ ಕನ್ನಡ ಪ್ರಾಧ್ಯಾಪಕ ಮಲ್ಲಿಕಾರ್ಜುನ ಸಿಂಧಗಿ ಬಂದು ನನ್ನ ನಿಕಟ ಸ್ನೇಹಿತ ಮತ್ತು ಸ್ವಾತಂತ್ರಕ್ಕಾಗಿ ಹೈದರಾಬಾದು ರಾಜ್ಯದಲ್ಲಿ ಚಳವಳಿಯ ನೇಕಾರರಾಗಿದ್ದ ಸ್ವಾಮಿ ರಮಾನಂದ ತೀರ್ಥರ ಬಗ್ಗೆ ಕನ್ನಡದಲ್ಲಿ ಬರೆದ ಜೀವನ ಚರಿತ್ರೆಗೆ ಮುನ್ನುಡಿಯನ್ನು ಬರೆದುಕೊಂಡರು. ಅದು ಸುಮಾರು ಮೂರು ಪುಟಗಳಾಗಿತ್ತು. ಅವರಿಗೆ ತೃಪ್ತಿಯಾಗಿದ್ದು ಪುಸ್ತಕವನ್ನು ಪ್ರಕಟಿಸುವುದಕ್ಕೆ ೨೨ನೇ ತಾರೀಕು ಧಾರವಾಡಕ್ಕೆ ನಾನು ಬರಬೇಕೆಂದು ಹೇಳಿದರು.

**ಜನವರಿ ೨೬, ೧೯೯೭**

ನಮಗೆ ಜಂಭದ ದಿನ. ಕೆಲವು ವಿಷಯಗಳಲ್ಲಿ ನಾವು ಪ್ರಗತಿ ಮಾಡಿದ್ದೇವೆ. ಬೇರೆ ಯಾವ ದೇಶಕ್ಕೂ ಹೋಲಿಸಬಹುದಾದ ನಮ್ಮ ರಕ್ಷಣಾ ದಳಗಳನ್ನು ರಚಿಸಿದ್ದೇವೆ. ಕೈಗಾರಿಕೆಯಲ್ಲಿ ಪ್ರಗತಿಯಾಗಿದೆ. ಶಿಕ್ಷಣವನ್ನು ಹರಡುವುದರಲ್ಲಿ ಬಡತನ ನಿರುದ್ಯೋಗ ನಿವಾರಿಸಲು ಮುಂತಾದವುಗಳಲ್ಲಿ ಗಣನೀಯವಾದ ಪ್ರಗತಿ ಮಾಡಿಲ್ಲ, ತುಂಬಾ ಮಾಡಬೇಕಾದುದಿದೆ. ದೇಶದಾದ್ಯಂತ ಗಣರಾಜ್ಯೋತ್ಸವ ಸಮಾರಂಭ ಆಚರಿಸಲಾಗುತ್ತಿದೆ. ತುಂಬಾ ಉತ್ಸಾಹದಿಂದ ಅನೇಕ ಸ್ಥಳಗಳಲ್ಲಿ ಈ ಹಬ್ಬವನ್ನು ಆಚರಿಸಲಾಗಿದೆ. ಹಳ್ಳಿಗಳಲ್ಲಿ ಉತ್ಸಾಹ ಕಡಿಮೆಯಾಗಿತ್ತೆಂದೆನಿಸುತ್ತದೆ. ಅವರಲ್ಲಿ ಅನೇಕರಿಗೆ ಅದರ ಪ್ರಾಮುಖ್ಯತೆ ತಿಳಿದಿಲ್ಲ ಅಥವಾ ಅರ್ಥವಾಗಿಲ್ಲ. ಕಾರಣ ಅನಕ್ಷರತೆ, ಅದರ ಪರಿಣಾಮ ಅಜ್ಞಾನ.

**ಫೆಬ್ರುವರಿ ೧, ೧೯೯೭ ಬೆಂಗಳೂರು-ಚಿತ್ರದುರ್ಗ**

ಅಪ್ಪರ್ ತುಂಗಾ ಮತ್ತು ಅಪ್ಪರ್ ಭದ್ರಾ ಯೋಜನೆಗಳ ಬಗ್ಗೆ ಪ್ರಮುಖ ನೀರಾವರಿ ಮಂತ್ರಿ ನಾಗೇಗೌಡರು ನನ್ನ ಕೋರಿಕೆಯ ಮೇಲೆ ಕರೆದಿದ್ದ ಸಭೆಗೆ ಮೊದಲೇ

ನಿಗದಿಪಡಿಸಿದಂತೆ ಭಾಗವಹಿಸಿದೆ. ರಾಜ್ಯದ ಅತ್ಯಂತ ಹಿರಿಯ ಎಂಜಿನಿಯರ್ ಕೆ.ಸಿ. ರೆಡ್ಡಿ ಮತ್ತು ೨-೩ ಸೂಪರಿಂಟೆಂಡಿಂಗ್ ಇಂಜಿನಿಯರುಗಳು ಹಾಜರಿದ್ದರು. ನಿವೃತ್ತ ಸೂಪರಿಂಟೆಂಡೆಂಡಿಂಗ್ ಇಂಜಿನಿಯರ್ ಜಿ. ಪರಮಶಿವಯ್ಯ ಕೂಡ ಹಾಜರಿದ್ದರು. ಮಂತ್ರಿ ನಾಗೇಗೌಡರೂ ಹಾಜರಿದ್ದರು. ಮಂತ್ರಿಗಳು ಆಹ್ವಾನಿಸಿಲ್ಲವೆಂಬ ಕಾರಣದಿಂದ ಲೋಕಸಭಾ ಸದಸ್ಯರಾದ ಕೋದಂಡರಾಮಯ್ಯನವರು ಹಾಜರಿರಲಿಲ್ಲ. ಪರಮಶಿವಯ್ಯನವರ ಜೊತೆಯಲ್ಲಿಯೇ ಅವರಿಗೂ ತಿಳಿಸಲಾಗಿದ್ದು ಬರಲು ಒಪ್ಪಿಕೊಂಡಿದ್ದರು. ಸಾಕಷ್ಟು ಚರ್ಚೆಯಾದ ಮೇಲೆ ಮುಂದಕ್ಕೆ ಭದ್ರಾ ಯೋಜನೆಯನ್ನು ಒಪ್ಪಿಕೊಳ್ಳಬೇಕಾದರೆ ಅದರ ವಿರುದ್ಧ ಪ್ರತಿಭಟಿಸಬೇಕಾಗುವಂತೆ ಅಪ್ಪರ್ ತುಂಗಾ ಲಿಫ್ಟ್‌ಅನ್ನು ಒಪ್ಪಿಕೊಳ್ಳಬೇಕೆಂದಾಯಿತು. ಅಂದರೆ ೧೦ ವರ್ಷ ತಡ. ಆದರೆ ತುಂಗಾವನ್ನು ನಾಲ್ಕು ವರ್ಷಗಳೊಳಗೆ ಪೂರೈಸಬಹುದು. ಪರಮಶಿವಯ್ಯ ಒಪ್ಪಿಕೊಂಡರು. ಮಂತ್ರಿಯು ಬಹಳ ದಯಾಳುವಾಗಿದ್ದರು.

**ಫೆಬ್ರವರಿ ೨, ೧೯೯೭ ಬೆಂಗಳೂರು**

ಎಸ್.ಎನ್. ಮಿಶ್ರರಿಂದಾಗಿ ಗಣನೀಯವಾಗಿ ನಿಧಾನವಾದ ಮೇಲೆ ಸರ್ದಾರ್ ಮೆಮೋರಿಯಲ್ ಟ್ರಸ್ಟ್ ಸಭೆಯನ್ನು ಕಿರಣ್ ಮನೆಯಲ್ಲಿ ಮಾತ್ರ ನಡೆಸಲಾಯಿತು. ಚರ್ಚೆಗಳಿಗೆ ಎರಡು ಗಂಟೆಗಳ ಕಾಲ ತೆಗೆದುಕೊಂಡಿದ್ದು ಅಗತ್ಯವಾದ ನಿರ್ಧಾರಗಳನ್ನು ಕೈಗೊಂಡೆವು. ನಂ. ೭, ಜಂತರ್ ಮಂತರ್ ರಸ್ತೆಯ ಆಸ್ತಿಯ ಹಕ್ಕನ್ನು ವರ್ಗಾಯಿಸುವ ಬಗ್ಗೆ ನಾನು ವೈಯಕ್ತಿಕವಾಗಿ ಪ್ರಧಾನಮಂತ್ರಿ ಗೌಡರನ್ನು ಸಂಪರ್ಕಿಸಬೇಕೆಂದೂ ಅಂತಿಮವಾಗಿ ಅದು ಆಗುವಂತೆ ನೋಡಿಕೊಳ್ಳಬೇಕೆಂದಾಯಿತು. ಪಾರ್ಲಿಮೆಂಟು ಭವನದಲ್ಲಿ ಈಗ ನೆಹರು ಮತ್ತು ಅಜಾದರ ಪ್ರತಿಮೆಗಳು ಮಾತ್ರ ಇರುವುದರಿಂದ ಅಲ್ಲಿ ಸರ್ದಾರ್ ಪಟೇಲ್ ಮತ್ತು ರಾಜೇಂದ್ರ ಪ್ರಸಾದರ ಅಂತಹುದೇ ಪ್ರತಿಮೆಗಳನ್ನು ಸ್ಥಾಪಿಸಬೇಕೆಂದು ಸಭಾಪತಿಗೆ ಬರೆಯುವಂತೆ ನನಗೆ ಹೇಳಲಾಯಿತು. ಸಾದಿಕ್ ಅಲಿಯು ಪತ್ರದ ಕರಡನ್ನು ಸಿದ್ಧಪಡಿಸಿ ನನಗೆ ತಂದ ನಂತರ ನಾನು ವೈಯಕ್ತಿಕವಾಗಿ ನಾಳೆಯಿಂದ ೧೦ನೇ ತಾರೀಕಿನವರೆಗೆ ನಾನು ದೆಹಲಿಯಲ್ಲಿರುವುದರಿಂದ ಅದನ್ನು ತಂದು ಅವರಿಗೆ ಕೊಡಬೇಕೆಂದಾಯಿತು. ಆಯವ್ಯಯವನ್ನೂ ಮಂಜೂರು ಮಾಡಲಾಯಿತು. ಕೋಲಾರದ ಪ್ರಸಿದ್ಧ ವಕೀಲರಾದ ಮಾಜಿ ಅರ್ಥಶಾಸ್ತ್ರಜ್ಞರಾದ ಆರ್. ವೆಂಕಟರಾಮನ್ ಸೌಜನ್ಯದ ಭೇಟಿ ಕೊಟ್ಟರು. ಎಲ್ಲವನ್ನೂ ಸರಿಪಡಿಸಿಕೊಂಡೆ. ಒಂದೇ ಸಮನೆ ಮಾತಾಡುತ್ತಿದ್ದುರಿಂದ ಎದೆನೋವು ಕಾಣಿಸಿಕೊಂಡಿರಬಹುದು.

**ಫೆಬ್ರವರಿ ೩, ೧೯೯೭ ಬೆಂಗಳೂರು**

ಮುರುಗೇಶನು ಚಿತ್ರದುರ್ಗಕ್ಕೆ ಹೊರಟು ಹೋಗಿದ್ದರಿಂದ ಮಂಜು ಜೊತೆಯಲ್ಲಿ ಕಿರಣ್ ಕಾರಿನಲ್ಲಿ ವಿಮಾನ ನಿಲ್ದಾಣಕ್ಕೆ ಹೋದೆ. ವಿಮಾನ ಸಕಾಲದಲ್ಲಿ ಬಿಟ್ಟು ಸಕಾಲದಲ್ಲಿ

ತಲುಪಿತು. ನನಗೆ ಮೇಲಿನ ವರ್ಗದಲ್ಲಿ ಸೀಟನ್ನು ಅಶ್ರಫ್ ಕಾದಿರಿಸಿದ್ದರು. ಅದು ಹೆಚ್ಚು ಸುಖದಾಯಕವಾಗಿದ್ದಿತು. ಅನುಕೂಲಗಳು ಇಷ್ಟವಾಯಿತು. ಕೇಂದ್ರ ಮಂತ್ರಿ ಬೊಮ್ಮಾಯಿ ನನ್ನ ಜೊತೆಯಲ್ಲಿ ವಿಮಾನದಲ್ಲಿದ್ದು ನಾವು ಅನೇಕ ವಿಷಯಗಳನ್ನು ಚರ್ಚಿಸಿದೆವು. ಅವರೇ ಹೆಚ್ಚಾಗಿ ಮಾತನಾಡಿ ತಮ್ಮ ಅಭಿಪ್ರಾಯ ಮತ್ತು ವೈಯಕ್ತಿಕ ಸಾಧನೆಗಳ ಬಗ್ಗೆ ಮಾತನಾಡಿದರು. ಬನಶಂಕರಿ ವಿದ್ಯಾಪೀಠಕ್ಕೆ ಸಹಾಯ ಮಾಡುವುದಾಗಿ ನನಗೆ ಹೇಳಿದರು. ರಾಜೇಂದ್ರನ್ ವಿಮಾನ ನಿಲ್ದಾಣಕ್ಕೆ ಕರ್ನಾಟಕ ಭವನದ ಕಾರಿನಲ್ಲಿ ಬಂದಿದ್ದು ಸಂತೋಷವಾಯಿತು. ಈ ಸಲ ಕೊಠಡಿ ಸಂಖ್ಯೆ ೮ರಲ್ಲಿ ನಾನು ತಂಗಿದೆ. ಅದು ಅನುಕೂಲವಾಗಿದೆ.

**ಫೆಬ್ರವರಿ ೫, ೧೯೯೭ — ದೆಹಲಿ**

ಇಂದು ಬಹಳ ಕೆಲಸದ ದಿನವಾಗಿದ್ದು ತುಂಬಾ ಸುಸ್ತಾಯಿತು. ಬೆಳಗಿನ ಉಪಾಹಾರವಾದಾಗಿನಿಂದ ಮಧ್ಯಾಹ್ನದ ಎರಡು ಗಂಟೆಗಳ ನಿದ್ದೆ ಬಿಟ್ಟರೆ ಬಹಳ ಜನರು ಬಂದು ನನ್ನನ್ನು ಕಾಣುತ್ತಿದ್ದಾರೆ. ದೆಹಲಿಯಲ್ಲಿ ಅನೇಕ ನಾಯಕರುಗಳಿಗೆ ನಿರಂತರವಾಗಿ ಫೋನು ಮಾಡುತ್ತಿದ್ದುದಕ್ಕೆ ಅಶ್ರಫ್‌ಗೆ ವಂದನೆಗಳು. ಕರಣ್‌ಸಿಂಗ್, ಶ್ರೀಮತಿ ಕಿದ್ವಾಯಿ, ಪಿ.ವಿ. ನರಸಿಂಹರಾವ್ ಸೇರಿದಂತೆ ಎಲ್ಲರೂ ನನಗೆ ಫೋನು ಮಾಡಿ ತಾವು ಭಾಗವಹಿಸುವುದಾಗಿ ಇಲ್ಲದಿದ್ದರೆ ನನ್ನ ಉದ್ದೇಶಗಳಿಗೆ ತಮ್ಮ ಸಂಪೂರ್ಣ ಒಪ್ಪಿಗೆಯಿದೆಯೆಂದು ತಿಳಿಸಿದರು. ಉಪಾಧ್ಯಕ್ಷ ರಣಬೀರ್‌ಸಿಂಗ್ ಮತ್ತು ಬಿಹಾರ್, ಉತ್ತರ ಪ್ರದೇಶದ ಇತರ ಅನೇಕ ಕಾಂಗ್ರೆಸ್ ಕಾರ್ಯಕರ್ತರು ಬಂದು ಸ್ವಲ್ಪ ಕಾಲ ಕಳೆದರು. ಇಬ್ಬರು ವಿದ್ಯಾರ್ಥಿಗಳು ಮತ್ತು ಯುವ ಪ್ರತಿನಿಧಿಗಳಂತಹ ರಾಜಕೀಯೇತರ ಜನರು ಕೂಡ ಬಂದು ನನ್ನ ಸಲಹೆಯನ್ನು ಕೇಳಿದರು. ಬೆಂಗಳೂರಿನ ಪ್ರಸಿದ್ಧ ಸಂಗೀತಗಾರ್ತಿ ಶ್ರೀಮತಿ ಶ್ಯಾಮಲಾಭಾವೆ ಬಂದು ಅತಿ ದೊಡ್ಡ ಅಂತರರಾಷ್ಟ್ರೀಯ ಪ್ರಶಸ್ತಿಯನ್ನು ಪಡೆದು ಮತ್ತು ತಮ್ಮ ಸಂತೋಷವನ್ನು ವ್ಯಕ್ತಪಡಿಸಿ ಅದಕ್ಕೆ ಚಿಕ್ಕವಳಾಗಿದ್ದಾಗಿನಿಂದಲೂ ಈ ರೀತಿ ಸಫಲಳಾಗಿರುವುದಕ್ಕೆ ನನ್ನ ಆಶೀರ್ವಾದ ಮತ್ತು ಪ್ರೋತ್ಸಾಹ ಕಾರಣವೆಂದು ಹೇಳಿದರು. ಆಕೆಯ ಸಹೋದರ ಆಕೆಯೊಡನಿದ್ದರು. ಆಕೆಯ ಸಂಗೀತದ ಎರಡು ಕ್ಯಾಸೆಟ್ಟುಗಳನ್ನು ನನಗೆ ನೀಡಿದರು. ನನಗೆ ಸಂತೋಷವಾಯಿತು. ಸಾದಿಕ್ ಅಲಿ ಬಂದು ಸ್ವಲ್ಪ ಕಾಲ ಕಳೆದರು. ಅಶ್ರಫ್ ಜೊತೆಯಲ್ಲಿ ರಣಬೀರ್‌ಸಿಂಗ್ ಅಲ್ಲಿದ್ದರು. ನಾವು ಪಡೆಯುತ್ತಿದ್ದ ಅನೇಕ ಪೆನ್ಷನ್‌ಗಳ ಬಗ್ಗೆ ಮತ್ತು ಸಾದಿಕ್‌ಭಾಯಿ ಪಡೆಯಬೇಕಾದುದನ್ನು ಚರ್ಚಿಸಿದೆವು. ಇಂದು ಸಂಪೂರ್ಣವಾಗಿ ದಣಿವಾಗಿದೆ.

**ಫೆಬ್ರವರಿ ೮, ೧೯೯೭ — ದೆಹಲಿ**

ವಾಗ್ದಾನ ಮಾಡಿದಂತೆ ಸಿ. ಸುಬ್ರಹ್ಮಣ್ಯಂ ಈರೋಡಿನ ಡಾಕ್ಟರ್‌ರಾಗಿರುವ ಇವರ ಅಳಿಯನೊಂದಿಗೆ ಬೆಳಗಿನ ಉಪಾಹಾರಕ್ಕೆ ಬಂದು ಪ್ರಸಕ್ತ ಸ್ಥಿತಿಯ ಬಗ್ಗೆ ಅಂತಃಕರಣದಿಂದ

ಮಾತಾಡಿದರು. ಉತ್ತಮವಾದುದು ಏನೆಂದರೆ ಜಿಲ್ಲಾ ಸಮಿತಿಗಳಿರುವುದು. ಅವರ ಯೋಜನೆಯ ಬಗ್ಗೆ ಒಂದು ಟಿಪ್ಪಣಿಯನ್ನು ಕಳುಹಿಸಿವುದಾಗಿ ಮಾತು ಕೊಟ್ಟರು. ಇಂದಿನ ಮತ್ತು ಹಿಂದಿನ ಭ್ರಷ್ಟಾಚಾರ, ಜಯಲಲಿತ ಮತ್ತು ಆಕೆಯ ಅಗಾಧವಾದ ಆಸ್ತಿಗಳು, ಆಕೆಯ ಅಸತ್ಯಸಂಧತೆ ಮುಂತಾದ ಇತರ ಅನೇಕ ವಿಷಯಗಳ ಬಗ್ಗೆ ನಾವು ಮಾತನಾಡಿದೆವು.

ಅಷ್ಟೊಂದು ಸಂಪತ್ತನ್ನು ಇಟ್ಟುಕೊಂಡು ಯಾರಾದರೂ ಏನು ಮಾಡುವುದಕ್ಕಾಗುತ್ತದೆಯೆಂದು ನಾವು ಯೋಚಿಸಿದೆವು. ತಕ್ಷಣವೇ ಲೋಕಸಭೆಯ ಮಾಜಿ ಸಭಾಪತಿ ರಬಿ ರೇ ಬಂದು ಈ ಭ್ರಷ್ಟಾಚಾರಕ್ಕೆ ಮತ್ತು ಸರ್ವತೋಮುಖ ಭ್ರಷ್ಟಾಚಾರದ ಇಳಿಮುಖಕ್ಕೆ ಕಾರಣಗಳು ಮತ್ತು ಈ ಕಾರ್ಯಕ್ಕೆ ಯುವಕರು, ಕಾಲೇಜು ವಿದ್ಯಾರ್ಥಿಗಳನ್ನು ಎಳೆದುಕೊಳ್ಳುವ ನನ್ನ ಅಭಿಪ್ರಾಯವನ್ನು ಸಂಪೂರ್ಣವಾಗಿ ಒಪ್ಪಿಕೊಂಡು ಕೆಲವು ತಿಂಗಳುಗಳ ಹಿಂದೆ ಈ ವಿಷಯದ ಬಗ್ಗೆ ಮುದ್ರಿಸಿದ ಒಂದು ಟಿಪ್ಪಣಿಯನ್ನು ನನಗೆ ಕೊಟ್ಟರು. ತುಂಬಾ ಒಳ್ಳೆಯ ಮಾಹಿತಿಯುಳ್ಳದ್ದು. ಒಂದು ಜವಾಬನ್ನು ಕಳುಹಿಸಬೇಕೆಂದೂ ಅದನ್ನು ಇಲ್ಲಿಯೇ ಬರೆದು ಸ್ವಾಗತಕಾರನ ಕೈಯಲ್ಲಿ ಕೊಟ್ಟರೆ ತಾವು ತೆಗೆದುಕೊಳ್ಳುವುದಾಗಿ ಹೇಳಿದರು. ವಿಸ್ತಾರವಾದ ಚಟುವಟಿಕೆಯನ್ನು ನಾನು ಹೊಂದಿರಬೇಕೆಂದರು. ನನಗೂ ಹಾಗೇ ಅನಿಸುತ್ತದೆ. ಆದರೆ ನನಗೆ ಸಾಧ್ಯವೆ ? ಅವರು ನನ್ನ ಬಗ್ಗೆ ಭಿನ್ನವಾಗಿದ್ದರು. ಭಾರತದ ಜರ್ನಲಿಸ್ಟ್ಸ್ ಸಂಘದ ಕೆಲವು ಸದಸ್ಯರು ನಮ್ಮ ೭, ಜಂತರ್ ಮಂತರ್ ರಸ್ತೆಯಲ್ಲಿ ನಮ್ಮ ಬಾಡಿಗೆದಾರರಾಗಿರುವವರು ಬಂದು ಹೆಚ್ಚಿನ ಜಾಗವನ್ನು ಕೋರಿದರು. ನೆಹ್ರೂ, ಇಂದಿರಾ, ಪಟೇಲ್‌ರ ವ್ಯಕ್ತಿತ್ವದ ಬಗ್ಗೆ ಅವರ ಜೊತೆಯಲ್ಲಿ ಮಾತಾಡಿದೆ. ಟ್ರಸ್ಟಿನ ಮುಂದೆ ವಿಷಯವಿಡುವುದಾಗಿ ಮಾತು ಕೊಟ್ಟೆ. ಇಂದು ಹೋಲಿಸಿದಾಗ ಬಹಳ ಸರಾಗ ಅಷ್ಟೊಂದು ಪ್ರೀತಿ, ಸ್ವಲ್ಪ ಉತ್ತಮವೆಂದು ಕಾಣಿಸುತ್ತದೆ. ರಬಿ ರೇಯವರಿಗೆ ಜವಾಬನ್ನು ಉಕ್ತಲೇಖನ ನೀಡಿದೆ.

**ಫೆಬ್ರವರಿ ೨೦, ೧೯೯೭ ಚಿತ್ರದುರ್ಗ**

ಸರ್ವಶಕ್ತ ಚೀನಾದ ಅಧ್ಯಕ್ಷ ಮೃತಪಟ್ಟಿದ್ದಾರೆ. ಬೆಳವಣಿಗೆಯ ಬಗ್ಗೆ ನಾವು ಕಾದು ನೋಡಬೇಕು. ಚಿಂತಿಸುವ ಜನರು ವಿಶೇಷವಾಗಿ ಚೀನಾದ ಯುವಕರು ದಂಗೆಯೇಳುತ್ತಾರೆ. ತುಳಿತದಿಂದ ಸಾಕಾಗಿರುವ ಅವರು ಹಿಂಸೆಗೆ ತೊಡಗುತ್ತಾರೆಂದು ಕಾಣುತ್ತದೆ. ವಿಶ್ವವು ಗಮನಿಸುತ್ತಿದೆ. ಆ ಅಧ್ಯಕ್ಷರ ಸರ್ವಾಧಿಕಾರಕ್ಕೆ ಸಹಾನುಭೂತಿಯಲ್ಲ.

**ಫೆಬ್ರವರಿ ೨೩, ೧೯೯೭ ಚಿತ್ರದುರ್ಗ**

ಸುಮಾರು ೯-೩೦ಕ್ಕೆ ಮಂತ್ರಿ ಬಸವಣ್ಣಪ್ಪ ಚನ್ನಗಿರಿಯಲ್ಲಿ ಒಂದು ಸಮಾರಂಭದಲ್ಲಿ ಭಾಗವಹಿಸಲು ಹೋಗುತ್ತಿದ್ದವರು ಮಧ್ಯದಲ್ಲಿ ನನ್ನನ್ನು ನೋಡಲು ಬಂದಿದ್ದರು.

ಮುಖ್ಯಮಂತ್ರಿಗಳು ಆ ಸಮಾರಂಭದಲ್ಲಿ ಭಾಗವಹಿಸುವ ನಿರೀಕ್ಷೆ ಇದೆ. ನನ್ನ ಜೊತೆಯಲ್ಲಿದ್ದಾಗ ಜಾತೀಯತೆ ಮತ್ತು ಸಮೂಹವಾದವು ಬಹಳ ಪ್ರಧಾನವಾಗುತ್ತಿದ್ದು ಜಾತ್ಯತೀತೆಯು ಎಲ್ಲಿಯೂ ಕಾಣಿಸುವುದೇ ಇಲ್ಲ ಎಂದು ಹೇಳಿದರು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಂತಹ ಜಾತಿಗಳ ನಡುವಿನ ವ್ಯತ್ಯಾಸ, ಹಿಂದುಳಿದಿರುವಿಕೆಯ ಅನೇಕ ವಿಧಗಳು ಹೋಗಬೇಕು. ನಾಗರಿಕನ ಆರ್ಥಿಕ ಪರಿಸ್ಥಿತಿಯ ಮೇಲೆ ಅದು ಅವಲಂಬಿಸಿರಬೇಕು. ಏಕೆಂದರೆ ಅದು ವೈಚಾರಿಕವಾದುದು, ಸಕಾರಣವಾದುದು ಮತ್ತು ವೈಜ್ಞಾನಿಕವಾದುದು ಎಂಬ ನನ್ನ ಅಭಿಪ್ರಾಯವನ್ನು ಒಪ್ಪಿಕೊಂಡರು. ಕನ್ನಡ ಜಾಗೃತಿ ಸಮ್ಮೇಳನವನ್ನು ಮುಂದಿನ ತಿಂಗಳು ಎರಡು ಉದ್ಘಾಟಿಸುವಾಗ ಶಿವಮೊಗ್ಗದಲ್ಲಿ ಪತ್ರಿಕಾಗೋಷ್ಠಿಯಲ್ಲಿ ಈ ವಿಷಯವನ್ನು ಹೇಳಬಹುದೆಂದು ಅವರು ಹೇಳಿದರು. ನಾನು ಒಪ್ಪಿಕೊಂಡೆ. ಈ ಅಭಿಪ್ರಾಯವು ಅವರಿಂದ ಬಂದುದಕ್ಕೆ ನನಗೆ ಆಶ್ಚರ್ಯ ಮತ್ತು ಸಂತೋಷವಾಗಿದೆ. ಅವರು ಭೋವಿ ಜನಾಂಗಕ್ಕೆ ಸೇರಿರುವ ಪರಿಶಿಷ್ಟ ಜಾತಿಯ ಗುಂಪಿಗೆ ಸೇರಿದವರು. ಅದಕ್ಕಾಗಿ ಅವರನ್ನು ಗೌರವಿಸುತ್ತೇನೆ. ಇಲ್ಲದಿದ್ದರೆ ಎಂದಿನಂತೆ ಎಲ್ಲವೂ ಮಾಮೂಲೀ.

**ಫೆಬ್ರವರಿ ೨೭, ೧೯೮೭** **ಬೆಂಗಳೂರು**

ಮುಂಚೆಯೇ ನಿಗದಿಪಡಿಸಿಕೊಂಡಂತೆ ಬೆಳಿಗ್ಗೆ ೧೧ ಗಂಟೆಗೆ ಪತ್ರಕರ್ತ ರಘುರಾಮಶೆಟ್ಟಿ ಬಂದು ದಿವಂಗತ ಮುಖ್ಯಮಂತ್ರಿ ದೇವರಾಜ ಅರಸು ಬಗ್ಗೆ ನನ್ನ ಅಭಿಪ್ರಾಯಗಳನ್ನು ದಾಖಲಿಸಿಕೊಂಡರು. ಏಕೆಂದರೆ ಇವರು ಆ ಮನುಷ್ಯನ ಸಂಪೂರ್ಣ ಇತಿಹಾಸವನ್ನು ತಯಾರಿಸುತ್ತಿದ್ದು ಅವರ ಬಗ್ಗೆ ನನ್ನ ಅಭಿಪ್ರಾಯಗಳನ್ನು ಬೇಕೆಂದಿದ್ದರು. ನಾನು ಪ್ರತಿಯೊಂದನ್ನೂ ಹೇಳಿದೆ. ಆತನ ಅತೀವ ಬಡತನ, ಅವರಿಗೆ ನನ್ನ ಸಹಾಯ ಮತ್ತು ವಿಫಲತೆ ಮತ್ತು ಆತನ ಕ್ಷಮೆಗಳು, ಆತನ ಪ್ರಯೋಗಗಳು, ಅಲ್ಪಸಂಖ್ಯಾತರಿಗೆ ಅವರ ಸಹಾಯ, ತಮ್ಮ ಅನುಕೂಲಕ್ಕಾಗಿ ಅವರ ಶೋಷಣೆ, ಭಾರತದಲ್ಲಿ ಇಂದಿರಾಗಾಂಧಿಯೊಂದಿಗೆ ಕರ್ನಾಟಕದ ಆಡಳಿತದಲ್ಲಿ ಬಹಿರಂಗವಾಗಿ ಮೊದಲನೆ ಬಾರಿಗೆ ಆಡಳಿತದಲ್ಲಿ ಭ್ರಷ್ಟಾಚಾರವನ್ನು ತಂದುದು, ಅವರು ಹೇಳಿಕೊಳ್ಳುತ್ತಿದ್ದ ದತ್ತುಪುತ್ರಿ, ಅವರ ಸಾವು, ಆಕೆಯ ಸಾವು ಮುಂತಾದವುಗಳ ಬಗ್ಗೆ ಹೇಳಿವೆ. ವಿಶ್ರಾಂತಿಯ ನಂತರ ಗಾಂಧೀನಗರದಲ್ಲಿ ಆರಾಧ್ಯರ ಹೋಟೇಲು ಸಮೀಪದ ನೆಲಮಾಳಿಗೆಯ ಸಣ್ಣ ಥಿಯೇಟರಿಗೆ ಚಿಂದೋಡಿ ಲೀಲಾರ ಆಹ್ವಾನದ ಮೇರೆಗೆ ಅವರ ಕಾರಿನಲ್ಲೇ ಅಲ್ಲಿಗೆ ಹೋದೆ. ಆಕೆ ಮತ್ತು ಇನ್ನೂ ಕೆಲವರು ಸ್ವಾಗತಿಸಿದರು. ಸಂಗೀತಗಾರ ಗಂಧರ್ವ ಮತ್ತು ಕುರುಡಾಗಿಯೇ ಹುಟ್ಟಿದ ಭಾರತದ ಅತಿ ಶ್ರೇಷ್ಠ ಸಂಗೀತಗಾರರಲ್ಲಿ ಒಬ್ಬರಾದ ಷಡಾಕ್ಷರಿಯವರು ಸಾವಿರಾರು ಕುರುಡ ಹುಡುಗರಿಗೆ ಮತ್ತು ಇನ್ನೂ ಹೆಚ್ಚು ಸಂಖ್ಯೆಯ ಇತರರಿಗೆ ಸಂಗೀತಗಾರರಾಗಲು ತರಬೇತಿ ನೀಡಿದರು. ಅವರುಗಳ ಜೀವನ ಮತ್ತು

ಕರ್ನಾಟಕದಲ್ಲಿ ಸಂಗೀತಕ್ಕೆ ಮಾಡಿದ ಅಗಾಧವಾದ ಕೆಲಸದ ಬಗ್ಗೆ ಆಕೆಯ ನಿರ್ದೇಶನದಲ್ಲಿ ತಯಾರಿಸಿದ ಚಿತ್ರವೊಂದನ್ನು ನೋಡಿದೆ. ಕರ್ನಾಟಕದಲ್ಲಿ ಪ್ರಸಿದ್ಧರಾಗಿರುವ ಅನೇಕ ಸಂಗೀತಗಾರರು ಇವರಿಂದ ತರಬೇತಿ ಪಡೆದವರು. ಚಿತ್ರವು ತುಂಬಾ ಚೆನ್ನಾಗಿದೆ. ಉತ್ತಮ ರೀತಿಯಲ್ಲಿ ಬಂದಿದ್ದು, ಉತ್ತಮವಾಗಿ ನಟಿಸಿದ್ದಾರೆ, ಚೆನ್ನಾಗಿ ಹಾಡಲಾಗಿದೆ.

**ಮಾರ್ಚ್ ೧, ೧೯೯೭** **ಬೆಂಗಳೂರು-ಚಿತ್ರದುರ್ಗ**

ಮೊದಲೇ ನಿಗದಿಪಡಿಸಿದಂತೆ ಒಂದು ಖಾಸಗಿ ದೂರದರ್ಶನದ ಜನರು ತಮ್ಮ ಕ್ಯಾಮರಾಗಳು ಮತ್ತು ರೆಕಾರ್ಡಿಂಗ್ ಸಾಧನಗಳ ಜೊತೆಯಲ್ಲಿ ಬಂದು ಸ್ವಾತಂತ್ರ್ಯ ಯೋಧನಾಗಿ ನನ್ನ ಮುಖ್ಯವಾದ ಅನುಭವಗಳನ್ನು ದಾಖಲು ಮಾಡಿಕೊಂಡರು. ರೆಕಾರ್ಡು ಮಾಡುವುದಕ್ಕೆ ಮುಂಚೆ ನನ್ನ ಅನುಭವಗಳನ್ನು ಕೇಳಿದ ಮೇಲೆ, ತುರುವನೂರು ಅರಣ್ಯ ಸತ್ಯಾಗ್ರಹ ಘಟನೆಯನ್ನು ಮಾತ್ರ ನನ್ನಿಂದ ದಾಖಲು ಮಾಡಿಕೊಳ್ಳಬೇಕೆಂದರು. ನನ್ನ ಹೆಂಡತಿಯ ಸಲಹೆಯಾದ 'ನಾನು ಗಾಂಧಿ ಪರೀಕ್ಷೆಗೆ ಕುಳಿತಿದ್ದೇನೆ, ಅದರಲ್ಲಿ ಪಾಸಾಗಬೇಕು' ಎಂದು ಮಾರನೆ ಬೆಳಿಗ್ಗೆ ನನ್ನ ಬಂಧನದ ಸಮಯದಲ್ಲಿ ಹೇಳಿದ್ದು ಮತ್ತು ಒರಟುಕುಮಾರನ ಜೊತೆಯಲ್ಲಿ ನನ್ನ ಅನುಭವಗಳು, ನನ್ನ ಶರೀರದಾದ್ಯಂತ ಕೆರೆತದ ಮೊದಲ ರಾತ್ರಿ, ಮೊದಲ ಜೈಲು ಊಟದಲ್ಲಿ ಮಣ್ಣಿನ ಮುಚ್ಚಳವನ್ನು ತೊಳೆಯಲು ಪ್ರಯತ್ನಿಸಿ ಬೆರಳಿನ ತುದಿಗಳಲ್ಲಿ ರಕ್ತ ಬರುವುದು-ಮುಂತಾದ ಅನುಭವಗಳನ್ನು ಹೇಳಿದೆ. ಅದರಿಂದ ಅವರಿಗೆ ತೃಪ್ತಿಯಾಯಿತು.

**ಮಾರ್ಚ್ ೩೦, ೧೯೯೭**

ಕೇಂದ್ರದಲ್ಲಿ ದೇವೇಗೌಡರ ಸರಕಾರಕ್ಕೆ ಕಾಂಗ್ರೆಸ್ ಬೆಂಬಲವನ್ನು ಹಿಂತೆಗೆದುಕೊಂಡಿತು. ಸಂಜೆ ೫ ಗಂಟೆಯ ಹೊತ್ತಿಗೆ ನಾನು ಕಾಫಿ ಕುಡಿಯುತ್ತಿದ್ದಾಗ ಕಾಂಗ್ರೆಸ್ ದೇವೇಗೌಡ ಸರಕಾರಕ್ಕೆ ತನ್ನ ಬೆಂಬಲವನ್ನು ಹಿಂತೆಗೆದುಕೊಂಡಿದೆಯೆಂದು ರಾಜಣ್ಣ ಹೇಳಿದ. ಇವತ್ತು ಬೆಳಿಗ್ಗೆ ಪೇಪರು ಓದುತ್ತಿದ್ದಾಗ ಕಾಂಗ್ರೆಸ್ ಅಧ್ಯಕ್ಷ ಏನೋ ತಂಟೆ ಮಾಡುತ್ತಾರೆಂದು ನನಗನ್ನಿಸಿತ್ತು. ನನ್ನ ಶಂಕೆಯು ನಿಜವಾಯಿತು. ನನಗೆ ತಿಳಿದ ಹಾಗೆ ಆತ ನಂಬಲನರ್ಹನಾದ ತಂಟೆಕೋರ. ಸುಮಾರು ಪತ್ರಿಕಾಪ್ರತಿನಿಧಿಗಳು ಬೆಂಗಳೂರು, ದಾವಣಗೆರೆ ಮತ್ತು ಇಲ್ಲಿಂದ ಫೋನು ಮಾಡಿ ನನ್ನ ಅಭಿಪ್ರಾಯವನ್ನು ಕೇಳಿದರು. ಸರಕಾರಕ್ಕೆ ಪಕ್ಷಗಳಿಂದ ಅಗತ್ಯವಾದ ಬೆಂಬಲ ಸಿಗದಿದ್ದರೆ ಆ ಸರಕಾರವು ಹೋಗುವ ಸಾಧ್ಯತೆಯಿದೆಯೆಂದು ಹೇಳಿದೆ. ಕೇಸರಿಯು ರಾಷ್ಟ್ರಪತಿಗಳಿಗೆ ಪತ್ರ ಬರೆದು ಸರಕಾರವನ್ನು ರಚಿಸುವುದಕ್ಕೆ ಕೇಳಿದರು. ಅದು ಸಾಧ್ಯವಿಲ್ಲ. ಅವರಿಗೆ ಇದು ತಿಳಿದಿರಬೇಕು. ಲೋಕಸಭೆಗೆ ಮಧ್ಯಮಾವಧಿ ಚುನಾವಣೆಗಳನ್ನು ಮಾಡಬೇಕೆಂದೆನಿಸುತ್ತದೆ. ಅಗತ್ಯವಾದ ಬಹುಮತವು ಯಾವ ಪಕ್ಷಕ್ಕೂ ಬರುವುದಿಲ್ಲವೆಂದು ತಿಳಿದು, ಯಾವ ಪಕ್ಷಕ್ಕೂ ನಿಂತುಕೊಳ್ಳಲು ನೈತಿಕ ಹಕ್ಕಿಲ್ಲವೆಂದು ತಿಳಿದು ಯಾವ ಪಕ್ಷಕ್ಕಾದರೂ ಸೇರಿರಲಿ ಅತ್ಯುತ್ತಮ ವ್ಯಕ್ತಿಗೆ ಜನರು ಮತ ಹಾಕಬೇಕು.

ಇದು ಸುಲಭವಾದ ಪರ್ಯಾಯವಲ್ಲ. ಈ ಸಲಹೆ ತುಂಬಾ ಹೊಸದು. ಮುಂದಿನ ವಾರದಲ್ಲಿ ದೆಹಲಿಯಲ್ಲಿನ ಬೆಳವಣಿಗೆಗಳನ್ನು ಸೂಕ್ಷ್ಮವಾಗಿ ಗಮನಿಸಬೇಕು.

**ಏಪ್ರಿಲ್ ೧೩, ೧೯೯೭ ಚಿತ್ರದುರ್ಗ**

ದೆಹಲಿಯಲ್ಲಿ ಅಧಿಕಾರಕ್ಕೆ ಜಗಳಗಳು ಮತ್ತು ಸಭೆಗಳು ನಡೆಯುತ್ತಿವೆ. ಬಿಜೆಪಿ ಕೆಲವು ಪಕ್ಷಗಳ ಜೊತೆಯಲ್ಲಿ ಸೇರಲು ತನ್ನ ಕೈಲಾದಷ್ಟೆಲ್ಲಾ ಪ್ರಯತ್ನಿಸುತ್ತಿದೆ. ಅಧಿಕಾರದಲ್ಲಿರುವ ನ್ಯಾಷನಲ್ ಫ್ರಂಟ್ ದೇವೇಗೌಡರನ್ನು ವಾಸ್ತವವಾಗಿ ಬಲಿ ತೆಗೆದುಕೊಂಡು ಕಾಂಗ್ರೆಸ್‌ನ ಬೆಂಬಲವನ್ನು ಪಡೆಯಲು ಪ್ರಯತ್ನಿಸುತ್ತಿದೆ. ಕಾಂಗ್ರೆಸ್ ನಾಳೆ ಸೇರುತ್ತಿದೆ. ಆದರೆ ಯಾವ ಪಕ್ಷಕ್ಕೂ ಇನ್ನೊಂದು ಚುನಾವಣೆಯನ್ನು ಎದುರಿಸಲು ಇಷ್ಟವಿಲ್ಲ, ಏಕೆಂದರೆ ಅವುಗಳಿಗೆಲ್ಲ ಬಹುಮತವನ್ನು ಪಡೆಯುವುದರಲ್ಲಿ ಖಚಿತವಿಲ್ಲದಿರುವುದು ಅಥವಾ ಈಗ ಇರುವಷ್ಟು ಬರದಿದ್ದರೆ ಹೇಗೆ ಎಂಬ ಹೆದರಿಕೆಯಿದೆ. ಹಾಗಾಗಿ ಅವರೆಲ್ಲಾ ಹೇಗಾದರೂ ಪಾರ್ಲಿಮೆಂಟಿನಲ್ಲಿ ಉಳಿಯಲು ಪ್ರಯತ್ನಿಸುತ್ತಿದ್ದಾರೆ. ನ್ಯಾಷನಲ್ ಫ್ರಂಟ್ ಅಧಿಕಾರದಲ್ಲಿ ಭಾಗ ಪಡೆಯಲು ಕಾಂಗ್ರೆಸ್ಸನ್ನು ಸೇರಿಸಿಕೊಳ್ಳಬಹುದು. ಈ ರಾಜಕೀಯ ಸಾಹಸಿಗಳಲ್ಲಿ ಏನೂ ಬೇಕಾದರೂ ಸಾಧ್ಯವಿದೆ.

**ಏಪ್ರಿಲ್ ೧೪, ೧೯೯೭ ಚಿತ್ರದುರ್ಗ**

ಕಾಂಗ್ರೆಸ್‌ನ ಜೊತೆಯಲ್ಲಿ ಹೊಂದಾಣಿಕೆ ಮಾಡಿಕೊಳ್ಳುವ ಉದ್ದೇಶದಿಂದ ನ್ಯಾಷನಲ್ ಫ್ರಂಟ್ ದೇವೇಗೌಡರನ್ನು ಇನ್ನೊಬ್ಬರ ಪರವಾಗಿ ತೆಗೆದುಹಾಕುತ್ತದೆ. ಕಾಂಗ್ರೆಸ್ ಇಡೀ ದಿವಸ ಸಭೆಯನ್ನು ಮಾಡುತ್ತಿದೆ. ಇಡೀ ವಾತಾವರಣವು ನೈತಿಕ ಗೊಂದಲ ಎಂದು ನನ್ನ ಅಭಿಪ್ರಾಯ. ಎಲ್ಲರೂ ತಮಗಾಗಿಯೇ ಹೊರತು ರಾಷ್ಟ್ರಕ್ಕಾಗಿ ಯಾರೂ ಇಲ್ಲ. ಇದು ದುರದೃಷ್ಟ. ನಾವು ರಾಜಕೀಯ ಸಾಹಸಿಗಳ ಕೈಯಲ್ಲಿದ್ದೇವೆ.

**ಏಪ್ರಿಲ್ ೧೫, ೧೯೯೭ ಚಿತ್ರದುರ್ಗ**

ಜಗಳಗಳು ಮುಂದುವರಿಯುತ್ತಿದೆ. ಖಂಡಿತಾದ ತೀರ್ಮಾನವೇನೆಂದರೆ ದೇವೇಗೌಡ ಹೋಗಬೇಕು. ೩-೪ ನಾಯಕರಲ್ಲಿ ಒಬ್ಬರನ್ನು ನಾಯಕರನ್ನಾಗಿ ಆಯ್ಕೆ ಮಾಡಬಹುದು. ಕಾಂಗ್ರೆಸ್ ಮೊದಲಿನಂತೆಯೇ ಬೆಂಬಲಿಸಲು ನಿರ್ಧರಿಸಿದೆ. ನ್ಯಾಷನಲ್ ಫ್ರಂಟ್ ವಿಶ್ವಾಸಮತವನ್ನು ಕಳೆದುಕೊಂಡಿದೆ ಎಂಬ ಬಿಜೆಪಿಯ ಅಭಿಪ್ರಾಯಕ್ಕೆ ಬಹಳ ಮಟ್ಟಿನ ವಿವೇಕವಿದೆ. ಅದೇ ಪಕ್ಷವು ಸರ್ಕಾರವನ್ನು ಅದೇ ಪಕ್ಷದ ಬೆಂಬಲದಿಂದ ನಡೆಸಲು ಅವಕಾಶವೀಯಬಾರದು. ಪರಿಸ್ಥಿತಿ ಎಷ್ಟು ಹಾಳಾಗಿದೆಯೆಂದರೆ ಏನು ಬೇಕಾದರೂ ಆಗಬಹುದು. ದೇವೇಗೌಡರ ರಾಜೀನಾಮೆಯನ್ನು ಶ್ಲಾಘಿಸುವುದು ಇಲ್ಲ. ಇಲ್ಲಿಯವರೆಗೆ ಅವರ ಹಿಂದೆ ಬಲವಾಗಿ ನಿಂತಿದ್ದ ಪಕ್ಷವು ಅಭಿನಂದನೆಯನ್ನು ಕೂಡ ಮಾಡಲಿಲ್ಲ. ಸಿದ್ಧಾಂತಗಳಿಲ್ಲ. ನೀತಿಯಿಲ್ಲ ಅಥವಾ ಒಳ್ಳೆಯ ನಡತೆಯಿಲ್ಲ. ಸೋಮವಾರದ ಹೊತ್ತಿಗೆ ಏನಾಗುತ್ತದೆಂದು ನೋಡೋಣ.

**ಮೇ ೨, ೧೯೯೭** **ಚಿತ್ರದುರ್ಗ**

ನೆನ್ನೆ ದಿನ ಇಂಗ್ಲೆಂಡ್‌ನಲ್ಲಿ ನಡೆದ ಚುನಾವಣೆಯಲ್ಲಿ ಸುಮಾರು ೧೫ ವರ್ಷಗಳ ನಂತರ ಲೇಬರ್ ಸರ್ಕಾರವು ಬಂದು ಟೋನಿ ಬ್ಲೇರ್ ಪ್ರಧಾನಿಯಾಗಿ ಅಧಿಕಾರಕ್ಕೆ ಬಂದರು. ಇದು ಒಳ್ಳೆಯದು, ಏಕೆಂದರೆ ಲೇಬರ್ ಪಕ್ಷದ ಅಡಿಯಲ್ಲಿ ಬ್ರಿಟಿಷ್ ಸರಕಾರವು ಭಾರತಕ್ಕೆ ಸ್ವಾತಂತ್ರ್ಯವನ್ನು ನೀಡಿತು.

ಲೋಕಸಭೆ ಹೊಸ ಪ್ರಧಾನಿ ಗುಜ್ರಾಲ್ ನೇತೃತ್ವದಲ್ಲಿ ಸೇರಿತು. ರೈಲ್ವೆ ಆಯವ್ಯಯವನ್ನು ಅಂಗೀಕರಿಸಿತು. ಕೆಲವು ಕಾಲ ಮಾಮೂಲಿನಂತೆ ಹೋಗುತ್ತದೆಂದು ಆಶಿಸೋಣ.

**ಮೇ ೯, ೧೯೯೭** **ಬೆಂಗಳೂರು**

ಬಸವೇಶ್ವರರ ದಿನ-ಬಸವ ಜಯಂತಿಯನ್ನು ಆಚರಿಸಲು ಬೆಂಗಳೂರಿನಲ್ಲಿ ಬಹುದೊಡ್ಡ ಜನಸಂಖ್ಯೆಯ ಸಭೆಯಲ್ಲಿ 'ಬಸವಶ್ರೀ' ಪ್ರಶಸ್ತಿ ನೀಡಲಾಯಿತು. ಈ ಪ್ರಶಸ್ತಿಯು ಮೊದಲೇ ಬರಬೇಕಾಗಿತ್ತು ಎಂದು ನನಗೆ ತಿಳಿಸಲಾಯಿತು.

**ಜೂನ್ ೨೬, ೧೯೯೭** **ಬೆಂಗಳೂರು**

ಬಹಳ ಕೆಲಸವಿರುವ ಮತ್ತು ದಣಿವಾಗುವ ಬೆಳಿಗ್ಗೆ. ರಾಜ್ಯಮಂತ್ರಿ ಶ್ರೀಮತಿ ಲೀಲಾವತಿ ಮತ್ತು ಅವರ ಜೊತೆಯಲ್ಲಿ ತುಂಬಾ ವೃತ್ತಪತ್ರಿಕೆಯವರು ಬಂದು ನನ್ನ ಜೀವನದ ಮೇಲೆ ಪ್ರಸಕ್ತ ಪರಿಸ್ಥಿತಿ ಮುಂತಾದವುಗಳ ಮೇಲೆ ಅನೇಕ ಪ್ರಶ್ನೆಗಳನ್ನು ಹಾಕಿದರು. ಇದು ೧೦-೩೦ರಿಂದ ೧೧-೩೦ರವರೆಗೆ ನಡೆಯಿತು. ನಂತರ ಕಾಫಿ ಆಯಿತು. ಇಡೀ ಮಾತನ್ನು ದಾಖಲಿಸಲಾಯಿತು. ಮಂತ್ರಿಯವರು ಒಂದು ಶಾಲನ್ನು ಬಹುಮಾನವಾಗಿ ನೀಡಿದರು. ನನ್ನನ್ನು ನಕ್ಷತ್ರದ ಮಟ್ಟಕ್ಕೆ ಹೊಗಳಿದರು. ನನಗಿಷ್ಟವಿಲ್ಲದಿದ್ದರೂ ಇದನ್ನು ಅನುಭವಿಸಬೇಕಾಯಿತು. ಅತ್ಯಂತ ವಿಶೇಷ ಆಧುನಿಕ ದಾಖಲಿಸುವ ಸಾಧನಗಳಿಂದ ಮತ್ತು ಶತಮಾನಗಳವರೆಗೆ ಈ ದಾಖಲೆಗಳನ್ನು ಪತ್ರಾಗಾರದಲ್ಲಿ ಕಾಪಾಡಿಡಲು, ಪ್ರೊ. ಡಿ. ಜವರೇಗೌಡರು ನನ್ನ ಜೀವನದ ವಿವರ, ಸ್ವಾತಂತ್ರ್ಯ ಹೋರಾಟ, ಅದರ ಇತಿಹಾಸ, ನಂತರ ಕಳೆದ ೫೦ ವರ್ಷಗಳಲ್ಲಿ ಆಗಿರುವ ನಿರಾಶೆಗಳು, ಅದರ ಜಯಗಳು ಮತ್ತು ಸೋಲುಗಳು, ಗಾಂಧೀಜಿ, ನೇತಾಜಿ, ಕಾಂಗ್ರೆಸ್‌ನಲ್ಲಿ ನನ್ನ ಚಟುವಟಿಕೆಗಳು, ಕಾಂಗ್ರೆಸ್ ಅಧ್ಯಕ್ಷರುಗಳು, ಕರ್ನಾಟಕ ಏಕೀಕರಣ, ನನ್ನ ಸ್ವಂತ ವಿಷಯಗಳು ಮತ್ತು ಇನ್ನೂ ಅನೇಕ ವಿಷಯಗಳು, ವಿಶೇಷವಾಗಿ ದೇಶದ ಭವಿಷ್ಯತ್ತಿಗಾಗಿ ನನ್ನ ಸಂದೇಶ, ಅದರ ಈಗಿನ ದೋಷಗಳು ಮುಂತಾದವುಗಳ ಬಗ್ಗೆ ಪ್ರಶ್ನೆ ಮತ್ತು ಉತ್ತರಗಳು ಸುಮಾರು ಎರಡು ಗಂಟೆಗಳವರೆಗೆ ನಡೆಯಿತು. ಅದು ಮಧ್ಯಾಹ್ನ ೨ ಗಂಟೆಗೆ ಮುಗಿಯುವ ಹೊತ್ತಿಗೆ ನಾನು ಸಂಪೂರ್ಣವಾಗಿ ಸುಸ್ತಾಗಿದ್ದೆ. ನನಗೆ ಪ್ರೊ. ಗೌಡರಲ್ಲಿ ತುಂಬಾ ಗೌರವವಿದ್ದು ಅವರ ಪ್ರಶ್ನೆಗಳನ್ನು ನಿರಾಕರಿಸಲಾಗಲಿಲ್ಲ. ಅಲ್ಲದೆ ಅವರು ನನ್ನ ಜೀವನ ಚರಿತ್ರಕಾರರು. ಐದು ವರ್ಷಗಳ ಹಿಂದೆ ಅದನ್ನು

ಕನ್ನಡದಲ್ಲಿ ಪ್ರಕಟಿಸಿದ್ದಾರೆ. ಅವರು ಬಸವೇಶ್ವರ ಮತ್ತು ಅವನ ಸಿದ್ಧಾಂತಗಳನ್ನು ಮೆಚ್ಚಿರುವವರು. ಅದನ್ನು ಅಧಿಕಾರಯುಕ್ತವಾಗಿ ಹೇಳುವವರು. ಇನ್ನೂ ಕೆಲವು ಗ್ರಂಥಗಳ ಕರ್ತೃಗಳು. ಮಧ್ಯಾಹ್ನ ಶಾಂತವಾಗಿತ್ತು.

**ಜುಲೈ ೪, ೧೯೯೭** **ದೆಹಲಿ**

ಅಮೆರಿಕಾದ ಪ್ರಸಿದ್ಧ ದಿನಪತ್ರಿಕೆಯಾದ ವಾಷಿಂಗ್ಟನ್ ಹೆರಾಲ್ಡಿನ ಪ್ರತಿನಿಧಿ, ಒಬ್ಬ ಮಹಿಳಾ ಪತ್ರಕರ್ತೆ ಬಂದರು. ಅಮೆರಿಕಾದ ಪ್ರತಿನಿಧಿಯು ಒಬ್ಬ ಕರಿಯರಾಗಿದ್ದು ಅಮೆರಿಕಾದಲ್ಲಿ ಹುಟ್ಟಿದ್ದ ಭಾರತೀಯರಾಗಿದ್ದು ಉಚ್ಚಾರಗಳನ್ನು ಅನುಸರಿಸಲಾಗಲಿಲ್ಲ. ಆದರೆ ಭಾರತೀಯ ಮಹಿಳೆ ಬಹಳ ಸಹಾಯಕವಾಗಿದ್ದಳು.

**ಜುಲೈ ೧೭, ೧೯೯೭** **ಚಿತ್ರದುರ್ಗ**

ರಾಷ್ಟ್ರಪತಿಯ ಚುನಾವಣೆಯ ಫಲಿತಾಂಶ ನಿರೀಕ್ಷಿಸಿದಂತೆ. ಕೆ. ಆರ್. ನಾರಾಯಣ್ ಭಾರತದ ರಾಷ್ಟ್ರಪತಿಯ ಚುನಾವಣೆಯಲ್ಲಿ ಜಯ ಗಳಿಸಿದ್ದಾರೆ. ಇದು ಪ್ರಪಂಚದ ಅತ್ಯಂತ ಮುಖ್ಯವಾದ ಹುದ್ದೆಗಳಲ್ಲಿ ಒಂದು. ಪ್ರತಿಯೊಂದು ದೃಷ್ಟಿಯಲ್ಲೂ ಅವರು ಭಾರತದ ರಾಷ್ಟ್ರಪತಿಯಾಗಲು ಅರ್ಹರು. ಅದರ ಜೊತೆಗೆ ಅವರೊಬ್ಬ ಪರಿಶಿಷ್ಟ ಜಾತಿಯವರು. ಮಾಜಿ ಚುನಾವಣಾ ಕಮೀಷನರ್ ಒಬ್ಬ ಅಭ್ಯರ್ಥಿಯಾಗಿ ನಿಂತುದು ಮೂರ್ಖತನ ಹಾಗೂ ಅಸಭ್ಯತನ ಕೂಡ.

**ಜುಲೈ ೨೪, ೧೯೯೭** **ಚಿತ್ರದುರ್ಗ**

ಗುಲ್ಜಾರಿಲಾಲ್ ನಂದಾ ಮತ್ತು ದಿವಂಗತ ಅರುಣ ಅಸಫ ಆಲಿಯವರಿಗೆ 'ಭಾರತರತ್ನ' ನೀಡಲಾಯಿತು ಎಂದು ತಿಳಿದು ಸಂತೋಷವಾಯಿತು. ಅವರು ಆ ಪ್ರಶಸ್ತಿಗೆ ಅರ್ಹರು. ಈ ಪ್ರಶಸ್ತಿಯನ್ನು ಇತ್ತೀಚೆಗೆ ಯಾರಿಗೂ ಕೊಟ್ಟಿರಲಿಲ್ಲ. ರಾಷ್ಟ್ರಪತಿ ಶಂಕರ ದಯಾಳ್ ಶರ್ಮರ ಅವಧಿ ಇಂದು ಮುಕ್ತಾಯಗೊಳ್ಳುತ್ತದೆ. ಒಟ್ಟಾರೆ ಅವರು ಚೆನ್ನಾಗಿ ಕೆಲಸ ಮಾಡಿದ್ದಾರೆ.

**ಆಗಸ್ಟ್ ೯, ೧೯೯೭** **ಚಿತ್ರದುರ್ಗ**

೫೫ ವರ್ಷಗಳ ಹಿಂದೆ ಈ ದಿನ ಗಾಂಧೀಜಿಯ ಮಾರ್ಗದರ್ಶನದಲ್ಲಿ ಮತ್ತು ಪ್ರೋತ್ಸಾಹದಿಂದ ಭಾರತ ರಾಷ್ಟ್ರೀಯ ಕಾಂಗ್ರೆಸ್ 'ಭಾರತ ಬಿಟ್ಟು ತೊಲಗಿ' ಎಂಬ ಠರಾವನ್ನು ಬೊಂಬಾಯಿಯ ಗವಾಲಿಯಾ ಕೆರೆ ಮೈದಾನದಲ್ಲಿ ಅಂಗೀಕರಿತು. ಅದನ್ನು ನೆನೆಯಲು ಈಗ ಸಮಾರಂಭ ಆಚರಿಸುತ್ತಿರುವುದು ಒಳ್ಳೆಯದು. ವಾಸ್ತವವಾಗಿ ಈ ದಿನ ಬೊಂಬಾಯಿಯಲ್ಲಿ ಆಚರಿಸಲಾಯಿತು. ಅದರಲ್ಲಿ ನಾನು ಭಾಗವಹಿಸಬೇಕಾಗಿತ್ತು ಆದರೆ ನನ್ನ ಅಳಿಯ ಡಾ. ಚಂದ್ರಶೇಖರಪ್ಪನವರು ನಿಧನರಾದುದರಿಂದ ಹೋಗಲಿಲ್ಲ. ಅಲ್ಲಿ ಏನು ನಡೆಯಿತು ಎಂಬುದನ್ನು ರೇಡಿಯೋದಲ್ಲಿ ಹೇಳಿದೆ.

**ಆಗಸ್ಟ್ ೧೪, ೧೯೯೭** **ಚಿತ್ರದುರ್ಗ**

ಪತ್ರಿಕೆಗಳ ಪ್ರತಿನಿಧಿಗಳು ಮತ್ತು ಇತರರು ಕಳೆದ ಹದಿನೈದು ದಿನಗಳಿಂದ ಹೆಚ್ಚು ಕಡಿಮೆ ಪ್ರತಿದಿನ ಬಂದು ಸ್ವಾತಂತ್ರ್ಯ ದಿನದ ಸುವರ್ಣ ಮಹೋತ್ಸವ ಮುಂತಾದವುಗಳ ಬಗ್ಗೆ ನನ್ನ ಅಭಿಪ್ರಾಯಗಳನ್ನು ರೆಕಾರ್ಡ್ ಮಾಡಿದರು. ಅವರ ಕೋರಿಕೆಗೆ ನಾನೂ ಒಪ್ಪಿದೆ. ವಿಶೇಷವಾಗಿ ಕಳೆದ ಅನೇಕ ವರ್ಷಗಳಿಂದ ನನಗೆ ಅಭ್ಯಾಸವಾಗಿ ಹೋಗಿರುವ ರಾಜ್ಯ ನೀತಿಯ ನಿರ್ದೇಶಕ ತತ್ವಗಳನ್ನು ಸರಕಾರವು ಸಂಪೂರ್ಣವಾಗಿ ನಿರ್ಲಕ್ಷಿಸಿರುವುದರ ಬಗ್ಗೆ ಉಲ್ಲೇಖಿಸಿದೆ. ಗಂಧದ ಮರದ ಜ್ಞಾಪನ, ಹಾರಗಳು ಮತ್ತು ಹಣ್ಣುಗಳನ್ನು ನೀಡಿ ಚಿತ್ರದುರ್ಗ ವಕೀಲರ ಸಂಘವು ತಮ್ಮ ಸಭಾಂಗಣದಲ್ಲಿ ನನ್ನನ್ನು ಗೌರವಿಸಿದ ಮೇಲೆ ನಾನು ಸ್ವಾತಂತ್ರ್ಯ ಹೋರಾಟ ಮತ್ತು ಭಾರತದ ಸ್ವಾತಂತ್ರ್ಯದ ಸ್ವರ್ಣ ಮಹೋತ್ಸವದ ಬಗ್ಗೆ ಮಾತಾಡಿದೆ. ಅರವತ್ತು ವರ್ಷಗಳ ಹಿಂದೆ ಮತ್ತು ಅರಣ್ಯ ಸತ್ಯಾಗ್ರಹ ನಡೆಸಿ ಶಿಕ್ಷೆಗೆ ಒಳಗಾಗಿ ಅಂದರೆ ೧೯೪೦ರಲ್ಲಿ ವಕೀಲ ವೃತ್ತಿಯಿಂದ ಹೊರ ಹಾಕುವುದಕ್ಕೆ ಮುಂಚೆ ೧೨ ವರ್ಷ ನಾನು ಈ ವಕೀಲ ಸಂಘದ ಸದಸ್ಯನಾಗಿದ್ದೆ.

**ಆಗಸ್ಟ್ ೧೫, ೧೯೯೭** **ಚಿತ್ರದುರ್ಗ**

ಯಾವುದೇ ವರ್ಷದಲ್ಲಿ ಈ ದಿನವು ಬಹಳ ಮುಖ್ಯವಾದ ಮತ್ತು ಅರ್ಥಪೂರ್ಣವಾದ ದಿನ. ಆದರೆ ಈ ನಿರ್ದಿಷ್ಟ ದಿನ ಸ್ವರ್ಣ ಮಹೋತ್ಸವದ ವರ್ಷವಾಗಿದ್ದು ಇನ್ನೂ ಮಹತ್ವದ್ದು. ಎಲ್ಲಾ ರಾಜ್ಯಗಳಲ್ಲೂ ವಿಶೇಷವಾಗಿ ದೆಹಲಿಯಲ್ಲಿ ಉತ್ಸಾಹಪೂರ್ವಕವಾಗಿ ಸ್ವಾತಂತ್ರ್ಯೋತ್ಸವ ಆಚರಿಸಲಾಗುತ್ತಿದೆ. ರಾತ್ರಿ ೯ ಗಂಟೆಯಲ್ಲಿ ರೇಡಿಯೋ ಒಳ್ಳೆಯ ವಿವರಗಳನ್ನು ನೀಡಿತು. ಅದರಲ್ಲಿ ನಡೆದ ಭಾಷಣಗಳು ಮತ್ತು ಭರವಸೆಗಳಲ್ಲಿ ಕೆಲವು ಒಳ್ಳೆಯ ಉದ್ದೇಶಗಳಿದ್ದು ಸರಕಾರ ನಂಬಿಕೆ ಉಳಿಸಿಕೊಳ್ಳುವಂತೆ ಕಾಣುತ್ತವೆ. ಅದನ್ನು ನಾನು ಇಷ್ಟಪಟ್ಟೆ.

**ಆಗಸ್ಟ್ ೧೬, ೧೯೯೭**

ಆಂಧ್ರಪ್ರದೇಶದ ರಾಜ್ಯಪಾಲ ಶ್ರೀಕೃಷ್ಣಕಾಂತರು ಭಾರತದ ೧೦ನೇ ಉಪರಾಷ್ಟ್ರಪತಿಯಾಗಿ ಪಂಜಾಬಿನ ಮಾಜಿ ಮುಖ್ಯಮಂತ್ರಿ ಶ್ರೀ ಬರ್ನಾಲರ ವಿರುದ್ಧ ಚುನಾಯಿತರಾಗಿದ್ದಾರೆ. ಇವರು ಗೌರವಾನ್ವಿತ ಇತಿಹಾಸವನ್ನು ಹೊಂದಿರುವ ಮನುಷ್ಯ. ಉಪಾಧ್ಯಕ್ಷೆ ಶ್ರೀಮತಿ ನಜ್ಮಾ ಹೆಪ್ತುಲ್ಲಾರವರನ್ನು ಪ್ರೋತ್ಸಾಹಿಸಬಹುದಾಗಿತ್ತೆಂಬುದು ನನ್ನ ಆಶಯ.

**ಆಗಸ್ಟ್ ೨೭, ೧೯೯೭** **ಚಿತ್ರದುರ್ಗ**

ಪಾರ್ಲಿಮೆಂಟಿನ ಎರಡೂ ಸದನಗಳು ಲೋಕಸಭೆಯ ಅಧ್ಯಕ್ಷರ ಕರ್ತೃತ್ವ ಶಕ್ತಿಯಿಂದ ಈಗಿನ ಪರಿಸ್ಥಿತಿಯನ್ನು ಚರ್ಚಿಸಲು ವಿಶೇಷ ಅಧಿವೇಶನ ನೆನ್ನೆ ದಿನ ಸೇರಿದ್ದು ಇನ್ನೂ ೨-೩ ದಿನಗಳು ಮುಂದುವರಿಯುವ ಸಾಧ್ಯತೆ ಇದೆ. ಪ್ರಧಾನಿಗೆ ಎರಡೂ ಸದನಗಳಲ್ಲಿ

ಪ್ರತಿಪಕ್ಷಗಳ ನಾಯಕರುಗಳಿಗೆ ಮತ್ತು ಸಭಾಧ್ಯಕ್ಷರುಗಳು, ಸಭಾಪತಿ ಮತ್ತು ಉಪಸಭಾಪತಿ ಇವರುಗಳಿಗೆ ಸಂವಿಧಾನದ ೩೭ ರಿಂದ ೫೧ ರ ವಿಧಿಗಳಲ್ಲಿನ ರಾಜ್ಯನೀತಿಯ ನಿರ್ದೇಶಕ ತತ್ವಗಳಿಗೆ ಅರ್ಹವಾದ ಪರಿಗಣನೆಯನ್ನು ನೀಡಬೇಕೆಂದು ಟೆಲಿಗ್ರಾಂ ಕಳುಹಿಸಿದೆ. ಈಗಲಾದರೂ ದೇಶವನ್ನು ಉಳಿಸಲು ಇದನ್ನು ಅನುಷ್ಠಾನಗೊಳಿಸಲು ಒಪ್ಪಿಕೊಳ್ಳ ಬೇಕೆಂದೂ ತಿಳಿಸಿದೆ. ಟೆಲಿಗ್ರಾಂನ ಪ್ರತಿಯನ್ನು ಮುಖ್ಯವಾದ ದಿನಪತ್ರಿಕೆಗಳಾದ ಟೈಂಸ್ ಆಫ್ ಇಂಡಿಯಾ, ಹಿಂದೂ, ಇಂಡಿಯನ್ ಎಕ್ಸ್‌ಪ್ರೆಸ್, ಡೆಕ್ಕನ್ ಹೆರಾಲ್ಡ್‌ಗೆ ಪ್ರಕಟನೆಗಾಗಿ ಕಳುಹಿಸಿದೆ.

**ಆಗಸ್ಟ್ ೨೮, ೧೯೯೭ ಚಿತ್ರದುರ್ಗ**

ಕಾರ್ಯತಃ ಇಡೀ ದಿನವನ್ನು ಸಮಾಚಾರಕ್ಕೆ ಮೀಸಲಾದ ಸಮಯವೂ ಸೇರಿದಂತೆ ಎರಡೂ ಸದನಗಳಲ್ಲಿ ಚರ್ಚೆಗಳಿಗೆ ಮೀಸಲಿಡಲಾಗಿದೆ. ರಾತ್ರಿಯಲ್ಲೂ ಕೆಲವು ಗಂಟೆಗಳು ಮುಂದುವರಿಯವಂತೆ ಕಾಣುತ್ತದೆ. ಹಾಗೆ ಮಾಡುವುದು ಒಳ್ಳೆಯದು. ಆದರೆ ಹೆಚ್ಚಿನ ಭಾಷಣಗಳು ಹಿಂದಿಯಲ್ಲಿದ್ದವು. ಅವುಗಳು ನನಗೆ ಅರ್ಥವಾಗುವುದಿಲ್ಲ. ನಾಳೆ ದಿನದ ಪತ್ರಿಕೆಗಳಲ್ಲಿ ಅವುಗಳ ಸಾರಾಂಶವನ್ನು ಭಾಗಶಃ ತಿಳಿದುಕೊಳ್ಳುತ್ತೇನೆ.

**ಸೆಪ್ಟೆಂಬರ್ ೨, ೧೯೯೭ ದೆಹಲಿ**

ದೂರದರ್ಶನದ ಜನ ಬಂದು ನನ್ನ ಹೇಳಿಕೆಗಳನ್ನು ದಾಖಲು ಮಾಡಿದರು, ಹಾಗೆಯೇ ಜೀಟಿವಿಯ ಜನರು ಹಾಗೇ ಮಾಡಿದರು. ಯುವತಿ 'ಅದಿತಿ'ಯು ಕೆಲವು ತಿಂಗಳ ಹಿಂದೆ ಬಂದಿದ್ದು ಅಲ್ಲಿದ್ದರು. ಎಲ್ಲರಿಗೂ ಬಿಸ್ಕತ್ತು ಮತ್ತು ಕಾಫಿಯನ್ನು ವ್ಯವಸ್ಥೆಗೊಳಿಸಿದೆ. ಈಗಿನ ಅಸಂತೋಷ ಪರಿಸ್ಥಿತಿ, ಭ್ರಷ್ಟಾಚಾರ, ಬಡತನ, ಜನಸಂಖ್ಯೆ, ನಿರುದ್ಯೋಗ ಮುಂತಾದವುಗಳ ಬಗ್ಗೆ ನನ್ನ ಪ್ರಾರಂಭಿಕ ಟೀಕೆಗಳಿಂದ ಸಭೆ ಪ್ರಾರಂಭವಾಯಿತು.

**ಸೆಪ್ಟೆಂಬರ್ ೬, ೧೯೯೭ ದೆಹಲಿ**

ಕೆಟ್ಟ ಮತ್ತು ದುಃಖದ ಸುದ್ದಿ. ಮದರ್ ತೆರೇಸಾ ನೆನ್ನೆ ರಾತ್ರಿ ೯-೩೦ಕ್ಕೆ ನಿಧನರಾದರು. ಬಡವರ ಮತ್ತು ಮಾನವತೆಯ ವಿಶ್ವಕ್ಕೆ ಇದು ತುಂಬಾ ನಷ್ಟ. ಅವರು ದಯೆ ಮತ್ತು ಸೇವೆಯ ಪ್ರತೀಕವಾಗಿದ್ದರು. ಈ ಪ್ರಸಿದ್ಧ ಮಹಿಳೆಯ ನಿಧನಕ್ಕೆ ಇಡೀ ಪ್ರಪಂಚವೇ ದುಃಖಿಸುತ್ತಿದೆ. ಆಕೆ ವಿಶ್ವಕ್ಕೆ ದಯೆಯ ದೇವತೆ. ಯಾವಾಗಲೂ ಅವರು ಮಾನವತೆ ನೀಡುತ್ತಿದ್ದರು.

**ಅಕ್ಟೋಬರ್ ೨, ೧೯೯೭ ದೆಹಲಿ**

ಅಶ್ರಫ್‌ನ ಕಾರು ಹಾಗೂ ರಾಜೇಶ್ ಪೈಲಟ್‌ರ ಕಾರು ಬಂದವು. ಉದಯ, ಅವನ ಹೆಂಡತಿ ಮತ್ತು ಇಬ್ಬರು ಮಕ್ಕಳು ಭಾವನಾಳ ಕಾರಿನಲ್ಲಿ ಬಂದು ನಾವು ಪೈಲಟರ ಕಾರಿನಲ್ಲಿ ಗಾಂಧಿ ಸಮಾಧಿ ಪ್ರದೇಶಕ್ಕೆ ೧೧-೧೫ಕ್ಕೆ ಬಂದೆವು. ೫-೧೦ ನಿಮಿಷಗಳೊಳಗೆ

ಸಮೂಹವು ೬-೭ ಸಾವಿರಗಳಿಗೆ ಹೆಚ್ಚಿ, ಹೆಚ್ಚಿನವರು ಬಿಳಿ ಬಟ್ಟೆ ಧರಿಸಿದ್ದರು. ಅದು ಬಿಳಿಯ ಒಂದು ಸಮುದ್ರ. ಅಲ್ಲಿ ಒಂದು ದೊಡ್ಡ ಶಾಮಿಯಾನ ಇದ್ದು, ಹೊರಗಡೆ ಸ್ವಲ್ಪವೇ ಜನರಿದ್ದರು. ನನಗಾಗಿ ಒಂದು ಕುರ್ಚಿಯನ್ನು ತರಿಸಿಕೊಳ್ಳಬೇಕಾಯಿತು. ಮರೆಯಲಾಗದ ಭಾಷಣಗಳನ್ನು ಪ್ರಾರಂಭದಲ್ಲಿ ಮೋಹನ್‌ಧಾರಿಯ ಮತ್ತು ೩-೪ ಜನ ಇತರರು ಹಿಂದಿಯಲ್ಲಿ ಮಾಡಿದರು. ನಂತರ ನಾನು ಮೊದಲು ಹಿಂದಿಯಲ್ಲಿ ೪-೫ ವಾಕ್ಯಗಳನ್ನು ಹೇಳಿ ನಂತರ ಇಂಗ್ಲಿಷಿನಲ್ಲಿ ಸುಮಾರು ಅರ್ಧ ಗಂಟೆ ಭಾಷಣ ಮಾಡಿದೆ. ಕೊನೆಯದಾಗಿ ಬೊಂಬಾಯಿಯಲ್ಲಿರುವ ಗಾಂಧೀಜಿಯ ಮೊಮ್ಮಗ ಮಾತನಾಡಿದರು. ಶ್ರೋತೃಗಳು ತುಂಬಾ ಗಮನವಿಟ್ಟು ಕೇಳಿದರು. ಮತ್ತು ಚೆನ್ನಾಗಿ ಹೊಗಳಿದರು. ಸಭೆಯು ೧-೧೫ಕ್ಕೆ ಮುಕ್ತಾಯವಾಯಿತು. ಆದರೂ ಜನರು ಇನ್ನೂ ಬರುತ್ತಿದ್ದರು. ನನಗೆ ತುಂಬಾ ಸಂತೋಷವಾಗಿತ್ತು ಈ ಮೀಟಿಂಗ್‌ನಿಂದ ತೃಪ್ತಿಪಟ್ಟೆ. ಜನರಿಗೆ ಇಂತಹ ಚಳವಳಿ ಬೇಕೆಂಬುದು ಸ್ಪಷ್ಟವಾಗಿತ್ತು.

**ನವೆಂಬರ್ ೧೪, ೧೯೯೭ — ಚಿತ್ರದುರ್ಗ**

ಚಿತ್ರದುರ್ಗದಲ್ಲಿ ಇಂದು ಪ್ರಾರಂಭವಾದ ಸಹಕಾರ ವಾರವನ್ನು ಉದ್ಘಾಟಿಸಿದೆ. ಅದನ್ನು ಈ ವಾರದಲ್ಲಿ ತಾಲ್ಲೂಕು ಕೇಂದ್ರಗಳಲ್ಲಿ ನಡೆಸಲಾಗುತ್ತಿದೆ. ಅರ್ಧ ಗಂಟೆ ಮಾತ್ರ ಭಾಷಣ ಮಾಡಿ ಕೃಷಿಯು ಸಹಕಾರ ಆಧಾರದಲ್ಲಿರಬೇಕು. ಆ ಉದ್ದೇಶಕ್ಕೆ ಇಡೀ ಕೃಷಿ ಜಮೀನನ್ನು ಸ್ಥಳದ ಮೇಲೆ ಅವಲಂಬಿಸಿ ಖುಷ್ಕಿ ಜಮೀನನ್ನು ಆರ್ಥಿಕ ತುಂಡುಗಳಾಗಿ ವಿಂಗಡಿಸಬೇಕು. ನೀರಾವರಿ ಜಮೀನನ್ನು ೫-೬ ಎಕರೆಗಳಾಗಿ ಹಂಚಬೇಕು. ಕೃಷಿ ಮಾಡುವವನೇ ಮಾಲೀಕನಾಗಿರಬೇಕು ಎಂದು ಭಾಷಣ ಮಾಡಿದೆ. ಉದ್ಘಾಟನೆ ಮಾಡಿದ ಮೇಲೆ ಬಂದುಬಿಟ್ಟೆ.

**ನವೆಂಬರ್ ೨೦, ೧೯೯೭ — ಚಿತ್ರದುರ್ಗ**

ರಾಜೀವ್ ಗಾಂಧಿಯ ಕೊಲೆಯ ಮೇಲೆ ಜೈನ್ ಆಯೋಗದ ವರದಿಯು ಗುಜ್ರಾಲ್ ಸರ್ಕಾರಕ್ಕೆ ಸಮಸ್ಯೆಗಳನ್ನು ಸೃಷ್ಟಿಸುತ್ತದೆ. ಏಕೆಂದರೆ ಪ್ರತಿಪಕ್ಷವೂ ತನ್ನದೇ ಉದ್ದೇಶಕ್ಕಾಗಿ ಈ ಸಮಯವನ್ನು ಉಪಯೋಗಿಸಿಕೊಳ್ಳುತ್ತದೆ. ಅವರಲ್ಲಿ ಯಾರೂ ಸಭ್ಯರಿಲ್ಲ. ಅದನ್ನು ಎರಡೂ ಸದನಗಳಲ್ಲಿ ಮಂಡಿಸಲಾಯಿತು. ಆಗ ಕೂಗಾಟಗಳು ಕಿರುಚಾಟಗಳಿದ್ದು ಮುಂದೂಡುವಿಕೆಗಳಾದವು. ಆ ವರದಿಯಲ್ಲಿ ವಿ.ಪಿ. ಸಿಂಗ್, ಚಂದ್ರಶೇಖರ್, ಕರುಣಾನಿಧಿಯ ಮೇಲೆ ಆಪಾದನೆ ಹೊರಿಸಲಾಯಿತು. ಕುತೂಹಲಕರವಾದ ಬೆಳವಣಿಗೆಗಳಿಗೆ ನಾವು ಕಾಯಬೇಕು. ಕಾಂಗ್ರೆಸ್ ಬೆಂಬಲವನ್ನು ಹಿಂತೆಗೆದುಕೊಳ್ಳುವ; ಬಿಜೆಪಿಯವರು ಒಳಕ್ಕೆ ಬರುವ ಸಾಧ್ಯತೆಯಿದೆ. ನಾವು ಗಮನಿಸಬೇಕು.

**ನವೆಂಬರ್ ೨೧, ೧೯೯೭**

ರಾಜೀವ್ ಗಾಂಧಿಯವರ ಕೊಲೆ ಮೇಲೆ ಜೈನ್ ಆಯೋಗದ ವರದಿಯು ಈಗಿನ ರಾಜಕೀಯ ಪರಿಸ್ಥಿತಿಗೆ ಎಡೆ ಮಾಡಿಕೊಟ್ಟಿದೆ. ಮಾಜಿ ಪ್ರಧಾನಿ ವಿ.ಪಿ. ಸಿಂಗ್ ಮತ್ತು ಡಿಎಂಕೆ ವಿರುದ್ಧದ ಅದರ ನಿರ್ಣಯವು ಎಲ್ಲಾ ರೀತಿಯ ಪರಿಸ್ಥಿತಿಗಳಿಗೆ ಅವಕಾಶ ಮಾಡಿಕೊಟ್ಟಿದೆ. ಕೇಂದ್ರ ಸರಕಾರದಿಂದ ಡಿಎಂಕೆ ಮಂತ್ರಿಗಳನ್ನು ವಜಾ ಮಾಡಬೇಕೆಂದು ಕಾಂಗ್ರೆಸ್ ಒತ್ತಾಯ ಮಾಡುತ್ತಿದ್ದು ಅದನ್ನು ಸ್ವಾಭಾವಿಕವಾಗಿ ತಿರಸ್ಕರಿಸಲಾಗಿದೆ. ಇದರ ಪರಿಣಾಮವೆಂದರೆ ಯುಎಫ್ ಸರ್ಕಾರಕ್ಕೆ ಕಾಂಗ್ರೆಸ್ ಬೆಂಬಲವನ್ನು ಹಿಂತೆಗೆದು ಕೊಳ್ಳಬಹುದು. ವಿಶ್ವಾಸಮತ ಠರಾವಿನಲ್ಲಿ ಗುಜ್ರಾಲ್ ಸರಕಾರವು ಹೋಗಬಹುದು. ಇದರಿಂದ ಲೋಕಸಭೆಗೆ ಸಾರ್ವತ್ರಿಕ ಚುನಾವಣೆಗಳಾಗಬೇಕಾಗಬಹುದು, ಏಕೆಂದರೆ ಬೇರೆ ಯಾವುದೇ ಇತರ ಪಕ್ಷವು ಸರಕಾರ ರಚಿಸುವ ಸಾಧ್ಯತೆಯಿಲ್ಲ. ಕಾಂಗ್ರೆಸ್ ಬಿಜೆಪಿಗೆ ಬೆಂಬಲಿಸಿದರೆ ಮಾತ್ರ ಸಾಧ್ಯ. ಅದು ಸಾಧ್ಯವಿಲ್ಲ.

**ನವೆಂಬರ್ ೨೭, ೧೯೯೭** **ಚಿತ್ರದುರ್ಗ**

ಅಶ್ರಫ್ ಫೋನು ಮಾಡಿ ನಾನು, ಸಿ. ಸುಬ್ರಹ್ಮಣ್ಯಂ, ಮಾಜಿ ರಾಷ್ಟ್ರಪತಿ ವೆಂಕಟರಾಮನ್ ದೆಹಲಿಗೆ ಬಂದು ಸಾರ್ವತ್ರಿಕ ಚುನಾವಣೆಯಾಗುವ ಬದಲು ವಿಷಯಗಳನ್ನು ಇತ್ಯರ್ಥಗೊಳಿಸುವುದು ಒಳ್ಳೆಯದು ಎಂದು ಸಂಬಂಧಪಟ್ಟ ಜನರಿಗೆ ಸಲಹೆ ಮಾಡಬೇಕೆಂದು ಹೇಳಿದರು. ನಾನು ಇಬ್ಬರಿಗೂ ಫೋನು ಮಾಡಿದೆ. ಈಗಿನ ಅನಿಶ್ಚಿತ ವಾತಾವರಣದಲ್ಲಿ ಏನು ಮಾಡುವುದೂ ಕಷ್ಟವಾಗಬಹುದು ಎಂದು ಸುಬ್ರಹ್ಮಣ್ಯಂ ಹೇಳಿದರು. ಅವರಿಗೆ ಪುನಃ ಪರ್ಯಾಲೋಚಿಸಲು ನಾಳೆ ಬೆಳಿಗ್ಗೆ ೧೦ ಗಂಟೆಗೆ ತಿರುಗಿ ಫೋನ್ ಮಾಡುತ್ತೇನೆಂದೆ. ಡಿಸೆಂಬರ್ ೧ನೇ ತಾರೀಕು ದೆಹಲಿಗೆ ಬಂದರೆ ಅಲ್ಲಿ ದೊರಕುತ್ತೇನೆ ಎಂದು ಆರ್. ವೆಂಕಟರಾಮನ್ ಹೇಳಿದರು. ನನ್ನ ಸಲಹೆಯನ್ನು ಯಾರಾದರೂ ಕೇಳುತ್ತಾರೆಂಬ ಬಗ್ಗೆ ನನಗೆ ಖಂಡಿತವಿಲ್ಲ. ಏನಾದರೂ ಮಾಡಲು ಸಾಧ್ಯವಿದೆಯೆ ಎಂದು ನೋಡೋಣ.

**ನವೆಂಬರ್ ೨೮, ೧೯೯೭** **ಚಿತ್ರದುರ್ಗ**

ಅತಂತ್ರ ಸ್ಥಿತಿ ಮುಂದುವರಿಯುತ್ತಿದೆ. ಸಾಯಂಕಾಲದ ಹೊತ್ತಿಗೆ ಕಾಂಗ್ರೆಸ್ ಬೆಂಬಲವನ್ನು ಹಿಂತೆಗೆದುಕೊಂಡಿರುವುದರಿಂದ ಪ್ರಧಾನಿ ಐ.ಕೆ. ಗುಜ್ರಾಲ್ ರಾಜೀನಾಮೆ ಸಲ್ಲಿಸಿದ್ದಾರೆ. ೨-೩ ದಿನಗಳಲ್ಲಿ ಹೇಗೆ ಬೆಳೆಯುತ್ತದೆ ಎಂದು ನೋಡಬೇಕು. ಪಕ್ಷದ ಅನೈತಿಕ ವರ್ತನೆಗಳಿಂದ ಕಾಂಗ್ರೆಸ್ ಮತ್ತು ಜಾತೀಯತೆಯ ವರ್ತನೆಯಿಂದ ಬಿಜೆಪಿ ಈಗಿನ ಸರಕಾರದ ಸ್ಥಾನಕ್ಕೆ ಬರಲು ಅರ್ಹರಲ್ಲ ಎಂದು ನಾನು ವೈಯಕ್ತಿಕವಾಗಿ ಭಾವಿಸುವೆನು. ಪಕ್ಷೇತರ ಅಥವಾ ಎಲ್ಲಾ ಪಕ್ಷಗಳ ಸರಕಾರವನ್ನು ರಚಿಸುವುದು ಸಾಧ್ಯವಾಗಬಹುದು.

ಸುಬ್ರಹ್ಮಣ್ಯಂಗೆ ಫೋನು ಮಾಡಿದೆ. ಒಂದೆರಡು ದಿವಸ ಕಾಯೋಣವೆಂದು ಇಬ್ಬರೂ ಒಪ್ಪಿಕೊಂಡೆವು. ದೇಶಕ್ಕೆ ಆತಂಕದ ದಿನಗಳಿವು.

**ನವೆಂಬರ್ ೩೦, ೧೯೯೭** **ಚಿತ್ರದುರ್ಗ**

ಈಗಿನ ದಿನಗಳಂತೆಯೇ ದೆಹಲಿಯಲ್ಲಿ ವಿಷಯಗಳು ಅದೇ ರೀತಿಯಲ್ಲಿವೆ. ಬಿಜೆಪಿ ಮತ್ತು ಕಾಂಗ್ರೆಸ್ ಅಧಿಕಾರಕ್ಕೆ ಬರಲು ತಮ್ಮ ಕೈಲಾದಷ್ಟೂ ಪ್ರಯತ್ನಿಸುತ್ತಿವೆ. ಇಬ್ಬರೂ ಅರ್ಹರಲ್ಲ. ಒಂದು ವ್ಯವಸ್ಥೆ ಮತ್ತು ಹೊಂದಾಣಿಕೆ ಸಾಧ್ಯವೆ ಎಂದು ರಾಷ್ಟ್ರಪತಿಗಳು ಗಂಭೀರವಾಗಿ ಪ್ರಯತ್ನಿಸುತ್ತಿದ್ದಾರೆ. ಅವರು ಸಫಲರಾಗಲಿ ಎಂದು ಹಾರೈಸುತ್ತೇನೆ. ಅದು ಸಾಧ್ಯವಾಗುವುದಿಲ್ಲ ಎಂದೇ ನನ್ನ ಹೆದರಿಕೆ.

**ಡಿಸೆಂಬರ್ ೧, ೧೯೯೭** **ಚಿತ್ರದುರ್ಗ**

ದೆಹಲಿಯಲ್ಲಿ ತೀವ್ರವಾದ ಚಟುವಟಿಕೆಗಳು ನಡೆಯುತ್ತಿವೆ. ಇತರ ಪಕ್ಷಗಳಿಂದ ಅಗತ್ಯವಾದ ಸಹಾಯ ಪಡೆಯುವುದರ ವಿಷಯದಲ್ಲಿ ಕಾಂಗ್ರೆಸ್ ಮತ್ತು ಬಿಜೆಪಿ ಆಶಾವಾದಿಗಳಾಗಿವೆಯೆಂದು ಕಾಣುತ್ತದೆ. ಏಕೆಂದರೆ ನನ್ನ ಪ್ರಕಾರ ಎರಡೂ ಪಕ್ಷಗಳು ಈ ದೊಡ್ಡ ದೇಶದ ಆಳ್ವಿಕೆಯನ್ನು ನಡೆಸಲು ಸ್ಪಷ್ಟ ಕಾರಣಗಳಿಗಾಗಿ ಅನರ್ಹರು. ಒಂದೆರಡು ದಿನಗಳಲ್ಲಿ ವಿಷಯಗಳು ಇತ್ಯರ್ಥಗೊಳ್ಳುತ್ತವೆ. ಅನೇಕ ಪಕ್ಷಗಳ ವರ್ತನೆಗಳನ್ನು ಪರಿಗಣಿಸಿದಾಗ ಇರುವ ದಾರಿ ಎಂದರೆ ಹೊಸ ಚುನಾವಣೆಗಳೇ. ಕುತೂಹಲದಿಂದ ನೋಡಬೇಕಾದ ಪರಿಸ್ಥಿತಿ.

**ಡಿಸೆಂಬರ್ ೪, ೧೯೯೭** **ಚಿತ್ರದುರ್ಗ**

ರಾಷ್ಟ್ರಪತಿ ಕೆ.ಆರ್. ನಾರಾಯಣನ್ ಸಕಾರಣವಾಗಿ ಪರಿಗಣಿಸಿ ಸಮಾಲೋಚನೆಗಳು ಮುಂತಾದವುಗಳನ್ನು ಮಾಡಿ ಲೋಕಸಭೆಯನ್ನು ವಿಸರ್ಜಿಸಲು ಮತ್ತು ಮಾರ್ಚ್ ಮೊದಲನೆ ವಾರಕ್ಕೆ ಮುಂಚೆ ಚುನಾವಣೆಗಳನ್ನು ಮುಗಿಸಬೇಕೆಂದು ಅರ್ಹವಾದ ನಿರ್ಧಾರವನ್ನು ತೆಗೆದುಕೊಂಡಿದ್ದಾರೆ. ಇದೊಂದೇ ನಿರ್ಧಾರ ಸಾಧ್ಯ. ಆಳುತ್ತಿರುವ ಮಿಶ್ರ ಪಕ್ಷಗಳು ಮುಂದಿನ ಚುನಾವಣೆಗಳಲ್ಲಿಯೂ ಮುಂದುವರಿಯಬೇಕೆಂಬ ಇಚ್ಛೆಯುಳ್ಳವಾಗಿವೆ. ಅವರಿಗೆ ಒಂದು ಅವಕಾಶವಿರಬಹುದು. ಆದರೆ ಬೇಕಾಗಿರುವ ಬಹುಮತವು ಅವರಿಗೆ ಸಿಗುವುದಿಲ್ಲ. ಇವೆಲ್ಲವುಗಳಿಗೆ ಬೇರೆ ಇತರ ಪಕ್ಷಗಳು ಪ್ರತಿಕ್ರಿಯಿಸುವುದಿಲ್ಲ. ನೆನ್ನೆ ನಾನು ಪತ್ರಿಕಾ ಜನರಿಗೆ ಹಾಗೂ ಇತರ ಕೆಲವರಿಗೆ ಹೇಳಿದುದೇನೆಂದರೆ ಯಾವ ಪಕ್ಷಕ್ಕೂ ನೈತಿಕ ಆಧಾರವಿಲ್ಲದಿರುವುದರಿಂದ ಮತದಾರರು ಅಂದರೆ ನಾಗರಿಕರು ಮಾಡಬೇಕಾದ್ದೇನೆಂದರೆ ಅಭ್ಯರ್ಥಿಯ ಇತಿಹಾಸ, ನಡತೆ ಅಥವಾ ಗೌರವವನ್ನು ಆಧರಿಸಿ ಮಾತ್ರ ಉತ್ತಮ ಅಭ್ಯರ್ಥಿಯನ್ನು ಚುನಾಯಿಸಬೇಕು. ಮುಂಚೆಯೇ ಜಯಪ್ರಕಾಶ ನಾರಾಯಣ್ ಇದನ್ನು ಹೇಳಿದ್ದಾರೆಂದು ನನಗೆ ಜ್ಞಾಪಕ.

**ಡಿಸೆಂಬರ್ ೯, ೧೯೯೭**

ಅಶ್ರಫ್ ೧೦ ಗಂಟೆ ಸುಮಾರಿಗೆ ಬಂದು ಗಾಂಧಿ ಫೋರಂನ ೪ ಅಥವಾ ೫ ಸದಸ್ಯರು ಮಾತ್ರ ಬಂದುದರಿಂದ ಮನೆಯಲ್ಲೇ ನಾವು ಸೇರಬಹುದು ಎಂದುದರಿಂದ ನಾನು ಒಪ್ಪಿಕೊಂಡೆ.

ಮಧ್ಯಾಹ್ನ ೨ ಗಂಟೆಗೆ ಪ್ರಸಿದ್ಧ ಶಿವರಾಮ ಕಾರಂತರು ೫-೬ ದಿನಗಳು ಕೋಮಾದಲ್ಲಿದ್ದು ಉಡುಪಿ ಆಸ್ಪತ್ರೆಯಲ್ಲಿ ನಿಧನರಾದರೆಂದು ರೇಡಿಯೋ ಪ್ರಕಟಿಸಿತು.

**ಡಿಸೆಂಬರ್ ೨೪, ೧೯೯೭ ಚಿತ್ರದುರ್ಗದಲ್ಲಿ ಹುಟ್ಟುಹಬ್ಬ**

ಬೆಳಿಗ್ಗೆಯಿಂದ ಜನರು ಬಂದು ಹೂವುಗಳು (ಹಾರಗಳು) ಮತ್ತು ಹಣ್ಣುಗಳನ್ನು ಕೊಟ್ಟರು. ಸಾಯಂಕಾಲ ಪಿ.ಎಂ.ಎನ್. ಹಾಲಿನಲ್ಲಿ ನಗರ ಮುನಿಸಿಪಾಲಿಟಿ ಏರ್ಪಡಿಸಿದ್ದ ಸಾರ್ವಜನಿಕ ಸಭೆ ಇತ್ತು. ಸಭಾಂಗಣ ತುಂಬಿ ಹೋಗಿದ್ದಿತು. ಜಾಫರ್ ಷರೀಫ್ ಅಧ್ಯಕ್ಷತೆ ವಹಿಸಿದ್ದರು. ಹನುಮಂತಪ್ಪ (ರಾ.ಸ), ಲೋಕಸಭೆಯ ಮಾಜಿ ಉಪಾಧ್ಯಕ್ಷರಾದ ಮಲ್ಲಿಕಾರ್ಜುನಯ್ಯ, ಮಾಜಿ ಮಂತ್ರಿ ಮತ್ತು ರೇಷ್ಮೆ ಉತ್ಪಾದನೆಯ ಅಧ್ಯಕ್ಷ ಏಕಾಂತಯ್ಯ, ಸ್ಥಳೀಯ ಶಾಸಕರಾದ ತಿಪ್ಪಾರೆಡ್ಡಿ ಸಭೆಯನ್ನುದ್ದೇಶಿಸಿ ಮಾತನಾಡಿ ನನ್ನ ಸೇವೆಯನ್ನು ಹೊಗಳಿದರು. ಹೆಚ್ಚಿನ ಸಂಖ್ಯೆಯಲ್ಲಿ ಹಾರಗಳು, ಶಾಲುಗಳು ಮತ್ತು ಹಣ್ಣುಗಳನ್ನು ನೀಡಲಾಯಿತು. ನನ್ನ ಸೇವೆ, ಮುದಿವಯಸ್ಸು, ಸ್ವಾತಂತ್ರ ಯೋಧನಾದ ಅನುಭವ, ಕಲಾಕಾರರು, ಪಿಂಚಣಿದಾರರು, ಶರಾವತಿ ಯೋಜನೆ, ಚಿತ್ರದುರ್ಗ- ಬೆಂಗಳೂರು ನೀರು ಸರಬರಾಜು ಮುಂತಾದವುಗಳ ಬಗ್ಗೆ ೨೫ ನಿಮಿಷಗಳು ಭಾಷಣ ಮಾಡಿದೆ. ನಾನು ಏನು ಮಾಡಿದ್ದೇನೆ ಎಂಬುದರ ಬಗ್ಗೆ ಇದೇ ಮೊದಲು ನಾನು ಮಾತನಾಡಿದುದು. ಅಲ್ಲದೆ ದುರದೃಷ್ಟಕರ ಪರಿಸ್ಥಿತಿ, ಭ್ರಷ್ಟಾಚಾರ, ನೈತಿಕತೆಯ ಅಗತ್ಯ, ದುರ್ನಡತೆ, ಸ್ವಆಸಕ್ತಿ ಮುಂತಾದವುಗಳ ಬಗ್ಗೆ ಮತ್ತು ರಾಜ್ಯನೀತಿಯ ನಿರ್ದೇಶಕ ತತ್ವಗಳ ಬಗ್ಗೆ ಸರ್ಕಾರದ ವಿಫಲತೆ-ಮುಂತಾದವುಗಳನ್ನು ಕುರಿತು ಕಟುವಾಗಿ ಟೀಕಿಸಿದೆ. ಯಾವುದೇ ಮತಕ್ಷೇತ್ರದಲ್ಲಿ ಪಕ್ಷದ ಅಭ್ಯರ್ಥಿಗೆ ಮತ ಹಾಕುವ ಬದಲು, ಏಕೆಂದರೆ ಯಾವುದೇ ಪಕ್ಷವು ತನ್ನ ಆದರ್ಶಗಳು ಮತ್ತು ಉದ್ದೇಶಗಳನ್ನು ಗೌರವಿಸದಿರುವುದರಿಂದ, ಉತ್ತಮ ಅಭ್ಯರ್ಥಿಗೆ ಮತ ಹಾಕಬೇಕೆಂದು ಮನವಿ ಮಾಡಿಕೊಂಡೆ. ಶರೀಫ್ ನನ್ನ ಬಗ್ಗೆ ಸೇವಾದಳದ ಸ್ವಯಂ ಸೇವಕನಾಗಿ ನನ್ನ ಮತ್ತು ಅವರ ಸಂಬಂಧಗಳ ಬಗ್ಗೆ ಮಾತನಾಡಿದರು. ಇದು ಒಳ್ಳೆಯ ಸಭೆಯಾಗಿತ್ತು. ದೊಡ್ಡ ನೀರಾವರಿ ಯೋಜನೆಗಳಿಗೆ ಅಸ್ತಿಭಾರ ಹಾಕಿದುದನ್ನು ನಾನು ಉಲ್ಲೇಖಿಸಲಿಲ್ಲ. ನಾನು ಹೇಳಬೇಕಿತ್ತು. ಸಭೆಗೆ ಹೋಗುವ ಮೊದಲು ೫-೩೦ರಲ್ಲಿ ಸ್ತ್ರೀ ಸಮಾಜದ ಸದಸ್ಯರು ಸುಮಾರು ಒಂದು ಡಜನ್ ಮಹಿಳೆಯರು ಬಂದು ನನಗೆ ಒಂದು ಶಾಲು, ಹೂವುಗಳು, ಹಣ್ಣುಗಳು, ಸಿಹಿ ತಿಂಡಿಗಳನ್ನು ನೀಡಿ ಅನೇಕ ಫೋಟೋಗಳನ್ನು ತೆಗೆಸಿಕೊಂಡರು. ಅದು ನನಗೆ ತುಂಬಾ ಸಂತೋಷವುಂಟು ಮಾಡಿತು.

ಶುಭಾಶಯಗಳು, ಇಡೀ ದಿನ ಮುಂದುವರೆಯಿತು. ೮-೩೦ಕ್ಕೆ ಮುಗಿದಾಗ ನನಗೆ ತುಂಬಾ ದಣಿವಾಗಿತ್ತು. ದಣಿವು, ದಣಿವು.

**ಡಿಸೆಂಬರ್ ೨೮, ೧೯೯೭** **ಚಿತ್ರದುರ್ಗ**

ನನ್ನ ಮನೆಯಲ್ಲಿ ಕಾಶ್ಮೀರದ ಮಾಜಿ ಯುವರಾಜ ಡಾ. ಕರಣ್‌ಸಿಂಗ್ ನನ್ನನ್ನು ಭೇಟಿ ಮಾಡಿದಾಗ ನನ್ನ ಜೀವನದಲ್ಲೇ ಅತಿ ದೊಡ್ಡ ತಪ್ಪನ್ನು ಮಾಡಿದೆ. ಅವರನ್ನು ಕೊನೆಯವರೆಗೆ ಸಂಡೂರಿನ ಘೋರ್ಪಡೆ ಎಂದು ತಪ್ಪು ತಿಳಿದುಕೊಂಡು ಮಾತಾಡಿಸಿದೆ. ಆದರೆ ಅವರು ಹೊರಟು ಹೋದ ಮೇಲೆ ಅವರು ಡಾ. ಕರಣ್‌ಸಿಂಗ್ ಎಂದು ರಾಜಣ್ಣ ಹೇಳಿದನು. ಅವರಲ್ಲಿ ಕ್ಷಮೆ ಕೋರಿ ಮನ್ನಿಸುವಂತೆ ಪತ್ರ ಬರೆದು ಕೇಳುತ್ತೇನೆ. ನಿಜವಾಗಿಯೂ ಇಂದು ಕ್ಷಮಿಸಲಾಗದ ತಪ್ಪು ಮಾಡಿದ್ದೇನೆ.

**ಡಿಸೆಂಬರ್ ೨೯, ೧೯೯೭** **ಚಿತ್ರದುರ್ಗ**

ಕರ್ನಾಟಕದ ಮೇಲ್ಮನೆ ವಿಧಾನಪರಿಷತ್ತಿಗೆ ಸ್ಥಳೀಯ ಸಂಸ್ಥೆ ಮತಕ್ಷೇತ್ರದಿಂದ ಇಂದು ಚುನಾವಣೆ ಇತ್ತು. ನಾಡಿದ್ದು ಫಲಿತಾಂಶಗಳನ್ನು ಪ್ರಕಟಿಸಲಾಗುವುದು.

**ಡಿಸೆಂಬರ್ ೩೧, ೧೯೯೭** **ಚಿತ್ರದುರ್ಗ**

ವರ್ಷದ ಕೊನೆಯ ದಿನ. ಇತರ ಯಾವುದೇ ದಿನದಂತೆ ನಾಳೆ ೧೯೯೮ರ ಜನವರಿ ೧ ಕೂಡ ಇರುತ್ತದೆ. ವರ್ಷದ ಕೊನೆಯನ್ನು ನೋಡಲು ನಾನು ಬದುಕಿರಬೇಕು. ಎಂತಹ ಸ್ವಾಗತ ನನಗೆ. ಇರುವುದು ಅಥವಾ ಇಲ್ಲದಿರುವುದೆರಡೂ. ಮಾನವತೆಗೆ ಮುಂದಿನ ವರ್ಷ ಏನಾಗುತ್ತದೋ ನಮ್ಮ ದೇಶಕ್ಕೂ ಆಗುತ್ತದೆಯೆ ? ಮುಂಬರುವ ವರ್ಷಮಾನದವರೆಗೆ ಅಂತಹ ಗಣನೀಯವಾದುದೇನನ್ನೂ ತರುವುದಿಲ್ಲ. ಮೇಲ್ಮನೆ ವಿಧಾನಪರಿಷತ್ತಿನ ಫಲಿತಾಂಶಗಳು ಪ್ರಕಟವಾಗಿವೆ. ಜೆ.ಹೆಚ್. ಪಟೇಲರ ಆಳುವ ಪಕ್ಷವು ೨೫ ಸ್ಥಾನಗಳನ್ನು ಕಾಂಗ್ರೆಸ್ (ಐ) ೧೨ನ್ನು ಪಡೆದುಕೊಂಡಿದೆ.

**ಜನವರಿ ೫, ೧೯೯೮** **ಇನ್ನೊಂದು ಶಾಂತವಾದ ದಿನ**

ರೇಡಿಯೋ, ಪತ್ರಿಕೆಗಳಲ್ಲಿ ರಾಜಕೀಯ ಪಕ್ಷಗಳ ಚುರುಕಾದ ಪ್ರಯತ್ನಗಳ ಬಗ್ಗೆ ತುಂಬಿದ್ದು ಈ ದಿನಗಳಲ್ಲಿ ಅವುಗಳೆಲ್ಲ ಇತರ ಎಲ್ಲಾ ಪಕ್ಷಗಳ ಜೊತೆಯಲ್ಲಿ ಒಪ್ಪಂದ ಮಾಡಿಕೊಳ್ಳಲು ಅವರ ಹಿಂದಿನ ಇತಿಹಾಸ ಅಥವಾ ರಾಜಕೀಯ ಉದ್ಯೋಗಗಳೇನೆ ಇರಲಿ ಮುಂಬರುವ ಲೋಕಸಭೆ ಚುನಾವಣೆಗಳಲ್ಲಿ ಒಪ್ಪಂದಕ್ಕೆ ಬರುವ ವಿಷಯಗಳು ತುಂಬಿವೆ. ಯಾವುದೇ ನೀತಿಯಾಗಲಿ ಅಥವಾ ತತ್ವವಾಗಲಿ ಇಲ್ಲ. ಅವರ ಮುಖ್ಯ ಗುರಿ ಅಧಿಕಾರಕ್ಕೆ ಬರುವುದು. ರಾಜಕೀಯ, ಸಾಮಾಜಿಕ, ಆರ್ಥಿಕ ಅಥವಾ ನೈತಿಕ ನೀತಿಗಳೇನೂ ಪ್ರಮುಖವಲ್ಲ. ಈ ಜನರು ಭಾರತಕ್ಕೆ ಅಥವಾ ಜನರಿಗೆ ಯಾವ ರೀತಿ ಸೇವೆ ಮಾಡಬಲ್ಲರು. ಇಟಲಿಯ ಮಹಿಳೆ ಮತ್ತು ರಾಜೀವಗಾಂಧಿಯ ಪತ್ನಿ ಮತ್ತು ಇಂದಿರಾಗಾಂಧಿ ಸೊಸೆ

ಸೋನಿಯಾಗಾಂಧಿಯವರನ್ನು ಮೇಲೆತ್ತಿ ಕೂರಿಸಲಾಗುತ್ತಿದೆ. ಆಕೆ ಕಾಂಗ್ರೆಸ್‌ಗೆ ಕೆಲಸ ಮಾಡುವ ನಿರೀಕ್ಷೆಯಿದೆ. ಅಶ್ರಫ್ ನನಗೆ ದೆಹಲಿಯಿಂದ ಫೋನು ಮಾಡಿ ಧಾರವಾಡದ ದಕ್ಷಿಣ ಮತ ಕ್ಷೇತ್ರದಿಂದ ಅಭ್ಯರ್ಥಿಯಾಗಿ ನಿಂತುಕೊಳ್ಳುವುದಾಗಿ ಹೇಳಿದನು. ಬಿಜೆಪಿಯು ತನ್ನನ್ನು ಬೇಕು ಎಂದು ಹೇಳಿದೆಯೆಂದನು. ನನ್ನ ಅಭಿಪ್ರಾಯ ಕೇಳಿದನು. ನಾನು ಏನೂ ಹೇಳಲಿಲ್ಲ. ಅವನಿಗೇ ಬಿಟ್ಟೆ. ೭ನೇ ರಾತ್ರಿ ನಾನು ದೆಹಲಿಯಲ್ಲಿ ಇರುತ್ತೇನೆಂದು ಹೇಳಿದೆ.

**ಜನವರಿ ೧೫, ೧೯೯೮** **ಚಿತ್ರದುರ್ಗ**

ಈ ದಿನ ಸಾಯಂಕಾಲ ರೇಡಿಯೋ ಪ್ರಸಾರವು ಗುಲ್ಜಾರಿಲಾಲ್ ನಂದರ ಸಾವಿನ ದುಃಖದ ಸಮಾಚಾರವನ್ನು ಪ್ರಕಟಿಸಿತು. ಅವರಿಗೆ ೯೯ ವರ್ಷ ವಯಸ್ಸಾಗಿದ್ದು ದೇಶಕ್ಕೆ ವಿವಿಧ ಸ್ಥಾನಗಳಿಂದ ಸೇವೆ ಸಲ್ಲಿಸಿದ್ದಾರೆ. ಮೂಲಭೂತವಾಗಿ ಅವರು ಕಾರ್ಮಿಕ ನಾಯಕ ಮತ್ತು ಕಟ್ಟಾ ಕಾಂಗ್ರೆಸ್ಸಿಗ, ಮೇಲಾಗಿ ಸ್ವಾತಂತ್ರ್ಯ ಯೋಧ. ಅವರು ಬಹಳ ಕಾಲ ಕೇಂದ್ರ ಮಂತ್ರಿ ಮಂಡಲದಲ್ಲಿದ್ದರು. ನಾನು ನೋಡಿರುವವರಲ್ಲಿ ಅತ್ಯಂತ ನಿಸ್ಪೃಹ ಮನುಷ್ಯ. ಅವರು ಸ್ವಲ್ಪ ಕಾಲದಿಂದ ಕಾಯಿಲೆಯಿಂದ ನರಳುತ್ತಿದ್ದು ಕೆಲವು ವರ್ಷಗಳಿಂದ ಹಾಸಿಗೆಯಲ್ಲಿಯೇ ಇದ್ದರು. ಪತ್ರಿಕೆ ಮತ್ತು ಇತರವುಗಳೆರಡರಲ್ಲಿಯೂ ಮುಂಬರುವ ಚುನಾವಣೆಗಳ ಸುದ್ದಿಯೇ. ಚಿತ್ರದುರ್ಗದಿಂದ ಹೊರಗೆ ಹೋಗುವ ಕೋರಿಕೆಗಳನ್ನು ನಾನು ನಿರಾಕರಿಸುತ್ತಿದ್ದೇನೆ.

**ಜನವರಿ ೨೩, ೧೯೯೮** **ಚಿತ್ರದುರ್ಗ**

ನೇತಾಜಿ ಸುಭಾಷ್ ಚಂದ್ರಬೋಸರ ೧೦೧ನೇ ಜನ್ಮದಿನವನ್ನು ಭಾರತವು ಆಚರಿಸುತ್ತಿರುವುದರಿಂದ ಈ ದಿನ ಬಹಳ ಪವಿತ್ರ ದಿನ. ಕಳೆದ ಕೆಲವು ವರ್ಷಗಳಿಂದ ಮಾತ್ರ ಅವರ ಹೆಸರಿಗೆ ಪ್ರಾಮುಖ್ಯತೆ ಬಂದಿದೆ. ಭಾರತ ಸರಕಾರವು ಅವರ ಜನ್ಮದಿನವನ್ನು ಆಚರಿಸಲು ಅಧಿಕೃತವಾಗಿ ನಿರ್ಧರಿಸಿದೆ. ನೆಹ್ರೂ-ಗಾಂಧಿ ಆಡಳಿತ ಕಾಲದಲ್ಲಿ ಈ ಒಳ್ಳೆಯ ಹೆಸರನ್ನು ಬೇಕೆಂದೆ ಮುಚ್ಚಿಬಿಡಲಾಗಿತ್ತು. ಅವರ ಕೊನೆಯ ದಿನಗಳ ಬಗ್ಗೆ ಸತ್ಯಾಂಶಗಳನ್ನು ಕಂಡುಹಿಡಿಯಲು ಪ್ರಯತ್ನವೇನೂ ಮಾಡಲಿಲ್ಲ. ಸರಕಾರವು ಪ್ರಯತ್ನಿಸಬೇಕು ಎಂದು ನಾನು ಕೂಡ ಬರೆದಿದ್ದೇನೆ. ಇಲ್ಲಿಯವರೆಗೆ ಏನೂ ಮಾಡಿದಂತೆ ಕಾಣುವುದಿಲ್ಲ.

**ಜನವರಿ ೨೫, ೧೯೯೮** **ಚಿತ್ರದುರ್ಗ**

ರಾಷ್ಟ್ರಪತಿ ಕೆ.ಆರ್. ನಾರಾಯಣನ್‌ರವರ ಗಣರಾಜ್ಯ ಪೂರ್ವದಿನದ ಭಾಷಣವನ್ನು ಕೇಳಿದೆ. ಬಡತನ, ಅನಕ್ಷರತೆ, ಗ್ರಾಮೀಣ ಭಾರತ, ಭ್ರಷ್ಟಾಚಾರ ಮುಂತಾದ ಸಮಸ್ಯೆಗಳ ಬಗ್ಗೆ ಮುಖ್ಯವಾಗಿ ಅವರು ವಿವರಿಸಿದುದರಿಂದ ನನಗೆ ಸಂಪೂರ್ಣ ತೃಪ್ತಿಯಾಗಿತ್ತು.

ರೇಡಿಯೋ ಮತ್ತು ಟಿ.ವಿ.ಯಲ್ಲಿ ಗಣರಾಜ್ಯದಿನದ ಸಮಾರಂಭಗಳ ಮತ್ತು ಭಾಷಣಗಳ ಬಗ್ಗೆ ಪೂರ್ಣ ಸಮಾಚಾರ ಮತ್ತು ದೆಹಲಿ ಮತ್ತು ಇತರ ಸ್ಥಳಗಳಲ್ಲಿ ಪ್ರದರ್ಶನಗಳು. ದೆಹಲಿಯಲ್ಲಿ ಈ ವರ್ಷದ ವಿಶೇಷ ಅತಿಥಿ ಫ್ರೆಂಚ್ ಅಧ್ಯಕ್ಷ. ಈ ಎರಡೂ ದೇಶಗಳ ನಡುವೆ ಸ್ವಲ್ಪ ಒಪ್ಪಂದವಿರುವಂತೆ ಕಾಣುತ್ತದೆ.

**ಜನವರಿ ೨೮, ೧೯೯೮**

ರಾಜೀವ್‌ಗಾಂಧಿ ಕೊಲೆ ಪ್ರಕರಣದಲ್ಲಿ ಎಲ್ಲಾ ೨೬ ಆಪಾದಿತರಿಗೆ ತಮಿಳುನಾಡು ನ್ಯಾಯಾಧೀಶರಿಂದ ಮರಣದಂಡನೆ ವಿಧಿಸಲಾಗಿದೆ. ಅಷ್ಟು ದೊಡ್ಡ ಸಂಖ್ಯೆಯಲ್ಲಿ ನೇಣು ಹಾಕುವುದು ! ಚಿಂತಿಸಲಾಗುವುದಿಲ್ಲ ! ಕಾಶ್ಮೀರದಲ್ಲಿ ಕೊಲೆಯ ಆಪಾದಿತರಾದ ತೀವ್ರಗಾಮಿಗಳನ್ನು ಕಂಡುಹಿಡಿದು ಇದೇ ರೀತಿ ಮಾಡಬೇಕು. ಈ ದಿನ ಪ್ರಧಾನಿ ಗುಜ್ರಾಲ್ ಆ ಹಳ್ಳಿಗೆ ಭೇಟಿ ಕೊಟ್ಟುದು ಒಳ್ಳೆಯದು.

**ಫೆಬ್ರವರಿ ೧೬, ೧೯೯೮** **ಚಿತ್ರದುರ್ಗ**

೨೨೨ ಸ್ಥಾನಗಳು. ಲೋಕಸಭಾ ಚುನಾವಣೆಯ ಮೊದಲ ದಿನ. ಲೋಕಸಭೆಯ ೨೨೫ ಮತಕ್ಷೇತ್ರಗಳಲ್ಲಿ ಮತ್ತು ಕೆಲವು ರಾಜ್ಯ ವಿಧಾನಸಭೆಯ ಸ್ಥಾನಗಳಿಗೆ ಚುನಾವಣೆಯು ಶಾಂತಿಯುತವಾಗಿ ನಡೆಯಿತು ಎಂದು ರೇಡಿಯೋ ಪ್ರಕಟಿಸಿತು. ಆದರೆ ಬಿಹಾರದಲ್ಲಿ ೨೦ ಸಾವುಗಳಾಗಿವೆ. ರಾಜ್ಯದಲ್ಲಿ ಶೇ. ೬೦ಕ್ಕೂ ಹೆಚ್ಚು ಮತದಾನ ನಡೆದಿದ್ದು ಚುನಾವಣೆ ಶಾಂತಿಯುತವಾಗಿದ್ದಿತು. ಒಳ್ಳೆಯದು. ಪೂರ್ಣವಾಗಿ ಫಲಿತಾಂಶಗಳು ಪ್ರಕಟವಾಗಿಬೇಕಾದರೆ ತಿಂಗಳ ಕೊನೆಯವರೆಗೆ ನಾವು ಕಾಯಬೇಕು. ಅದು ಕುತೂಹಲವಾಗಿರುತ್ತದೆ. ಯಾವುದೇ ಪಕ್ಷಕ್ಕೆ ಅಗತ್ಯವಾದ ಬಹುಮತ ಸಿಕ್ಕುವುದಿಲ್ಲವೆಂದು ಕಾಣುತ್ತದೆ.

**ಫೆಬ್ರವರಿ ೧೮, ೧೯೯೮** **ಚಿತ್ರದುರ್ಗ**

ಶ್ರೀ ಸಿ. ಸುಬ್ರಹ್ಮಣ್ಯಂರವರಿಗೆ ಭಾರತರತ್ನ ಪ್ರಶಸ್ತಿ ನೀಡಿದೆ ಎಂದು ಈ ದಿನದ ರೇಡಿಯೋ ಪ್ರಕಟನೆಗಳನ್ನು ತಿಳಿಯಲು ಸಂತೋಷ. ತುಂಬಾ ಸಂತೋಷ. ಅನೇಕ ವಿಷಯಗಳಲ್ಲಿ ಇತರರಿಗಿಂತ ಇವರು ಅರ್ಹರು. ೮೦೦ ಮತ ಸ್ಥಳಗಳಲ್ಲಿ ಅವರಲ್ಲಿ ೭೦೦ ಬಿಹಾರದಲ್ಲಿ ಚುನಾವಣೆಗಳು ಮತ್ತು ಮರು ಚುನಾವಣೆಗಳ ಸುದ್ದಿ ರೇಡಿಯೋ ತುಂಬಿದೆ. ಎಂದಿನಂತೆ ದಿನ ನೆನ್ನೆ ಸ್ವಲ್ಪ ಗೊಂದಲವಾಗಿತ್ತು. ಈ ದಿನ ನಾನು ಮಾಮೂಲಿನಂತಿದ್ದೇನೆ.

**ಮಾರ್ಚ ೨, ೧೯೯೮** **ಚಿತ್ರದುರ್ಗ**

ಗಂಟೆಗಂಟೆಗೆ ರೇಡಿಯೋದಲ್ಲಿ ಪ್ರಕಟವಾದಂತೆ ನಿಧಾನವಾಗಿ ಫಲಿತಾಂಶಗಳು ಬರುತ್ತಿವೆ. ಬಿಜೆಪಿ ಹೆಚ್ಚಿನ ಸಂಖ್ಯೆಯಲ್ಲಿ ನಿರೀಕ್ಷಿಸಿದಂತೆ ಗೆದ್ದಿದೆ. ನಿರೀಕ್ಷಿಸಿದಂತೆ ಬಿಜೆಪಿಯು ಅತಿ

ದೊಡ್ಡ ಪಕ್ಷ. ಅದನ್ನನುಸರಿಸಿ ಕಾಂಗ್ರೆಸ್. ಆಗಲೇ ಮಾತುಕತೆಗಳು ಪ್ರಾರಂಭವಾಗಿವೆ. ಆದ್ದರಿಂದ ನಾಳೆಯಿಂದ ವ್ಯಾಪಾರ ಪ್ರಾರಂಭವಾಗಬಹುದು. ಪ್ರಧಾನಿ ಗುಜ್ರಾಲ್ ಗೆದ್ದು ಬರುವುದು ಖಂಡಿತ. ಕರ್ನಾಟಕದ ಮಾಜಿ ಮುಖ್ಯಮಂತ್ರಿ ಬಂಗಾರಪ್ಪ ಹೀನಾಯವಾಗಿ ಸೋತಿದ್ದಾರೆ.

**ಮಾರ್ಚ್ ೧೦, ೧೯೯೮ ಚಿತ್ರದುರ್ಗ**

ನಿರೀಕ್ಷಿಸಿದಂತೆ, ರಾಷ್ಟ್ರಪತಿ ಶ್ರೀ ನಾರಾಯಣನ್ ಬಿಜೆಪಿ ನಾಯಕ ಎ.ಬಿ. ವಾಜಪೇಯಿಯನ್ನು ಸರ್ಕಾರ ರಚಿಸಲು ಕರೆದಿದ್ದಾರೆ. ಅವರು ರಚಿಸುತ್ತೇನೆಂದು ಹೇಳಿದ್ದಾರೆ. ಶನಿವಾರ ಸೇರುವ ಡಬ್ಲ್ಯುಸಿಯಲ್ಲಿ ಕಾಂಗ್ರೆಸ್ ಅಧ್ಯಕ್ಷ ಸೀತಾರಾಮ ಕೇಸರಿ ರಾಜೀನಾಮೆ ನೀಡುವುದಾಗಿ ಹೇಳಿದ್ದಾರೆ. ೨-೩ ರಾಜ್ಯಗಳಲ್ಲಿನ ರಾಜ್ಯಪಾಲರುಗಳು ದೊಡ್ಡ ಪಕ್ಷಗಳನ್ನು ಸರ್ಕಾರ ರಚಿಸಲು ಕರೆದಿದ್ದಾರೆ. ರಾಜ್ಯಗಳಲ್ಲಾಗಲಿ, ಕೇಂದ್ರದಲ್ಲಾಗಲಿ ಸಾಕಷ್ಟು ಬಹುಮತ ಹೊಂದಿರುವ ಪಕ್ಷ ಯಾವುದೂ ಇಲ್ಲ. ಬೆಳವಣಿಗೆಗಳಿಗೆ ಕಾಯಬೇಕು. ಏನಾಗುತ್ತಿದೆಯೆಂದು ನೋಡೋಣ. ರಾಷ್ಟ್ರಪತಿಗಳ ಹಾಗೆ ಪ್ರಧಾನಿ ಮತ್ತು ಮುಖ್ಯಮಂತ್ರಿಗಳನ್ನು ಚುನಾಯಿಸಬೇಕೆಂಬುದು ನನ್ನ ಭಾವನೆ.

**ಮಾರ್ಚ್ ೧೪, ೧೯೯೮ ಚಿತ್ರದುರ್ಗ**

ರಾಜಕೀಯ ಸ್ಥಿತಿಯು ಗೊಂದಲವಾಗಿದೆ. ಬಿಜೆಪಿಗೆ ಹೊರಗಿನಿಂದ ಬೆಂಬಲ ನೀಡುತ್ತೇನೆಂದು ಜಯಲಲಿತಾ ಈಗ ಹೇಳಿದ್ದಾರೆ. ಇನ್ನೊಂದು ಕಡೆಯಲ್ಲಿ ಕಾಂಗ್ರೆಸ್ ಅಧ್ಯಕ್ಷ ಸೀತಾರಾಮ ಕೇಸರಿ ತಕ್ಷಣ ಕಾಂಗ್ರೆಸ್ ಅಧ್ಯಕ್ಷ ಪದವಿಗೆ ರಾಜೀನಾಮೆ ನೀಡುವುದಿಲ್ಲ ಎಂದು ಹೇಳಿದ್ದಾರೆ. ಇಡೀ ಪರಿಸ್ಥಿತಿಯು ಗೊಂದಲವಾಗಿದೆ. ಯಾವುದೇ ಮರ್ಯಾದೆ, ಶಿಸ್ತು, ಆದರ್ಶ, ಉದ್ದೇಶ ಎಲ್ಲಿಯಾಗಲಿ, ಯಾರಲ್ಲೂ ಇಲ್ಲ, ಏನಾಗುತ್ತದೆಯೆಂದು ಯಾರೂ ಹೇಳಲಾಗುವುದಿಲ್ಲ. ಈ ಮಧ್ಯೆ ಭಾರತೀಯ ಚಿಂತನ ಸಮಿತಿಯ ನಾವು ರಾಷ್ಟ್ರಪತಿಗೆ ಬರೆದು ಸಂವಿಧಾನದ ವಿಧಿ ೮೬ (೨)ರಂತೆ ಲೋಕಸಭೆಯ ಸಭೆ ಕರೆಯಲು ಬರೆದಿದ್ದೇವೆ. ಆ ಕಾಗದಕ್ಕೆ ಜವಾಬು ಬಂದಿದೆ. ಇಡೀ ಪರಿಸ್ಥಿತಿಯು ಕುತೂಹಲವಾಗಿದೆ.

**ಮಾರ್ಚ್ ೧೫, ೧೯೯೮ ಚಿತ್ರದುರ್ಗ**

ಮಹತ್ವದ ದಿನ. ಸೋನಿಯಾ ಗಾಂಧಿಯನ್ನು ಕಾಂಗ್ರೆಸ್ ಅಧ್ಯಕ್ಷೆಯಾಗಿ ಚುನಾಯಿಸಿರುವುದು ಗಮನಿಸಿ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಬಹುದು. ಕಾಂಗ್ರೆಸ್‌ನ ಶುದ್ಧತೆಯನ್ನು ಕಾಪಾಡಲು ಕಾರ್ಯತಃ ಸಾಕು. ರಾಷ್ಟ್ರಪತಿಯವರಲ್ಲಿಗೆ ಹೋಗಿ ಕಾಂಗ್ರೆಸ್ ಹಕ್ಕನ್ನು ಮಂಡಿಸುತ್ತಿಲ್ಲ ಎಂದು ಹೇಳಿದ್ದಾರೆ. ರಾಷ್ಟ್ರಪತಿ ನಾರಾಯಣನ್ ಬಿಜೆಪಿ ನಾಯಕ ವಾಜಪೇಯಿಯನ್ನು ಕರೆದು ಸರ್ಕಾರ ರಚಿಸಲು ಹೇಳಿದುದರಿಂದ ಎಲ್ಲವೂ

ಅಂತ್ಯಗೊಂಡಿದೆ. ಬಿಜೆಪಿ ಸರಿಯಾಗಿ ನಡೆದುಕೊಂಡು ಜಾತೀಯತೆಯಿಂದ ಮಾರ್ಗದರ್ಶನ ಪಡೆಯದೆ ಶುದ್ಧವಾಗಿ ನಡೆಯುವುದು ಅದರ ಕೆಲಸ. ಹಿಂದೂತ್ವ ನೀತಿಯನ್ನು ಬಿಡಬೇಕು. ಜಾಗರೂಕವಾಗಿ ಕಾಯ್ದುನೋಡಬೇಕು. ಬಿಜೆಪಿಗೆ ಜಯಲಲಿತಾ ಬೆಂಬಲವಿದೆ.

**ಮಾರ್ಚ ೧೯, ೧೯೯೮ — ಚಿತ್ರದುರ್ಗ**

ಬಿಜೆಪಿ ವಾಜಪೇಯಿ ನೇತೃತ್ವದ ಮಂತ್ರಿ ಮಂಡಲಕ್ಕೆ ಪ್ರಮಾಣ ವಚನ ಬೋಧಿಸುವಿಕೆ ಇಂದು ನಡೆಯಿತು. ೨೧ ಕ್ಯಾಬಿನೆಟ್ ದರ್ಜೆಯಲ್ಲಿ ಬಿಜೆಪಿ ಮತ್ತು ಇತರ ಪಕ್ಷಗಳು ಸೇರಿದ್ದು ಹಾಗೆಯೇ ೨೧ ಉಪಮಂತ್ರಿಗಳೂ ಇದ್ದಾರೆ. ಖಾತೆಗಳನ್ನು ಈ ದಿನ ರಾತ್ರಿ ಪ್ರಕಟಿಸಬೇಕಾಗಿದೆ. ರಾಮಕೃಷ್ಣ ಹೆಗಡೆ, ಜಾರ್ಜ್ ಫರ್ನಾಂಡೀಸ್, ಸಿಕಂದರ್ ಭಕ್ತ್ ಇವರು ನನಗೆ ಚೆನ್ನಾಗಿ ಗೊತ್ತು. ಅವರಿಗೆ ಅಭಿನಂದನಾ ಸಂದೇಶ ಕಳುಹಿಸಿದ್ದೇನೆ. ನಾಲ್ಕು ಜನ ಮಹಿಳೆಯರನ್ನು ಮಾತ್ರ ಮಂತ್ರಿಗಳಾಗಿ ತೆಗೆದುಕೊಳ್ಳಲಾಗಿದೆ.

**ಮಾರ್ಚ ೨೧, ೧೯೯೮ — ಚಿತ್ರದುರ್ಗ**

ಲೋಕಸಭೆಯ ಅಧ್ಯಕ್ಷರ ಚುನಾವಣೆಗೆ ಅಂತಿಮವಾಗಿ ಒತ್ತಡಗಳಾಗುತ್ತವೆ. ಕಳೆದ ಸಲ ಸಭಾಧ್ಯಕ್ಷರಾಗಿದ್ದ ಶ್ರೀ ಸಂಗ್ಮಾ ಪುನಃ ಸಭಾಧ್ಯಕ್ಷ ಆಗುವುದು ಸಾಧ್ಯವಾಗುತ್ತಿಲ್ಲ ನಿಸ್ಸಂದೇಹವಾಗಿ ಆತನೇ ಅತ್ಯುತ್ತಮ ವ್ಯಕ್ತಿ. ಅವರು ಯಾವುದೇ ವ್ಯಕ್ತಿ ಅಥವಾ ಪಕ್ಷವನ್ನು ಆತ ಸಂಪರ್ಕಿಸುವಂತಿರಬೇಕು. ಒಂದು ಸಲ ಸಭಾಧ್ಯಕ್ಷರನ್ನು ಆರಿಸಿದ ಮೇಲೆ ಅವರು ಒಂದು ಅವಧಿಗೆ ಮುಂದುವರಿಯಬೇಕು. ಅವರ ವಿರುದ್ಧ ಬೇರೆ ಅಭ್ಯರ್ಥಿಯನ್ನು ನಿಲ್ಲಿಸಬಾರದು ಎಂಬ ಸಂಪ್ರದಾಯವಿದ್ದರೆ ಒಳ್ಳೆಯದು.

**ಮಾರ್ಚ ೨೮, ೧೯೯೮ — ಚಿತ್ರದುರ್ಗ**

ಬಿಜೆಪಿ ವಿಶ್ವಾಸಮತವನ್ನು ಗೆದ್ದಿದೆ. ಬಿಜೆಪಿ ಸರ್ಕಾರವು ಸ್ವಲ್ಪ ಕಾಲದವರೆಗಾದರೂ ಆಳುತ್ತದೆ. ಆದ್ದರಿಂದ ವಾಜಪೇಯಿಯನ್ನು ಸ್ವಾಗತಿಸುತ್ತೇನೆ. ಹೊರಗಡೆಯಿಂದ ಆರ್‌ಎಸ್‌ಎಸ್ ಮುಂತಾದವರಿಂದ ನಿಯಂತ್ರಿಸಲ್ಪಡುವುದಿಲ್ಲವೆಂಬುದು ನನ್ನ ನಿರೀಕ್ಷೆ. ವಾಜಪೇಯಿ ಹಾಗೆ ಭರವಸೆ ನೀಡಿದ್ದಾರೆ. ಜಾಗರೂಕವಾಗಿ ಕಾಯ್ದು ನೋಡಬೇಕು. ಭಾರತೀಯ ವಿಚಾರ ಸಮಿತಿಯು ಸೂಕ್ತವಾದ ಹೇಳಿಕೆಯನ್ನು ನೀಡಬೇಕು.

**ಏಪ್ರಿಲ್ ೧೪, ೧೯೯೮ — ದೆಹಲಿ-ಬೆಂಗಳೂರು**

ಒಪ್ಪಿದಂತೆ ನೆನ್ನೆ ಆರ್. ವೆಂಕಟರಾಮನ್ ಮತ್ತು ಪೈಲಟ್ ಒಂದು ಹೇಳಿಕೆಯನ್ನು ಬರೆದರು. ಅಶ್ರಫ್ ನನ್ನ ಅಂಗೀಕಾರವನ್ನು ಪಡೆದ ಮೇಲೆ ಸಾಕಷ್ಟು ಪ್ರತಿಗಳನ್ನು ಮಾಡಲಾಯಿತು. ೧೧ ಗಂಟೆಗೆ ಪತ್ರಿಕಾ ಸಮ್ಮೇಳನವಿತ್ತು. ವೆಂಕಟರಾಮನ್ ಮತ್ತು ಪೈಲಟ್ ಇಬ್ಬರೂ ಪತ್ರಿಕಾ ಸಮ್ಮೇಳನದಲ್ಲಿ ಹಾಜರಿದ್ದರು. ದೊಡ್ಡ ಸಂಖ್ಯೆಯಲ್ಲಿ

ಪತ್ರಿಕಾ ಪುರುಷರು ಮತ್ತು ಮಹಿಳೆಯರಿದ್ದರು. ನನಗೆ ಹುಷಾರಿಲ್ಲದ್ದರಿಂದ ಗಾಂಧೀ ಫೋರಂ ಬಗ್ಗೆ ಕೆಲವು ಪ್ರಾರಂಭಿಕ ವಿಷಯಗಳನ್ನು ಹೇಳಿ ಪಂಚಾಯಿತಿ ಮಟ್ಟದಿಂದ ಅದು ಬೆಳೆಯಬೇಕಾದ ಅಗತ್ಯವನ್ನು ಹೇಳಿದೆ. ವೆಂಕಟರಾಮನ್ ಅದನ್ನು ವಿಸ್ತರಿಸಿ ತಮ್ಮ ಹೇಳಿಕೆಯನ್ನು ಮನದಟ್ಟಾಗುವಂತೆ ಹೇಳಿದರು. ನಂತರ ಫೈಲಟ್. ಅನೇಕ ಪ್ರಶ್ನೆಗಳಿಗೆ ಉತ್ತರಿಸಲಾಯಿತು. ಪತ್ರಿಕಾ ಸದಸ್ಯರನ್ನು ನಾನು ಇಷ್ಟಪಟ್ಟೆ. ಅಲ್ಪ ಉಪಾಹಾರವೂ ಇತ್ತು.

**ಮೇ ೧೪, ೧೯೯೮** **ದೆಹಲಿ**

ಗಾಂಧಿ ಫೋರಂ ಸಭೆಯು ಸಂಜೆ ೫ ಗಂಟೆಗೆ ಸೇರುತ್ತದೆ. ೧೫-೨೦ ಸದಸ್ಯರು ಭಾಗವಹಿಸುತ್ತಾರೆ ಎಂದು ಹೇಳಲು ಅಶ್ರಫ್ ಬೆಳಿಗ್ಗೆ ಬಂದಿದ್ದರು. ಅದು ಸಮರ್ಪಕವಾದ ಸಾಯಂಕಾಲವಾಗಿತ್ತು. ಸದಸ್ಯರನ್ನು ನನ್ನ ಪಕ್ಕದಲ್ಲಿ ಕುಳಿತುಕೊಳ್ಳಲು ಮತ್ತು ಗಟ್ಟಿಯಾಗಿ ಮಾತಾಡಲು ಹೇಳಿದೆ. ಅವರು ಹಾಗೆ ಮಾಡಿದರು. ೧೪-೧೫ ಸದಸ್ಯರಲ್ಲಿ ಸುಮಾರು ೧೦ ಜನರು ನನ್ನ ಪ್ರಾರಂಭಿಕ ಭಾಷಣವಾದ ಮೇಲೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಅವರು ರಚನಾತ್ಮಕ ಸಲಹೆಗಳನ್ನು ಮಾಡಿದರು. ಒಬ್ಬ ಸದಸ್ಯರು ಅನೇಕ ಸಲಹೆಗಳ ವಿವರಗಳನ್ನು ಬರೆದುಕೊಂಡರು. ಸೋಮವಾರದ ಪತ್ರಿಕಾ ಸಮ್ಮೇಳನದಲ್ಲಿ ವ್ಯಾಪಕವಾದ ಠರಾವನ್ನು ಪ್ರಕಟಿಸಲಾಗುವುದೆಂದು ಒಪ್ಪಿಕೊಳ್ಳಲಾಯಿತು.

**ಮೇ ೨೦, ೧೯೯೮** **ದೆಹಲಿ**

ಮಲ್ಲಿಕಾರ್ಜುನಪ್ಪ ಗೌಡರಹಳ್ಳಿ ಯಣ್ಣೆಕೊಪ್ಪ ಅವರು ನಮ್ಮ ಜೊತೆಯಲ್ಲಿ ಜೈಲಿನಲ್ಲಿದ್ದರು. ಅವರು ಪ್ರಸಿದ್ಧ ಗಾಂಧೀವಾದಿ. ಶಿವಮೊಗ್ಗ ಜಿಲ್ಲೆಯಲ್ಲಿ ತುಂಬಾ ಗೌರವವುಳ್ಳವರಾಗಿದ್ದರು. ಅವರು ಗಾಂಧಿ (ವಿನೋಬಾ) ತತ್ವಗಳ ಪ್ರಕಾರ ಸಾವಿರಾರು ಎಕರೆ ತಮ್ಮ ಜಮೀನನ್ನು ಗೇಣಿದಾರರಿಗೆ ಮುಕ್ತವಾಗಿ ಹಂಚಿದರು.

**ಮೇ ೨೮, ೧೯೯೮** **ದೆಹಲಿ**

ಈ ದಿನ ಪೇಪರುಗಳಲ್ಲಿ ಪಾಕಿಸ್ತಾನ ಎರಡು ಅಣು ಸ್ಫೋಟಗಳನ್ನು ಮಾಡಿತ್ತೆಂದು ಪ್ರಕಟಿಸಿವೆ. ಇದು ಭಾರತದ ಪರೀಕ್ಷೆಗಳಿಗೆ ಪ್ರತೀಕಾರವಾಗಿದ್ದಿತು. ಅದು ಭಾರತದ ಸ್ಫೋಟಗಳಿಗೆ ಬೆಂಬಲ ಕೊಡುತ್ತದೆ. ಇಂದು ಮತ್ತು ನೆನ್ನೆ ಪಾರ್ಲಿಮೆಂಟಿನಲ್ಲಿ ಭಾರತದ ಜೋರಾದ ಅಣುಸ್ಫೋಟಕಗಳ ಬಗ್ಗೆ ಚರ್ಚೆ ನಡೆಯುತ್ತಿದೆ. ಸರ್ಕಾರವು ಗೊಂದಲದಲ್ಲಿದ್ದರೂ ಸರ್ಕಾರದ ಸದಸ್ಯರು ಮತ್ತು ಮಂತ್ರಿಗಳು ಅಷ್ಟೇ ಜೋರಾಗಿ ಬೆಂಬಲಿಸುತ್ತಿದ್ದಾರೆ. ರಕ್ಷಣಾ ಮಂತ್ರಿಯು ದೀರ್ಘವಾಗಿ ಗಟ್ಟಿಯಾಗಿ ಮಾತಾಡುತ್ತಿದ್ದಾರೆ. ಎರಡೂ ಸದನಗಳಲ್ಲಿ ಇನ್ನೂ ಮುಂದುವರಿಯುತ್ತಿದೆ.

**ಮೇ ೨೯, ೧೯೯೮** **ಚಿತ್ರದುರ್ಗ**

ಪಾಕಿಸ್ತಾನವು ಇಂದೂ ಸಹ ಆರನೆಯ ಅಣುಸ್ಫೋಟ, ಅಂದರೆ ಇನ್ನೊಂದನ್ನು ಮಾಡಿತು. ನಂತರ ಭಾರತ ಸರ್ಕಾರ. ಈ ಸ್ಪರ್ಧೆಯು ಎಲ್ಲಿಗೆ ಒಯ್ಯುತ್ತದೆ. ಪಾಕಿಸ್ತಾನದ ಈ ವರ್ತನೆಯನ್ನು ನಾವು ಕಾಯ್ದು ನೋಡಬೇಕು. ಯಾವುದೇ ಪರಿಸ್ಥಿತಿಯನ್ನು ಎದುರಿಸಲು ಸಿದ್ಧವಾಗಬೇಕು. ಈ ಆಯುಧವನ್ನು ಭಾರತವು ದುರುಪಯೋಗ ಮಾಡುವುದಿಲ್ಲ. ಪಾರ್ಲಿಮೆಂಟಿನ ಎರಡೂ ಸದನಗಳಲ್ಲಿ ಚರ್ಚೆ ನಡೆಯುತ್ತಿದೆ.

**ಮೇ ೩೧, ೧೯೯೮** **ಚಿತ್ರದುರ್ಗ**

ನಾಳೆ ಪಾರ್ಲಿಮೆಂಟಿನಲ್ಲಿ ಆಯವ್ಯಯವನ್ನು ಮಂಡಿಸಲಾಗುತ್ತದೆ. ಬಹಳ ಕುತೂಹಲದಿಂದ ಎಲ್ಲರೂ ಎದುರು ನೋಡುತ್ತಿದ್ದಾರೆ. ಪಾಕಿಸ್ತಾನವು ಒಂದೇ ಒಂದು ಬಾಂಬ್‌ಅನ್ನು ಸ್ಫೋಟಿಸಿದೆ, ಆರಲ್ಲ ಎಂದು ರೇಡಿಯೋದಲ್ಲಿ ಹೇಳಲಾಯಿತು. ಅವರು ಭಾರತದಷ್ಟೆ ಬಲ ಮತ್ತು ಶಸ್ತ್ರ ಸಜ್ಜಾಗಿದೆ ಎಂಬ ಭಾವನೆ ಸೃಷ್ಟಿಸಲು ಇಚ್ಛಿಸಿದ್ದಾರೆ. ನಮ್ಮ ರಾಯಭಾರಿ ಜೊತೆಯಲ್ಲಿ ಪಾಕಿಸ್ತಾನವು ಅಸಭ್ಯವಾಗಿ ವರ್ತಿಸಿದೆ. ಏನು ಬೇಕು? ಅವರು ಆಗಲೇ ಎರಡು ಯುದ್ಧಗಳ ರುಚಿ ನೋಡಿ ಸೋಲಿನ ರುಚಿ ನೋಡಿದ್ದಾರೆ. ಬೆಳವಣಿಗೆಗಳನ್ನು ನಾವು ಗಮನಿಸಬೇಕು.

**ಜೂನ್ ೧, ೧೯೯೮** **ಚಿತ್ರದುರ್ಗ**

ಕೇಂದ್ರ ಆಯವ್ಯಯವನ್ನು ಪ್ರಕಟಿಸಲಾಗಿದೆ. ಅದನ್ನು ಸಾಮಾನ್ಯವಾಗಿ ಒಪ್ಪಿಕೊಳ್ಳಬಹುದು. ಮಾತ್ರ ದೇಶದಲ್ಲಿ ಬಂಡವಾಳ ಹೂಡಲು ಎನ್‌ಆರ್‌ಐಗಳನ್ನು ಪ್ರೋತ್ಸಾಹಿಸಿರುವುದು ಒಳ್ಳೆಯದು. ಕೆಲವು ಪೋಸ್ಟು ದರಗಳಲ್ಲಿ ಹೆಚ್ಚಳವು ಅನಗತ್ಯವೆಂದು ಕಾಣುತ್ತದೆ.

**ಜೂನ್ ೫, ೧೯೯೮** **ಚಿತ್ರದುರ್ಗ**

ಭಾರತ ಮತ್ತು ಪಾಕಿಸ್ತಾನಗಳೆರಡರಲ್ಲಿ ಇತ್ತೀಚಿನ ಅಣುಸ್ಫೋಟಗಳು ವಿಶ್ವದಲ್ಲಿ ಆಸಕ್ತಿ ಹುಟ್ಟಿಸಲು ಮತ್ತು ಉದ್ವೇಗವುಂಟು ಮಾಡುವ ವಿಷಯ ಕಾಲಾನಂತರ ಶಮನಗೊಳ್ಳುತ್ತವೆಂದು ಭಾವಿಸುತ್ತೇನೆ. ಈ ಜ್ಞಾನವನ್ನು ಹೊಂದಿರುವ ಎಲ್ಲಾ ರಾಷ್ಟ್ರಗಳೂ ಬೇಗನೆ ಒಟ್ಟುಗೂಡಿ ಸಿಟಿಬಿಟಿಯಲ್ಲಿ ಅಗತ್ಯವಾದ ತಿದ್ದುಪಡಿಗಳನ್ನು ಮಾಡಬೇಕು. ಒಟ್ಟಿಗೆ ಸೇರಿ ಈ ವಿಪತ್ಕಾರಿ ಶಕ್ತಿಯ ದುರುಪಯೋಗವನ್ನು ತಡೆಯಬೇಕು. ಮಾನವ ವರ್ಗದ ಹಿತಾಸಕ್ತಿ ಕಾಯುವುದು ಇಂದಿನ ಅಗತ್ಯ ಮತ್ತು ಅನಿವಾರ್ಯ.

**ಜೂನ್ ೧೧, ೧೯೯೮** **ಚಿತ್ರದುರ್ಗ**

ಎಲ್ಸಿ ಒಬ್ಬ ನಿಷ್ಠಾವಂತ ಕ್ರಿಶ್ಚಿಯನ್, ನರಕ ಮತ್ತು ಸ್ವರ್ಗ, ಪ್ರಾರ್ಥನೆ, ಚರ್ಚು, ದೇವಸ್ಥಾನ, ಮಸೀದಿ ಮತ್ತು ಸಂಬಂಧಪಟ್ಟ ವಿಷಯಗಳ ಬಗ್ಗೆ ಸುಮಾರು ಒಂದು ಗಂಟೆ ನನ್ನೊಡನೆ ಚರ್ಚಿಸಿದರು. ವಿಶ್ವ, ದೇವರು, ಹುಟ್ಟುವ ಮುನ್ನ ಮತ್ತು ಸತ್ತ

ನಂತರ ಜೀವ, ನರಕ ಮತ್ತು ಸ್ವರ್ಗ ಇವೆಲ್ಲವನ್ನೂ ಅಲ್ಲಗಳೆದೆ. ಆಕೆ ಬುದ್ಧಿವಂತೆ. ಅರ್ಥ ಮಾಡಿಕೊಳ್ಳಬಲ್ಲಳು. ಮೊದಲಿನಂತೆ ಆಗಾಗ್ಗೆ ಬರೆಯುವುದಾಗಿ ಮಾತು ಕೊಟ್ಟೆ.

**ಜೂನ್ ೩೦, ೧೯೯೮ ಚಿತ್ರದುರ್ಗ**

ಈ ಬೆಳಿಗ್ಗೆ ದಲಾಯಿಲಾಮಾರ ನೂತನ ಪ್ರತಿನಿಧಿ ಒಬ್ಬ ಸಹಪಾಠಿಯೊಂದಿಗೆ ನನಗೆ ಫೋನು ಮಾಡಿದ. ಅವರು ನನ್ನನ್ನು ಜುಲೈ ೬ರಂದು ದಲಾಯಿ ಲಾಮಾರ ಜನ್ಮದಿನ ಸಮಾರಂಭಕ್ಕೆ ಆಹ್ವಾನಿಸಲು ಬಂದಿದ್ದರು. ಅವರು ಒಂದು ಬಿಳಿಯ ಸ್ಕಾರ್ಫ್ ಜೊತೆಯಲ್ಲಿ 2'x6' ಅಳತೆಯ ಬೆಲೆ ಬಾಳುವ. ಕಾರ್ಪೆಟ್‌ಅನ್ನು ಕೊಟ್ಟರು. ನಾವು ಟಿಬೆಟ್ಟಿನ ಸಮಸ್ಯೆಗಳನ್ನು ಚರ್ಚಿಸಿದೆವು. ಸಾಧ್ಯವಾದರೆ ಚೀನಾದ ಜೊತೆ ಒಪ್ಪಂದ ಮಾಡಿಕೊಂಡಾದರೂ ಸಾಧ್ಯವಾದಷ್ಟು ಬೇಗನೆ ಟಿಬೆಟ್ಟನ್ನರು ಸ್ವಾತಂತ್ರ್ಯ ಪಡೆಯಬೇಕೆಂದು ಆಶಿಸಿದೆ. ಎಲ್ಲರಿಗೂ ಸ್ವಾತಂತ್ರ್ಯವಿರಬೇಕೆಂದು ನಾನು ಒಂದು ಸಂದೇಶವನ್ನು ಕಳುಹಿಸುತ್ತೇನೆಂದು ಹೇಳಿದುದನ್ನು ಅವರು ಇಷ್ಟಪಟ್ಟರು.

**ಜುಲೈ ೭, ೧೯೯೮ ಚಿತ್ರದುರ್ಗ**

ಸಾಕಷ್ಟು ಪರಿಗಣಿಸಿದ ಮೇಲೆ ಹೆಚ್ಚುತ್ತಿರುವ ದುರ್ಬಲತೆ ಮತ್ತು ತಲೆ ತಿರುಗುತ್ತಿರುವುದರಿಂದ ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿ ನೀರಾವರಿ ಬಗ್ಗೆ ಸಭೆಯಲ್ಲಿ ಹಾಜರಿರುವುದಕ್ಕೆ ನಾಳೆ ಮಧ್ಯಾಹ್ನ ಬೆಂಗಳೂರಿಗೆ ಹೊರಡುವುದೆಂದು ನಿರ್ಧರಿಸಿದೆ. ನಾನು ಹೋಗಬೇಕೆಂದು ರಾಜಣ್ಣನೂ ಹೇಳುತ್ತಾನೆ. ನಾನು ಹೆಚ್ಚು ದಿವಸ ಬದುಕಲಾರೆ ಎಂದು ಹೇಳಿದಾಗ ಹಾಗೇನೂ ಕಾಣುವುದಿಲ್ಲ, ಅನೇಕ ದಿನ ನೀನು ಬದುಕುತ್ತೀಯಾ ಎಂದು ಹೇಳುತ್ತಾನೆ. ಬದುಕಲು ಎಷ್ಟು ಇಷ್ಟವೋ, ಸಾಯಲೂ ಅಷ್ಟೇ ಇಷ್ಟ. ನಾನು ಎಲ್ಲಿಂದ ಬಂದೆನೋ ಅಲ್ಲಿಗೇ ಹೋಗುತ್ತೇನೆ. ವಿಶ್ವದ ಒಂದು ಭಾಗವಾಗಿ ಪೂರ್ಣವಾಗಿ ಹೋಗುತ್ತೇನೆ, ನಾಳೆ ಬೆಂಗಳೂರಿಗೆ ಹೋಗುವುದಕ್ಕೆ ಬಟ್ಟೆಗಳನ್ನು ತೆಗೆದಿಟ್ಟೆ.

**ಜುಲೈ ೯, ೧೯೯೮ ಚಿತ್ರದುರ್ಗ**

ನಿರಂತರವಾಗಿ ನಾಲ್ಕನೆಯ ಸಲ ರಾಜ್ಯಸಭೆಯ ಉಪಸಭಾಪತಿಯಾಗಿ ಶ್ರೀಮತಿ ಹೆಪ್ತುಲ್ಲಾ ಚುನಾಯಿಸಲ್ಪಟ್ಟಿರುವುದು ಸಂತೋಷ. ಆಕೆ ಒಳ್ಳೆಯ ಹೆಂಗಸು ಮತ್ತು ಒಳ್ಳೆಯ ಉಪಸಭಾಪತಿ. ಎಲ್ಲರೂ ಆಕೆಯನ್ನು ಇಷ್ಟಪಡುತ್ತಾರೆ.

**ಆಗಸ್ಟ್ ೧, ೧೯೯೮ ಚಿತ್ರದುರ್ಗ**

ಬಹಳ ದುಃಖದ ಸಮಾಚಾರ, ಮಲ್ಲಾಡಿಹಳ್ಳಿ ರಾಘವೇಂದ್ರಸ್ವಾಮಿಯ ಉತ್ತರಾಧಿಕಾರಿ ಬೆಂಗಳೂರಿನಲ್ಲಿ ಕ್ಯಾನ್ಸರ್‌ನಿಂದ ತೀರಿಕೊಂಡರು. ಅವರ ಸಂಸ್ಥೆಯು ಔಷಧೀಯ ಸಸ್ಯಗಳಿಂದ ಕೂಡಿದ ಆಯುರ್ವೇದದ ವನ, ಔಷಧ, ಯೋಗ, ಶಿಕ್ಷಣ, ಆಸನಗಳು ಮುಂತಾದವುಗಳನ್ನು ಒಳಗೊಂಡಿವೆ. ವಿಶಿಷ್ಟವಾದ ಕಟ್ಟಡಗಳನ್ನು ಹೊಂದಿರುವ ಪ್ರಸಿದ್ಧ

ಸಂಸ್ಥೆ ಅದು. ಪ್ರಸಿದ್ಧ ಸ್ಥಾಪಕ ರಾಘವೇಂದ್ರಸ್ವಾಮಿಗಳಿಗೆ ಅವರು ಒಳ್ಳೆಯ ಉತ್ತರಾಧಿಕಾರಿ, ಕೋಟ್ಯಾಂತರ ರೂ. ಬೆಲೆ ಬಾಳುವ ಕಟ್ಟಡಗಳು ಮತ್ತು ನೆಡುತೋಪುಗಳು ಮುಂತಾದವುಗಳ ಟ್ರಸ್ಟ್‌ನ ಮಂಡಳಿಯಿದೆ. ಈ ಪ್ರಸಿದ್ಧ ಸಂಸ್ಥೆಗೆ ಏನಾಗುತ್ತದೆಂದು ನನಗೆ ತಿಳಿಯದು. ಸಂಜೆ ನಾಲ್ಕು ಗಂಟೆಗೆ ನನ್ನ ಹಳೆಯ ಶಿಷ್ಯ ಮಾಜಿ ರೈಲ್ವೆ ಮಂತ್ರಿ ಜಾಫರ್ ಷರೀಫ್ ನನ್ನ ಆರೋಗ್ಯ ವಿಚಾರಿಸಲು ಅವರ ಮೊದಲನೆ ಮಗ ಮತ್ತು ಇಬ್ಬರು ಸ್ನೇಹಿತರೊಂದಿಗೆ ಬಂದರು. ಅವರ ವಿರುದ್ಧ ಇರುವ ವಿಚಾರಣೆಗಳಿಂದ ಏನೂ ಆಗುವುದಿಲ್ಲ ಎಂದು ಹೇಳಿದರು. ಅವುಗಳನ್ನು ಸ್ವಾಗತಿಸುವುದಾಗಿ ಹೇಳಿದರು. ನನಗೆ ಅನೇಕ ಸಮಾರಂಭಗಳಲ್ಲಿ ಭಾಗವಹಿಸಲು ಅನೇಕ ಕೋರಿಕೆಗಳು ಬರುತ್ತಿವೆ. ಅವುಗಳೆಲ್ಲವನ್ನೂ ತಿರಸ್ಕರಿಸುತ್ತಿದ್ದೇನೆ. ನನಗೆ ಮನೆಯನ್ನು ಬಿಡಲಾಗುವುದಿಲ್ಲ. ತುಂಬಾ ಕಷ್ಟವಾಗುವುದರಿಂದ ಓಡಾಡಲಾಗುವುದಿಲ್ಲವೆಂದು ಎಲ್ಲರಿಗೂ ಹೇಳುತ್ತಿದ್ದೇನೆ.

**ಆಗಸ್ಟ್ ೧೮, ೧೯೯೮ ಚಿತ್ರದುರ್ಗ**

ಬೆಂಗಳೂರಿನಿಂದ ಒಂದು ಫೋನ್ ಕರೆ ಬಂದು ನಾಳೆ ಸಾಯಂಕಾಲ ಕೃಷ್ಣಮೂರ್ತಿ ಹಾಗೂ ಭಾರತೀಯ ವಿದ್ಯಾಭವನದ ಸೆಕ್ರೆಟರಿ ಜನರಲ್ ಎಸ್. ರಾಮಕೃಷ್ಣನ್ ಬೊಂಬಾಯಿಂದ ನನ್ನನ್ನು ನೋಡಲು ಬರುತ್ತೇವೆಂದರು. ನನಗೆ ಹುಷಾರಿಲ್ಲವೆಂಬುದು ತಿಳಿದು ಅವರು ಬರುತ್ತಿರಬಹುದು. ಸ್ವಾಗತ. ಅವರಿಬ್ಬರೂ ನನ್ನ ಒಳ್ಳೆಯ ಸ್ನೇಹಿತರು. ಅವರಿಬ್ಬರೂ ಬೆಂಗಳೂರಿನ ವಿದ್ಯಾಭವನದ ಶಾಖೆಯನ್ನು ಕಟ್ಟಿದ್ದಾರೆ. ಕೃಷ್ಣಮೂರ್ತಿ ಲಂಡನ್ ಶಾಖೆಯಿಂದ ಐದು ವರ್ಷಗಳ ಹಿಂದೆ ಬಂದಿದ್ದಾರೆ. ರಾಮಕೃಷ್ಣನ್ ಅರ್ಧ ಶತಮಾನದ ಹಿಂದೆ ಭವನದ ಸ್ಥಾಪಕ ದಿವಂಗತ ಕೆ.ಎಂ. ಮುನ್ಷಿ ಅಸ್ತಿಭಾರ ಹಾಕಿದಾಗಿನಿಂದ ಕೇಂದ್ರ ಕಚೇರಿಯನ್ನು ಕಟ್ಟಿದ್ದಾರೆ. ಅನೇಕ ಶಾಖೆಗಳು ಭಾರತ ಅಥವಾ ವಿದೇಶಗಳಲ್ಲಿರುವುದಕ್ಕೆ ಅವರೇ ಕಾರಣಕರ್ತರು. ಈ ಸಂಸ್ಥೆಯ ಬಲಕ್ಕೆ ಇವರೇ ಆಧಾರಸ್ತಂಭ.

**ಆಗಸ್ಟ್ ೧೯, ೧೯೯೮ ಚಿತ್ರದುರ್ಗ**

ನಿರೀಕ್ಷಿಸಿದಂತೆ ಭಾರತೀಯ ವಿದ್ಯಾಭವನದ ಶ್ರೀ ಎಸ್. ರಾಮಕೃಷ್ಣನ್ ಮತ್ತು ಶ್ರೀ ಮತ್ತೂರು ಕೃಷ್ಣಮೂರ್ತಿ ಈ ಸಂಜೆ ಬರಲಿಲ್ಲ.

**ಆಗಸ್ಟ್ ೨೧, ೧೯೯೮ ಚಿತ್ರದುರ್ಗ**

ಭಾರತೀಯ ವಿದ್ಯಾಭವನದ ಬೊಂಬಾಯಿಯ ಮುಖ್ಯ ಕಚೇರಿ ಮತ್ತು ಬೆಂಗಳೂರಿನ ಅದರ ಶಾಖೆಯಿಂದ ಮತ್ತೂರು ಕೃಷ್ಣಮೂರ್ತಿ ಮತ್ತು ಎಸ್. ರಾಮಕೃಷ್ಣನ್ ನಾಡಿದ್ದು ಬೆಳಿಗ್ಗೆ ಕೇವಲ ನನ್ನನ್ನು ನೋಡಲು ಚಿತ್ರದುರ್ಗಕ್ಕೆ ಬರುತ್ತಿದ್ದಾರೆ. ಇದು ಅವರಿಬ್ಬರದೂ ಸೌಜನ್ಯದ ಭೇಟಿಯೆಂದೆನಿಸುತ್ತದೆ. ನನ್ನ ಬಗ್ಗೆ ತುಂಬಾ ಗೌರವವಿದೆ. ಏಕೆಂದರೆ ಮತ್ತೂರರಿಗೆ

ಲಂಡನ್ನಿಗೆ ಹೋಗಿ ಅಲ್ಲಿರುವ ಶಾಖೆಯ ಪ್ರಭಾರ ವಹಿಸಲು ನಾನು ಸಹಾಯ ಮಾಡಿದ್ದೇನೆ. ಅವರು ಅದನ್ನು ದೊಡ್ಡದಾಗಿ ಬೆಳೆಸಿ ಬಹಳ ಪ್ರಸಿದ್ಧಗೊಳಿಸಿದ್ದಾರೆ ನಾನು ಮುಖ್ಯಮಂತ್ರಿಯಾಗಿದ್ದಾಗ ಭವನಕ್ಕೆ ಈಗಿರುವ ನಿವೇಶನವನ್ನು ಪುಕ್ಕಟೆಯಾಗಿ ಕೊಡಿಸಿದುದಕ್ಕಿರಬಹುದು.

**ಸೆಪ್ಟೆಂಬರ್ ೨, ೧೯೯೮ ಚಿತ್ರದುರ್ಗ**

ನಿರೀಕ್ಷಿಸಿದಂತೆ ಎಸ್. ರಾಮಕೃಷ್ಣನ್ ಮತ್ತು ಕೃಷ್ಣಮೂರ್ತಿಗೆ ಬದಲು ಪದ್ಮನಾಭನ್ ೧೨-೩೦ಕ್ಕೆ ಬಂದರು. ನಾನು ಅವರನ್ನು ಸ್ವಾಗತಿಸಿದೆ. ಒಳ್ಳೆಯ ಊಟ ಮಾಡಿದರು. ೧-೩೦ ರಿಂದ ೩ ಗಂಟೆವರೆಗೆ ಭಾರತೀಯ ವಿದ್ಯಾಭವನದ ವಿಷಯಗಳ ಬಗ್ಗೆ ಮತ್ತು ಜೀವನ, ಸಂಸ್ಕೃತಿ, ವೇದಾಂತವೂ ಸೇರಿದಂತೆ ಎಲ್ಲಾ ವಿಷಯಗಳ ಬಗ್ಗೆ ತುಂಬಾ ಮಾತಾಡಿದೆವು. ವಿಶ್ವದ ಎಲ್ಲಾ ವೇದಾಂತಗಳ ಏಕತೆಯನ್ನು ಕಂಡುಕೊಳ್ಳುವುದಕ್ಕೆ ಭವಾನ್ ಪತ್ರಿಕೆ ಪ್ರಯತ್ನಿಸಬಹುದೆಂದು ನಾನು ಹೇಳಿದೆ. ಹಿಂದೂ ವೇದಾಂತವು ಎಲ್ಲಕ್ಕೂ ಆಧಾರವಾಗಿದೆ ಎಂಬುದನ್ನೂ ಕಂಡುಹಿಡಿಯಲು ಪ್ರಯತ್ನಿಸಬೇಕೆಂದೆ. ನಮ್ಮ ಮಾತುಗಳನ್ನು ರೆಕಾರ್ಡ್ ಮಾಡಲಾಯಿತು. ಎಂದಿನಂತೆ ರಾಮಕೃಷ್ಣನ್ ಬಹಳ ಗೌರವದಿಂದ ಮಾತನಾಡಿದರು. ಅವರಿಂದ ಪ್ರಕಟವಾದ ನಾಲ್ಕು ಮುಖ್ಯ ಪುಸ್ತಕಗಳನ್ನು ನನಗೆ ಬಹುಮಾನವಾಗಿ ಕೊಟ್ಟರು. 'ನನಗೆ ಜೀವನ ಏನು ಕಲಿಸಿದೆ' ಎಂಬುದರ ಮೇಲೆ ನನ್ನಿಂದ ಒಂದು ಲೇಖನ ಬೇಕೆಂದರು. ಇದು ಒಳ್ಳೆ ಉಪಯುಕ್ತವಾದ ಮಾತು.

**ಸೆಪ್ಟೆಂಬರ್ ೧೭, ೧೯೯೮ ಚಿತ್ರದುರ್ಗ**

ಸಮ್ಮೇಳನಕ್ಕೆ ಒಂದು ಸಂದೇಶವನ್ನು ಕಳುಹಿಸಿ ಟಿಬೆಟ್‌ಗೆ ಸಹಾನುಭೂತಿಯನ್ನು ವ್ಯಕ್ತಪಡಿಸಿದೆ. ನಾನು ಯಾವಾಗಲೂ ಟಿಬೆಟನ್ನರ ಬಗ್ಗೆ ಸಂಪೂರ್ಣ ಸಹಾನುಭೂತಿ ಯುಳ್ಳವನಾಗಿದ್ದೇನೆ. ದಲಾಯಿ ಲಾಮಾ ನನ್ನ ಸ್ನೇಹಿತರು ಮುಖ್ಯಮಂತ್ರಿಯಾಗಿದ್ದಾಗ ಮೈಸೂರು ಜಿಲ್ಲೆ ಮತ್ತು ಉತ್ತರ ಕನ್ನಡ ಜಿಲ್ಲೆಯಲ್ಲಿ ಟಿಬೆಟನ್ನರಿಗೆ ಎರಡು ದೊಡ್ಡ ಪ್ರದೇಶ ಜಮೀನನ್ನು ಮಂಜೂರು ಮಾಡಲು ಸಹಾಯ ಮಾಡಿದ್ದೆ. ಹೆಚ್ಚಿನ ಸಂಖ್ಯೆಯ ಕುಟುಂಬಗಳು ಚೆನ್ನಾಗಿ ಜೀವನ ಮಾಡುತ್ತಿವೆ. ಸಫಲ ರೈತರಾಗಿ ಆರ್ಥಿಕವಾಗಿ ಚೆನ್ನಾಗಿರುವ ಜೀವನಗಳನ್ನು ಸಾಗಿಸುತ್ತಿದ್ದು ತಮ್ಮದೇ ದೇವಸ್ಥಾನಗಳು, ಅನುಕೂಲವಾದ ಮನೆಗಳು, ಸ್ಕೂಲುಗಳು ಮುಂತಾದವುಗಳನ್ನು ಅವರು ಕಟ್ಟಿದ್ದಾರೆ. ನಾನು ಅವರಿಗೆ ಸಹಾಯ ಮಾಡಿದೆನೆಂದು ನನಗೆ ತೃಪ್ತಿ. ಟಿಬೆಟ್ ಸ್ವತಂತ್ರವಾಗಬೇಕು ಮತ್ತು ಚೀನಾವು ಟಿಬೆಟ್ಟಿನಿಂದ ಹೊರಗೆ ಹೋಗಬೇಕೆಂಬುದೇ ನನ್ನ ಆಶಯ.

**ಸೆಪ್ಟೆಂಬರ್ ೨೩, ೧೯೯೮ ಚಿತ್ರದುರ್ಗ**

೨-೩ ದಿನಗಳಿಂದ ಬಿಹಾರ ಸರಕಾರದ ವಜಾದ ಸಮಾಚಾರದಿಂದ ಪತ್ರಿಕೆಗಳು ಮತ್ತು ರೇಡಿಯೋ ತುಂಬಿಹೋಗಿವೆ. ಬಿಜೆಪಿಯ ಕೇಂದ್ರ ಸಕರಕಾರವು ರಾಬ್ರಿದೇವಿ ಸರಕಾರದ ವಜಾಕ್ಕೆ ಶಿಫಾರಸು ಮಾಡಿರುವುದು ವ್ಯಾಪಕವಾದ ಅತೃಪ್ತಿಯನ್ನುಂಟು ಮಾಡಿದೆ. ಏಕೆಂದರೆ ರಾಬ್ರಿ ಸರಕಾರವು ರಾಜ್ಯವಿಧಾನಸಭೆಯಲ್ಲಿ ವಿಶ್ವಾಸ ಮತವನ್ನು ಪಡೆದಿದೆ. ಸಂವಿಧಾನದ ೩೬೭ನೇ ವಿಧಿಯ ಉಪಯೋಗವು ಬಹಳ ಬಹಳ ಅಪರೂಪವಾಗಿರಬೇಕೆಂದು ನಾನು ಭಾವಿಸುತ್ತೇನೆ. ಸ್ವಾಭಾವಿಕವಾಗಿ ಎಲ್ಲ ಕಡೆಯಲ್ಲಿ ಪ್ರತಿಭಟನೆಗಳಾದವು. ರಾಷ್ಟ್ರಪತಿಗಳು ಸಂವಿಧಾನ ಕಾನೂನು ತಜ್ಞರಲ್ಲಿ ಸಮಾಲೋಚಿಸುತ್ತಿದ್ದಾರೆ. ಸಮಸ್ಯೆಯನ್ನು ಬಹಳ ಜಾಗರೂಕವಾಗಿ ಅಧ್ಯಯನ ಮಾಡುತ್ತಿರುವಂತೆ ಕಾಣುತ್ತದೆ. ಅವರು ನಾಳೆ ನಿರ್ಧರಿಸಬಹುದು. ಸಾಧ್ಯತೆಗಳಿಂದ ತುಂಬಿಹೋಗಿರುವ ಐತಿಹಾಸಿಕ ತೀರ್ಮಾನವಿದಾಗುತ್ತದೆ.

**ಅಕ್ಟೋಬರ್ ೨೦, ೧೯೯೮ ಬೆಂಗಳೂರು**

೧೦ ಗಂಟೆಗೆ ಟಾಗೋರ್ ಸ್ಮಾರಕ ಸಭಾಂಗಣಕ್ಕೆ ಹೋಗಿ ನಿಡುಮಾಮಿಡಿ ಜಗದ್ಗುರು ಪೀಠ ವ್ಯವಸ್ಥೆಗೊಳಿಸಿದ ಸಮಾರಂಭಕ್ಕೆ ಹೋದೆ. ಅದರ ಹಿಂದಿನ ಸ್ವಾಮಿ ಬಹಳ ಪ್ರಸಿದ್ಧರಾದ ಜಚನಿ. ಅವರು ತಮ್ಮ ಅಸಾಧಾರಣ ಪಾಂಡಿತ್ಯಕ್ಕೆ ಹೆಸರಾಗಿದ್ದವರು. ಕನ್ನಡದಲ್ಲಿ ಅವರು ಎಲ್ಲಾ ಕೃತಿಗಳನ್ನು ಎಂದರೆ ಗದ್ಯ, ಪದ್ಯ, ಟೀಕೆ, ವಚನಗಳು ಮುಂತಾದವುಗಳನ್ನು ಬರೆದಿದ್ದಾರೆ. ಅವರ ೯೦ನೇ ಜನ್ಮದಿನವನ್ನು ಆಚರಿಸುವ ಸಮಾರಂಭದಲ್ಲಿ ಭಾಗವಹಿಸಿದೆ. ಅವರು ಎರಡು ವರ್ಷಗಳ ಹಿಂದೆ ವಿಧಿವಶರಾಗಿ ಅವರ ಸ್ಥಾನಕ್ಕೆ ಚಿತ್ರದುರ್ಗದ ಒಂದು ಹಳ್ಳಿಯವರಾದ ವೀರಭದ್ರ ಚನ್ನಮಲ್ಲಸ್ವಾಮಿ ಬಂದಿದ್ದಾರೆ. ಪ್ರಶಸ್ತಿಗಳು ಮತ್ತು ೧೫೦೦೦ ರೂ. ನಗದನ್ನು ನನಗೆ ಹಾಗೂ ಡಾ. ಹೆಚ್. ನರಸಿಂಹಯ್ಯನವರಿಗೆ ನೀಡಿದರು. ಬಹಳ ಚೆನ್ನಾಗಿ ಜನ ಸೇರಿದ್ದ ಸಭೆಯದು. ಸಭಾಂಗಣವು ತುಂಬಿತ್ತು. ಸುಮಾರಾಗಿ ೧೫೦೦ ಜನ. ನನ್ನ ಜೀವನ ಚರಿತ್ರೆಯ ಕರ್ತೃ ಡಾ. ಡಿ. ಜವರೇಗೌಡರು ಸಭೆಯನ್ನು ಉದ್ದೇಶಿಸಿ ಒಳ್ಳೆಯ ಭಾಷಣ ಮಾಡಿದರು. ಪ್ರಶಸ್ತಿಯನ್ನು ಸ್ವೀಕರಿಸಿದೆ ಮತ್ತು ಅದಕ್ಕೆ ಇನ್ನೂ ಹೆಚ್ಚಿನ ಹಣವನ್ನು ಸೇರಿಸಿ ಸ್ವಾಮಿಗೆ ಒಳ್ಳೆಯ ಉದ್ದೇಶಕ್ಕೆ ಬಳಸುತ್ತೇನೆಂದು ಹೇಳಿ ಬಂದುಬಿಟ್ಟೆ.

**ನವೆಂಬರ್ ೧೦, ೧೯೯೮ ಚಿತ್ರದುರ್ಗ**

ಮುಂದಿನ ತಿಂಗಳು ಇದೇ ದಿನ ನನ್ನ ೯೭ನೇ ಜನ್ಮದಿನವನ್ನು ಆಚರಿಸುತ್ತೇನೆ. ದೀರ್ಘವಾದ ಜೀವನ. ನನ್ನ ದೇಶಕ್ಕೆ ನಾನೇನಾದರೂ ಉಪಯೋಗಿಯಾಗಿದ್ದೇನೆಯೆ? ನನಗೆ ಗೊತ್ತಿಲ್ಲ. ಭವಿಷ್ಯ ಹೇಳಬೇಕು. ಇಷ್ಟೇ ನಾನು ಹೇಳಬಹುದು. ನನ್ನ ಕೈಲಾದಷ್ಟು ಮಾಡಿದ್ದೇನೆ.

ಇವತ್ತು ಸ್ವಲ್ಪ ಹೆಚ್ಚು ಕೆಲಸದ ದಿನ. ನೆನ್ನೆಯ ಫೋನಿನಂತೆ ತಮಿಳುನಾಡು, ಕರ್ನಾಟಕ ಮತ್ತು ಆಂಧ್ರಪ್ರದೇಶದಲ್ಲಿ ಪ್ರಸಿದ್ಧ ಸಾಮಾಜಿಕ ಕಾರ್ಯಕರ್ತೆಯಾಗಿರುವ ಶ್ರೀಮತಿ ಜಯಾ ಅರುಣಾಚಲಂ ಕಾರಿನಲ್ಲಿ ೧-೩೦ಕ್ಕೆ ಬಂದು ನಮ್ಮ ಜೊತೆಯಲ್ಲಿ ಊಟ ಮಾಡಿ ಬಳ್ಳಾರಿಗೆ ೩ ಗಂಟೆಗೆ ಹೊರಟರು. ಅವರನ್ನು ಸರ್ದಾರ್ ವಲ್ಲಭಭಾಯಿ ಟ್ರಸ್ಟಿಗೆ ಸದಸ್ಯರನ್ನಾಗಿ ತೆಗೆದುಕೊಳ್ಳಲು ನಾನು ಜವಾಬ್ದಾರನಾಗಿದ್ದೆ. ನಾವು ಅನೇಕ ಸಮಸ್ಯೆಗಳನ್ನು ಚರ್ಚಿಸಿದೆವು. ವಿಶೇಷವಾಗಿ ಮೀನುಗಾರ ಹೆಂಗಸರೂ ಸೇರಿದಂತೆ ಬಡಮಹಿಳೆಯರ ಸಮಸ್ಯೆಗಳು ಅಲ್ಲದೆ ಟ್ರಸ್ಟ್ ವಿಷಯವೂ ಸೇರಿದಂತೆ ಆಕೆಗೆ ಆಸಕ್ತಿ ಇರುವ ಇತರ ವಿಷಯಗಳ ಬಗ್ಗೆ ಚರ್ಚಿಸಿದೆವು. ಆದರ್ಶ ಮತ್ತು ನಂಬಿಕೆ ಇರುವ ಸಮರ್ಥ ವ್ಯವಸ್ಥಾಪಕಿ ಆಕೆ. ಆದ್ದರಿಂದ ಅವರು ಸಫಲರಾಗಿದ್ದಾರೆ. ಕೆಲವು ಬಹುಮಾನಗಳನ್ನು ವಿನಿಮಯ ಮಾಡಿಕೊಂಡೆವು.

**ನವೆಂಬರ್ ೨೨, ೧೯೯೮ ಬೆಂಗಳೂರು**

ಈ ಸಾಯಂಕಾಲ ೪೩ನೇ ಕನ್ನಡ ರಾಜ್ಯೋತ್ಸವ ದಿನವನ್ನು ಬೆಂಗಳೂರು ಕನ್ನಡ ಬಳಗದವರು ಅಶೋಕ ಹೋಟೆಲಿನಲ್ಲಿ ಸಂಜೆ ೬-೩೦ಕ್ಕೆ ಆಚರಿಸಿದರು. ಆಗ ನಾನು, ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷ ಜಿ.ಎಸ್. ಸಿದ್ದಲಿಂಗಯ್ಯ, ಇನ್ನಿಬ್ಬರೂ ಸೇರಿ ೪ ಜನರಿಗೆ ಪ್ರಶಸ್ತಿ ಪತ್ರ, ಶಾಲುಗಳು ಮತ್ತು ಜ್ಞಾಪನಗಳನ್ನು ನೀಡಿದರು. ಭಾಷಣದಲ್ಲೇ ಮಾಜಿ ಮುಖ್ಯ ನ್ಯಾಯಾಧೀಶರ ಭಾಷಣವಾದ ಮೇಲೆ ಅಧ್ಯಕ್ಷನೂ ಆಗಿದ್ದ ನಾನು ಪ್ರತ್ಯೇಕ ಉತ್ತರ ಕರ್ನಾಟಕ, ಹೈದರಾಬಾದ್ ಕರ್ನಾಟಕ, ಕೊಡಗು ಬೇಕೆಂಬ ಜನರ ವಿರುದ್ಧ ದೀರ್ಘವಾಗಿ ಭಾವನಾತ್ಮಕವಾಗಿ ಮಾತಾಡಿದೆ. ಅವರಿಗೆ ಬಲವಾಗಿ ಭಾಷಣದಲ್ಲೇ ಹೊಡೆದೆ. ಜಾತಿ ಮತ್ತು ಕೋಮುವಾದದ ವಿರುದ್ಧ, ಬಡತನದ ವಿರುದ್ಧ ರಾಜ್ಯ ನೀತಿಯ ನಿರ್ದೇಶಕ ತತ್ವಗಳ ನಿರ್ಲಕ್ಷ್ಯದ ವಿರುದ್ಧ ಅದೇ ರೀತಿಯಲ್ಲಿ ಭಾಷಣ ಮಾಡಿದೆ. ಶ್ರೋತೃಗಳು ಗಮನದಿಂದ ಕೇಳಿದರು. ಅಗತ್ಯವಿಲ್ಲದಿದ್ದರೂ ಇದು ನನ್ನ ಭಾವನಾತ್ಮಕ ಭಾಷಣಗಳಲ್ಲಿ ಒಂದು.

**ನವೆಂಬರ್ ೨೬, ೧೯೯೮ ಬೆಂಗಳೂರು**

ಎರಡು ರೈಲುಗಳು ಡಿಕ್ಕಿ ಹೊಡೆದು ಅತಿ ಭಯಾನಕ ರೈಲ್ವೆ ಅಪಘಾತವಾಯಿತು. ಸಾಯಂಕಾಲದ ಹೊತ್ತಿಗೆ ಹೊರತೆಗೆದ ಶವಗಳ ಸಂಖ್ಯೆ ೧೧೦ಕ್ಕೂ ಜಾಸ್ತಿ ; ಗಾಯಗೊಂಡವರು ೧೨೦ಕ್ಕೂ ಜಾಸ್ತಿ ಎಂದು ತಿಳಿದುಬಂತು. ಇದು ಪಂಜಾಬಿನಲ್ಲಿ ಆಯಿತು. ಮಧ್ಯಪ್ರದೇಶ, ರಾಜಾಸ್ತಾನ, ದೆಹಲಿ ಮತ್ತು ಮಿಜೋರಾಂಗಳಲ್ಲಿ ನಾಲ್ಕು ಅಸೆಂಬ್ಲಿಗಳ ಚುನಾವಣಾ ಫಲಿತಾಂಶಗಳಲ್ಲಿ ಕಾಂಗ್ರೆಸ್ ಗೆದ್ದಿದ್ದು, ಅದು ಬಹುಮತದಿಂದಿದ್ದು ಆಳುತ್ತಿದ್ದ ಇತರ ರಾಜ್ಯಗಳಲ್ಲಿ ಅದು ಕೆಟ್ಟದಾಗಿ ಸೋತಿದೆ. ಕೇಂದ್ರ

ಸರ್ಕಾರದಿಂದ ಬಿಜೆಪಿ ರಾಜೀನಾಮೆ ಕೊಡಬೇಕೆಂಬ ಒತ್ತಾಯವಿದೆ. ಆದರೆ ಬಿಜೆಪಿಗೆ ಆ ತರಹ ಭಾವನೆ ಇಲ್ಲ, ಏಕೆಂದರೆ ಅವರು ತಾಂತ್ರಿಕವಾಗಿ ಮುಂದುವರಿಯಬಹುದು.

**ಡಿಸೆಂಬರ್ ೫, ೧೯೯೮** **ಚಿತ್ರದುರ್ಗ**

ಬಾಬಾಬುಡನ್‌ಗಿರಿ ದತ್ತಾತ್ರೇಯ ಸಮಾರಂಭವು ಹಿಂದೂಗಳು ಮತ್ತು ಮುಸ್ಲಿಮರ ನಡುವೆ ಯಾವುದೇ ಘರ್ಷಣೆಯಿಲ್ಲದೆ ಶಾಂತಿಯುತವಾಗಿ ನಡೆದಿದೆ. ಭಜರಂಗ ದಳದ ಅನುಯಾಯಿಗಳು ಹಿಂದೂತ್ವ ಜನರೊಂದಿಗೆ ಸೇರಿ ತೊಂದರೆಯನ್ನುಂಟು ಮಾಡಲು ಪ್ರಯತ್ನಿಸಿದರೆಂಬುದು ದುರದೃಷ್ಟ. ಹಿಂದೂ ಮುಸ್ಲಿಂ ಏಕತೆಗೆ ಮತ್ತು ತಿಳುವಳಿಕೆಗೆ ನೂರಾರು ವರ್ಷಗಳಿಂದ ಅತ್ಯುತ್ತಮ ಉದಾಹರಣೆಯಾಗಿರುವ ಸಂಸ್ಥೆಯ ವಿಷಯದಲ್ಲಿ ಹಸ್ತಕ್ಷೇಪ ಮಾಡುವ ಅವರು ಶಿಕ್ಷಾರ್ಹರು. ನಾಳೆ ಬಾಬ್ರಿ ಮಸೀದಿ ನಾಶದ ದಿನದ ೬ನೆಯ ವರ್ಷ. ಬಿಜೆಪಿ ತನ್ನ ಹಿತಕ್ಕಾಗಿಯೇ ಇಂತಹ ಘಟನೆಗಳನ್ನು ತಪ್ಪಿಸಬೇಕು.

**ಜನವರಿ ೨, ೧೯೯೯** **ಬೆಂಗಳೂರು**

ವಾಸ್ತವವಾಗಿ ಶಾಂತವಾದ ಬೆಳಿಗ್ಗೆ ಅರುಣ ಮತ್ತು ಅವನ ಹೆಂಡತಿ ಪ್ರಭಾ ಊಟದ ಸಮಯಕ್ಕೆ ಬಂದರು. ನಾನು ಇಷ್ಟಪಡುತ್ತಿದ್ದ ಕೆಲವು ಸಿಹಿ ವಸ್ತುಗಳನ್ನು ಊಟಕ್ಕೆ ತಂದರು. ಬೆಳಿಗ್ಗೆ ಆಹಾರ ತೆಗೆದುಕೊಂಡ ಮೇಲೆ ನನ್ನನ್ನು ಹೆಚ್ಚಾಗಿ ಪ್ರಶಂಸಿಸುವ ಮತ್ತು ನನ್ನ ಹೆಸರಿನಲ್ಲಿರುವ ಟ್ರಸ್ಟಿನ ಕಾರ್ಯದರ್ಶಿಯೂ ಆಗಿರುವ ಚಂದ್ರಶೇಖರ್, ಕರ್ನಾಟಕ ವಿಶ್ವವಿದ್ಯಾಲಯದ ಪ್ರೊ. ರಾಘವೇಂದ್ರರಾವ್ ಅವರು ಇಂಗ್ಲಿಷಿನಲ್ಲಿ ಬರೆದಿರುವ ಜೀವನ ಚರಿತ್ರೆಯಲ್ಲಿ ಸೇರಿಸಬೇಕಾದ ಕೆಲವು ಫೋಟೋಗಳನ್ನು ತೋರಿಸಿದರು. ನನ್ನ ಆತ್ಮಚರಿತ್ರೆಯನ್ನು ದೆಹಲಿಗೆ ಕಳುಹಿಸಬೇಕಾಗಿರುವುದನ್ನೂ ಮತ್ತು ನನ್ನ ಜೀವನ ಮತ್ತು ಮುಖ್ಯಮಂತ್ರಿಯಾಗಿ ನನ್ನ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಇನ್ನೂ ಅನೇಕ ವಿಷಯಗಳನ್ನು ಅವರು ಚರ್ಚಿಸಿದರು. ಅವರು ಬುದ್ಧಿವಂತರು ಮತ್ತು ಚೆನ್ನಾಗಿ ತಿಳಿದುಕೊಂಡಿರುವ ವ್ಯಕ್ತಿ ಮತ್ತು ನನ್ನ ಅಭಿಮಾನಿ.

**ಜನವರಿ ೩, ೧೯೯೯** **ದೆಹಲಿ**

ವಿಶ್ರಾಂತಿಯ ನಂತರ ಪ್ರಧಾನಿಯು ೫-೪೦ಕ್ಕೆ ಬರುತ್ತೇನೆಂದು ಹೇಳಿಕಳುಹಿಸಿದರು. ಆದರೆ ವಾಸ್ತವವಾಗಿ ೬-೩೦ಕ್ಕೆ ಕರ್ನಾಟಕ ಬಿಜೆಪಿ ಅಧ್ಯಕ್ಷ ಶ್ರೀ ಯಡಿಯೂರಪ್ಪನವರ ಜೊತೆಯಲ್ಲಿ ಬಂದರು. ಅವರಿಗೆ ಹಣ್ಣುಗಳು, ತಿಂಡಿಗಳು ಮತ್ತು ಟೀಯನ್ನು ಕೊಟ್ಟು ಪ್ರಾರಂಭಿಕಗಳಾದ ಮೇಲೆ ನಾನು ಅವರಿಗೆ ಅಭಿನಂದನೆಗಳನ್ನು ಹೇಳಿದೆ. ನನಗೆ ಆಸಕ್ತಿ ಇದ್ದ ಮೂರು ವಿಷಯಗಳನ್ನು ಹೇಳಿದೆ. ೧. ಮಹಾಜನ ಆಯೋಗ ನೀಡಿರುವ ವರದಿಯಂತೆ ಕನ್ನಡ ಮಾತನಾಡುವ ಕಾಸರಗೋಡು ತಾಲ್ಲೂಕನ್ನು ಕೇರಳದಿಂದ ಕರ್ನಾಟಕಕ್ಕೆ ವರ್ಗಾಯಿಸುವುದಕ್ಕೆ ಸಾಧ್ಯವಾದುದೆಲ್ಲವನ್ನು ಮಾಡುವುದು. ೨. ಸರ್ದಾರ್

ವಲ್ಲಭಭಾಯಿ ಪಟೇಲ್ ಸ್ಮಾರಕ ಟ್ರಸ್ಟ್ ಕಟ್ಟಡ ೭, ಜಂತರ್ ಮಂತರ್ ರಸ್ತೆ, ನವದೆಹಲಿಯಲ್ಲಿರುವ ಆಸ್ತಿಯನ್ನು ಎಐಸಿಸಿಯಿಂದ ಟ್ರಸ್ಟಿಗೆ ವರ್ಗಾಯಿಸುವುದು, ಇದು ೨೦ ವರ್ಷಗಳಿಂದ ಹಾಗೆಯೇ ಇದ್ದು ಈಗ ಗೃಹಸಚಿವಾಲಯದ ಮುಂದಿದೆ. ೩. ದೆಹಲಿಯಲ್ಲಿ ಸರ್ದಾರ್ ಪಟೇಲರ ಜ್ಞಾಪಕಾರ್ಥವಾಗಿ ಬೃಹತ್ ಆಸೆಗಳನ್ನು ಹೊಂದಿ ದುಡಿಯುತ್ತಿರುವ ಸರ್ದಾರ್ ಪಟೇಲ್ ಸೊಸೈಟಿಗೆ ಔರಂಗಜೇಬ್ ರಸ್ತೆಯಲ್ಲಿರುವ ಸರ್ದಾರ್ ಪಟೇಲ್ ವಾಸಿಸುತ್ತಿದ್ದ ಕಟ್ಟಡ ಇಲ್ಲವೆ ಸರ್ದಾರ್ ಪಟೇಲರಿಗೆ ಬಹುಮಾನವಾಗಿ ನೀಡಲಾಗಿದ್ದ ಯಾವುದಾದರೊಂದು ಕಟ್ಟಡವನ್ನು ನೀಡುವುದು. ಶಾಂತಚಿತ್ತದಿಂದ ನನ್ನ ಮಾತನ್ನು ಅವರು ಆಲಿಸಿದರು ಈ ಬಗ್ಗೆ ತಾವು ಸಹಾನುಭೂತಿಯಿಂದಿರುವುದಾಗಿ ಭರವಸೆಯಿತ್ತರು. ನನಗೆ ತೃಪ್ತಿಯಾಯಿತು. ಕಾಸರಗೋಡು ಜನರ ಪತ್ರವ್ಯವಹಾರದ ಪ್ರತಿಗಳನ್ನು ಅವರಿಗೆ ಕೊಟ್ಟೆ. ನಾಳೆ ಮಧ್ಯಾಹ್ನ ೨ ಗಂಟೆಗೆ ಬೆಂಗಳೂರಿಗೆ ಹೊರಡಲು ನಿಶ್ಚಯಿಸಿದೆ.

**ಜನವರಿ ೫, ೧೯೯೯** **ಚಿತ್ರದುರ್ಗ**

ಸಂಜೆ ೫ ಗಂಟೆ ಹೊತ್ತಿಗೆ ಕರ್ನಾಟಕ ಸರ್ಕಾರದ ನಿವೃತ್ತ ಮುಖ್ಯ ಕಾರ್ಯದರ್ಶಿ, ನನ್ನ ಅಳಿಯ ಬಿ.ಎಸ್. ಮುದ್ದಪ್ಪ ಬೀದರ್ ಜಿಲ್ಲೆಯಲ್ಲಿ ಬಸವ ಕಲ್ಯಾಣದ ಐತಿಹಾಸಿಕ ಕಟ್ಟಡಗಳ ಸಂರಕ್ಷಣೆಯ ಜವಾಬ್ದಾರಿಯನ್ನು ಹೊತ್ತಿದ್ದು ೧೨ನೇ ಶತಮಾನದಲ್ಲಿ ಬಸವೇಶ್ವರರ ಕಾಲದಲ್ಲಿ ಬಸವೇಶ್ವರರ ಜೊತೆ ಸಂಪರ್ಕದಿಂದ ಎಲ್ಲಾ ಶರಣರ ಸ್ಥಳಗಳನ್ನು ಸಂರಕ್ಷಿಸುವುದು. ಬಸವೇಶ್ವರರು ಎಲ್ಲಾ ಕಾಲಕ್ಕೂ ಅತಿ ಶ್ರೇಷ್ಠ ಸಮಾಜ ಸುಧಾರಕರಾಗಿದ್ದು ಮೊದಲನೆ ಸಲಕ್ಕೆ ಮಹಿಳೆಯರಿಗೆ ಸಮಾನತೆಯನ್ನು ಕೊಟ್ಟವರು ; ಅಸ್ಪೃಶ್ಯತೆಯನ್ನು ಮೊಟ್ಟಮೊದಲಿಗೆ ತೆಗೆದುಹಾಕಿದವರು ಮತ್ತು ಹರಿಜನ ಹುಡುಗನ ಜೊತೆ ಬ್ರಾಹ್ಮಣ ಹುಡುಗಿಯನ್ನು ಮದುವೆ ಮಾಡಿಸಿದ್ದಕ್ಕೆ ಅವರು ಕೊಲೆ ಮಾಡಲ್ಪಟ್ಟಿರಬಹುದು. ಅವರು ಜಾತಿ ವಿರುದ್ಧ ಮತ್ತು ಕಾಯಕವೇ ಕೈಲಾಸ ಎಂಬ ತತ್ವವನ್ನು ಅನುಷ್ಠಾನ ಮಾಡಲು ಹೋರಾಡಿದವರು. ಈ ವಿಷಯವನ್ನು ಹೆಚ್ಚಾಗಿ ತಿಳಿಯಲು ಮುದ್ದಪ್ಪನವರು ಇತರರ ಜೊತೆಯಲ್ಲಿ ಎಲ್ಲ ಕಡೆ ಓಡಾಡುತ್ತಿದ್ದಾರೆ. ನನ್ನ ಸಲಹೆಯನ್ನು ಕೇಳಿದರು. ನಾನು ಎಂದಿನಂತೆ ನನ್ನ ವಿಚಾರಗಳನ್ನು ಹೇಳಿದೆ.

**ಫೆಬ್ರವರಿ ೧೩, ೧೯೯೯** **ಚಿತ್ರದುರ್ಗ**

ಕರ್ನಾಟಕವು ಕ್ರಿಕೆಟ್ ಸ್ಪಿನ್ ಬೌಲರ್ ಅನಿಲ್ ಕುಂಬ್ಳೆ ಬಗ್ಗೆ ಹೆಮ್ಮೆಪಡುತ್ತಿದೆ. ಒಂದೇ ಒಂದು ಇನ್ನಿಂಗ್ಸ್‌ನಲ್ಲಿ ೧೦ ಪಾಕಿಸ್ತಾನಿ ಕ್ರಿಕೆಟ್ ಆಟಗಾರರನ್ನು ಬೌಲ್ ಮಾಡಿ ಪೆವಿಲಿಯನ್‌ಗೆ ಕಳುಹಿಸಿರುವುದು ಸಾಮಾನ್ಯ ವಿಚಾರವಲ್ಲ. ಬೆಂಗಳೂರಿನಲ್ಲಿ ಸ್ವಾಭಾವಿಕವಾಗಿ ಅನೇಕ ವಿಧಗಳಲ್ಲಿ ಮತ್ತು ಎಲ್ಲ ರೀತಿಯ ಬಹುಮಾನಗಳನ್ನು, ಅದರಲ್ಲಿ ೬ ಲಕ್ಷ ರೂ. ಬೆಲೆಯ ಒಂದು ಕಾರನ್ನು ಅವರಿಗೆ ನೀಡಿ ಗೌರವಿಸಲಾಯಿತು.

ಅದು ಒಳ್ಳೆಯದು. ಕುಂಬ್ಳೆ ಭಾರತಕ್ಕೆ ಅದರಲ್ಲಿಯೂ ವಿಶೇಷವಾಗಿ ಕರ್ನಾಟಕಕ್ಕೆ ಗೌರವ ತಂದಿದ್ದಾರೆ.

**ಮಾರ್ಚ್ ೧೯, ೧೯೯೯ ಚಿತ್ರದುರ್ಗ**

ಭಾರತದ ಕಾಂಗ್ರೆಸಿನ ನಾಯಕಿ ಶ್ರೀಮತಿ ಮೊಹ್‌ಸೀನಾ ಕಿದ್ವಾಯಿ ಮತ್ತು ಅದರ ಕಾರ್ಯಕಾರಿ ಸಮಿತಿ ಸದಸ್ಯರು ಸಂಜೆ ೪-೩೦ಕ್ಕೆ ಬಂದರು. ಅವರ ಜೊತೆಯಲ್ಲಿ ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಗಳ ಎಲ್ಲಾ ಲೋಕಸಭೆ ಮತ್ತು ರಾಜ್ಯಸಭೆಯ ಸದಸ್ಯರುಗಳು ಮತ್ತು ಚಿತ್ರದುರ್ಗದ ಹನುಮಂತಪ್ಪ ಸೇರಿದಂತೆ ಕೆಲವು ಮುಖ್ಯ ಸದಸ್ಯರು, ದಾವಣಗೆರೆಯ ನಾಗಮ್ಮ ಕೇಶವಮೂರ್ತಿ ಮತ್ತು ಇತರರು ಬಂದರು. ಅವರೆಲ್ಲರೂ ಬೆಂಗಳೂರಿನಿಂದ ಕಾರಿನಲ್ಲಿ ಬಂದರು. ಅವರೆಲ್ಲ ತಾವೇ ತಮ್ಮನ್ನು ಪರಿಚಯಿಸಿಕೊಂಡರು. ನನಗೆ ತುಂಬಾ ಗೌರವ ತೋರಿಸಿದರು. ಕೆಲವರು ನನ್ನ ಕಾಲು ಮುಟ್ಟಿ ನಮಸ್ಕರಿಸಿದರು. ಅವರ ಜೊತೆಯಲ್ಲಿ ವಿಶೇಷವಾಗಿ ಹಸೀನಾ ಜೊತೆಯಲ್ಲಿ ಆತ್ಮೀಯ ವಿನಿಮಯ ಮಾಡಿಕೊಂಡೆ. ಅವರ ಜೊತೆಯಲ್ಲಿ ಸೌಜನ್ಯತೆಯನ್ನು ವಿನಿಮಯ ಮಾಡಿಕೊಂಡೆ. ನನ್ನ ವಯಸ್ಸಿನ ಕಾರಣದಿಂದಾಗಿ ನಾಳೆ ದಾವಣಗೆರೆಗೆ ಬರುವುದು ಕಷ್ಟವಾಗುತ್ತದೆ ಎಂದು ನಾಗಮ್ಮನವರಿಗೆ ಹೇಳಿದೆ. ತಮ್ಮ ಆರೋಗ್ಯ ಮುಖ್ಯವಾದುದು ಮತ್ತು ಬರುವುದು ಬಿಡುವುದು ಮುಖ್ಯವಲ್ಲ ಎಂದು ಆಕೆ ಹೇಳಿದರು. ಅರ್ಧ ಗಂಟೆಯ ನಂತರ ಅವರು ನನ್ನಿಂದ ಬೀಳ್ಕೊಟ್ಟರು. ಆಕೆ ನಮ್ಮ ಮನೆಗೆ ಬಂದದ್ದು ನನಗೆ ಸಂತೋಷ. ಆಕೆಗೂ ನಮ್ಮ ಮನೆಗೆ ಬಂದು ನನ್ನನ್ನು ನೋಡಿದ್ದು ಸಂತೋಷವಾಗಿದೆಯೆನಿಸಿರಬೇಕು. ಒಟ್ಟಿನಲ್ಲಿ ಚೆನ್ನಾಗಿದ್ದ ಬೆಳಿಗ್ಗೆ.

**ಏಪ್ರಿಲ್ ೧೫, ೧೯೯೯ ಚಿತ್ರದುರ್ಗ**

ಪ್ರಧಾನಿ ವಾಜಪೇಯಿ ಮಂಡಿಸಿದ ವಿಶ್ವಾಸ ಮತವು ಲೋಕಸಭೆಯಲ್ಲಿ ನೆನ್ನೆಯಿಂದ ಚರ್ಚೆಯಾಗುತ್ತಿದೆ. ಚುನಾವಣೆಯನ್ನು ಒತ್ತಾಯಿಸುವುದಕ್ಕೆ ಹೆಚ್ಚಿನ ಪಕ್ಷಗಳು ಇಷ್ಟಪಡದಿರುವುದರಿಂದ ಅದು ಮಂಜೂರಾಗುತ್ತದೆಂದು ಕಾಣುತ್ತದೆ. ಮತಗಳನ್ನು ಲೆಕ್ಕಕ್ಕೆ ತೆಗೆದುಕೊಂಡಾಗ ನಾಳೆ ಫಲಿತಾಂಶ ಏನು ಎಂಬುದನ್ನು ನೋಡಬೇಕು. ವಾಜಪೇಯಿ ಸರಕಾರವು ಉಳಿಯುತ್ತದೆ ಎಂಬುದು ನನ್ನ ಭಾವನೆ. ಆದರೆ ವ್ಯತ್ಯಾಸವು ಹೆಚ್ಚಾಗಿರಲಾರದು.

**ಏಪ್ರಿಲ್ ೨೦, ೧೯೯೯ ಚಿತ್ರದುರ್ಗ**

ಲೋಕಸಭೆಯಲ್ಲಿ ವಾಜಪೇಯಿ ಸರಕಾರವು ಒಂದು ಮತದಿಂದ ಸೋತ ಕಾರಣದಿಂದ ಅವರು ರಾಜೀನಾಮೆ ನೀಡಿದರು. ಅವರನ್ನು ತತ್ಕಾಲಕ್ಕೆ ಮುಂದುವರಿಯುವಂತೆ ಹೇಳಲಾಯಿತು. ದೆಹಲಿಯು ರಾಜಕೀಯ ಸಾಹಸಗಳಿಂದ ಚುರುಕಾಗಿದೆ. ಶ್ರೀಮತಿ

ಸೋನಿಯಾ ಗಾಂಧಿ ನೇತೃತ್ವ ವಹಿಸಿದ್ದು ಆಕೆಯನ್ನು ತಿಳಿದವರು ಬಹಳ ಕಡಿಮೆಯಿದ್ದಾರೆ. ಆಕೆಗೆ ಕುಮಾರಿ ಜಯಲಲಿತ ಸಹಾಯ ಮಾಡುತ್ತಿದ್ದು ಅಷ್ಟೆ ಕೆಟ್ಟದಾಗಿ ನಡೆದು ಕೊಳ್ಳುತ್ತಿದ್ದಾರೆ. ಏನು ಬೇಕಾದರೂ ಆಗಬಹುದು. ಕೆಲವೇ ದಿನಗಳಲ್ಲಿ ಏನಾಗುವುದೆಂದು ಊಹಿವುದಕ್ಕೆ ಸಾಧ್ಯವಿಲ್ಲ. ವಾಜಪೇಯಿ ಸರಕಾರವು ಹಿಂದಕ್ಕೆ ಬರಬಹುದು ಅಥವಾ ಸೋನಿಯಾ ಗಾಂಧಿ ನೇತೃತ್ವದ ಕಾಂಗ್ರೆಸ್ ಬರಬಹುದು. ದೇವರಿಗೇ ಗೊತ್ತು ಏನಾಗುತ್ತದೆಂದು. ಈ ರೀತಿ ಪದೇ ಪದೇ ಚುನಾವಣೆ ಆಗುವುದು ಅಸಹ್ಯ ಹಾಗೂ ಅವಮಾನ.

ಏಪ್ರಿಲ್ ೨೬, ೧೯೯೯

ಕಳೆದ ೪-೫ ದಿನಗಳಿಂದ ತುಂಬಾ ರಾಜಕೀಯ ಚಟುವಟಿಕೆಗಳಾದ ನಂತರ ಲೋಕಸಭೆಯನ್ನು ವಿಸರ್ಜಿಸಲಾಯಿತು. ಹಾಗಾದದ್ದು ಒಳ್ಳೆಯದೇ. ಇದನ್ನು ಮೂರು ದಿನಗಳ ಹಿಂದೆಯೇ ನಾನು ಹೇಳಿದ್ದೆ. ಮೂರು ತಿಂಗಳೊಳಗೆ ಹೊಸ ಸರಕಾರವನ್ನು ಹೊಂದುವ ಸಮಸ್ಯೆಯನ್ನು ರಾಷ್ಟ್ರವು ಮಾತ್ರ ಎದುರಿಸಬೇಕು. ಯಾವ ಪಕ್ಷಕ್ಕೆ ಬಹುಮತ ಬರುತ್ತದೆಂಬುದರ ಬಗ್ಗೆ ಯಾರೂ ಖಚಿತವಾಗಿರಲಾಗುವುದಿಲ್ಲ. ಗಮನಿಸಲು ಚೆನ್ನಾಗಿರುತ್ತದೆ. ಯಾವ ಪಕ್ಷ ಗೆಲ್ಲುತ್ತದೆಂದು ಹೇಳಲಾಗುವುದಿಲ್ಲ, ಯಾವ ಪಕ್ಷವೂ ದೇಶವನ್ನು ಆಳಲು ಅರ್ಹವಲ್ಲ ಎಂಬುದು ನನ್ನ ಭಾವನೆ. ಅತಿ ಉತ್ತಮ ವ್ಯಕ್ತಿಗಳನ್ನು ಆರಿಸಿ ಒಳ್ಳೆಯ ಸರಕಾರವನ್ನು ಜನ ರಚಿಸಬಹುದು. ಇದು ಕಾರ್ಯ ಸಾಧ್ಯವಲ್ಲದಿದ್ದರೂ ಈ ಪ್ರಯೋಗವನ್ನು ಪ್ರಯತ್ನಿಸಬೇಕು. ಕಾಯ್ದು ನೋಡೋಣ.

ಏಪ್ರಿಲ್ ೨೭, ೧೯೯೯ ಚಿತ್ರದುರ್ಗ

ಈಗ ಲೋಕಸಭೆಗೆ ಹೊಸ ಚುನಾವಣೆಗಳು ಆಗಬೇಕಾಗಿರುವುದರಿಂದ ರಾಜಕೀಯ ಪಕ್ಷಗಳು ಇತರ ಪಕ್ಷಗಳೊಂದಿಗೆ ಹೊಂದಾಣಿಕೆಗೆ ಬರಲು ಪ್ರಯತ್ನಿಸುತ್ತಿವೆ. ಹೇಗೆ ಹೊಂದಾಣಿಕೆ ಮಾಡಿಕೊಳ್ಳಲಾಗುತ್ತದೆ ಎಂದು ಹೇಳಲಾಗುವುದಿಲ್ಲ. ಕುಮಾರಿ ಜಯಲಲಿತಾ, ಡಾ. ಸುಬ್ರಹ್ಮಣ್ಯನ್ ಸ್ವಾಮಿ ಮುಂತಾದವರ ಜೊತೆಯಲ್ಲಿ ಹೊಂದಾಣಿಕೆ ಮಾಡಿಕೊಳ್ಳುವುದು ಹೇಗೆ ?

ಏಪ್ರಿಲ್ ೩೦, ೧೯೯೯ ಚಿತ್ರದುರ್ಗ

ಚಿತ್ರದುರ್ಗ ನಗರಕ್ಕೆ ವಾಣಿವಿಲಾಸ ಸಾಗರದಿಂದ ನೀರು ಸರಬರಾಜು ಯೋಜನೆಯನ್ನು ಮಂಜೂರು ಮಾಡಲಾಗಿದೆ. ಕಿರಣ್ ಶೇರ್ವಾಲ್‌ರ ನೇಮಕಾತಿಯು ಮುಂದುವರಿಯ ಬಹುದು ಎಂಬ ಒಳ್ಳೆಯ ಸಮಾಚಾರವು ಫೋನಿನ ಮೂಲಕ ಬಿದ್ರಿಯಿಂದ ತಿಳಿಯಿತು. ಸರ್ದಾರ್ ಸೊಸೈಟಿಗೆ ಮಂಜೂರಾಗಿದ್ದ ಮೂರು ಲಕ್ಷ ರೂ.ಗಳನ್ನು ಕಳುಹಿಸಲಾಗಿದೆ.

**ಮೇ ೨೦, ೧೯೯೯** **ಚಿತ್ರದುರ್ಗ**

ಸಣ್ಣ ನೀರಾವರಿ ಖಾತೆಯ ಹೊಣೆಗಾರಿಕೆಯಲ್ಲಿರುವ ರಾಜ್ಯಮಂತ್ರಿ ಶ್ರೀ ತಿಪ್ಪೇಸ್ವಾಮಿಯವರು ಚಿತ್ರದುರ್ಗ ಜಿಲ್ಲೆಗೆ ನೀರಾವರಿ ಯೋಜನೆ ಮತ್ತು ಚಿತ್ರದುರ್ಗ ನಗರಕ್ಕೆ ಕುಡಿಯುವ ನೀರಿನ ಯೋಜನೆಗಳೆರಡನ್ನೂ ಮಂಜೂರು ಮಾಡಲಾಗಿದೆ ಎಂದು ತಿಳಿಸಿದರು. 'ತುಂಗಾ ತಿರುವು' ನೀರಾವರಿಗೆ ಅಸ್ತಿಭಾರವನ್ನು ಮುಖ್ಯಮಂತ್ರಿಗಳು ೨೭ರಂದು ಹಾಕಲಿದ್ದಾರೆ. ನಾನು ಅದರಲ್ಲಿ ಭಾಗವಹಿಸಬೇಕು. ಒಪ್ಪಿಕೊಂಡರೆ ಅದಕ್ಕೆ ವ್ಯವಸ್ಥೆ ಮಾಡಲಾಗುವುದು ಎಂದು ತಿಳಿಸಿದರು. ನನಗೆ ಆಗುವುದಿಲ್ಲ ಎಂದು ಹೇಳಿದೆ. ನೀರಾವರಿಯನ್ನು ಚಿತ್ರದುರ್ಗ, ಹಿರಿಯೂರು, ಚಳ್ಳಕೆರೆ, ಹೊಸದುರ್ಗಗಳಲ್ಲಿ ೨ ೧/೨ ಲಕ್ಷ ಎಕರೆಗಳಿಗೆ ಒದಗಿಸಲಾಗುತ್ತದೆ. ವಾಣಿಸಾಗರದಿಂದಲ್ಲದೆ ಶಾಂತಿಸಾಗರದಿಂದ ಕೆಲವು ಪಟ್ಟಣಗಳಿಗೆ ಸರಬರಾಜನ್ನು ಮಾಡುವುದಕ್ಕೆ ಹೆಚ್ಚು ವೆಚ್ಚವಾದರೂ ಮಂಜೂರಾತಿ ನೀಡಲಾಗುತ್ತಿದೆ. ನನಗೆ ಸಂತೋಷ. ಸರಕಾರಕ್ಕೆ ವಂದಿಸಿ ಕೆಲಸವನ್ನು ಬೇಗನೆ ಪ್ರಾರಂಭಿಸಿ ಬೇಗನೆ ಮುಗಿಸಬೇಕೆದು ಹೇಳಿದೆ. ಅವರಿಗೆ ವಂದಿಸಿ, ಎರಡೂ ಯೋಜನೆಗಳಿಗಾಗಿ ನನ್ನ ವೈಯಕ್ತಿಕ ಕೃತಜ್ಞತೆಗಳನ್ನು ಹೇಳಿದೆ. ನನಗೆ ತುಂಬಾ ಸಂತೋಷವಾಗಿದೆ. ಬಾಕಿ ಎಲ್ಲ ಎಂದಿನಂತೆ.

**ಮೇ ೨೧, ೧೯೯೯** **ಚಿತ್ರದುರ್ಗ**

ಸುಮಾರು ೧೧-೩೦ರ ಹೊತ್ತಿಗೆ ೫೦-೬೦ ಜನರೊಂದಿಗೆ ಬ್ಯಾಂಡ್ ಮತ್ತು ತಮ್ಮ ಸ್ವಂತ ಊರಿನ ದೇವಸ್ಥಾನದ ಇತರ ಪೂಜಾ ಸಾಮಗ್ರಿಗಳೊಂದಿಗೆ ವಾಟಾಳ್ ನಾಗರಾಜ್ ಬಂದರು. ದೊಡ್ಡ ಪ್ರದರ್ಶನ. ನನ್ನನ್ನು ತುಂಬಾ ಬೆಲೆ ಬಾಳುವ ಶಾಲು ಮತ್ತು ಅಷ್ಟೇ ಬೆಲೆಯುಳ್ಳ ಗಂಧದ ಹಾರದಿಂದ ಗೌರವಿಸಿದರು. ಟಿವಿ ರೆಕಾರ್ಡಿಂಗ್‌ಗೆ ಕೂಡ ವ್ಯವಸ್ಥೆ ಮಾಡಿದ್ದರು. ನಾನು ನಿರೀಕ್ಷಿಸದಿದ್ದಷ್ಟು ದೊಡ್ಡ ಪ್ರದರ್ಶನ. ಇದನ್ನು ಇವರು ಏಕೆ ವ್ಯವಸ್ಥೆ ಮಾಡಿದ್ದರೆಂದು ನನಗೆ ತಿಳಿಯದು. ಇತ್ತೀಚೆಗೆ ಜಿಲ್ಲಾ ಕೇಂದ್ರವಾದ ಅವರ ಸ್ವಂತ ಸ್ಥಳವಾದ ಚಾಮರಾಜನಗರದಿಂದ ಇವರೆಲ್ಲರನ್ನೂ ಎರಡು ಬಸ್ಸುಗಳಲ್ಲಿ ಕರೆದುಕೊಂಡು ಬಂದಿದ್ದರು. ಕನ್ನಡವನ್ನು ಕಡ್ಡಾಯ ಭಾಷೆಯಾಗಿ ಮಾಡಲು ಸರ್ಕಾರ ಒಪ್ಪಿಕೊಂಡಿದ್ದರೂ ಅನುಷ್ಠಾನಗೊಳಿಸಿಲ್ಲದಿರುವುದರಿಂದ ಏನು ಮಾಡಬೇಕೆಂದೂ ನನ್ನನ್ನು ಕೇಳಿದರು. ಇಡೀ ಪ್ರದರ್ಶನವು ಒಂದು ಗಂಟೆ ಕಾಲ ಆಯಿತು. ಟಿವಿ ಜನರು ಅಲ್ಲಿ ನಡೆದುದೆಲ್ಲವನ್ನೂ ದಾಖಲಿಸಿದರು. ಅಲ್ಲದೆ ಮರದ ಕೆತ್ತನೆ ಚೌಕಟ್ಟು 4'x2' ಅಳತೆಯುಳ್ಳದ್ದನ್ನು ನನಗೆ ಉಡುಗೊರೆಯಾಗಿ ಕೊಟ್ಟರು. ಅವರಿಗೆ ತುಂಬಾ ವೆಚ್ಚವಾಗಿರಬಹುದು. ಮೇಲೆ ಹೇಳಿದಂತೆ ಇದನ್ನು ಏಕೆ ಮಾಡಿದರೆಂದು ನನಗೆ ತಿಳಿಯದು. ಇವರಿಗೆ ಕೆಲವು ಸಾವಿರ ರೂ.ಗಳೇ ಖರ್ಚಾಗಿರಬಹುದು.

**ಮೇ ೨೭, ೧೯೯೯** **ಚಿತ್ರದುರ್ಗ**

ಇಂದು 'ತುಂಗಾ ತಿರುವು' ನೀರಾವರಿ ಯೋಜನೆಗೆ ಮುಖ್ಯಮಂತ್ರಿಗಳು ಅಸ್ತಿಭಾರ ಹಾಕಿದರು. ಅದು ಚಿತ್ರದುರ್ಗ ಜಿಲ್ಲೆಯಲ್ಲಿ ಎರಡು ಲಕ್ಷ ಎಕರೆಗಳಷ್ಟಕ್ಕೆ ಸಾಕಾಗುತ್ತದೆಂದು ನಿರೀಕ್ಷಿಸಲಾಗಿದೆ. ಆದರೆ ಕಾಗದ ಪತ್ರ ಮತ್ತು ಆಹ್ವಾನ ಪತ್ರಿಕೆಯಲ್ಲಿ ಸರ್ವೆಯನ್ನು ಉದ್ಘಾಟಿಸಲಾಗುತ್ತಿದೆ ಎಂದಿದ್ದು ಹಾಸ್ಯಾಸ್ಪದವಾಗಿದೆ. ಆಮಂತ್ರಣ ಪತ್ರಿಕೆಯಲ್ಲಿ ವೆಚ್ಚ, ವಿಸ್ತೀರ್ಣದ ಅಂದಾಜುಗಳು ಮತ್ತು ಇತರ ವಿವರಗಳನ್ನು ಕೊಟ್ಟಿದೆ. ಇದನ್ನು ಕೈಗೊಳ್ಳಬೇಕೆಂದು ಬಹಳ ಕಾಲದಿಂದ ನಾನು ಒತ್ತಾಯಿಸುತ್ತಿದ್ದೆ.

**ಜೂನ್ ೨, ೧೯೯೯** **ಚಿತ್ರದುರ್ಗ**

ಪ್ರೊ. ರಾಘವೇಂದ್ರರಾವ್‌ರವರು ಬರೆದಿರುವ ನನ್ನ ಜೀವನ ಚರಿತ್ರೆಯನ್ನು ಬಿಡುಗಡೆ ಮಾಡಲಾಗುತ್ತಿದೆ. ಭಾರತದ ಮಾಜಿ ರಾಷ್ಟ್ರಪತಿ ಅದನ್ನು ಬಿಡುಗಡೆ ಮಾಡಲು ಒಪ್ಪಿದ್ದಾರೆ ಎಂದು ಚಂದ್ರಶೇಖರ್ ಫೋನ್ ಮಾಡಿದರು. ಸಿ. ಸುಬ್ರಹ್ಮಣ್ಯಂ ಕೂಡ ಭಾಗವಹಿಸಲು ಒಪ್ಪಬಹುದು. ಹೆಗಡೆ ಮತ್ತು ಪಟೇಲ್ ಮತ್ತು ಇತರರು ಕೂಡ ಭಾಗವಹಿಸಬಹುದು. ನಾನು ಭಾಗವಹಿಸಬೇಕೆದು ಅವರು ಬಹಳ ಒತ್ತಾಯಿಸಿದರು. ನಾನು ಎಲ್ಲರಿಗೂ ಹೇಳಿದ್ದೇನೆ ನನಗೆ ಬರಲಾಗುವುದಿಲ್ಲವೆಂದು. ನನ್ನ ಸ್ನೇಹಿತರು ನಾನಿಲ್ಲದೆಯೇ ಇದನ್ನು ಮುಂದುವರಿಸಬೇಕೆಂದು ಹೇಳಿದೆ.

**ಜೂನ್ ೩, ೧೯೯೯** **ಚಿತ್ರದುರ್ಗ**

ಈ ಬೆಳಿಗ್ಗೆ ಚಿತ್ರದುರ್ಗ ಶಾಖೆಯ ಆಕಾಶವಾಣಿಯವರು ಮತ್ತು ಒಬ್ಬ ಪ್ರತಿನಿಧಿಯು ಒಂದು ಗಂಟೆಗಿಂತ ಹೆಚ್ಚು ಕಾಲ ಸಂದರ್ಶಿಸಿದರು. ಒಬ್ಬ ಹಿರಿಯ ನಾಗರಿಕನಾಗಿ ದೇಶದ ಪ್ರಸಕ್ತ ರಾಜಕೀಯ ಪರಿಸ್ಥಿತಿ. ಅದರ ಬೆಳವಣಿಗೆ ಮತ್ತು ನನ್ನ ಅನುಭವ ಆರ್ಥಿಕ, ಸಾಮಾಜಿಕ ಹಾಗೂ ನೈತಿಕ ವಿಷಯಗಳ ಬಗ್ಗೆ ನನ್ನ ಅಭಿಪ್ರಾಯಗಳನ್ನು ಕೇಳಿದರು. ನನ್ನ ವೈಯಕ್ತಿಕ ತೊಡಗಿಕೊಳ್ಳುವಿಕೆ, ನನ್ನ ಸ್ವಂತ ಅನುಭವಗಳು, ಕಷ್ಟ ಸುಖಗಳು, ಸಂಸಾರಗಳ ಬಗ್ಗೆಯೂ ಹೇಳಿದೆ. ಮಧ್ಯಾಹ್ನ ದೂರದರ್ಶನದವರು ಉಪಕರಣಗಳನ್ನು ತಂದಿದ್ದರು. ನನ್ನ ನಿಕಟ ಸ್ನೇಹಿತರೂ ಗುಲ್ಬರ್ಗಾದಲ್ಲಿ ನನ್ನ ಸಹಪಾಠಿಗಳಾಗಿದ್ದ ನನಗೆ ತುಂಬಾ ಗೌರವ ಮತ್ತು ಪ್ರೀತಿಯಿರುವ ಚಂದ್ರಶೇಖರ ಪಾಟೀಲರ ಬಗ್ಗೆ ನನ್ನ ಅಭಿಪ್ರಾಯಗಳನ್ನು ಕೇಳಿದ್ದರಿಂದ ಹೇಳಿದೆ. ಅವರ ಬಗ್ಗೆ ಒಂದು ಸಾಕ್ಷ್ಯಚಿತ್ರವನ್ನು ಅವರು ಮಾಡುವಂತಿದೆ.

**ಜೂನ್ ೮, ೧೯೯೯** **ಚಿತ್ರದುರ್ಗ**

ಈ ದಿನ ಎ.ಆರ್. ಬದರಿನಾರಾಯಣ್‌ರಿಂದ ೨೦ನೇ ತಾರೀಕಿನ ಸಮಾರಂಭಕ್ಕೆ ಬರಬೇಕೆಂದು ಬೇಡಿಕೆ ಬಂದತು. ಅಂದು ಪ್ರೊ. ರಾಘವೇಂದ್ರರಾವ್ ಇಂಗ್ಲಿಷ್‌ನಲ್ಲಿ

ಬರೆದ ನನ್ನ ಜೀವನಚರಿತ್ರೆಯನ್ನು ಮಾಜಿ ರಾಷ್ಟ್ರಪತಿ ಬಿಡುಗಡೆ ಮಾಡುತ್ತಿದ್ದು, ಸಿ. ಸುಬ್ರಹ್ಮಣ್ಯಂ ಅಧ್ಯಕ್ಷತೆ ವಹಿಸುತ್ತಾರೆಂದು ತಿಳಿಸಿದರು. ಈ ಸಮಾರಂಭಕ್ಕೆ ಹಾಜರಾಗಲು ಮತ್ತು ೧೯ನೇ ತಾರೀಕಿನ ಭಾರತೀಯ ವಿದ್ಯಾಭವನದ ಸಮಾರಂಭಕ್ಕೆ ಹಾಜರಾಗಲು ನಿರ್ಧರಿಸಿದ್ದೇನೆ. ಅದೇ ಪ್ರಕಾರ ಎ.ಆರ್. ಬದರಿನಾರಾಯಣ್‌ಗೆ ಬರೆದೆ. ನಾನು ಮೂರು ದಿವಸ ಉಳಿದುಕೊಳ್ಳಬೇಕಾಗುತ್ತದೆಂದು ಕಾಣುತ್ತದೆ. ಚಿತ್ರದುರ್ಗದ ಮನೆಯನ್ನು ಬಿಡಲೇಬಾರದೆಂಬ ನನ್ನ ಹಿಂದಿನ ತೀರ್ಮಾನಕ್ಕೆ ಇದು ವಿರುದ್ಧ.

**ಜೂನ್ ೧೫, ೧೯೯೯ ಚಿತ್ರದುರ್ಗ**

ಕಾರ್ಗಿಲ್ ಯುದ್ಧಕ್ಕೆ ಸಹಾಯ ಮಾಡಲು ಭಾರತದ ಜನರಿಗೆ ನನ್ನಿಂದ ಒಂದು ಮನವಿ ಬೇಕೆಂದು ದೂರದರ್ಶನದ ಜನರು ಹೇಳಿದರು. ನಾನು ಮನವಿ ಮಾಡಿದೆ. ಅಧಿಕೃತ ಸಂಗ್ರಹಣೆ ಇರಬೇಕು, ಏಕೆಂದರೆ ಸಂಗ್ರಹಣೆಯ ದುರುಪಯೋಗವನ್ನು ತಪ್ಪಿಸಬೇಕು. ಅವುಗಳನ್ನು ಪ್ರಕಟಿಸಲು ಪತ್ರಿಕೆಗಳು ಎಲ್ಲಾ ಹಂತಗಳಲ್ಲಿ ಸಾಕಷ್ಟು ಸ್ಥಳವನ್ನು ಮೀಸಲಿಡಬೇಕೆಂದು ಹೇಳಿದೆ. ಒಬ್ಬ ಪತ್ರಿಕಾ ಮನುಷ್ಯನ ಮೂಲಕ ನಾನೂ ೧೦೦೦ ರೂ. ವಂತಿಗೆ ನೀಡಿದೆ.

**ಜೂನ್ ೧೮, ೧೯೯೯ ಚಿತ್ರದುರ್ಗ**

ಮೊದಲೇ ತಿಳಿಸಿದ್ದಂತೆ ಶ್ರೀ ರಾಮಕೃಷ್ಣನ್, ಭಾರತೀಯ ವಿದ್ಯಾಭವನದ ಸೆಕ್ರೆಟರಿ ಜನರಲ್ಲಾಗಿದ್ದು ಅದರ ಸ್ಥಾಪಕ ಮುನಿಷಿಯವರ ಕಾಲದಿಂದ ಈ ದಶಕಗಳಲ್ಲೆಲ್ಲಾ ಸೇವೆ ಸಲ್ಲಿಸಿದ್ದು ಅವರು ಮತ್ತು ಬೆಂಗಳೂರು ಕೇಂದ್ರದ ಕಾರ್ಯದರ್ಶಿ ಇವರುಗಳು ಬೆಳಿಗ್ಗೆ ೮-೩೦ಕ್ಕೆ ಬಂದರು. ಅವರ ಜೊತೆಯಲ್ಲಿ ಒಬ್ಬ ಫೋಟೋಗ್ರಾಫರ್ ಇದ್ದರು. ದೇಶ, ಭವನ ಹಾಗೂ ಸಮಾಜಕ್ಕೆ ನನ್ನ ಸೇವೆ ಹೊಗಳುವ ತಾಮ್ರ ಪತ್ರವನ್ನು ಕೃಷ್ಣಮೂರ್ತಿ ಓದಿದರು. ಅದನ್ನು ಜನರಲ್ ಸೆಕ್ರೆಟರಿ ನನಗೆ ನೀಡಿದರು. ನಾವು ಸಾಮಾನ್ಯವಾಗಿ ಮಾತನಾಡಿ ಅದರಲ್ಲಿ ನಾನು ಮರೆತಿದ್ದ ಅನೇಕ ವಿಷಯಗಳ ಬಗ್ಗೆ ಕೇಳಿದರು. ಒಟ್ಟಿಗೆ ಉಪಾಹಾರ ಮಾಡಿದೆವು. ನಾಳೆ ದಿನದ ಸಮಾರಂಭಕ್ಕಾಗಿ ತಕ್ಷಣವೇ ಹೊರಟುಹೋದರು. ನಾಳಿನ ಸಮಾರಂಭದಲ್ಲಿ ಶಾಶ್ವತ ಸದಸ್ಯತ್ವವನ್ನು ನನಗೂ ಮತ್ತು ೧೦೦ ವರ್ಷ ತುಂಬಿರುವ ಪ್ರಸಿದ್ಧ ಕನ್ನಡ ಲೇಖಕರಾದ ಎ.ಎನ್. ಮೂರ್ತಿರಾಯರಿಗೂ ನೀಡುತ್ತಿದ್ದಾರೆ. ನನ್ನ ಗೈರುಹಾಜರಿಯಲ್ಲಿ ನನ್ನ ಮಗ ಕಿರಣ್ ಶಂಕರ್‌ಗೆ ಅದನ್ನು ಕೊಡುತ್ತಿದ್ದಾರೆ. ಮಾಮೂಲಿನಂತೆ ನನಗೆ ಒಂದು ಶಾಲು ಹೂವಿನ ಹಾರವನ್ನು ಕೊಟ್ಟರು.

**ಜೂನ್ ೨೦, ೧೯೯೯**

ಪ್ರೊ. ರಾಘವೇಂದ್ರರಾವ್‌ರಿಂದ ನನ್ನ ಜೀವನ ಚರಿತ್ರೆಯನ್ನು ಮಾಜಿ ರಾಷ್ಟ್ರಪತಿಯವರು ಪ್ರಕಟಿಸಿದರು. ಭಾರತರತ್ನ ಸಿ. ಸುಬ್ರಹ್ಮಣ್ಯಂ ಅಧ್ಯಕ್ಷತೆ ವಹಿಸಿದ್ದು ಕರ್ನಾಟಕ ರಾಜ್ಯಪಾಲರೂ ಇದ್ದರು. ಕಿರಣ್ ಶಂಕರ್ ಮತ್ತು ಎಲ್.ಎಸ್. ಚಂದ್ರಶೇಖರ್

ಇಬ್ಬರೂ ಈ ರಾತ್ರಿ ೮ ಗಂಟೆಯಲ್ಲಿ ಇಂದಿನ ಸಮಾರಂಭವು ತುಂಬಾ ಚೆನ್ನಾಗಿತ್ತೆಂದರು. ಮೂರು ಜನ ಮಹಾನ್ ವ್ಯಕ್ತಿಗಳು ನನಗೆ ತುಂಬಾ ಅಭಿನಂದನೆಗಳನ್ನು ಹೇಳಿದರೆಂದು ಹೇಳಿದರು. ನನ್ನ ಗೈರುಹಾಜರಿಯಲ್ಲಿ ತಾಮ್ರಪತ್ರವನ್ನು ಭಾರತೀಯ ವಿದ್ಯಾಭವನದಲ್ಲಿ ನೆನ್ನೆಯ ಸಮಾರಂಭದಲ್ಲಿ ಸ್ವೀಕರಿಸಿದೆನೆಂದು ಕಿರಣ್ ಹೇಳಿದ. ನನಗೆ ಸಂದೇಹವಿಲ್ಲದೆ ಸಂತೋಷವಾಗಿದೆ, ಆದರೆ ನಾನು ಅರ್ಹನಾಗಿರುವುದಕ್ಕಿಂತ ಹೆಚ್ಚಾಗಿ ಜನರು ನನ್ನನ್ನು ಹೊಗಳುತ್ತಿದ್ದಾರೆ. ಇದು ನನ್ನ ಗರ್ವವನ್ನು ಹೆಚ್ಚಿಸುತ್ತಿದೆ. ಒಂದು ವಿಧದಲ್ಲಿ ನನಗೆ ತೃಪ್ತಿಯಾಗಿದೆ.

**ಜೂನ್ ೨೧, ೧೯೯೯** **ಚಿತ್ರದುರ್ಗ**

ಕೇಂದ್ರ ಸರ್ಕಾರದ ಒಬ್ಬ ಪ್ರತಿನಿಧಿಯಿಂದ ನನಗೊಂದು ಪತ್ರ ಬಂದಿದೆ. ಸರ್ದಾರ್ ಪಟೇಲರ ಹೆಸರಿನ ಸ್ಮರಣಾರ್ಥಕ್ಕೆ ಒಂದು ಸಮಿತಿಯನ್ನು ಎಪ್ಪತ್ತು ವರ್ಷಗಳ ನಂತರ ರಚಿಸಲಾಗಿದೆ. ಮನುಭಾಯಿ ಪಟೇಲ್‌ಗೆ ಬರೆದಿದ್ದ ಪತ್ರದ ಒಂದು ಪ್ರತಿಯನ್ನು ನನಗೆ ಕಳುಹಿಸಿದ್ದಾರೆ. ಸರ್ದಾರ್ ಪಟೇಲ್ ಸೊಸೈಟಿ ಮತ್ತು ಟ್ರಸ್ಟ್‌ಗೆ ಸಂಬಂಧಿಸಿದಂತೆ ಎಲ್ಲಾ ವಿಷಯದ ಬಗ್ಗೆ ಅವರಿಗೆ ನಾನು ಬರೆಯಬೇಕು.

**ಜುಲೈ ೧೩, ೧೯೯೯** **ಚಿತ್ರದುರ್ಗ**

ಶ್ಯಾಮನೂರು ಶಿವಶಂಕರಪ್ಪ ಕೆಲವು ಜನರನ್ನು ಕಳುಹಿಸಿ ಶ್ರೀಮತಿ ಸೋನಿಯಾ ಗಾಂಧಿಗೆ ಅವರನ್ನು ಜ್ಞಾಪಕದಲ್ಲಿಟ್ಟುಕೊಳ್ಳುವಂತೆ ನಾನು ಹೇಳಬೇಕೆಂದರು. ಹಾಗೆಯೇ ಶ್ರೀಮತಿ ಬಸವರಾಜೇಶ್ವರಿಯು ಫೋನ್ ಮಾಡಿ ಲಿಂಗಾಯತರನ್ನು ಮರೆಯಬಾರದೆಂದು ಆಕೆಗೆ ಹೇಳಬೇಕು ಎಂದರು. ಆಗಲೇ ಜನರು ಆಕೆ ಪ್ರಧಾನಮಂತ್ರಿ ಎಂದು ತಿಳಿದಿದ್ದಾರೆ. ಇದು ಹಾಸ್ಯಸ್ಪದವಲ್ಲವೆ ? ಅನೇಕರು ನನ್ನ ಮನೆಯನ್ನು ನೋಡಲು ಬಂದಿದ್ದಾರೆ. ನಾವು ಅದರಲ್ಲಿಯೂ ಹಿಂದೂಗಳು ಅಧಿಕಾರವನ್ನು ಪೂಜಿಸುತ್ತೇವೆ. 'ರಾಜ ಪ್ರತ್ಯಕ್ಷ ದೇವತ' ಎಂಬ ಪ್ರಾಚೀನ ನುಡಿ. ಆಕೆ ಇನ್ನೂ ಒಂದು ಮತಕ್ಷೇತ್ರವನ್ನು ಹುಡುಕಬೇಕು, ಚುನಾಯಿತರಾಗಬೇಕು, ಕಾಂಗ್ರೆಸ್ಸಿಗೆ ಕನಿಷ್ಠ ಕಾರ್ಯನಿರತ ಬಹುಮತ ಬರಬೇಕು, ಆಗ ಅವರಿಗೆ ನಾಯಕತ್ವ ಸಿಗುತ್ತದಲ್ಲವೆ ?

**ಜುಲೈ ೧೪, ೧೯೯೯** **ಚಿತ್ರದುರ್ಗ**

ಬೆಳಗಿನಿಂದ ಪೋಲಿಸರು ನನ್ನ ಮನೆಯ ಸುತ್ತಮುತ್ತ ಕಾಣಿಸಿಕೊಳ್ಳುತ್ತಿದ್ದರು. ಈಚೆಗೆ ತುಂಬಾ ಸುದ್ದಿಯಲ್ಲಿದ್ದು ಸೆಪ್ಟೆಂಬರಿನಲ್ಲಿ ಲೋಕಸಭಾ ಚುನಾವಣೆಗಳಾದ ಕೂಡಲೆ ಪ್ರಧಾನಿಯಾಗುತ್ತಾರೆಂಬ ಸುದ್ದಿಯಿದ್ದು ಶ್ರೀಮತಿ ಸೋನಿಯಾಗಾಂಧಿ ಬೆಂಗಳೂರಿನಿಂದ ಬಳ್ಳಾರಿಗೆ ಹೋಗುವ ದಾರಿಯಲ್ಲಿ ಚಿತ್ರದುರ್ಗದಲ್ಲಿ ನನ್ನನ್ನು ನೋಡಲು ಬಂದರು. ನನ್ನ ಮನೆಗೆ ಮಧ್ಯಾಹ್ನ ಸುಮಾರು ೧-೩೦ರ ಹೊತ್ತಿಗೆ ಕೆಪಿಸಿಸಿ ಅಧ್ಯಕ್ಷ ಎಸ್.ಎಂ.

ಕೃಷ್ಣ ಮತ್ತು ಇತರರ ಜೊತೆಯಲ್ಲಿ ನನ್ನೊಡನೆ ೧೫ ನಿಮಿಷಗಳಿದ್ದರು. ನನಗೆ ಒಂದು ಶಾಲನ್ನು ನೀಡಿದರು. ನೀಡಿದ ಕಾಲುಗಳನ್ನು ಶಾಲಿನಿಂದ ಮುಚ್ಚಿ ಕುಳಿತಿದ್ದರಿಂದ ನನಗೆ ಏಳಲಾಗಲಿಲ್ಲ. ಪ್ರತಿಯಾಗಿ ನಾನು ಒಂದು ಶಾಲು ಮತ್ತು ಗಂಧದ ಮರದ ಕಲಾಕೃತಿಯನ್ನು ಅಂದರೆ ನಟರಾಜನ ಕೃತಿಯನ್ನು ನೀಡಿದೆ. ಅದಕ್ಕೂ ಹೆಚ್ಚಾಗಿ ನಮ್ಮ ಸಂವಿಧಾನದ ಒಂದು ಪ್ರತಿಯನ್ನು ನೀಡಿ ರಾಜ್ಯ ನೀತಿಯ ನಿರ್ದೇಶಕ ತತ್ವಗಳನ್ನು ಅರ್ಥ ಮಾಡಿಕೊಂಡು ಅದನ್ನು ಅನುಸರಿಸಿ ಅದನ್ನು ಅನುಷ್ಠಾನಕ್ಕೆ ತರಲು ಪ್ರಯತ್ನಿಸಬೇಕೆಂದೆ. ಮಕ್ಕಳು ಮತ್ತು ಅವುಗಳ ಬಗ್ಗೆ ಇಂದಿರಾರ ಪ್ರೀತಿ ಮತ್ತು ಆಕೆಯ ಜೊತೆಯಲ್ಲಿ ನನ್ನ ಪ್ರಯಾಣ ಮತ್ತು ಆಗ ಸಾಮಾನ್ಯವಾಗಿ ನನ್ನೊಡನೆ ಇರುತ್ತಿದ್ದ ಉಪರಾಷ್ಟ್ರಪತಿ ಕೃಷ್ಣಕಾಂತ್ ಬಗ್ಗೆ ಮಾತನಾಡಿದೆವು. ಆಕೆ ಸುಮಾರಾಗಿ ಚೆನ್ನಾಗಿ ಕಾಣುವ ಮಹಿಳೆಯಾಗಿದ್ದು ಕೋನಾಕಾರದ ಮುಖವುಳ್ಳವರು. ಆಕೆ ಸುಂದರಿ ಎಂದು ಹೇಳಲಾಗುವುದಿಲ್ಲ, ಆದರೆ ಆಕೆಗೆ ಜನರನ್ನು ಹೇಗೆ ತೃಪ್ತಿಪಡಿಸಬೇಕೆಂದು ಗೊತ್ತು. ಮಕ್ಕಳನ್ನು ಪ್ರೀತಿಸಿದಂತೆ ಜನರನ್ನು ಪ್ರೀತಿಸಬೇಕೆಂದು ಭಾವಿಸಿದ್ದಾರೆ. ಆಕೆಗೆ ಒಳ್ಳೆಯದಾಗಲೆಂದು ಹರಸಿದೆ. ನಾವು ಒಬ್ಬರಿಗೊಬ್ಬರು ಶುಭಾಶಯ ಹೇಳಿ ಬೀಳ್ಕೊಂಡೆವು. ಈ ಮುದಿ ಮನುಷ್ಯನ ಬಗ್ಗೆ ವಿಚಾರಿಸಲು ಬಂದಿದ್ದ ಆಕೆಯನ್ನು ವಂದಿಸಿದೆ. ಬಳ್ಳಾರಿಯಿಂದ ಆಕೆ ಲೋಕಸಭಾ ಚುನಾವಣೆಗೆ ನಿಲ್ಲುತ್ತಾರೆಂದು ಕಾಣುತ್ತದೆ.

**ಜುಲೈ ೧೫, ೧೯೯೯ ಚಿತ್ರದುರ್ಗ**

ನನ್ನ ಮನೆಗೆ ಸೋನಿಯಾರ ಭೇಟಿ ಎಲ್ಲಾ ಪತ್ರಿಕೆಗಳಲ್ಲಿ ಬಹಳ ಸುಂದರವಾಗಿ ಪ್ರಕಟವಾಗಿತ್ತು. ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆ ನನ್ನ ಮನೆಯಲ್ಲಿ ಆರು ಕಪ್ಪುಗಳು ಮಾತ್ರ ಇದ್ದುದರಿಂದ ಆರು ಕಪ್ಪು ಟೀ ಮಾತ್ರ ಕೊಡಬಲ್ಲೆನೆಂದು ನಾನು ಹೇಳಿದೆನೆಂದೂ ಪ್ರಕಟಿಸಿತ್ತು. ಆ ಚಹಾದ ಸಂತೋಷವನ್ನು ಅನುಭವಿಸಿದ ಆರು ಜನರ ಹೆಸರುಗಳನ್ನು ಅದು ಕೊಟ್ಟಿತ್ತು. ನಾನು ಶ್ರೀಮಂತನಲ್ಲದಿದ್ದರೂ ನಾನು ಅಷ್ಟು ಬಡವನಲ್ಲ. ನಾನು ಮಧ್ಯಮ ವರ್ಗದವನು. ನನ್ನ ಮೂರು ಪೆನ್ಷನ್‌ಗಳಿಂದ ೧೨,೦೦೦ ರೂ.ಗಳು ಬರುತ್ತದೆ. ಒಂದು ಪಾರ್ಲಿಮೆಂಟಿನ ಮಾಜಿ ಸದಸ್ಯನಾಗಿ, ಇನ್ನೊಂದು ರಾಜ್ಯಶಾಸನ ಸಭೆಯ ಸದಸ್ಯನಾಗಿ, ಮತ್ತೊಂದು ಸ್ವಾತಂತ್ರ್ಯ ಹೋರಾಟಗಾರನಾಗಿ ಜೈಲಿಗೆ ಹೋದುದಕ್ಕಾಗಿ. ರಾಜಕೀಯ ಸಂತ್ರಸ್ತನಾಗಿ ಕ್ರಮವಾಗಿ ೫, ೪ ಮತ್ತು ೩ ಸಾವಿರ ರೂಪಾಯಿಗಳು ಬರುತ್ತವೆ. ಇದಿಷ್ಟೇ ನನ್ನ ಆದಾಯ. ಅವರ ಜೊತೆಗೆ ನನ್ನ ಹಿಂಭಾಗದ ಮನೆಯಿಂದ ಬರುವ ಅಲ್ಪ ತಿಂಗಳ ಬಾಡಿಗೆ. ನಾನು ರಾಜಣ್ಣ ಮತ್ತು ಒಬ್ಬ ಅಡಿಗೆಯವನ ಜೊತೆಯಲ್ಲಿ ವಾಸಿಸುತ್ತಿರುವುದರಿಂದ ನನಗೆ ಅಷ್ಟು ಸಾಕು. ನನಗೇನೂ ಬೇಕು ಎಂದೆನಿಸಿಲ್ಲ. ನನ್ನ ದೊಡ್ಡ ಮೆಡಿಕಲ್ ಬಿಲ್ ಇದ್ದರೂ ನನ್ನ ಈ ಪೆನ್ಷನ್‌ಗಳಿಂದ ತೃಪ್ತಿಯಾದ ಜೀವನ ನಡೆಸುತ್ತಿದ್ದೇವೆ. ನನ್ನ ಕೊನೆಯ ಮಗಳು ಪುರಿ ಅರ್ಥಾತ್ ಪೂರ್ಣಿಮಾಗೆ

ಚೆನ್ನಾದ ವರಮಾನವಿದ್ದು ತೃಪ್ತಿಯಿಂದ ಜೀವಿಸುತ್ತಿದ್ದಾಳೆ. ಅನೇಕ ಸಲ ನನ್ನ ಕೋರಿಕೆಯ ಮೇರೆಗೆ ನನ್ನ ಹೆಣ್ಣು ಮಕ್ಕಳು ಬಂದು ನನ್ನ ಜೊತೆಯಲ್ಲಿ ಕೆಲವು ದಿವಸಗಳು ಇರುತ್ತಾರೆ.

**ಜುಲೈ ೧೭, ೧೯೯೯ ಚಿತ್ರದುರ್ಗ**

ಇಂದು ಬೆಳಿಗ್ಗೆ ೧೧-೩೦ಕ್ಕೆ ಸಂಸ್ಕೃತಿ ಇಲಾಖೆ ಸಚಿವೆ ಶ್ರೀಮತಿ ಲೀಲಾವತಿ ಆರ್. ಪ್ರಸಾದ್ ಬಂದರು. ಅವರ ಮುಖ್ಯ ಉದ್ದೇಶವೆಂದರೆ ನನ್ನನ್ನು 'ಕರ್ನಾಟಕ ರತ್ನ' ಪ್ರಶಸ್ತಿಯನ್ನು ಪಡೆಯಲು ಒಪ್ಪಿಸಲು ಬಂದಿದ್ದರು. ಬಹಳ ಪ್ರಮುಖವಾದ ವ್ಯಕ್ತಿಗಳು ಪ್ರಸಿದ್ಧ ವಿಜ್ಞಾನಿ ಡಾ. ರಾಜಾರಾಮಣ್ಣ ಸೇರಿದಂತೆ ಒಂದು ಸಮಿತಿಯು ನನಗೆ ಈ ಪ್ರಶಸ್ತಿಯನ್ನು ನೀಡಬೇಕೆಂದು ಶಿಫಾರಸು ಮಾಡಿದೆ ಮತ್ತು ಅದನ್ನು ಪಡೆಯಲು ನನ್ನನ್ನು ಒಪ್ಪಿಸುವಂತೆ ಮಾಡಲು ಸರ್ಕಾರ ಮುಖ್ಯವಾಗಿ ಪಟೇಲರು ಆಕೆಯನ್ನು ಕಳುಹಿಸಿದ್ದಾರೆ. ಈ ಪ್ರಶಸ್ತಿಗಳ ಬಗ್ಗೆ ನನಗೆ ಸುಸ್ತಾಗಿದೆ. ತನ್ನ ಪರವಾಗಿಯೂ ಒಪ್ಪಿಕೊಳ್ಳಬೇಕೆಂದು ಒತ್ತಾಯಿಸಿದರು. ನಾನು ಒಪ್ಪಿಕೊಳ್ಳಬೇಕಾಯಿತು. ಆಕೆಗೆ ಸಂತೋಷವಾಗಿತ್ತು. ರಾಜ್ಯದಲ್ಲಿ ಪ್ರಸಕ್ತ ರಾಜಕೀಯ ಪರಿಸ್ಥಿತಿಯನ್ನು ಚರ್ಚಿಸಿದಾಗ ಆಕೆಯು ಅಸಂತೋಷವನ್ನು ವ್ಯಕ್ತಪಡಿಸಿ ಅಲ್ಲಿಂದ ಹೊರಟರು. ಮೊದಲನೆ ಸಲ ಆಕೆ ನನ್ನ ಮನೆಗೆ ಬಂದುದರಿಂದ ಆಕೆಗೆ ಒಂದು ಕಾಶ್ಮೀರಿ ಶಾಲನ್ನು ಕೊಟ್ಟೆ.

**ಆಗಸ್ಟ್ ೧೫, ೧೯೯೯**

ಇಲ್ಲಿ ಚಿತ್ರದುರ್ಗದಲ್ಲಿ ವೀರವನಿತೆ ಒನಕೆ ಓಬವ್ವನ ಗೌರವಾರ್ಥ ದಿನವನ್ನು ಆಚರಿಸಲಾಯಿತು. ಆಕೆಯು ಒಬ್ಬ ಸಿಪಾಯಿಯ ಹೆಂಡತಿಯಾಗಿದ್ದು ಕೋಟೆಯ ಬಾಗಿಲನ್ನು ತನ್ನ ಗಂಡ ಅಲ್ಲಿಲ್ಲದಿದ್ದಾಗ ಹೈದರನ ಸೈನಿಕರನ್ನು ಒನಕೆಯಿಂದ ತಲೆಗಳನ್ನು ಒಡೆದು ರಕ್ಷಿಸಿದಳು. ಒಂದು ಕವಾಯತು ಮೈದಾನಕ್ಕೆ ಅವಳ ಹೆಸರಿಡಲಾಗಿದೆ.

ಪಾರಕ್ಕ ಇನ್ನೂ ಇಲ್ಲೇ ಇದ್ದಾಳೆ. ನನಗೆ ಸಂತೋಷ, ಅವಳ ಮಗ ಚಂದ್ರ ಬಾಂಗ್ಲಾದೇಶಕ್ಕೆ ಹೋಗಿದ್ದು ಅವನ ಭೇಟಿಯು ಜಯಪ್ರದವಾಯಿತು ಎಂದು ಹೇಳಿದಳು.

**ಸೆಪ್ಟೆಂಬರ್ ೫, ೧೯೯೯ ಚಿತ್ರದುರ್ಗ**

ಇವತ್ತು ಚುನಾವಣೆಯ ಮೂರು ದಿನಗಳ ಮೊದಲ ದಿನ. ಲೋಕಸಭೆ (ಪಾರ್ಲಿಮೆಂಟು) ಮತ್ತು ಕರ್ನಾಟಕದಲ್ಲಿ ವಿಧಾನಸಭೆಗಳೆರಡಕ್ಕೂ ಮತದಾನಕ್ಕೆ ಅರಣ್ಯ ಕಚೇರಿಗೆ ಹೋದೆ. ಬಳ್ಳಾರಿ ಮತ ಕ್ಷೇತ್ರದಲ್ಲಿ ಇಬ್ಬರು ಹೊರಗಿನ ಮಹಿಳೆಯರು. ಸೋನಿಯಾ ಗಾಂಧಿ ಮತ್ತು ಸುಷ್ಮಾ ಸ್ವರಾಜ್- ಲೋಕಸಭೆಗೆ ಸ್ಪರ್ಧಿಸಿದ್ದಾರೆ. ಸ್ಪರ್ಧೆಯು ಬಹಳ ತೀವ್ರವಾಗಿದ್ದು ಫಲಿತಾಂಶ ಏನು ಎಂದು ಹೇಳುವುದು ಕಷ್ಟ. ಇದರಲ್ಲಿ ಸ್ಥಳೀಯ ಅಭ್ಯರ್ಥಿ ಚಿತ್ರಣದಲ್ಲಿ ಇಲ್ಲವೇ ಇಲ್ಲ. ವಿದೇಶಿಯೊಬ್ಬಳು ಪ್ರಧಾನಮಂತ್ರಿಯಾಗುವುದನ್ನು ಜನರು ಇಷ್ಟಪಡಲಾರರು. ಆದ್ದರಿಂದ ಸೋನಿಯಾ ಗಾಂಧಿ ಪಕ್ಷ ಸೋಲಬಹುದು. ಆದರೆ

ಇದು ಬೇರೆ ತರಹ. ಫಲಿತಾಂಶ ಏನಾಗಬಹುದು. ಮೊದಲನೆ ದಿನದ ಮತದಾನವು ಚೆನ್ನಾಗಿ ಸಫಲವಾಗಿದ್ದು ೬೦% ಗಿಂತ ಸ್ವಲ್ಪ ಜಾಸ್ತಿ ಇದೆ. ಬಳ್ಳಾರಿಯದು ಸುಮಾರು ೬೫%. ಇದು ಒಳ್ಳೆಯದು. ಬಿಜೆಪಿ ಮತ್ತು ಕಾಂಗ್ರೆಸ್ ನಡುವೆ ತೀವ್ರ ಸ್ಪರ್ಧೆಯಿದೆ. ಫಲಿತಾಂಶ ತಿಳಿಯುವುದಕ್ಕೆ ಕುತೂಹಲವಾಗಿರುತ್ತದೆ.

**ಸೆಪ್ಟೆಂಬರ್ ೧೭, ೧೯೯೯** **ಚಿತ್ರದುರ್ಗ**

ಜಿಲ್ಲಾಧಿಕಾರಿಯ ಸಹಾಯಕರು ನಾನು ವಾಕರ್‌ನ ಸಹಾಯದಿಂದ ಸಾಯಂಕಾಲ ನಡೆಯುತ್ತಿದ್ದಾಗ ಬಂದು, ರಾಜ್ಯಸರಕಾರವು ಗಾಂಧೀಜಿಯ ಜನ್ಮದಿನವಾದ ಅಕ್ಟೋಬರ್ ೨ರಂದು ನನಗೆ 'ಕರ್ನಾಟಕ ರತ್ನ' ಪ್ರಶಸ್ತಿಯನ್ನು ನೀಡಲು ನಿರ್ಧರಿಸಿದೆಯೆಂದು ನನ್ನ ಅಭಿಪ್ರಾಯವನ್ನು ಪಡೆಯಬೇಕೆಂದು ತಿಳಿಸಿದರು. ಸರಕಾರವು ಆಗಲೇ ತೀರ್ಮಾನ ಕೈಗೊಂಡಿದ್ದರೆ ನಾನು ಒಪ್ಪಿಕೊಳ್ಳಲೇಬೇಕು ಎಂದು ಹೇಳಿದೆ. ಆದರೆ ಸಮಾರಂಭ ಚಿತ್ರದುರ್ಗದಲ್ಲಿರಬೇಕು.

**ಸೆಪ್ಟೆಂಬರ್ ೨೭, ೧೯೯೯** **ಚಿತ್ರದುರ್ಗ**

ನೆನ್ನೆ ತಿಳಿಸಿದಂತೆ ಈ ಬೆಳಿಗ್ಗೆ ಚಿತ್ರದುರ್ಗದ ಮುರುಘ ರಾಜೇಂದ್ರ ಜಗದ್ಗುರು ಸ್ವಾಮೀಜಿಗಳು ಬಂದು ರಾಜ್ಯಸರಕಾರವು ರಾಜ್ಯದ ಅತಿ ಶ್ರೇಷ್ಠ ಪ್ರಶಸ್ತಿ ಅಂದರೆ 'ಕರ್ನಾಟಕ ರತ್ನ' ಪ್ರಶಸ್ತಿಯನ್ನು ನನಗೆ ನೀಡುತ್ತಿರುವುದರ ಬಗ್ಗೆ ಅಭಿನಂದಿಸಿದರು. ಬಹುಮಾನವಾಗಿ ಒಂದು ದೊಡ್ಡ ಬಾಟಲು ಜೇನುತುಪ್ಪ ಮುಂತಾದ ಪ್ರಸಿದ್ಧವಾದ ಆಯುರ್ವೇದ ಔಷಧವನ್ನು ತಂದರು. ಪ್ರತಿಯಾಗಿ ಅವರಿಗೆ ರೂ. ೧೦೦ ಹಾಗೂ ತೆಂಗಿನಕಾಯಿಗಳು ಮುಂತಾದವುಗಳನ್ನು ನೀಡಿದೆ. ನಾವು ಬಸವೇಶ್ವರರ ತತ್ವ, ಕಾಯಕ ಮತ್ತು ದಾಸೋಹ ಮುಂತಾದವುಗಳನ್ನು ಕುರಿತು ಚರ್ಚಿಸಿದೆವು. ಇವು ಸಾಮಾಜಿಕ ಅಭಿವೃದ್ಧಿ ಮತ್ತು ಸೇವೆಯಾಗಿ ಇದೆ. ಇದು ಅಗತ್ಯ ಇದನ್ನು ಪ್ರಸಾರ ಮಾಡಿ ಪ್ರಪಂಚಕ್ಕೆ ತಿಳಿಯುವಂತೆ ಮಾಡಬೇಕು.

**ಅಕ್ಟೋಬರ್ ೨, ೧೯೯೯**

ನನ್ನ ಜೀವನದಲ್ಲಿ ಮತ್ತು ಅರ್ಥಪೂರ್ಣವಾದ ದಿನ ಇದು. ಕರ್ನಾಟಕ ಸರಕಾರವು ಪ್ರಸಿದ್ಧ ವಿಜ್ಞಾನಿ ರಾಜಾ ರಾಮಣ್ಣ ಸಮಿತಿ ಶಿಫಾರಸಿನ ಮೇಲೆ ನನ್ನನ್ನು 'ಕರ್ನಾಟಕ ರತ್ನ' ಎಂದು ಗೌರವಿಸಿತು.

**ಅಕ್ಟೋಬರ್ ೭, ೧೯೯೯** **ಚಿತ್ರದುರ್ಗ**

ಹೆಚ್ಚಿನ ರಾಜ್ಯಗಳಲ್ಲಿ ಫಲಿತಾಂಶವು ಏನು ತೋರಿಸುತ್ತದೆಯೆಂದರೆ ಪಾರ್ಲಿಮೆಂಟು ಬಿಜೆಪಿ ಪಕ್ಷಕ್ಕೆ ಹೋಗುತ್ತದೆ ಮತ್ತು ವಾಜಪೇಯಿ ಪ್ರಧಾನಿಯಾಗುತ್ತಾರೆ. ಕರ್ನಾಟಕದಲ್ಲಿ ಕಾಂಗ್ರೆಸ್ ಸರಕಾರ ಬಹುಮತ ಪಡೆದು ಎಸ್.ಎಂ. ಕೃಷ್ಣ ಮುಂದಾಳಾಗಬಹುದು.

**ಅಕ್ಟೋಬರ್ ೩೧, ೧೯೯೯** **ಚಿತ್ರದುರ್ಗ**

ಈ ಬೆಳಿಗ್ಗೆ ಅನಿರೀಕ್ಷಿತವಾಗಿ ವಿಶ್ವದ ಅತ್ಯುತ್ತಮ ವನ್ಯಜೀವಿ ಛಾಯಾಚಿತ್ರಕಾರ ಮತ್ತು ಈಗ ಪುನಃ ಎಸ್.ಎಂ. ಕೃಷ್ಣರ ಹೊಸಮಂತ್ರಿ ಮಂಡಲದಲ್ಲಿ ಮಂತ್ರಿಯಾಗಿರುವ ಸಂಡೂರಿನ ಶ್ರೀ ಘೋರ್ಪಡೆ ಬಂದು ನನ್ನ ಆರೋಗ್ಯ ವಿಚಾರಿಸಿದರು. ನಾವು ಅನೇಕ ವಿಚಾರಗಳ ಬಗ್ಗೆ ಪರಸ್ಪರ ವಿಚಾರ ವಿನಿಮಯ ಮಾಡಿಕೊಂಡೆವು. ಅವರಿಗೆ ಗ್ರಾಮೀಣ ಅಭಿವೃದ್ಧಿ ಖಾತೆಯನ್ನು ವಹಿಸಲಾಗಿದೆ. ಅವರು ನನ್ನ ಆರೋಗ್ಯದ ಬಗ್ಗೆ ವಿಚಾರಿಸಿದರು. ನಾನು ಅಂತಹುದೇ ವಿಷಯಗಳ ಬಗ್ಗೆ ಅಂದರೆ ಅವರ ಹೆಂಡತಿ, ಮಕ್ಕಳು ಮತ್ತು ಮೊಮ್ಮಕ್ಕಳ ಬಗ್ಗೆ ವಿಚಾರಿಸಿದೆನು. ಹೊರಡುವಾಗ ಅನಿರೀಕ್ಷಿತವಾಗಿ ನನ್ನನ್ನು ಭೇಟಿ ಮಾಡುವ ಅನೇಕರಂತೆ ಇವರು ನನ್ನ ಕಾಲು ಮುಟ್ಟಿ ನಮಸ್ಕರಿಸಿದರು. ಅದು ನನಗೆ ಇಷ್ಟವಿಲ್ಲವಾದರೂ ತಪ್ಪಿಸಲಾಗಲಿಲ್ಲ.

**ನವೆಂಬರ್ ೧, ೧೯೯೯** **ಚಿತ್ರದುರ್ಗ**

ರಾಜ್ಯೋತ್ಸವ ದಿನ. ಜಿಲ್ಲಾಧಿಕಾರಿಗಳ ಕಚೇರಿಯಿಂದ ಕಾರು ಬೆಳಿಗ್ಗೆ ೧೦-೫೦ಕ್ಕೆ ಬಂದು ನನ್ನನ್ನು ಮುರುಘರಾಜೇಂದ್ರ ಸಭಾಂಗಣಕ್ಕೆ ಕರೆದುಕೊಂಡು ಹೋಯಿತು. ಸಭಾಂಗಣವು ತುಂಬಿದ್ದು (ಸುಮಾರು ೧೦೦೦ ಜನ) ಳಳನೇ ರಾಜ್ಯೋತ್ಸವ ದಿನವನ್ನು ಆಚರಿಸಲು ಸೇರಿದ್ದರು. ಜನರು ಉತ್ಸಾಹದಿಂದಲೇ ನನ್ನನ್ನು ಸ್ವಾಗತಿಸಿದರು. ಮಾಮೂಲಿನಂತೆ ವೇದಿಕೆಯ ಮೇಲೆ ನನಗಾಗಿ ಮೀಸಲಾಗಿದ್ದ ಜಾಗಕ್ಕೆ ಹೋಗಲು ಮಂಜು ಸಹಾಯ ಮಾಡಿದ. ಅರಣ್ಯಮಂತ್ರಿ ಕೆ.ಹೆಚ್. ರಂಗನಾಥ್ ಸಮೂಹವನ್ನು ಕುರಿತು ಭಾಷಣ ಮಾಡಲು ಅಲ್ಲಿದ್ದರು. ವಿಧಾನಸಭೆ ಸದಸ್ಯ ತಿಪ್ಪಾರೆಡ್ಡಿ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾಧಿಕಾರಿಯು ಸಭಿಕರನ್ನು ಸ್ವಾಗತಿಸಿದ ಮೇಲೆ ಮಂತ್ರಿ ರಂಗನಾಥರು ಸಭಿಕರನ್ನುದ್ದೇಶಿಸಿ ಮಾತನಾಡಿ ನನ್ನನ್ನು ಕೂಡ ಸ್ವಾಗತಿಸಿದರು. ಎಂದಿನಂತೆ ನನ್ನಷ್ಟು ದೊಡ್ಡದಾಗಿರುವ ಹಾರವನ್ನು ನನಗೆ ಹಾಕಿ ೪ ಅಡಿ ೩ ಅಡಿ ಚೌಕಟ್ಟಿನಲ್ಲಿ ಮಧ್ಯದಲ್ಲಿ ನನ್ನ ಫೋಟೋ ಇದ್ದು ಸುತ್ತಲೂ ಚಿತ್ರದುರ್ಗದ ಐತಿಹಾಸಿಕ ಸ್ಥಳಗಳನ್ನು ತೋರಿಸಿದ್ದು ಅದೂ ಕೂಡ ೧೦೦೦ ರೂ.ಗಳು ಆಗಿರಬಹುದು. ದೊಡ್ಡ ಹೂವಿನ ಹಾರ, ಒಂದು ತಟ್ಟೆಯಲ್ಲಿ ಹಣ್ಣು ಮತ್ತು ಶಾಲನ್ನು ನೀಡಿದರು. ನಾನು ಸುಮಾರು ಅರ್ಧ ಗಂಟೆ ಕನ್ನಡಿಗರ ಇತಿಹಾಸ, ಸಾಹಿತ್ಯ, ಕಲೆ, ಕ್ಷೇತ್ರಗಳಲ್ಲಿ ಮಾಡಿರುವ ಉನ್ನತ ಸಾಧನೆಗಳನ್ನು ಕುರಿತು ಮಾತನಾಡಿ ೧೯೫೬ರ ನವೆಂಬರ್ ೧ ರಂದು ಸ್ವಾತಂತ್ರ್ಯ ನಂತರ ಇತಿಹಾಸದಲ್ಲಿ ಮೊದಲ ಸಲ ಎಲ್ಲ ಕನ್ನಡ ಪ್ರದೇಶಗಳನ್ನು ಒಂದೇ ಆಳ್ವಿಕೆಯ ಅಡಿಯಲ್ಲಿ ತರುವುದರ ಪ್ರಾಮುಖ್ಯತೆ ಬಗ್ಗೆ ಹೇಳಿದೆ. ಡಾ. ರಾಜರಾಮಣ್ಣನವರನ್ನು ವಂದಿಸಿದೆ.

**ಡಿಸೆಂಬರ್ ೧೮, ೧೯೯೯ ಚಿತ್ರದುರ್ಗ**

ಬಲವಾದ, ಜಾತ್ಯತೀತ, ಒಗಟ್ಟಾದ ಭಾರತವನ್ನು ನಿರ್ಮಿಸಲು ದೇಶದ ಯುವಕರನ್ನು ತೊಡಗಿಸಲು ಉದ್ದೇಶಿಸಲಾದ 'ವಂದೆ ಮಾತರಂ' ಕಾರ್ಯಕ್ರಮವನ್ನು ಉದ್ಘಾಟಿಸಿದೆ. ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರ ಹಳೆಯ ಒಳಗೊಂಡಿರುವ ಜಂಟಿ ಕಾರ್ಯಕ್ರಮವಿದು. ಇದು ಇಂದಿನಿಂದ ಮುಂದಿನ ವರ್ಷ ೧೨ರವರೆಗೆ ದೇಶದ ಎಲ್ಲೆಡೆ ನಡೆಯಬೇಕು. ಸಭೆಯನ್ನು ಎಂದಿನಂತೆ ಮುರಘ ಮಠದ ಸಭಾಂಗಣದಲ್ಲಿ ನಡೆಸಲಾಗಿದ್ದು ಹೈಸ್ಕೂಲು ಮತ್ತು ಕಾಲೇಜುಗಳ ವಿದ್ಯಾರ್ಥಿಗಳು ಪೂರ್ಣವಾಗಿ ಭಾಗವಹಿಸಿದ್ದರು. ಅದು ಬೆಳಿಗ್ಗೆ ೧೧ ಗಂಟೆಗೆ ಪ್ರಾರಂಭವಾಯಿತು. ಕಾರ್ಯಕ್ರಮವನ್ನು ಉದ್ಘಾಟಿಸುತ್ತಾ ಸುಮಾರು ಅರ್ಧ ಗಂಟೆ ಭಾಷಣ ಮಾಡಿ ದೇಶದ ಯುವಕರಿಗೆ ವೇದದ ಕಾಲದಿಂದ ಭಾರತದ ಇತಿಹಾಸ, ಅದರ ಹಿಂದಿನ ಐತಿಹಾಸಿಕ ಸಾಧನೆಗಳು ಮುಂತಾದವುಗಳ ಬಗ್ಗೆ ಉಲ್ಲೇಖಿಸುತ್ತಾ ಬುದ್ಧ, ಬಸವ, ಬಾಪು (ಗಾಂಧೀಜಿ)ಯವರ ಸಿದ್ಧಾಂತಗಳನ್ನು ಬೋಧಿಸಿ ಭಾರತದ ಏಕತೆ ಮತ್ತು ಬಲಕ್ಕೆ ಒಗ್ಗಟ್ಟಾಗಿ ಎಲ್ಲರೂ ಕೆಲಸ ಮಾಡಬೇಕೆಂದು ಮನವಿ ಮಾಡಿದೆ. ನನ್ನ ಭಾಷಣವಾದ ಕೂಡಲೇ ಬಂದುಬಿಟ್ಟೆ. ಸುಸ್ತಾದಂತೆ ಮತ್ತು ನಿತ್ರಾಣವಾದಂತಾಗುತ್ತದೆ. ಪದಗಳನ್ನು ಹುಡುಕುವುವೇ ಕಷ್ಟವಾದುದರಿಂದ ನಿಜವಾಗಿ ವಯಸ್ಸಾಗಿದೆ ಎನಿಸಿದೆ. ಇನ್ನು ಹೆಚ್ಚು ವರ್ಷ ಇರಬಾರದು.

**ಜನವರಿ ೧೨, ೨೦೦೦ ಚಿತ್ರದುರ್ಗ**

ನೆನ್ನೆ ಪ್ರಸಿದ್ಧ ವಕೀಲ ಮತ್ತು ಈಗ ಭಾರತೀಯ ವಿದ್ಯಾಭವನದಲ್ಲಿ ತುಂಬಾ ಆಸಕ್ತಿ ಇರುವ ಮತ್ತು ಅದರ ಬೊಂಬಾಯಿ ಕೇಂದ್ರ ಕಚೇರಿಯಲ್ಲಿ ಪ್ರಧಾನ ಸದಸ್ಯರಾದ ಶ್ರೀ ನಾನಿ ಫಾಲ್ಕಿವಾಲಾರು ಕೊರಿಯರ್ ಅಂಚೆಯಲ್ಲಿ ಒಂದು ವೈಯಕ್ತಿಕ ತುಂಬಾ ಸ್ನೇಹಯುತ ಕಾಗದವನ್ನು ಕಳುಹಿಸಿದ್ದು ಅದರಲ್ಲಿ ಯುಎಸ್‌ಎಯ ಫ್ಲಾರಿಡಾದ ಪ್ರೊಫೆಸರ್ ಲಕ್ಷ್ಮಿಕಾಂತರವರಿಂದ ಒಂದು ಎದೆಯ ಮೇಲಿನ ಭಾಗದ ಪ್ರತಿಮೆಯನ್ನು ಕಳುಹಿಸಿದ್ದಾರೆ. ಅದನ್ನು ಭಾರತೀಯ ವಿದ್ಯಾಭವನವು ಪ್ರಕಟಿಸಿದೆ. ಅದು ಭಾರತದ ಅಂಚೆ ಮುಂತಾದವುಗಳನ್ನು ವಿವರಿಸುತ್ತದೆ. ಅದನ್ನು ಓದಬೇಕು, ಕುತೂಹಲವುಳ್ಳದ್ದು ಮತ್ತು ಜ್ಞಾನ ನೀಡುವಂಥದ್ದಾಗಿದೆ.

**ಜನವರಿ ೨೮, ೨೦೦೦ ಬೆಂಗಳೂರು**

ಶ್ರೀ ವಿ.ಎಸ್. ಕೃಷ್ಣ ಅಯ್ಯರ್ ಜನಾನುರಾಗಿ ವ್ಯಕ್ತಿ. ಅವರ ೭೮ನೇ ಹುಟ್ಟುಹಬ್ಬವನ್ನು ಬೆಳಿಗ್ಗೆ ೧೧ ಗಂಟೆಗೆ ಟ್ಯಾಗೋರ್ ಸಭಾಂಗಣದಲ್ಲಿ ಆಚರಿಸಲಾಯಿತು. ಸಮಾರಂಭಕ್ಕೆ ಹೋಗುವುದಕ್ಕೆ ಮುಂಚೆ ಎ.ಆರ್. ಬದರಿನಾರಾಯಣರ ಮನೆಯಲ್ಲಿ ಅವರನ್ನು ಮತ್ತು ಅವರ ಹೆಂಡತಿಯನ್ನು ಭೇಟಿಯಾದೆ. ನನ್ನನ್ನು ಸ್ವಾಗತಿಸುವುದಕ್ಕೆ ದಂಪತಿಗಳಿಗೆ ಎಂದಿನಂತೆ

ತುಂಬಾ ಸಂತೋಷವಾಯಿತು. ನಮ್ಮ ಕುಟುಂಬಗಳ ಬಗ್ಗೆ ಪರಸ್ಪರ ವಿಚಾರಣೆಗಳನ್ನು ಮಾಡಿದೆವು. ಅವರಿಗೆ ಕಿವಿ ಕೇಳುವುದು ಕಷ್ಟವಾಗಿತ್ತು, ಉಳಿದಂತೆ ಚುರುಕಾಗಿದ್ದರು. ಸಾರ್ವಜನಿಕ ವಿಷಯಗಳಲ್ಲಿ ಆಸಕ್ತಿ ವಹಿಸುತ್ತಿದ್ದರು ಮತ್ತು ತಮ್ಮದೇ ಆದ ಅಭಿಪ್ರಾಯಗಳನ್ನು ಹೊಂದಿದ್ದಾರೆ.

ಕೃಷ್ಣ ಅಯ್ಯರ್ ಬಹಳ ಪ್ರಸಿದ್ಧ ವ್ಯಕ್ತಿಯಾದ್ದುದರಿಂದ ತುಂಬಾ ಜನರು ಸಮಾರಂಭಕ್ಕೆ ಬಂದಿದ್ದರು. ನಾನೇ ಮುಖ್ಯ ಭಾಷಣಕಾರ. ಅವರಿಗೆ ಒಂದು ಶಾಲು, ಒಂದು ಜ್ಞಾಪನಪತ್ರ ಮುಂತಾದವುಗಳನ್ನು ಕೊಡಲಾಯಿತು. ಮುಖ್ಯನ್ಯಾಯಾಧೀಶ ನಿಟ್ಟೂರು ಶ್ರೀನಿವಾಸರಾಯರೂ ಸೇರಿದಂತೆ ಬಹಳ ಮುಖ್ಯವಾದ ವ್ಯಕ್ತಿಗಳು ಭಾಗವಹಿಸಿದ್ದರು. ಅವರು ಬೆಂಗಳೂರಿನಲ್ಲಿ ಎಲ್ಲಾ ಸಾರ್ವಜನಿಕ ಸಮಾರಂಭಗಳಲ್ಲೂ ಹಾಜರಿರುತ್ತಾರೆ. ಅದು ಒಂದು ಬಹಳ ಪ್ರಭಾವೋತ್ಪಾದಕ ಸಮಾರಂಭ. ಶ್ರೀ ಅಯ್ಯರ್ ಮತ್ತು ಅವರ ಹೆಂಡತಿ ಅವರನ್ನು ಅನೇಕ ವರ್ಷಗಳಿಂದ ಅಂದರೆ ಸತ್ಯಾಗ್ರಹದ ದಿನಗಳಿಂದ ನಾನು ಚೆನ್ನಾಗಿ ಬಲ್ಲೆ.

(ಎಸ್.ಎನ್. ಜನನ : ೧೦-೧೨-೧೯೦೨.

ಮರಣ : ೮-೮-೨೦೦೦)

●

# ಎಸ್. ಎನ್. ಜೀವನದ ಪ್ರಮುಖ ಘಟನೆಗಳು

| | |
|---|---|
| ೧೦.೧೨.೧೯೦೨ | ಹಲುವಾಗಲು ಗ್ರಾಮದಲ್ಲಿ ಜನನ |
| ೧೯೧೯ | ಗಾಂಧೀಜಿಯನ್ನು ಮೊದಲು ನೋಡಿದ್ದು |
| ೧೯೨೪ | ಬಿ. ಎ. ಪದವಿ |
| ೧೯೨೬ | ಚಿತ್ರದುರ್ಗದಲ್ಲಿ ವಕೀಲಿ ವೃತ್ತಿ ಪ್ರಾರಂಭ |
| ೨೫.೦೫.೧೯೨೭ | ದಾವಣಗೆರೆಯ ಮುರಿಗಮ್ಮ ಅವರೊಡನೆ ವಿವಾಹ (ಮುರಿಗಮ್ಮನ ಜನನ : ೩೦.೯.೧೯೧೦ ರಲ್ಲಿ) |
| ೧೯೨೮ | ಮೊದಲ ಮಗಳು ಪಾರ್ವತಮ್ಮನ ಜನನ |
| ೧೯೩೬ | ಕಾಂಗ್ರೆಸ್ ದೀಕ್ಷೆ, ಚಿತ್ರದುರ್ಗ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರು |
| ೧೮.೦೯.೧೯೩೯ | ಈಚಲುವನ ಸತ್ಯಾಗ್ರಹ; ಪ್ರಥಮ ಕಾರಾಗೃಹವಾಸ |
| ೧೯೪೦ | ವಕೀಲಿ ಸನ್ನಯ ರದ್ದು |
| ೦೯.೧೦.೧೯೪೨ | ಭಾರತ ಬಿಟ್ಟು ತೊಲಗಿ ಘೋಷಣೆ - ಬಂಧನ |
| ೧೯೪೪ | ಮೈಸೂರು ಕಾಂಗ್ರೆಸ್ ಅಧ್ಯಕ್ಷರು |
| ೧೯೪೬-೧೯೫೪ | ಕರ್ನಾಟಕ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರು |
| ೧೯೫೨-೧೯೫೬ | ಚಿತ್ರದುರ್ಗದಿಂದ ಲೋಕಸಭೆಗೆ ಆಯ್ಕೆ |
| ೦೧.೧೧.೧೯೫೬ | ಏಕೀಕರಣ ನಂತರ ಮೊದಲ ಮುಖ್ಯಮಂತ್ರಿ |
| ೧೯೫೭ | ಚುನಾವಣೆ, ವಿಜಯ ಮುಖ್ಯಮಂತ್ರಿ ಪದವಿ ಮುಂದುವರಿಕೆ |
| ೧೫.೧೧.೧೯೫೯ | ಭಾರತೀಯ ತೈಲ ಕಂಪೆನಿಯ ಅಧ್ಯಕ್ಷರು |
| ೧೯೬೨ | ಹೊಸದುರ್ಗ ಕ್ಷೇತ್ರದಿಂದ ಚುನಾವಣೆಯಲ್ಲಿ ಸೋಲು ಮತ್ತೆ ಬಾಗಲಕೋಟೆ ಕ್ಷೇತ್ರದಿಂದ ಗೆದ್ದದ್ದು ಪುನಃ ಮುಖ್ಯಮಂತ್ರಿ |
| ೦೨.೦೩.೧೯೬೭ | ಸುವರ್ಣ ತುಲಾಭಾರ ಬಿಜಾಪುರ ಜಿಲ್ಲೆಯಲ್ಲಿ (ಚೀನಾಧಾಲಿ) |
| ೧೯೬೭ | ಶಿಗ್ಗಾಂವಿ ಚುನಾವಣಾ ಕ್ಷೇತ್ರದಿಂದ ಅವಿರೋಧ ಆಯ್ಕೆ. ಮತ್ತೊಮ್ಮೆ ಮುಖ್ಯಮಂತ್ರಿ |
| ೦೭.೧೨.೧೯೬೭ | ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರು (ಕರ್ನಾಟಕದಿಂದ ಪ್ರಪ್ರಥಮ ಅಧ್ಯಕ್ಷರು) |

| | |
|---|---|
| ೨೩.೦೭.೧೯೬೮ | ಜಪಾನ್ ಪ್ರವಾಸ |
| ೧೨.೦೫.೧೯೬೯ | ಯೂರೋಪ್ ಪ್ರವಾಸ |
| ಜುಲೈ ೧೯೬೯ | ಬೆಂಗಳೂರಲ್ಲಿ ಐತಿಹಾಸಿಕ ಕಾಂಗ್ರೆಸ್ ಅಧಿವೇಶನ; ಇಬ್ಭಾಗಕ್ಕೆ ನಾಂದಿ |
| ಡಿಸೆಂಬರ್ ೧೯೬೯ | ಕಾಂಗ್ರೆಸ್ ಇಬ್ಭಾಗ |
| ೧೯೭೪ | ಸಂಸ್ಥಾ ಕಾಂಗ್ರೆಸ್ ಅಧ್ಯಕ್ಷಸ್ಥಾನಕ್ಕೆ ರಾಜೀನಾಮೆ, ರಾಜಕೀಯದಿಂದ ನಿವೃತ್ತಿ |
| ೦೬.೦೩.೧೯೮೫ | ಜನತಾ ಪಕ್ಷಕ್ಕೆ ರಾಜೀನಾಮೆ |
| ೧೦.೧೦.೧೯೮೮ | ಮುರಿಗಮ್ಮನವರ ಮರಣ |
| ೧೯೯೦ | ಸರ್ದಾರ್ ಪಟೇಲ್ ಕೃತಿ ಪ್ರಕಾಶನ ಸಂಸ್ಥೆಯ ಅಧ್ಯಕ್ಷರು |
| ೦೨.೧೦.೧೯೯೯ | ಕರ್ನಾಟಕ ರತ್ನ ಪ್ರಶಸ್ತಿ |
| ೨೦.೦೬.೨೦೦೦ | ರಾತ್ರಿ ಬಿದ್ದದ್ದು ಕಾಲಿಗೆ ಪೆಟ್ಟು ಬೌರಿಂಗ್ ಆಸ್ಪತ್ರೆಯಲ್ಲಿ ಚಿಕಿತ್ಸೆ |
| ೨೫.೦೬.೨೦೦೦ | ಬೌರಿಂಗ್ ಆಸ್ಪತ್ರೆಯಿಂದ ಚಿತ್ರದುರ್ಗಕ್ಕೆ ಒಯ್ದದ್ದು |
| ೦೮.೦೮.೨೦೦೦ | ಅಂತಿಮ ಯಾತ್ರೆ |

ಬಿಡುವಿಲ್ಲದ ಕಾರ್ಯಬಾಹುಳ್ಯದ ನಡುವೆಯೂ ಪ್ರತಿನಿತ್ಯ ತಪ್ಪದೆ ದಿನಚರಿ ಬರಹ ಹಾಗೂ ವ್ಯಾಸಂಗವನ್ನು ವ್ರತದೋಪಾದಿಯಲ್ಲಿ ನಡೆಸುತ್ತಿದ್ದ ರಾಷ್ಟ್ರನಾಯಕರೆಂದರೆ ಶ್ರೀ ಎಸ್. ನಿಜಲಿಂಗಪ್ಪನವರು. ಆಯಾಯ ದಿನದ ಚಾರಿತ್ರಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಹಾಗೂ ಕೌಟುಂಬಿಕ ಘಟನೆಗಳನ್ನು, ತಮ್ಮ ಸಂಪರ್ಕಕ್ಕೆ ಬಂದ ವ್ಯಕ್ತಿಗಳ ಬಗ್ಗೆ ತಮ್ಮ ಮನಸ್ಸಿನಲ್ಲಿ ಮೂಡಿದ ಭಾವನೆಗಳನ್ನು, ತಾವು ಬದುಕಿನಲ್ಲಿ ಕಂಡುಂಡ ಅನುಭವಗಳನ್ನು ಅವರು ತಮ್ಮ ದಿನಚರಿಯಲ್ಲಿ ದಾಖಲಿಸಿದ್ದಾರೆ. ಇವುಗಳಲ್ಲಿ ಬಹುಭಾಗ ರಾಷ್ಟ್ರೀಯ ಹಾಗೂ ಚಾರಿತ್ರಿಕ ಮಹತ್ವವನ್ನು ಪಡೆಯುತ್ತವೆನ್ನುವುದರಲ್ಲಿ ಸಂದೇಹವಿಲ್ಲ. ಚರಿತ್ರಕಾರರಿಗೆ ಮಾತ್ರವಲ್ಲ ಸಾಹಿತ್ಯಕಾರರಿಗೂ ಇವು ತವನಿಧಿಯಂತಿವೆ. ಆದ್ದರಿಂದ, ಇವುಗಳ ರಕ್ಷಣೆ ಹಾಗೂ ಪ್ರಕಟಣೆ ಅತ್ಯಗತ್ಯ. ಆಯ್ದ ಕೆಲವು ಭಾಗಗಳನ್ನು ಇದೀಗ ಪ್ರಕಟಿಸುತ್ತಿರುವ ನಿಜಲಿಂಗಪ್ಪ ಪ್ರತಿಷ್ಠಾನ ನಿಜಕ್ಕೂ ಅಭಿನಂದನಾರ್ಹ. ಅದನ್ನು ಕನ್ನಡಕ್ಕೆ ತರಲು ಪ್ರಯತ್ನಿಸಿ ಯಶಸ್ವಿಯಾಗಿರುವ ಎಲ್ಲರೂ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ದೇಜಗೌ